ಕನ್ನಡ ವಿಶ್ವವಿದ್ಯಾಲಯ, ಹಂಪಿ



# ಮಹಿಳಾ ಕಾವ್ಯ : ಸ್ಥಾಪಿತ ನೆಲೆಗಳ ಅನುಸಂಧಾನ ಮತ್ತು ಪುನರ್‌ರಚನೆಯ ಪ್ರಕ್ರಿಯೆ

(ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ ಪದವಿಗಾಗಿ ಸಲ್ಲಿಸುತ್ತಿರುವ ಸಂಶೋಧನಾ ಪ್ರಬಂಧ)



ಸಂಶೋಧಕರು
ಸುಧಾ ಎ.ಎಸ್.

ಮಾರ್ಗದರ್ಶಕರು
ಡಾ. ಎಂ.ಎಸ್. ಆಶಾದೇವಿ.
ಪ್ರಾಧ್ಯಾಪಕರು,

ಮಾನ್ಯತಾ ಸಂಸ್ಥೆ :



ಕಾವ್ಯ ಮಂಡಲ

ಬಸವನಗುಡಿ, ಬೆಂಗಳೂರು.

ಕನ್ನಡ ವಿಶ್ವವಿದ್ಯಾಲಯ, ಹಂಪಿ.




# ಮಹಿಳಾ ಕಾವ್ಯ : ಸ್ಥಾಪಿತ ನೆಲೆಗಳ ಅನುಸಂಧಾನ ಮತ್ತು ಪುನರ್ರಚನೆಯ ಪ್ರಕ್ರಿಯೆ

(ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ ಪದವಿಗಾಗಿ ಸಲ್ಲಿಸುತ್ತಿರುವ ಸಂಶೋಧನಾ ಪ್ರಬಂಧ)



ಸಂಶೋಧಕರು
ಸುಧಾ ಬಿ.ಎಸ್.

ಮಾರ್ಗದರ್ಶಕರು
ಡಾ. ಎಂ. ಎಸ್. ಆಶಾದೇವಿ
ಪ್ರಾಧ್ಯಾಪಕರು,

ಮಾನ್ಯತಾ ಸಂಸ್ಥೆ :



ಕಾವ್ಯ ಮಂಡಲ
ಬಸವನಗುಡಿ, ಬೆಂಗಳೂರು.

## ಮಾರ್ಗದರ್ಶಕರ ಪ್ರಮಾಣ ಪತ್ರ

ಸುಧಾ ಬಿ.ಎಸ್.ಇವರು ನನ್ನ ಮಾರ್ಗದರ್ಶನದಲ್ಲಿ **ಮಹಿಳಾ ಕಾವ್ಯ : ಸ್ಥಾಪಿತ ನೆಲೆಗಳ ಅನುಸಂಧಾನ ಮತ್ತು ಪುನರ್ರಚನೆಯ ಪ್ರಕ್ರಿಯೆ** ಎಂಬ ಸಂಶೋಧನಾ ಪ್ರಬಂಧವನ್ನು ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ ಇಲ್ಲಿಗೆ ಮಾನ್ಯತಾ ಸಂಸ್ಥೆಯಾದ ಕಾವ್ಯಮಂಡಲ, ಬೆಂಗಳೂರು. ಇವರ ಮೂಲಕ ಪಿ.ಎಚ್.ಡಿ ಪದವಿಗಾಗಿ ಸಿದ್ಧಪಡಿಸಿದ್ದಾರೆ. ಪ್ರಸ್ತುತ ಮಹಾಪ್ರಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ, ಇಲ್ಲವೆ ಪ್ರಕಟಣೆಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಎಂ.ಎಸ್. ಆಶಾದೇವಿ

**ಡಾ. ಎಂ.ಎಸ್. ಆಶಾದೇವಿ**
ಮಾರ್ಗದರ್ಶಕರು,
ಕಾವ್ಯಮಂಡಲ, ಬೆಂಗಳೂರು.
(ಮಾನ್ಯತಾ ಸಂಸ್ಥೆ.)
ಕನ್ನಡ ವಿಶ್ವವಿದ್ಯಾಲಯ,ಹಂಪಿ.
ವಿದ್ಯಾರಣ್ಯ - 583276

**ಡಾ|| ಎಂ.ಎಸ್. ಆಶಾದೇವಿ**
ಸಹ ಪ್ರಾಧ್ಯಾಪಕರು
ಕನ್ನಡ ವಿಭಾಗ
ಮಹಾರಾಣಿ ಮಹಿಳಾ ವಿಜ್ಞಾನ ಕಾಲೇಜು
ಬೆಂಗಳೂರು - 560001

ಸ್ಥಳ : ವಿದ್ಯಾರಣ್ಯ
ದಿನಾಂಕ :

## ಘೋಷಣಾ ಪತ್ರ

ಡಾ. ಎಂ.ಎಸ್. ಆಶಾದೇವಿ ಅವರ ಮಾರ್ಗದರ್ಶನದಲ್ಲಿ **ಮಹಿಳಾ ಕಾವ್ಯ : ಸ್ಥಾಪಿತ ನೆಲೆಗಳ ಅನುಸಂಧಾನ ಮತ್ತು ಪುನರ್ರಚನೆಯ ಪ್ರಕ್ರಿಯೆ** ಎಂಬ ಸಂಶೋಧನಾ ಪ್ರಬಂಧವನ್ನು ಸಿದ್ಧಪಡಿಸಿ, ಪಿ.ಎಚ್.ಡಿ ಪದವಿಗಾಗಿ ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ ಇಲ್ಲಿಗೆ ಮಾನ್ಯತಾ ಸಂಸ್ಥೆಯಾದ ಕಾವ್ಯಮಂಡಲ, ಬೆಂಗಳೂರು. ಇವರ ಮೂಲಕ ಸಾದರಪಡಿಸುತ್ತಿದ್ದೇನೆ. ಈ ಸಂಶೋಧನಾ ಪ್ರಬಂಧವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲ. ಇದರ ಯಾವುದೇ ಭಾಗ ಎಲ್ಲಿಯೂ ಪ್ರಕಟಗೊಳಿಸಿಲ್ಲ. ಇದು ನನ್ನ ಸ್ವತಂತ್ರವಾದ ಸಂಶೋಧನಾ ಅಧ್ಯಯನವಾಗಿದೆ ಎಂದು ಈ ಮೂಲಕ ದೃಢೀಕರಿಸುತ್ತೇನೆ.

Sudha B.S.

**ಸುಧಾ ಬಿ.ಎಸ್.**
ಸಂಶೋಧಕರು
(ಕಾವ್ಯಮಂಡಲ, ಬೆಂಗಳೂರು.
ಮಾನ್ಯತಾ ಸಂಸ್ಥೆ.)

ಸ್ಥಳ : ಬೆಂಗಳೂರು
ದಿನಾಂಕ :

# ಮಹಿಳಾ ಕಾವ್ಯ : ಸ್ಥಾಪಿತ ನೆಲೆಗಳ ಅನುಸಂಧಾನ ಮತ್ತು ಪುನರ್ರಚನೆಯ ಪ್ರಕ್ರಿಯೆ

## ಪರಿವಿಡಿ

# ಅಧ್ಯಾಯ – ೧

## ೧.೧ ಪ್ರವೇಶ :

ನಮ್ಮ ಸಾಮಾಜಿಕ ಮತ್ತು ಸಾಂಸ್ಕೃತಿಕ ಸಂದರ್ಭ ವರ್ಗ, ಜಾತಿ ಹಾಗೂ ಲಿಂಗ ಶ್ರೇಣೀಕರಣದಿಂದ ರೂಪುಗೊಂಡಿದೆ. ಈ ಎಲ್ಲಾ ಶ್ರೇಣೀಕರಣಗಳೂ ಪ್ರಧಾನ ಅಧೀನ ನೆಲೆಯಿಂದ ಕೂಡಿದ್ದರೂ ಲಿಂಗ ಶ್ರೇಣೀಕರಣ ಮಾತ್ರ ಇವುಗಳಂತ ಭಿನ್ನ ಸ್ವರೂಪ ಹಾಗೂ ಕಾರ್ಯಮಾದರಿಗಳನ್ನು ಒಳಗೊಂಡಿದೆ. ಮತ್ತು ಮಿಕ್ಕ ಶ್ರೇಣೀಕರಣಕ್ಕಿಂತ ಲಿಂಗ ಶ್ರೇಣೀಕರಣದ ನೆಲೆಗಳು ಸಂಕೀರ್ಣವಾಗಿವೆ. ವರ್ಗ ಮತ್ತು ವರ್ಣ ಶ್ರೇಣೀಕರಣಗಳಲ್ಲಿ ಶೋಷಕ ಮತ್ತು ಶೋಷಿತರನ್ನು ಗುರುತಿಸುವಂತೆ ಲಿಂಗ ಶ್ರೇಣೀಕರಣದಲ್ಲಿ ಗುರುತಿಸಲು ಸಾಧ್ಯವಿಲ್ಲ. ಏಕೆಂದರೆ ಹೆಣ್ಣನ್ನು ಅಧೀನವಾಗಿರಿಸಿಕೊಳ್ಳುವಲ್ಲಿ ಮತ್ತು ಶೋಷಿಸುವಲ್ಲಿ ಇಡೀ ವ್ಯವಸ್ಥೆಯೇ ಕಾರ್ಯಪ್ರವೃತ್ತವಾಗಿದೆ. ಇದರಿಂದಾಗಿ ಅಧಿಕಾರದ ಬಲವನ್ನು ಕಾಯ್ದುಕೊಂಡಿರುವ ಪುರುಷಪ್ರಧಾನ ವ್ಯವಸ್ಥೆ ಹೆಣ್ಣಿನ ಅಸ್ತಿತ್ವದ ಅಧಿಕೃತತೆಯನ್ನು ದಮನ ಮಾಡುವ ಪ್ರಕ್ರಿಯೆಯಲ್ಲಿ ನಿರಂತರವಾಗಿ ತೊಡಗಿದೆ. ಸಮುದಾಯದ ಒಳಿತು ಹಾಗೂ ಏಕರೂಪತೆಯನ್ನು ಅನುಸರಿಸುವ ಉದ್ದೇಶದಿಂದ ರೂಪುಗೊಂಡಿರುವ ಕುಟುಂಬ, ವಿವಾಹ, ದಾಂಪತ್ಯ ಮುಂತಾದ ಸಾಮಾಜಿಕ ರಚನೆಗಳು ಗಂಡು ಮತ್ತು ಹೆಣ್ಣಿಗೆ ಭಿನ್ನ ರೀತಿಯಲ್ಲಿ ೨ಅನ್ವಯವಾಗುತ್ತವೆ. ಆದರೆ ಪುರುಷ ಪ್ರಧಾನ ವ್ಯವಸ್ಥೆ ಹೆಣ್ಣಿಗೆ ಸಂಬಂಧಿಸಿದ ಈ ಸಾಮಾಜಿಕ ಸಂರಚನೆಗಳನ್ನು ವೈಭವೀಕರಿಸಿ, ಅವಳನ್ನು 'ಅಪೇಕ್ಷಿತ' ಹೆಣ್ಣಾಗಿ ರೂಪಿಸಿ, ಬದುಕಿನ ಮೇಲೆ ಹಿಡಿತವನ್ನು ಸ್ಥಾಪಿಸಿದೆ. ಈ ಅಪೇಕ್ಷಿತ ಮಾದರಿಯನ್ನೇ ಹೆಣ್ಣಿನ 'ಆದರ್ಶ ಮಾದರಿ' ಎಂದೂ, ಹೆಣ್ಣು ಆ ರೀತಿಯಲ್ಲಿ ಬದುಕುವುದೆ 'ಒಳಿತು' ಎಂದು ಬಿಂಬಿಸಲಾಗಿದೆ. ಈ ಸಾಮಾಜಿಕ ಮೌಲ್ಯಗಳು ಹೆಣ್ಣಿನ ಮಟ್ಟಿಗೆ ಜೀವನ ಮೌಲ್ಯಗಳು ಕೂಡ ಆಗಿದ್ದು, ಇದರಿಂದ ಬಿಡಿಸಿಕೊಳ್ಳುವ, ಪ್ರತಿರೋಧವನ್ನು ಒಡ್ಡುವ ಕ್ರಿಯೆ ಹೆಣ್ಣಿನ ಬದುಕಿನಲ್ಲಿ ನಿರಂತರವಾಗಿ ನಡೆಯುತ್ತಿದೆ. ಹೆಣ್ಣಿನ ಈ ಹೋರಾಟ ಬಹುಮುಖೀ ನೆಲೆಗಳಿಂದ ಕೂಡಿದ್ದು, ಇದನ್ನು ಪರಂಪರೆಯೊಂದಿಗೆ ಗುರುತಿಸಬಹುದು. ಹೆಣ್ಣಿನ ಹೋರಾಟದ ಈ ದಾಖಲೆಗಳು ಸಾಹಿತ್ಯದಲ್ಲಿ ಅಡಕವಾಗಿದ್ದು, ಸಾಹಿತ್ಯದ ಸಾಮಾಜಿಕ, ಸಾಂಸ್ಕೃತಿಕ ಹಾಗೂ ಸ್ತ್ರೀವಾದಿ ಅಧ್ಯಯನದಿಂದ ಮಹಿಳಾಕಾವ್ಯ ಸ್ಥಾಪಿತ ನೆಲೆಗಳಿಗೆ ಮುಖಾಮುಖಿಯಾಗುವ ಅಂಶಗಳು ಸ್ಪಷ್ಟವಾಗುತ್ತವೆ.

ಹೆಣ್ಣು ತನ್ನ ಬದುಕಿನ ಮತ್ತು ವ್ಯಕ್ತಿತ್ವ ಶೋಧದ ಅಭಿವ್ಯಕ್ತಿಯಾಗಿ ಭಾಷಿಕ ಮಾಧ್ಯಮವನ್ನು ಅನಾದಿ ಕಾಲದಿಂದಲೂ ವಿಶಿಷ್ಟ ರೀತಿಯಲ್ಲಿ ಬಳಸಿಕೊಂಡಿದ್ದಾಳೆ. ಭಾಷೆ ಮತ್ತು ಹೆಣ್ಣಿನ ಸಂಬಂಧದಲ್ಲಿ ಅಧಿಕಾರ ಸಂಬಂಧವಿದೆಯಾದರೂ ಅದೇ ಭಾಷೆಯನ್ನು ತನ್ನ ಅನುಭವದ ಅಭಿವ್ಯಕ್ತಿಗೆ ಸಾಧನವಾಗಿಸಿಕೊಳ್ಳುವಲ್ಲಿ ಹೆಣ್ಣು ನಿರಂತರವಾಗಿ ತೊಡಗಿದ್ದಾಳೆ. ಜಾನಪದ ಸಾಹಿತ್ಯ, ಅಂತೆಯೇ ಆಧುನಿಕ ಸಂದರ್ಭದಲ್ಲಿ ಹೆಣ್ಣಿನ ಒಳಗನ್ನು ತೆರೆದಿಡುವಲ್ಲಿ ಉಳಿದೆಲ್ಲಾ ಪ್ರಕಾರಗಳಿಗಿಂತ ಕಾವ್ಯ ಪ್ರಮುಖವಾದ ಪಾತ್ರ ವಹಿಸುತ್ತದೆ. ಮಹಿಳೆ ಕಾವ್ಯವನ್ನು ತನ್ನ ಮುಚ್ಚಿದ ಬದುಕಿನ ರೂಪಕಾತ್ಮಕ ಅಭಿವ್ಯಕ್ತಿಯಾಗಿ, ಪುರುಷ ಪ್ರಧಾನ ವ್ಯವಸ್ಥೆಯ ಕ್ರೌರ್ಯ ಮತ್ತು ದಮನದ ಅಂಶಗಳನ್ನು ವ್ಯಕ್ತಪಡಿಸುವ ಮಾಧ್ಯಮವನ್ನಾಗಿ ಬಳಸಿದಳು. ಪುರುಷನಿಗೆ ಕಾವ್ಯ ಸೌಂದರ್ಯಾತ್ಮಕ ಅಭಿವ್ಯಕ್ತಿಯಾದರೆ ಹೆಣ್ಣಿಗೆ ಅದನ್ನು ಮೀರಿದ, ಅದಕ್ಕಿಂತ ಭಿನ್ನವಾದ, ವ್ಯವಸ್ಥೆಯೊಂದಿಗಿನ ಸಂವಾದದ ಸ್ವರೂಪದ್ದಾಗಿದೆ. ಹೀಗಾಗಿ ಅಧುನಿಕ ಮಹಿಳಾ ಕಾವ್ಯ ಪ್ರಧಾನ ವ್ಯವಸ್ಥೆ ರೂಪಿಸಿದ ಸ್ಥಾಪಿತ ನೆಲೆಗಳಿಗೆ ಮುಖಾಮುಖಿಯಾಗುವ ಮತ್ತು ಅವನ್ನು ಪುನರ‍್ರಚಿಸುವ ಪ್ರಕ್ರಿಯೆಗೆ ಸಾಂಸ್ಕೃತಿಕ ಮಹತ್ವವಿದೆ.

ಪ್ರಧಾನ ಸಾಹಿತ್ಯಧಾರೆ ಮಹಿಳಾ ಸಾಹಿತ್ಯವನ್ನು ಪರಿಭಾವಿಸಿದ ಬಗೆಯಲ್ಲಿ ಅಡಕವಾಗಿರುವ ಲಿಂಗ ರಾಜಕಾರಣವನ್ನು ಗಮನಿಸಿದಾಗ ಮಹಿಳೆ ಪ್ರಾರಂಭದಿಂದಲೂ ಬದುಕು ಹಾಗು ಬರವಣಿಗೆಯಲ್ಲಿ ಪಿತೃ ಪ್ರಧಾನ ವ್ಯವಸ್ಥೆಯ ಧೋರಣೆಗಳನ್ನು ಹಾಗೂ ಸ್ತ್ರೀತ್ವದ ಬಗೆಗೆ ಅವರು ನಿರ್ದೇಶಿಸಿ ರೂಪಿಸಿರುವ ಮೌಲ್ಯಗಳನ್ನು ಸಾಧ್ಯವಾದ ರೀತಿಯಲ್ಲಿ ವಿರೋಧಿಸುತ್ತಾ ಬಂದಿದ್ದಾಳೆ. ಮಹಿಳಾಕಾವ್ಯ ಚರಿತ್ರೆ ಮಹಿಳೆಯ ಹೋರಾಟದ, ಅಸ್ಮಿತೆಯ ಹುಡುಕಾಟದ ಚರಿತ್ರೆಯೂ ಆಗಿದೆ. ಹೆಣ್ಣನ್ನು ದ್ವಿತೀಯ ಲಿಂಗ ([illegible]) ಎಂದು ಪರಿಗಣಿಸಿ ಅವಳ ಅಸ್ತಿತ್ವವನ್ನು ಅಲ್ಲಗಳೆದು ಅಧೀನವಾಗಿಸುವ ಪ್ರಕ್ರಿಯೆ ಸಾಹಿತ್ಯವಲಯದಲ್ಲಿ ನಡೆಯುತ್ತಿರುವಾಗಲೂ ಕಳೆದ ಶತಮಾನದ ಉತ್ತರಾರ್ಧವನ್ನು ಮಹಿಳಾಕಾವ್ಯದ ಕಾಲಘಟ್ಟ ಎಂದೇ ಗುರುತಿಸುವ ಮಟ್ಟಿಗೆ ಮಹಿಳೆಯರು ಕಾವ್ಯವನ್ನು ರಚಿಸುತ್ತಿದ್ದಾರೆ. ಅಲ್ಲದೆ ಮಹಿಳಾಕಾವ್ಯದ ಭಾಷೆ, ಶೈಲಿ, ಸ್ವರೂಪ, ವಿಚಾರ, ಎಲ್ಲದರಲ್ಲಿಯೂ ಹೊಸ ಹೊಸ ತಿರುವುಗಳನ್ನು ಈ ಹಂತದಲ್ಲಿ ಗುರುತಿಸಬಹುದು. ಅದರಲ್ಲೂ ಪ್ರಧಾನ ವ್ಯವಸ್ಥೆ ನಿರ್ಮಿಸಿದ್ದ ಆಚರಣೆಗಳು, ಮಹಿಳಾ ವಿರೋಧಿ ನೀತಿಗಳು, ಅವುಗಳ ಸ್ವರೂಪ, ಹಾಗು ಅವುಗಳನ್ನು ವಿರೋಧಿಸುವ, ಮೆಟ್ಟಿನಿಲ್ಲುವ, ವ್ಯವಸ್ಥೆಯ ಅಸಮತೆಯನ್ನು ದಾಟಿ ಸಮಾನ ಅವಕಾಶಗಳನ್ನು ಪಡೆಯುವ ಹಂಬಲ ಕಾವ್ಯಗಳಲ್ಲಿ ಹೆಚ್ಚು ಸ್ಥಾನ ಪಡೆದು ಸಮರ್ಪಕವಾದ ರೂಪ ಪಡೆದಿದೆ. ಈ ಹಿನ್ನೆಲೆಯಲ್ಲಿ ಮಹಿಳಾಕಾವ್ಯದ ಅಧ್ಯಯನವೇ ಒಂದು ವಿಶಿಷ್ಟ ಅನುಭವ ಲೋಕವನ್ನು ಕಟ್ಟಿಕೊಡುತ್ತದೆ. ಅದರಲ್ಲೂ ಸ್ಥಾಪಿತ ನೆಲೆಗಳಾದ ತಾಯಿ, ಪತ್ನಿ, ಕುಟುಂಬ, ವಿವಾಹ, ಪಾತಿವ್ರತ್ಯ, ಲೈಂಗಿಕತೆ, ಮಾತೃತ್ವ, ಹೆಣ್ತನ ಮುಂತಾದ ಸಾಮಾಜಿಕ ಸಂಬಂಧಗಳಿಗೆ ಮಹಿಳಾಕಾವ್ಯ ಪ್ರತಿಕ್ರಿಯಿಸಿದ ವಿಧಾನ ಭಿನ್ನ ಹಾಗೂ ವಿಶಿಷ್ಟವಾದದ್ದು.

**೧.೨ ಅಧ್ಯಯನದ ಉದ್ದೇಶ** : ಸಮಾಜ, ಮೌಲ್ಯವ್ಯವಸ್ಥೆ ಮತ್ತು ಹೆಣ್ಣು ಈ ಮೂರೂ ಕೂಡ ಒಂದರೊಡನೊಂದು ಅವಿನಾಭಾವ ಸಂಬಂಧ ಹೊಂದಿರುವ ಕಾರಣದಿಂದಾಗಿ ಸಾಮಾಜಿಕ, ರಾಜಕೀಯ, ಆರ್ಥಿಕ, ಧಾರ್ಮಿಕ ಹೋರಾಟಗಳ ಭಾಗವಾಗಿ ಹೆಣ್ಣಿನ ಕಲಾಭಿವ್ಯಕ್ತಿ ರೂಪುಗೊಂಡಿರುವಲ್ಲಿ ಇವುಗಳ ಪಾತ್ರ ಏನು ಎಂಬುದನ್ನು ಚರ್ಚಿಸುವುದು ಹಾಗೂ ಇವುಗಳ ನಡುವಿನ ಸಂಬಂಧದ ಸ್ಥಿತ್ಯಂತರದ ಸ್ವರೂಪವನ್ನು ಗುರುತಿಸುವುದು ಈ ಅಧ್ಯಯನದ ಉದ್ದೇಶವಾಗಿದೆ.

ಮಹಿಳಾಕಾವ್ಯದಲ್ಲಿ ವಿಭಿನ್ನ ದೃಷ್ಟಿಕೋನಗಳದ್ದು ಒಳಸಂಘರ್ಷ ಮತ್ತು ತಾತ್ವಿಕ ಭಿನ್ನತೆಗಳನ್ನು ಗುರುತಿಸಬಹುದು. ಈ ಹಿನ್ನೆಲೆಯಲ್ಲಿ ಹೆಣ್ಣಿನ ಮಟ್ಟಿಗೆ ಕಾವ್ಯ ಕಲಾತ್ಮಕ ಅಭಿವ್ಯಕ್ತಿ ಮಾಧ್ಯಮವೋ? ಅಥವಾ ಹೆಣ್ಣಿನ ಮೇಲೆ ನಡೆಯುತ್ತಿರುವ ದೌರ್ಜನ್ಯಕ್ಕೆ ತೋರುತ್ತಿರುವ ಪ್ರತಿರೋಧದ ಮಾದರಿಯದ್ದೋ? ಎಂಬುದನ್ನು ಚರ್ಚೆಗೆ ಒಳಪಡಿಸುವುದು ಈ ಅಧ್ಯಯನದ ಮುಖ್ಯ ಉದ್ದೇಶವಾಗಿದೆ.

ಆಧುನಿಕ ಕನ್ನಡ ಮಹಿಳಾಕಾವ್ಯದ ಸ್ವರೂಪ, ಮಾಧ್ಯಮ, ಅಭಿವ್ಯಕ್ತಿ ವಿಧಾನ ಹಾಗೂ ವಸ್ತು ನಿರ್ವಹಣೆಯಲ್ಲಿ ಆದಂತಹ ಬದಲಾವಣೆಗಳಗೂ ಮಹಿಳೆಯರ ಪ್ರಜ್ಞಾವಿನ್ಯಾಸದಲ್ಲಿ ಆದ ಬದಲಾವಣೆಗಳಗೂ ನಡುವಿನ ಅಂತರ್‌ಸಂಬಂಧ ಮತ್ತು ವೈಪರೀತ್ಯಗಳನ್ನು ಗುರುತಿಸುವುದು ಈ ಅಧ್ಯಯನದ ಉದ್ದೇಶಗಳಲ್ಲೊಂದು.

ಬಿಡುಗಡೆ ಎನ್ನುವುದು ಹೆಣ್ಣಿನ ಮಟ್ಟಿಗೆ ಬಹುಮುಖಿಯಾದದ್ದು. ಮೌಲ್ಯವ್ಯವಸ್ಥೆಯ ಹೆಸರಿನಲ್ಲಿ ಹೇರಲ್ಪಟ್ಟ ಹಾಗೂ ಮೂಲ ಸ್ವಭಾವವನ್ನು ಗುರುತಿಸುವುದು, ಸ್ವಬಿಡುಗಡೆಯೂ ಸೇರಿದಂತೆ ವ್ಯವಸ್ಥೆಯ ಸ್ಥಾಪಿತ ದೃಷ್ಟಿಕೋನಗಳಂದ ಬಿಡುಗಡೆ ಪಡೆಯುವುದು ಅವಳೆದುರಿಗಿರುವ ಮೂಲ ಸವಾಲು. ಬಿಡುಗಡೆಯನ್ನು ಕುರಿತ ಲೇಖಕಿಯರ ಆಲೋಚನಾ ಮಾದರಿಗಳನ್ನು ಚರ್ಚಿಸುವುದು ಈ ಅಧ್ಯಯನದ ಚೌಕಟ್ಟಿನೊಳಗೆ ಬರುತ್ತದೆ. ಇವುಗಳೊಂದಿಗೆ ಹೆಣ್ಣಿನ ಜೀವನವಿನ್ಯಾಸ ಮತ್ತು ಮನೋವಿನ್ಯಾಸದ ಮೇಲೆ ಪ್ರಭಾವ ಬೀರುವ ಎಲ್ಲಾ ಬಗೆಯ ಮೂರ್ತ, ಅಮೂರ್ತ ನೆಲೆಗಳನ್ನು ಕಾವ್ಯದ ಮೂಲಕ ಚರ್ಚೆಗೆ ಒಳಪಡಿಸುವುದು ಈ ಮಹಾ ಪ್ರಬಂಧದ ಉದ್ದೇಶವಾಗಿದೆ.

ಮೌಲ್ಯ ವ್ಯವಸ್ಥೆಯೊಂದಿಗೆ ಮಹಿಳಾಕಾವ್ಯ ನಡೆಸಿರುವ ಸಂವಾದದ ಸ್ವರೂಪ ರೋಮಾಂಚನ ಕಾರಿಯಾದ ಅಧ್ಯಯನ. ಹೆಣ್ಣಿನ ಅಭಿವ್ಯಕ್ತಿಯ ವಿಧಾನವೇ ಹಲವು ಬಗೆಯ ನಿರ್ಬಂಧಗಳಗೊಳಪಟ್ಟಿದೆ. ಮಹಿಳಾ ಅಭಿವ್ಯಕ್ತಿಗೆ ಲಕ್ಷ್ಮಣ ರೇಖೆಗಳನ್ನೂ, ಎಲ್ಲೆಗಳನ್ನು ಪುರುಷ ಪ್ರಧಾನ ವ್ಯವಸ್ಥೆಯೇ ನಿರ್ಧರಿಸಿ ಯಾವುದನ್ನು? ಹೇಗೆ? ಎಷ್ಟು ಅಭಿವ್ಯಕ್ತಿಸಬೇಕು ಎಂಬುದನ್ನು ಹೇಳಬಿಡಲಾಗಿತ್ತು. ಈ ನಿರ್ಬಂಧಗಳ ನಡುವೆ ಮಹಿಳೆ ತನ್ನ ಕಾವ್ಯದ ಮೂಲಕ ತನ್ನೊಳಗನ್ನು ಬಿಚ್ಚಿಡುವುದಷ್ಟೇ ಅಲ್ಲದೆ ವಿಭಿನ್ನ ತಂತ್ರಗಳ ಬಳಕೆಯ ಮೂಲಕ ಪುರುಷ ಪ್ರಧಾನ ಮೌಲ್ಯವ್ಯವಸ್ಥೆಯೊಂದಿಗೆ ನಿರಂತರವಾಗಿ ನಡೆಸಿರುವ

ಅನುಸಂಧಾನ ಹಾಗೂ ಪುನರ್‌ರಚನಾ ಪ್ರಕ್ರಿಯೆಯ ವಿಧಾನಗಳನ್ನು ಕುರಿತಂತೆ ಅಧ್ಯಯನ ಮಾಡುವುದು ಈ ಮಹಾಪ್ರಬಂಧದ ಉದ್ದೇಶಗಳಲ್ಲೊಂದಾಗಿದೆ.

ಒಂದು ವ್ಯಕ್ತಿತ್ವ ರೂಪುಗೊಳ್ಳುವುದಕ್ಕೂ ಅವರ ಸಾಮಾಜಿಕ ಸಾಂಸ್ಕೃತಿಕ ಸಂದರ್ಭಕ್ಕೂ ಹಾಗೂ ಅವರ ಅಭಿವ್ಯಕ್ತಿಗೂ ನಿಕಟವಾದ ಸಂಬಂಧವಿರುವ ಕಾರಣದಿಂದಾಗಿ ಮಹಿಳಾಕಾವ್ಯವನ್ನು ಲೇಖಕಿಯರ ಬದುಕು ಬವಣೆಗಳ ಹಿನ್ನೆಲೆಯಲ್ಲಿ ಗ್ರಹಿಸಬೇಕಾಗುತ್ತದೆ. ಪ್ರಾದೇಶಿಕತೆ, ಕಾಲ ಹಾಗೂ ಸಾಮಾಜಿಕ, ಸಾಂಸ್ಕೃತಿಕ ಸನ್ನಿವೇಶಗಳು ಮೌಲ್ಯವ್ಯವಸ್ಥೆಯೊಂದಿಗಿನ ಮಹಿಳೆ, ಮಹಿಳಾಕಾವ್ಯದ ಸಂಬಂಧವನ್ನು ನಿರ್ಣಯಿಸುತ್ತವೆ, ನಿರ್ವಚಿಸುತ್ತವೆ. ಈ ಹಿನ್ನೆಲೆಯಲ್ಲಿ ಲೇಖಕಿಯರ ಬದುಕು ಬರಹದ ವಿಶಾಲ ಚೌಕಟ್ಟಿನಲ್ಲಿ ಮಹಿಳಾಕಾವ್ಯ ಸ್ಥಾಪಿತ ಮೌಲ್ಯಗಳೊಂದಿಗೆ ನಡೆಸಿದ ಮುಖಾಮುಖಿಯನ್ನು ಅರಿಯಲು ಪ್ರಯತ್ನಿಸಲಾಗಿದೆ.

**೧.೩ ಅಧ್ಯಯನದ ವ್ಯಾಪ್ತಿ** : ಯಾವುದೇ ಒಂದು ಅಧ್ಯಯನವು ತನ್ನದೇ ಆದ ವ್ಯಾಪ್ತಿ ಮತ್ತು ಮಿತಿಯನ್ನು ಹೊಂದಿರುತ್ತದೆ. ಅದರಲ್ಲಿಯೂ ಸಾಹಿತ್ಯದಂತಹ ಕ್ಷೇತ್ರದಲ್ಲಿ ಅಧ್ಯಯನಕ್ಕೆ ತೊಡಗಿದಾಗ ಸೀಮಿತ ವ್ಯಾಪ್ತಿ ಅಗತ್ಯವಾದದ್ದು. ಅದರಲ್ಲೂ ಮಹಿಳಾ ಸಾಹಿತ್ಯವನ್ನು ಹಲವು ನೆಲೆಗಳಲ್ಲಿ ಅಧ್ಯಯನಕ್ಕೆ ಒಳಪಡಿಸುವ ಸಾಧ್ಯತೆ ಯತೇಚ್ಚವಾಗಿರುವುದರಿಂದ ಅವುಗಳನ್ನು ಗುರುತಿಸಿ ಮುಂದುವರೆಯುವುದು ಸೂಕ್ತ. ಹಾಗಾಗಿ ಈ ಸಂಶೋಧನಾ ಮಹಾಪ್ರಬಂಧದ ವ್ಯಾಪ್ತಿಯು 'ಮಹಿಳಾಕಾವ್ಯ', 'ಸ್ಥಾಪಿತ ನೆಲೆಗಳು' ಮತ್ತು 'ಪುನರ್‌ರಚನೆಯ ಪ್ರಕ್ರಿಯೆ' ಎಂಬ ಮೂರು ಆಯಾಮಗಳನ್ನು ಒಳಗೊಂಡಿದೆ.

ಮಾನವ ನಾಗರೀಕನಾಗುವ ಪ್ರಕ್ರಿಯೆಯಲ್ಲಿ ತನ್ನ ಅನುಕೂಲಕ್ಕೆ ತಕ್ಕಂತೆ ಸ್ಥಾಪಿಸಿಕೊಂಡ ಸಾಂಸ್ಥಿಕ ಘಟಕಗಳನ್ನು ಸ್ಥಾಪಿತ ನೆಲೆಗಳು ಎಂದು ಗುರುತಿಸಬಹುದು. ಧರ್ಮ, ರಾಜಕೀಯ, ಕುಟುಂಬ, ಸಮಾಜ ಮುಂತಾದ ಸ್ಥಾಪಿತ ನೆಲೆಗಳು ಮೌಲ್ಯವ್ಯವಸ್ಥೆಯ ಹೆಸರಿನಲ್ಲಿ ಗಂಡು ಹೆಣ್ಣಿಗೆ ಸಂಬಂಧಿಸಿದಂತೆ ಭಿನ್ನ ಜೀವನ ವಿಧಾನ ಮತ್ತು ಕಾರ್ಯಮಾದರಿಗಳನ್ನು ರೂಪಿಸಿವೆ. ಇದು ಬದಲಾದ ಕಾಲ, ಸನ್ನಿವೇಶ, ಸಂದರ್ಭದಲ್ಲಿಯೂ ಹೆಚ್ಚಿನ ಬದಲಾವಣೆಗಳಿಲ್ಲದೆ ಹೆಣ್ಣಿನ ಮೇಲೆ ಒತ್ತಾಯಪೂರ್ವಕವಾಗಿ ಹೇರಲ್ಪಡುತ್ತಿವೆ. ಅಧ್ಯಯನದ ಅನುಕೂಲದ ದೃಷ್ಟಿಯಿಂದ ಸಮುದಾಯದಲ್ಲಿ ಚಾಲ್ತಿಯಲ್ಲಿರುವ ಹಲವು ಸ್ಥಾಪಿತ ನೆಲೆಗಳಲ್ಲಿ ಹೆಣ್ಣಿಗೆ ಸಂಬಂಧಿಸಿದ ಮೌಲ್ಯವ್ಯವಸ್ಥೆಯನ್ನು ಕುರಿತು ಚರ್ಚಿಸಲಾಗಿದೆ. ಈ ಸ್ಥಾಪಿತ ಮೌಲ್ಯಗಳನ್ನು ಪುರುಷ ಪ್ರಧಾನ ವ್ಯವಸ್ಥೆ ಹೆಣ್ಣನ್ನು 'ಗ್ರಹಿಸುವ' ಹಾಗೂ 'ರೂಪಿಸುವ' ಕ್ರಮಗಳನ್ನು ಒಳಗೊಂಡಂತೆ, ಹೆಣ್ಣಿನ ಜೀವನಕ್ಕೆ ಸಂಬಂಧಿಸಿದ, ಸಮುದಾಯದಲ್ಲಿ ರೂಢಿಯಲ್ಲಿರುವ ಸಾಮಾಜಿಕ, ಆರ್ಥಿಕ, ಸಾಂಸ್ಕೃತಿಕ ಹಾಗೂ ಜೈವಿಕ ಮಿತಿಗೆ ಸೀಮಿತಗೊಳಿಸಲಾಗಿದೆ.

ಇನ್ನು ಮಹಿಳಾಕಾವ್ಯದ ವ್ಯಾಪ್ತಿ ಅತ್ಯಂತ ವಿಸ್ತಾರವಾಗಿರುವುದರಿಂದ ಮೊದಲ ತಲೆಮಾರಿನಿಂದ ಸಮಕಾಲೀನ ಕಾಲಘಟ್ಟದವರೆಗಿನ ಎಲ್ಲಾ ಮುಖ್ಯ ಕವಯಿತ್ರಿಯರನ್ನೂ ಸ್ಥೂಲವಾಗಿ ಅಧ್ಯಯನಕ್ಕೆ

ಒಳಪಡಿಸಲಾಗಿದೆ. ಒಟ್ಟು ತಾತ್ವಿಕತೆಯನ್ನು ರೂಪಿಸುವಲ್ಲಿ ಎಲ್ಲರ ಕಾವ್ಯವನ್ನು ಗಮನಿಸಲಾಗಿದೆಯಾದರೂ ಅದನ್ನು ಚರ್ಚೆಗೆ ಒಳಪಡಿಸುವ ಸಂದರ್ಭದಲ್ಲಿ ತತ್ಕಾಲೀನ ಮತ್ತು ಸಮಕಾಲೀನ ಸಮಾಜದ ತವಕ ತಲ್ಲಣಗಳನ್ನು ಸಮರ್ಥವಾಗಿ ಹಿಡಿದಿಡಬಲ್ಲ ಪ್ರಾತಿನಿಧಿಕ ಲೇಖಕಿಯರ ಕಾವ್ಯದ ಕಡೆಗೆ ಗಮನ ಕೊಡಲಾಗಿದೆ. ಅವರಲ್ಲಿ ನಂಜನಗೂಡು ತಿರುಮಲಾಂಬ, ಸರಸ್ವತಿಬಾಯಿ ರಾಜವಾಡೆ, ಬೆಳಗೆರೆ ಜಾನಕಮ್ಮ, ಎನ್.ವಿ. ಭಾಗ್ಯಲಕ್ಷ್ಮಿ, ಶೈಲಜಾ ಉಡಚಣ, ವಿಜಯಾ ದಬ್ಬೆ, ಶಶಿಕಲಾ ವೀರಯ್ಯಸ್ವಾಮಿ, ಮಾಲತಿ ಪಟ್ಟಣಶೆಟ್ಟಿ, ಸುಕನ್ಯಾ ಮಾರುತಿ, ಸವಿತಾ ನಾಗಭೂಷಣ್, ಸ.ಉಷಾ, ಪ್ರತಿಭಾನಂದಕುಮಾರ್, ವೈದೇಹಿ, ಬಿ.ಟಿ. ಲಲಿತಾ ನಾಯಕ್, ಸ. ಉಷಾ, ಲಲಿತಾ ಸಿದ್ದಬಸವಯ್ಯ ಮುಖ್ಯರಾದವರು. ಇನ್ನುಳಿದ ಸಂದರ್ಭದಲ್ಲಿ ಇತರೆ ಲೇಖಕಿಯರ ಕಾವ್ಯವನ್ನೂ ಸಾಂದರ್ಭಿಕವಾಗಿ ಚರ್ಚಿಸಲಾಗಿದೆ. ಒಟ್ಟು ಸ್ತ್ರೀಸಂಕಥನದ ವಿಭಿನ್ನ ಮಾದರಿಗಳನ್ನು ಹಿಡಿದಿಡಬಲ್ಲ, ಹೆಣ್ಣಿನ ಅಸ್ಮಿತೆಯನ್ನು ಕಟ್ಟಿಕೊಡುವಲ್ಲಿ ಸಹಾಯಕವಾಗುವ, ಎಲ್ಲಕ್ಕಿಂತ ಮುಖ್ಯವಾಗಿ ಕಾವ್ಯಕಲೆಯಲ್ಲಿಯೂ ಕೂಡ ಉತ್ತಮ ಎನಿಸಬಲ್ಲ ಕಾವ್ಯದ ಕಡೆಗೆ ಅಧ್ಯಯನದ ಗಮನವಿದೆ. ಇದೆಲ್ಲದರ ನಡುವೆ ಆಧುನಿಕತೆಯಿಂದ ಪಡೆದ ಪ್ರೇರಣೆ, ಪ್ರಭಾವದ ಫಲವಾಗಿ ಕಳೆದ ಶತಮಾನದ ಉತ್ತರಾರ್ಧದಲ್ಲಿ ಮಹಿಳಾ ಅಭಿವ್ಯಕ್ತಿಯ ಪ್ರಮಾಣ ಗಣನೀಯವಾಗಿ ಹೆಚ್ಚಾಗಿದೆ. ಇದರಿಂದಾಗಿ ಸಹಜವಾಗಿಯೇ ಈ ಕಾಲಘಟ್ಟದ ಅಭಿವ್ಯಕ್ತಿ ಕ್ರಮ ಮತ್ತು ವಿಧಾನ, ವೈವಿಧ್ಯತೆ ಮತ್ತು ವಿಶಿಷ್ಟತೆಯಿಂದ ಕೂಡಿದೆ. ಹಾಗಾಗಿ ಪ್ರಸ್ತುತ ಅಧ್ಯಯನದಲ್ಲಿ ಈ ಕಾಲಘಟ್ಟದ ಕಾವ್ಯದ ಕಡೆಗೆ ಗಮನವನ್ನು ಕೇಂದ್ರೀಕರಿಸಲಾಗಿದೆ.

ಒಂದು ವ್ಯಕ್ತಿತ್ವ ರೂಪುಗೊಳ್ಳುವುದಕ್ಕೂ, ಅವರ ಸಾಮಾಜಿಕ-ಸಾಂಸ್ಕೃತಿಕ ಸಂದರ್ಭಕ್ಕೂ, ಹಾಗೂ ಅವರ ಅಭಿವ್ಯಕ್ತಿಗೂ ನಿಕಟವಾದ ಸಂಬಂಧವಿರುವ ಕಾರಣದಿಂದಾಗಿ ಮಹಿಳಾಕಾವ್ಯವನ್ನು ಲೇಖಕಿಯರ ಬದುಕು ಬವಣೆಗಳ ಹಿನ್ನೆಲೆಯಲ್ಲಿ ಗ್ರಹಿಸಬೇಕಾಗುತ್ತದೆ. ಅಧ್ಯಯನದ ಸಮಗ್ರತೆಯ ದೃಷ್ಟಿಯಿಂದ ಅತಿಮುಖ್ಯ ಹಾಗೂ ಅನಿವಾರ್ಯವೆನಿಸುವ ಸಂದರ್ಭದಲ್ಲಿ ಲೇಖಕಿಯರ ಕಥನ ಸಾಹಿತ್ಯ, ಆತ್ಮಕಥನ ಹಾಗೂ ಇತರೆ ಬರಹಗಳನ್ನು ಅಧ್ಯಯನಕ್ಕೆ ಪೂರಕವಾಗಿ ಬಳಸಿಕೊಳ್ಳಲಾಗಿದೆ. ಅಂತಿಮವಾಗಿ ಮಹಿಳಾ ಕಾವ್ಯದ ವ್ಯಾಪ್ತಿ ವಿಸ್ತಾರವಾದರೂ ಈ ಅಧ್ಯಯನದಲ್ಲಿ ನಿಸ್ಸಂದೇಹವಾಗಿ ಕಾವ್ಯದ ಎಲ್ಲಾ ಮಾನದಂಡಗಳನ್ನು ಒಳಗೊಂಡಿರುವ ಕಾವ್ಯದ ಮಿತಿಗೆ ಅಧ್ಯಯನವನ್ನು ಸೀಮಿತಗೊಳಿಸಲಾಗಿದೆ.

**೧.೪ ಅಧ್ಯಯನದ ಮಹತ್ವ :** ಮಹಿಳಾಕಾವ್ಯದ ಅಧ್ಯಯನದ ಮಹತ್ವ ಬಹುಮುಖಿಯಾದದ್ದು. ಸಾಹಿತ್ಯಿಕ ಕಾರಣಗಳಷ್ಟೇ ಅಲ್ಲದೆ ಸಾಹಿತ್ಯೇತರ ಕಾರಣಗಳು ಈ ಅಧ್ಯಯನದ ವ್ಯಾಪ್ತಿಯಲ್ಲಿ ಬರುವುದರಿಂದ ಈ ಅಂಶವು ಅಧ್ಯಯನದ ಮಹತ್ವವನ್ನು ಸಹಜವಾಗಿಯೇ ಹೆಚ್ಚಿಸುತ್ತದೆ. ಕಳೆದ ಶತಮಾನದ ಉತ್ತರಾರ್ಧದಿಂದ ಜಾಗತಿಕವಾಗಿ ಮಹಿಳೆಯರು ಕಟ್ಟಿಕೊಳ್ಳಲು ನಡೆಸುತ್ತಿರುವ ಸ್ತ್ರೀ ಸಂಕಥನದ ಮಹತ್ವದ ದಾಖಲೆಗಳು ಮತ್ತು ಚಲನೆಗಳು ಮಹಿಳಾ ಕಾವ್ಯದಲ್ಲಿ ನಮ್ಮ ಚರ್ಚೆಗೆ ಸಿಗುತ್ತವೆ. ಸೂಕ್ಷ್ಮ ಅಭಿವ್ಯಕ್ತಿಯ ಸಾಧನವಾಗಿರುವ ಮಹಿಳಾ ಕಾವ್ಯದ ಅಧ್ಯಯನದಿಂದ ದಮನಿತ ಹೆಣ್ಣಿನ ಒಳಲೋಕದ ಅಪರಿಚಿತ,

ಅನೂಹ್ಯ, ನಿಗೂಢ ವಿವರಗಳು ರೂಪಕಗಳ ಮೂಲಕ ಅಭಿವ್ಯಕ್ತವಾಗುವುದರೊಂದಿಗೆ ಮುಚ್ಚಿ ಹೇಳುವ ಕಾವ್ಯದ ಅಭಿವ್ಯಕ್ತಿ ವಿಧಾನವು ಮಹಿಳಾ ಸಂಕಥನದ ಹಲವು ಆಯಾಮಗಳನ್ನು ಶಕ್ತವಾಗಿ ಕಟ್ಟಿಕೊಡಲು ಪ್ರಯತ್ನಿಸುತ್ತದೆ. ಕಾವ್ಯ ಮಹಿಳೆಯ ಅಭಿವ್ಯಕ್ತಿಗೆ ಸವಾಲೆನಿಸುವ ಮಾಧ್ಯಮ ಎಂಬ ಅಭಿಪ್ರಾಯ ಕೆಲಕಾಲ ಇತ್ತಾದರೂ ಇಂದು ಹೆಣ್ಣಿನ ಭಾವಸಂಚಲನಕ್ಕೆ, ಅಂತರಂಗದ ತನ್ನ ಒಳಲೋಕಕ್ಕೆ ಮತ್ತು ತನ್ನ ವ್ಯಕ್ತಿತ್ವಕ್ಕೆ ಅಧಿಕೃತತೆಯನ್ನು ಒಳಗಿನಿಂದಲೂ, ಹೊರಗಿನಿಂದಲೂ ಪಡೆಯುವ ಮೂರ್ತ ಮತ್ತು ಅಮೂರ್ತ ಪ್ರಯತ್ನಗಳೆರಡೂ ಮಹಿಳಾ ಕಾವ್ಯದಲ್ಲಿ ಹಾಸುಹೊಕ್ಕಾಗಿವೆ ಎಂಬ ಅರಿವು ಮಹಿಳಾ ಕಾವ್ಯದ ಅಧ್ಯಯನಕ್ಕೆ ತೊಡಗಿದಾಗ ಬರದೆ ಇರಲಾರದು. ಆದ್ದರಿಂದ ಕಥನಕ್ಕಿಂತ ಕಾವ್ಯವು ಹೆಣ್ಣಿನ ಆಂತರಿಕ ತುಮುಲಗಳನ್ನು ಹೊರಹಾಕಲು ಅನುಭವಕ್ಕೆ ಅಭಿವ್ಯಕ್ತಿಯ ರೂಪಕೊಡಲು ಶಕ್ತ ಪ್ರಕಾರವಾಗಿದೆ. ಮಹಿಳಾ ಸಂಕಥನದ ದೃಷ್ಟಿಯಿಂದ ಮಹಿಳಾಕಾವ್ಯದ ಅಭಿವ್ಯಕ್ತಿಯ ಶೋಧದಷ್ಟೇ ಅವುಗಳ ರಾಜಕೀಯ, ಸಾಮಾಜಿಕ ಮತ್ತು ಲೈಂಗಿಕ ರಾಜಕಾರಣದ ಶೋಧವೂ ಮುಖ್ಯವಾದದ್ದು.

ಈ ಸ್ಥಾಪಿತ ನೆಲೆಗಳು ಹೆಣ್ಣಿನ ಜೀವನದ ಪ್ರತಿ ಹಂತದಲ್ಲೂ ಬೇರೆಬೇರೆ ರೂಪದಲ್ಲಿ ಮತ್ತು ಬೇರೆಬೇರೆ ಕಾರ್ಯಮಾದರಿಯಲ್ಲಿ ಹೆಣ್ಣಿನ ದೈಹಿಕ, ಮಾನಸಿಕ ಸಾಮರ್ಥ್ಯವನ್ನು ಸೀಮಿತಗೊಳಿಸಿ ನಿರ್ದಿಷ್ಟ ಎಲ್ಲೆಯೊಳಗೆ ಹಿಡಿದಿಡುವ ಪ್ರಯತ್ನಮಾಡುತ್ತಿರುತ್ತದೆ. ಈ ಸ್ಥಾಪಿತ ನೆಲೆಗಳೇ ಹೆಣ್ಣಿನ ಸವಾಲು ಮತ್ತು ನಿಯಂತ್ರಿತ ಕೇಂದ್ರಗಳಾಗಿರುವುದರಿಂದ ಅವುಗಳನ್ನು ಸ್ಥಾಪಿತ ಮೌಲ್ಯಗಳು ಎಂದು ಗುರುತಿಸಲಾಗಿದೆ. ಆಧುನಿಕ ಮಹಿಳೆ ಮತ್ತು ಮಹಿಳಾಕಾವ್ಯ ಪಿತೃಪ್ರಧಾನ ವ್ಯವಸ್ಥೆಯಿಂದ ರೂಪಿಸಲ್ಪಟ್ಟ ಈ ಸವಾಲುಗಳನ್ನು ಶೋಧಿಸುವ, ಹೊಸ ಕಾಲದ ಬದಲಾದ ಆಶಯಗಳಿಗೆ ಹೊಂದಿಸಿಕೊಳ್ಳುವ ಪ್ರಯತ್ನಕ್ಕೆ ಮುಂದಾಗಿರುವುದು ಮಹತ್ವದ ಸಂಗತಿ. ಈ ಸ್ಥಾಪಿತ ನೆಲೆಗಳಿಗೆ ಮಹಿಳಾಕಾವ್ಯ ಒಡ್ಡಿದ ಪ್ರತಿಕ್ರಿಯೆ ಪ್ರತಿಭಟನಾತ್ಮಕ, ಅನುಸಂಧಾನ ಮತ್ತು ಪುನರ್‌ರಚನೆಯ ಪ್ರಕ್ರಿಯೆಯಲ್ಲಿ ತೊಡಗಿ ಸಾಮಾಜಿಕ, ಸಾಂಸ್ಕೃತಿಕ ಮತ್ತು ಲಿಂಗರಾಜಕಾರಣದ ಪ್ರಭಾವದ ವಿಸ್ತಾರವನ್ನು ಪಡೆದು ಹೆಣ್ಣಿನ ಜೀವನ ವಿಧಾನದಲ್ಲಿ ಉಂಟಾಗುತ್ತಿರುವ ಸ್ಥಾನಪಲ್ಲಟ ಮತ್ತು ಸ್ಥಿತ್ಯಂತರಗಳನ್ನು ಗುರುತಿಸಲು ಪ್ರಯತ್ನಿಸುವುದರಿಂದ ಈ ವಿಷಯದ ಅಧ್ಯಯನ ಅರ್ಥಪೂರ್ಣವಾದದ್ದು ಹಾಗೂ ಮಹತ್ವದ್ದು.

**೧.೫ ಅಧ್ಯಯನದ ವಿಧಾನ** : ವಿಶಿಷ್ಟ ಹಾಗೂ ವಿಭಿನ್ನವಾದ ಆಯಾಮವೊಂದನ್ನು ಬಳಸಿ ತಾತ್ವಿಕತೆಯೊಂದನ್ನು ರೂಪಿಸಿಕೊಳ್ಳುವ ಪ್ರಯತ್ನ ಈ ಅಧ್ಯಯನದ್ದಾಗಿದೆ. ಸ್ಥಾಪಿತ ಮೌಲ್ಯಗಳು ಎಂದು ಕರೆಯಿಸಿಕೊಳ್ಳುವ ಅಂಶಗಳು ಸಮಾಜದ ನಿರ್ಣಾಯಕ ಅಂಶಗಳೂ ಹಾಗೂ ನಿರ್ದೇಶಕ ತತ್ವಗಳೂ ಆಗಿರುವ ಕಾರಣ ಹೆಣ್ಣಿನ ಬದುಕಿನ ಮೇಲೆ ಈ ಮೌಲ್ಯಗಳು ಬೀರಿರುವ ಪ್ರಭಾವ ಅಗಾಧವಾದದ್ದು. 'ಸ್ಥಾಪಿತ ಮೌಲ್ಯಗಳ' ಆಶಯ ಮತ್ತು ಕಾರ್ಯಮಾದರಿಗಳ ನಡುವೆ ವೈರುಧ್ಯವನ್ನು ಗುರುತಿಸಬಹುದು. ಮಾನವ ಸಮುದಾಯದ ಒಳಿತಿನ ಅಪೇಕ್ಷೆಯಿಂದ, ಏಕರೂಪ ಜೀವನ ವಿಧಾನವನ್ನು ಜಾರಿಗೊಳಿಸುವ ಉದ್ದೇಶದಿಂದ, ಜೀವನ ವಿಧಾನಕ್ಕೊಂದು ನಿರ್ದಿಷ್ಟ ಚೌಕಟ್ಟನ್ನು ರೂಪಿಸುವ ಕಾರಣದಿಂದ ರೂಪುಗೊಂಡ

ಸ್ಥಾಪಿತ ಮೌಲ್ಯಗಳು ಹೆಣ್ಣನ್ನು ನಿರಂತರವಾಗಿ ತನ್ನ ಅಧೀನತೆಗೆ ಒಳಪಡಿಸಿಕೊಂಡಿವೆ. ಈ ಸ್ಥಾಪಿತ ಮೌಲ್ಯಗಳು ಹೆಣ್ಣಿನ ಅಧೀನ ಅಸ್ತಿತ್ವವನ್ನು ಸ್ಥಿರವಾಗಿಸಿದ ಅಂಶಗಳನ್ನು ಪ್ರಪಂಚದ ಯಾವುದೇ ಮೂಲೆಯ, ಯಾವುದೇ ಜನಾಂಗದ ಸ್ತ್ರೀಯ ಬದುಕಿನಲ್ಲಿ ಕಾಣಲು ಸಾಧ್ಯವಿದೆ. ಹೆಣ್ಣಿನ ಜೀವನ ವಿಧಾನ, ಅವರು ಎದುರಿಸುವ ಸಮಸ್ಯೆಗಳು ಕಾಲ, ದೇಶ, ಸಮಾಜದ ಹಿನ್ನೆಲೆಯಲ್ಲಿ ಮೇಲ್ನೋಟಕ್ಕೆ ಭಿನ್ನವಾಗಿ ಕಂಡರೂ ಗಂಡು ಹೆಣ್ಣಿನ ಸಂಬಂಧವನ್ನು ಕುರಿತಂತೆ, ಹೆಣ್ಣಿನ ಸಮಾಜಿಕ, ಆರ್ಥಿಕ ಸ್ಥಾನಮಾನವನ್ನು ಕುರಿತಂತೆ,

ಹೆಣ್ಣಿನ ಲೈಂಗಿಕ ಬದುಕನ್ನು ಕುರಿತಂತೆ ನಿರ್ದೇಶನಾತ್ಮಕ ತತ್ವಗಳಾಗಿ ಪ್ರಪಂಚದೆಲ್ಲೆಡೆ ಏಕ ರೀತಿಯಲ್ಲಿ ಕಾರ್ಯ ನಿರ್ವಹಿಸುತ್ತಿವೆ. ಹಾಗಾಗಿ ಸ್ಥಳೀಯವಾದ ಭಿನ್ನತೆಯನ್ನೂ ಒಳಗೊಂಡಂತೆ ಕಾಲ, ದೇಶಾತೀತವಾದ ಸ್ಥಾಪಿತ ಮೌಲ್ಯಗಳ ಕಾರ್ಯವಿಧಾನಗಳನ್ನು ಏಕ ಸೂತ್ರಕ್ಕೆ ಒಳಪಡಿಸಲು ಸಾಧ್ಯವಿದೆ.

ಕಾಲ ಸಾಮಾಜ, ಆರ್ಥಿಕ, ರಾಜಕೀಯ, ಸ್ಥಿತಿಗತಿಗಳು ಬದಲಾದಂತೆ ಸಮಾಜದ ಸ್ವರೂಪದಲ್ಲಿಯೂ ಕೂಡ ಗಮನಾರ್ಹವಾದ ಬದಲಾವಣೆಗಳು ಸಂಭವಿಸುತ್ತಿವೆ. ಆದರೆ ಹೆಣ್ಣಿಗೆ ಸಂಬಂಧಿಸಿದಂತೆ ಸಾಮಾಜಿಕ ಸಂದರ್ಭದಲ್ಲಿ ಆದ ಮಹತ್ವದ ಬದಲಾವಣೆಗಳೂ ಕೂಡ ಹೆಣ್ಣನ್ನು ಪುರುಷ ಪ್ರಭುತ್ವಕ್ಕೆ ಅಧೀನವಾಗಿಸುವಲ್ಲಿ ಯತಾಸ್ಥಿತಿಯನ್ನು ಕಾಯ್ದುಕೊಂಡು ಬಂದಿವೆ. ಎಂದರೆ ಕುಟುಂಬ, ಸಮಾಜ, ಆರ್ಥಿಕತೆಗೆ ಸಂಬಂಧಿಸಿದಂತೆ ಅವಳ ಸ್ಥಿತಿಗಳಲ್ಲಿ ನಡೆದಿರಬಹುದಾದ ಬದಲಾವಣೆಗಳ ಸ್ವರೂಪವನ್ನು ಗಮನಿಸಿದಾಗ ಮೌಲ್ಯವ್ಯವಸ್ಥೆ ಸ್ಥಿರತೆ ಹಾಗೂ ನಿರಂತರತೆ ಕಾಯ್ದುಕೊಂಡಿದೆ. ಉದಾ: ಹೆಣ್ಣಿನ ಕುಟುಂಬದ ಹೊಣೆಗಾರಿಕೆಗೆ, ಮಕ್ಕಳ ಪಾಲನೆ, ಪೋಷಣೆ, ಲೈಂಗಿಕತೆ, ಆರ್ಥಿಕತೆ, ಸಾಮಾಜಿಕ ಸಹಭಾಗಿತ್ವಕ್ಕೆ ಸಂಬಂಧಿಸಿದ ಅಂಶಗಳು ಮೇಲ್ನೋಟಕ್ಕೆ ಬದಲಾದಂತೆ ಕಂಡು ಬಂದರೂ ಕೂಡ ಆಂತರ್ಯದಲ್ಲಿ ಅವು ಹೆಣ್ಣನ್ನು ಮತ್ತಷ್ಟು ಸಂಕಷ್ಟಕ್ಕೆ ಗುರಿಮಾಡಿವೆ. ಇದನ್ನು ಮಹಿಳಾ ಕಾವ್ಯದ ಅಧ್ಯಯನದಿಂದ ಸ್ಪಷ್ಟವಾಗಿ ಗುರುತಿಸಬಹುದು. ತಾಯ್ತನ, ಗೃಹಿಣಿತ್ವ, ಪಾತಿವ್ರತ್ಯ ಮುಂತಾದ ಮೌಲ್ಯಗಳು ಇಂದಿಗೂ ಹೆಣ್ಣನ್ನು ನಿಯಂತ್ರಿಸುವ ಸಾಧನಗಳಾಗಿದ್ದು, ಇವು ಹೆಣ್ಣಿನ ಜೀವನ ವಿಧಾನದಲ್ಲಿ ಪುರುಷ ಪ್ರಭುತ್ವದ ಪ್ರಧಾನ್ಯತೆಯನ್ನು ನಿರಂತರವಾಗಿ ಎತ್ತಿಹಿಡಿಯುತ್ತಿವೆ. ಹೆಣ್ಣಿಗೆ ಸಂಬಂಧಿಸಿದ ಈ ಬಗೆಯ ಸ್ಥಾಪಿತ ಹಿತಾಸಕ್ತಿಗಳು ಬದಲಾಗುವ, ಬದಲಾಗಬಹುದಾದ ಮೌಲ್ಯಗಳಾದರೂ ಕೂಡ ಮೂಲ ಸ್ವರೂಪಕ್ಕೆ ದಕ್ಕೆ ಬಾರದ ರೀತಿಯಲ್ಲಿ ಅಥವಾ ಹೆಣ್ಣಿನ ಜೀವನದಲ್ಲಿ ಸ್ಥಗಿತತೆಯನ್ನು ಸಾಧಿಸುವಲ್ಲಿ ಯಶಸ್ವಿಯಾಗಿ ಕಾರ್ಯ ನಿರ್ವಹಿತ್ತಿವೆ.

ಸಾಮಾಜಿಕವಾಗಿ ಒಪ್ಪಿತವಾಗಿರುವ, ರಾಜಕೀಯವಾಗಿ ಅಧಿಕಾರ ಕೇಂದ್ರಿತ ನೆಲೆಗಳನ್ನು ಹೊಂದಿದ್ದು, ಹೆಣ್ಣನ್ನು ಅಮೂರ್ತ ನಿಯಂತ್ರಿತ ಚೌಕಟ್ಟಿನೊಳಗೆ ಸೀಮಿತಗೊಳಿಸಿ, ಹೆಣ್ಣೆಂದರೆ 'ಹೀಗೆ' ಇರಬೇಕೆಂಬ ಪುರುಷಪ್ರಧಾನ ವ್ಯವಸ್ಥೆಯ 'ಅಪೇಕ್ಷಿತ' ಹೆಣ್ಣಿನ ಜೀವನ ವಿಧಾನಕ್ಕೆ ಸಂಬಂಧಿಸಿದ ಮೌಲ್ಯಗಳೆ ಸ್ಥಾಪಿತ ಮೌಲ್ಯಗಳು. ಆದರೆ ಪುರುಷ ಪ್ರಧಾನ ವ್ಯವಸ್ಥೆ ಇವುಗಳನ್ನು ಮೌಲ್ಯಗಳೆಂದು ಗುರುತಿಸಿದ್ದರೂ ಕೂಡ ಹೆಣ್ಣಿನ ಮಟ್ಟಿಗೆ ಇವು ಪಾಲಿಸಲೇಬೇಕಾದ 'ಕರಾರು' ಅಥವಾ 'ಒಪ್ಪಂದ'ಗಳೇ

ಆಗಿವೆ. ಇವುಗಳನ್ನು ಮೀರುವ ಪ್ರಯತ್ನ ಹೆಣ್ಣಿನ ಜೀವನ ಹಾಗೂ ಅಭಿವ್ಯಕ್ತಿಯಲ್ಲಿ ದಾಖಲಾಗಿರುವುದನ್ನು ನಿರಂತರವಾಗಿ ಗುರುತಿಸಬಹುದು. ಈ ಹಿನ್ನೆಲೆಯಲ್ಲಿ ಆಧುನಿಕ ಮಹಿಳಾ ಕಾವ್ಯದಲ್ಲಿ ವ್ಯಕ್ತವಾಗಿರುವ ಸ್ತ್ರೀವಾದಿ ಚಿಂತನೆ ಅಧ್ಯಯನದ ಪ್ರಮುಖ ಆಕರವಾಗಿರುವಾಗಲೂ ಈ ಅಧ್ಯಯನ ಸ್ತ್ರೀವಾದಿ ಚಿಂತನೆಯಿಂದ ಹೊರಗಿರುವ ಮತ್ತು ಇಂದು ಹುಡುಕುತ್ತಿರುವ ಬೇರೆಬೇರೆ ತಾತ್ವಿಕ ಚಿಂತನೆಗಳನ್ನು ಒಳಗೊಂಡಿದೆ. ಪ್ರಸ್ತುತ ಅಧ್ಯಯನದಲ್ಲಿ ಸ್ತ್ರೀವಾದಿ ಚಿಂತನೆಯೊಂದಿಗೆ ಸಾಮಾಜಿಕ, ಸಾಂಸ್ಕೃತಿಕ ಚಿಂತನೆಗಳನ್ನು ಹೊಂದಿಸಿ ತಾತ್ವಿಕ ಚಿಂತನೆಗೆ ಒಳಪಡಿಸಲಾಗಿದೆ. ಕಾವ್ಯ ಮೀಮಾಂಸೆ ಮತ್ತು ಮಹಿಳಾ ಕಾವ್ಯದ ಚರ್ಚೆ ತುಂಬಾ ಸಂಕೀರ್ಣವಾದದ್ದಾಗಿದೆ. ದಲಿತಕಾವ್ಯ ಮತ್ತು ಮಹಿಳಾಕಾವ್ಯ ಕಾವ್ಯ ಮೀಮಾಂಸೆಯ ಅರಹುಗಳನ್ನು ವಿಸ್ತರಿಸಲು ಆಸಕ್ತಿ ಹೊಂದಿವೆ. ಈ ವಿಸ್ತೃತ ಪರಿಭಾಷೆಯ ಅಂಶಗಳನ್ನು ಈ ಅಧ್ಯಯನದಲ್ಲಿ ಚರ್ಚೆಗೆ ಒಳಪಡಿಸಲಾಗಿದೆ.

ಇತ್ತೀಚಿನ ದಿನಗಳಲ್ಲಿ ಮಹಿಳಾ ಸಾಹಿತ್ಯವನ್ನು ಕುರಿತಾದ ಸಂಶೋಧನೆಗಳು ಚಾಲನೆ ಪಡೆದುಕೊಳ್ಳುತ್ತಿವೆ. ಮಹಿಳಾಕಾವ್ಯ ಸ್ಥಾಪಿತಮೌಲ್ಯಗಳೊಂದಿಗೆ ಅನುಸಂಧಾನ ನಡೆಸಿದ, ಪುನರ್ರಚಿಸಿದ ಪ್ರಕ್ರಿಯೆಯನ್ನು ಕುರಿತು ಈವರೆಗೂ ಗಂಭೀರ ಅಧ್ಯಯನಗಳು ನಡೆದಿರುವುದಿಲ್ಲ. ಈ ಅಧ್ಯಯನವು ಮಹಿಳಾ ಸಂಕಥನದ ಮಾದರಿಗಳನ್ನು ಕಟ್ಟಿಕೊಡುವುದರ ಜೊತೆಗೆ ಮಹಿಳಾಕಾವ್ಯದ ಅನನ್ಯತೆಯ ನೆಲೆಗಳನ್ನು ಗುರುತಿಸಲು ಸಹಾಯ ಮಾಡಬಲ್ಲದು ಎನ್ನುವುದು ಈ ಅಧ್ಯಯನದ ಆಶಯಗಳಲ್ಲೊಂದು. ಹಾಗಾಗಿ ಈ ವಿಷಯವನ್ನು ಅಧ್ಯಯನಕ್ಕೆ ಆಯ್ಕೆಮಾಡಿಕೊಂಡು ಸ್ತ್ರೀವಾದಿ ವಿಮರ್ಶೆಯ ತಾತ್ವಿಕ ನೆಲೆಗಳ ಹಿನ್ನೆಲೆಯಲ್ಲಿ ವಿಶ್ಲೇಷಿಸಲಾಗಿದೆ.

## ಅಧ್ಯಾಯ ೨

## ಇದುವರೆಗಿನ ಅಧ್ಯಯನಗಳ ಸಮೀಕ್ಷೆ

ಮಹಿಳಾ ಕಾವ್ಯವನ್ನು ಕುರಿತಂತೆ ಇದುವರೆಗೂ ನಡೆದಿರುವ ಅಧ್ಯಯನವನ್ನು ಪರಿವೀಕ್ಷಿಸಿ ಮುಂದಿನ ಅಧ್ಯಯನವನ್ನು ಕೈಗೊಳ್ಳುವುದು ಪ್ರಸ್ತುತ ಅಧ್ಯಯನದ ಆಶಯ ಮತ್ತು ದಿಕ್ಕನ್ನು ನಿರ್ಧರಿಸುವಲ್ಲಿ ಸಹಕಾರಿಯಾಗುತ್ತದೆ. ಮಹಿಳಾ ಕಾವ್ಯವನ್ನು ಕುರಿತಂತೆ ನಡೆದಿರುವ ಅಧ್ಯಯನಗಳನ್ನು ಮಹಿಳಾ ಅಭಿವ್ಯಕ್ತಿಯ ಭಾಗವಾಗಿಯೇ ಗ್ರಹಿಸಿದಲ್ಲಿ ಮಹಿಳಾ ಕಾವ್ಯ ಗುಣಾತ್ಮಕವಾದ ವಿಮರ್ಶೆಗೆ ಒಳಪಟ್ಟಿದೆಯೆ ಎಂಬುದನ್ನು ತಿಳಿಯಲು ಸಾಧ್ಯ. ಆದುದರಿಂದಾಗಿ ಒಟ್ಟು ಮಹಿಳಾ ಸಾಹಿತ್ಯದ ವಿವರಣೆ, ವಿಶ್ಲೇಷಣೆ, ವಿಮರ್ಶಾ ವಿಧಾನದ ಹಿನ್ನೆಲೆಯಲ್ಲಿಯೇ ಮಹಿಳಾ ಕಾವ್ಯದ ಅಧ್ಯಯನಗಳ ಸಮೀಕ್ಷೆಯನ್ನು ಮುಂದುವರಿಸಬೇಕಾಗಿದೆ. ಅಲ್ಲದೆ ಪುರುಷ ಪ್ರಧಾನ ವ್ಯವಸ್ಥೆಯ ಆಲೋಚನೆಗಳು ಹಾಗೂ ಲಿಂಗ ಶ್ರೇಣೀಕರಣ ಚಿಂತನೆಗಳು ಮಹಿಳಾ ಸಾಹಿತ್ಯವನ್ನು ಗ್ರಹಿಸುವಲ್ಲಿ ತಾರತಮ್ಯ ಧೋರಣೆಯನ್ನು ಹೊಂದಿರುವುದರಿಂದ ಈ ಅಧ್ಯಯನದ ಕ್ರಮಗಳನ್ನು ಗಂಭೀರವಾಗಿ ಪರಿಶೀಲಿಸಬೇಕಿದೆ.

ಮಹಿಳಾ ಕಾವ್ಯ ಪರಂಪರೆಗೆ ಸುದೀರ್ಘವಾದ ಇತಿಹಾಸ ಇದೆಯಾದರೂ ಅದು ವಿಮರ್ಶೆಯ ಪರಂಪರೆಯೊಳಗೆ ಸ್ಥಾನ ಪಡೆದದ್ದು ಇತ್ತೀಚಿಗೆ. ಕಳೆದ ಶತಮಾನದ ಉತ್ತರಾರ್ಧವನ್ನು ಮಹಿಳಾ ಕಾವ್ಯದ ಕಾಲಘಟ್ಟ ಎಂದೇ ಗುರುತಿಸುವ ಮಟ್ಟಿಗೆ ಕಾವ್ಯ ರಚನೆಯಾದರೂ ಕೂಡ ಆ ಕಾಲಘಟ್ಟದಲ್ಲಿ ಮಹಿಳಾ ಕಾವ್ಯ ಗುಣಾತ್ಮಕವಾದ ವಿಮರ್ಶೆಗೆ ಒಳಗಾದದ್ದು ಕಡಿಮೆಯೇ. ಆದರೆ ಕನ್ನಡದ ವಿಮರ್ಶಕರು ಮಹಿಳಾ ಸಾಹಿತ್ಯವನ್ನು ಪ್ರಾಸಂಗಿಕವಾಗಿ ಹಾಗೂ ಪ್ರತ್ಯೇಕ ವಿಶ್ಲೇಷಣೆಯಲ್ಲಿ ಚರ್ಚಿಸಿದ್ದಾರೆ. ಜೊತೆಗೆ ಸಂಶೋಧನಾ ಪ್ರಬಂಧಗಳು, ಎಂ.ಫಿಲ್., ಪ್ರಬಂಧಗಳು, ಅಭಿನಂದನಾ ಗ್ರಂಥಗಳು, ಮುನ್ನುಡಿ, ಬೆನ್ನುಡಿಗಳು, ಪದ್ಯಗಳನ್ನು ಕುರಿತ ವಿಶ್ಲೇಷಣೆಗಳು, ಸ್ವತಂತ್ರ ಲೇಖನಗಳು ಮುಂತಾದವುಗಳು ಮಹಿಳಾ ಕಾವ್ಯವನ್ನು ಕುರಿತಂತೆ ಮಹತ್ವದ ಮಾಹಿತಿಯನ್ನು ಒದಗಿಸುತ್ತವೆ.

ಮಹಿಳಾ ಕಾವ್ಯದ ಅಧ್ಯಯನ ಎಂದರೆ ಹೆಣ್ಣಿನ ಬದುಕಿನ, ಬದಲಾವಣೆಗಳ, ಪಲ್ಲಟಗಳ, ಅಭಿವ್ಯಕ್ತಿಯ ಹಾಗೂ ಅದರ ಗ್ರಹಿಕೆಯ ಒಟ್ಟಾರೆ ಅಧ್ಯಯನ ಕೂಡ ಆಗಿದೆ. ಆದುದರಿಂದಾಗಿ ಒಟ್ಟು ಕನ್ನಡ ಸಾಹಿತ್ಯ ಸಂದರ್ಭದಲ್ಲಿ ಹೆಣ್ಣಿನ ಅಭಿವ್ಯಕ್ತಿಯ ಮಿತಿ ಹಾಗೂ ಶಕ್ತಿಯನ್ನು ಒಟ್ಟಿಗೆ ಇಟ್ಟು ಅಧ್ಯಯನವನ್ನು ಮುಂದವರಿಸುವುದು ಅನಿವಾರ್ಯ. ಈ ಹಿನ್ನೆಲೆಯಲ್ಲಿ ಹೆಣ್ಣಿನ ಸಂವೇದನೆಯ ಸ್ವರೂಪಗಳನ್ನೂ, ಅಭಿವ್ಯಕ್ತಿ

ವಿಧಾನಗಳನ್ನೂ, ಆ ಸಂದರ್ಭದಲ್ಲಿ ಎದುರಾದ ಸವಾಲುಗಳನ್ನೂ, ಹಾಗೂ ಇದರಿಂದಾಗಿ ರೂಪುಗೊಂಡ ಸ್ತ್ರೀವಾದಿ ಚಿಂತನೆಯನ್ನು ಕುರಿತಂತೆ ನಡೆದಿರುವ ಅಧ್ಯಯನಗಳನ್ನು ಗಮನಿಸಿ ಪ್ರಸ್ತುತ ಅಧ್ಯಯನವನ್ನು ಮುಂದುವರಿಸಲಾಗಿದೆ. ಪ್ರಸ್ತುತ ಅಧ್ಯಯನದಲ್ಲಿ ಮಹಿಳಾ ಕಾವ್ಯದ ಅಧ್ಯಯನಗಳ ಸಮೀಕ್ಷೆಯನ್ನು ಮೂರು ರೀತಿ ಗುರುತಿಸಲು ಪ್ರಯತ್ನಿಸಲಾಗಿದೆ. ಮೊದಲನೆಯದಾಗಿ ಒಟ್ಟಾರೆ ಮಹಿಳಾ ಸಾಹಿತ್ಯವನ್ನು ಕುರಿತಂತೆ ನಡೆದಿರುವ ಅಧ್ಯಯನಗಳು, ಎರಡನೆಯದಾಗಿ ಪುರುಷ ಪ್ರಧಾನ ಮೌಲ್ಯ ವ್ಯವಸ್ಥೆಗೆ ಮಹಿಳಾ ಸಾಹಿತ್ಯ ಮುಖಾಮುಖಿಯಾಗುವುದನ್ನು ಕುರಿತಂತಹ ಅಧ್ಯಯನಗಳು, ಮೂರನೆಯದು ಮಹಿಳಾ ಕಾವ್ಯದ ಅಧ್ಯಯನಗಳು.

ಮಹಿಳಾ ಸಾಹಿತ್ಯದ ಬಗೆಗೆ ಇದುವರೆಗೆ ನಡೆದಿರುವ ಅಧ್ಯಯನಗಳನ್ನು ಗಮನಿಸಿದಾಗ ಆರಂಭದಲ್ಲಿ ಮಹಿಳಾ ಸಾಹಿತ್ಯವನ್ನು ಸಂಗ್ರಹಿಸುವುದು ಮುಖ್ಯ ಸವಾಲಾಗಿತ್ತು. ಆದುದರಿಂದಾಗಿ ೭೦-೮೦ರ ದಶಕದ ಮಹಿಳಾ ಬರವಣಿಗೆ ಮಹಿಳಾ ಸಾಹಿತ್ಯವನ್ನು ಸಂಗ್ರಹಿಸುವ, ದಾಖಲಿಸುವ, ಬರವಣಿಗೆಯಲ್ಲಿ ತೊಡಗಿಕೊಂಡ ಮಹಿಳೆಯರನ್ನು ಗುರುತಿಸುವ ನಿಟ್ಟಿನಲ್ಲಿ ಕಾರ್ಯಗತವಾಗಿದೆ. ಕರ್ನಾಟಕ ಲೇಖಕಿಯರ ಸಂಘ ಈ ನಿಟ್ಟಿನಲ್ಲಿ ಮಹತ್ವದ ಕಾರ್ಯ ನಿರ್ವಹಿಸಿದೆ. ವಿಜಯಾದಬ್ಬೆ, ಬಿ.ಎನ್. ಸುಮಿತ್ರಾಬಾಯಿ, ನೇಮಿಚಂದ್ರ, ಎನ್.ಗಾಯತ್ರಿ, ಮುಂತಾದ ಲೇಖಕಿಯರು ಪರಂಪರೆಯ ಪುಟಗಳಲ್ಲಿ ಮರೆಯಾದ ಲೇಖಕಿಯರನ್ನು ಮುನ್ನಲೆಗೆ ತರುವುದಲ್ಲದೆ ಸಾಹಿತ್ಯ ಕ್ಷೇತ್ರಕ್ಕೆ ಅವರ ಕೊಡುಗೆಯನ್ನು ಪರಿಚಯಿಸಿದ್ದಾರೆ. ಹೆಚ್.ವಿ.ಸಾವಿತ್ರಮ್ಮ, ಕಲ್ಯಾಣಮ್ಮ, ತಿರುಮಲಾಂಬ, ಬೆಳಗೆರೆ ಜಾನಕಮ್ಮ, ಮುಂತಾದವರ ಸಾಹಿತ್ಯ ಈ ಘಟ್ಟದಲ್ಲಿ ಬೆಳಕು ಕಂಡಿತು.

ಸಾಹಿತ್ಯವನ್ನು ಸ್ತ್ರೀವಾದಿ ದೃಷ್ಟಿಕೋನದಿಂದ ಪರಿವೀಕ್ಷಿಸಲು ಆರಂಭಿಸಿದವರು ಶ್ರೀಮತಿ ವಿಜಯಾದಬ್ಬೆಯವರು. ಇದಕ್ಕೂ ಮುಂಚೆ ಇಂಗ್ಲೀಷ್ ಸಾಹಿತ್ಯದಿಂದ ಸ್ತ್ರೀಯರ ವಿಮೋಚನೆ, ಸ್ತ್ರೀಪರವಾದ ಚಿಂತನೆ ಹೆಣ್ಣಿನ ಸಾಮಾಜಿಕ, ಆರ್ಥಿಕ ಮತ್ತು ಧಾರ್ಮಿಕ ಸ್ಥಿತಿಗತಿಗಳನ್ನು ಕುರಿತಂತೆ ಅನುವಾದಿತ ಕೃತಿಗಳು ಪ್ರಕಟವಾದವು. ವೈದೇಹಿಯವರ **ಭಾರತೀಯ ಮಹಿಳೆಯರ ಸ್ವಾತಂತ್ರ್ಯ ಹೋರಾಟ** (ಮೂಲ:ಕಮಲಾದೇವಿ ಚಟ್ಟೋಪಾಧ್ಯಾಯ), **ಬೆಳ್ಳಿಯ ಸಂಕೋಲೆಗಳು** (ಮೂಲ:ಸಿಲ್ವರ್ ಶಕಲ್ಸ್-ಮೈತ್ರೇಯಿ ಮುಖ್ಯೋಪಾದ್ಯಾಯ), ವಿಜಯಾದಬ್ಬೆ ಮತ್ತು ಬಿ.ಎನ್.ಸುಮಿತ್ರಾಬಾಯಿ ಅನುವಾದಿಸಿರುವ **ವಿಮೋಚನೆಯೆಡೆಗೆ** (ಮೈಥಿಲಿ ಶಿವರಾಮನ್) ಬಿ.ಎನ್. ಸುಮಿತ್ರಾಬಾಯಿಯವರ **ಮಾತೃಆರಾಧನೆ** ಮುಂತಾದ ಕೃತಿಗಳು ಮುಂದಿನ ಸ್ತ್ರೀವಾದಿ ಚಿಂತನೆಗೆ ಮುಖ್ಯವೇದಿಕೆಯೊಂದನ್ನು ಸಿದ್ಧಪಡಿಸಿದವು.

೧೯೮೯ ರಲ್ಲಿ ಪ್ರಕಟವಾದ ವಿಜಯಾದಬ್ಬೆಯವರ **ಮಹಿಳೆ ಸಾಹಿತ್ಯ ಮತ್ತು ಸಮಾಜ** ಎನ್ನುವ ಕೃತಿ ಸ್ತ್ರೀವಾದದ ದೃಷ್ಟಿಯಿಂದ ನಿರ್ಣಾಯಕವಾದದ್ದು. ಮಹಿಳಾಸಾಹಿತ್ಯವನ್ನು ಸ್ಥಾಪಿತ ವಿಮರ್ಶಾ ಮಾದರಿಗಳಿಂದ ಬಿಡಿಸಿ ಹೊಸಸ್ತ್ರೀವಾದಿ ಮಾದರಿಯಲ್ಲಿ ಇಟ್ಟು ಚರ್ಚಿಸುವುದರ ಅಗತ್ಯವನ್ನು ಮತ್ತು

ಮಹತ್ವವನ್ನು ಮೊದಲಬಾರಿಗೆ ಮನದಟ್ಟುಮಾಡಿಕೊಟ್ಟ ಇವರು **ನಾರಿ ದಾರಿ ದಿಗಂತ, ಸ್ತ್ರೀವಾದ ಮತ್ತು ಸ್ತ್ರೀವಾದಿ ವಿಮರ್ಶೆ,** ಕೃತಿಗಳ ಮೂಲಕ ಕನ್ನಡಸಾಹಿತ್ಯದಲ್ಲಿ ಸ್ತ್ರೀವಾದಿ ಸಾಹಿತ್ಯವಿಮರ್ಶೆಯ ಅಗತ್ಯತೆಯನ್ನು ತಿಳಿಸುವುದರೊಂದಿಗೆ ಅದನ್ನು ಮುನ್ನೆಲೆಗೆ ತರಲು ಶ್ರಮಿಸಿದ್ದಾರೆ.

ಸ್ತ್ರೀಪರ ಕಾಳಜಿಯುಳ್ಳ ಎನ್.ಗಾಯತ್ರಿಯವರು **ಅಚಲ** ಪತ್ರಿಕೆಯ ಸಂಪಾದಕಿಯಾಗಿ ಸ್ತ್ರೀಪರವಾಗಿ ಸಾಕಷ್ಟು ಕೆಲಸ ಮಾಡಿದ್ದಾರೆ. **ಮಹಿಳೆ ಬಿಡುಗಡೆಯ ಹಾದಿಯಲ್ಲಿ** ಎಂಬ ಕೃತಿಯ ಮೂಲಕ ಪುರಾಣಗಳಲ್ಲಿ ಚಿತ್ರಿಸಲ್ಪಟ್ಟ ಸ್ತ್ರೀಪಾತ್ರಗಳು ಮತ್ತು ಅವುಗಳ ಮೇಲೆ ಧರ್ಮ, ಸಮಾಜ ಹಾಗೂ ಆಂಗರಾಜಕಾರಣದ ಪ್ರಭಾವ, ಪ್ರಸ್ತುತ ಸಮಾಜದಲ್ಲಿ ಹೆಣ್ಣಿನ ಸ್ಥಿತಿಗತಿಗಳನ್ನು ಕುರಿತಂತೆ ವಿಸ್ತ್ರುತವಾಗಿ ಚರ್ಚಿಸಿದ್ದಾರೆ. ಪ್ರಮುಖ ಸ್ತ್ರೀವಾದಿ ಚಿಂತಕಿಯರಲ್ಲಿ ಒಬ್ಬರಾದ ಬಿ.ಎನ್.ಸುಮಿತ್ರಾಬಾಯಿಯವರ **ಸ್ತ್ರೀವಾದ, ಅಯನ, ವಿಜಯ, ಸರಹದ್ದುಗಳ ಆಚೆ ಈಚೆ** ಹಾಗೂ ಇತ್ತೀಚೆಗೆ ಪ್ರಕಟವಾದ **ಸ್ತ್ರೀದರ್ಪಣದಲ್ಲಿ ನಾಟ್ಯಶಾಸ್ತ್ರ** ಕೃತಿಗಳು ಸಾಹಿತ್ಯ ಪರಂಪರೆಯಲ್ಲಿ ಹೆಣ್ಣು ನಿರ್ವಚನಗೊಂಡಿರುವ ವಿಧಾನಗಳನ್ನು ಕುರಿತು ಚಿಂತಿಸುತ್ತವೆ. ಸುಮಿತ್ರಾಬಾಯಿ ಕನ್ನಡ ಸಾಹಿತ್ಯ ಹೆಣ್ಣನ್ನು ನೋಡಿರುವ ಹಾಗೂ ನಿರ್ವಚಿಸಿರುವ ವಿಧಾನಗಳನ್ನು ವಿಮರ್ಶೆಗೆ ಒಳಪಡಿಸಿದ್ದಾರೆ. ಮತ್ತು ಸ್ತ್ರೀಪರ ಎನ್ನಬಹುದಾದ ಚಿಂತಕರ ಬರವಣಿಗೆಯಲ್ಲಿ ಅವ್ಯಕ್ತವಾಗಿ ಅಡಕವಾಗಿರುವ ಪಿತೃಪ್ರಧಾನ ಆಲೋಚನೆಗಳನ್ನು, ಅವುಗಳ ಕಾರ್ಯವಿಧಾನಗಳನ್ನೂ ಕುರಿತು ತಮ್ಮ ಬರವಣಿಗೆಯಲ್ಲಿ ಚರ್ಚಿಸಿದ್ದಾರೆ.

ಸೀಮಂತಿನಿ ನಿರಂಜನ ಮತ್ತು ತೇಜಸ್ವಿನಿ ನಿರಂಜನರವರ **ಸ್ತ್ರೀವಾದಿ ಸಾಹಿತ್ಯ ವಿಮರ್ಶೆ,** ಮನು ಚಕ್ರವರ್ತಿಯವರ **ಭಾರತೀಯ ಸ್ತ್ರೀವಾದ** ಕೃತಿಗಳು ಕನ್ನಡ ಸಾಹಿತ್ಯದಲ್ಲಿ ಸ್ತ್ರೀವಾದಿ ಚಿಂತನೆಗೆ ಮಹತ್ವದ ಕಾಣಿಕೆಯನ್ನು ನೀಡಿವೆ. ಅಲ್ಲದೆ ಇತ್ತೀಚಿನ ದಿನಗಳಲ್ಲಿ ಮಹಿಳೆ, ಮಹಿಳಾಸಾಹಿತ್ಯ, ವಿಮರ್ಶೆಯನ್ನು ಕುರಿತು ಗಂಭೀರವಾಗಿ ಚಿಂತನೆಯನ್ನು ನಡೆಸುತ್ತಿರುವ, ಎಂ.ಎಸ್.ಆಶಾದೇವಿಯವರ **ಸ್ತ್ರೀಮತವನುತ್ತರಿಸಬಾರದೆ ನಡುವೆ ಸುಳಿವ ಆತ್ಮ,** ಎಲ್.ಸಿ.ಸುಮಿತ್ರ ಅವರ **ವಿಭಾವ, ನಿರುಕ್ತ** ಸಬಿತಾ ಬನ್ನಾಡಿಯವರ **ಸಾಹಿತ್ಯ ನಿರೂಪಣೆಗಳು** ಮುಂತಾದ ಬರಹಗಳು ಕನ್ನಡ ಸಾಹಿತ್ಯ ಪರಂಪರೆ ಮಹಿಳೆಯರನ್ನು ಚಿತ್ರಿಸಿರುವ ವಿಧಾನ, ಮಹಿಳಾಸಾಹಿತ್ಯದಲ್ಲಿ ವ್ಯಕ್ತವಾಗಿರುವ ಸ್ತ್ರೀ ಸಂವೇದನೆಯ ಅಂಶ ಹಾಗೂ ಹೆಣ್ಣಿನ ಅಸ್ಮಿತೆಯ ವಿಭಿನ್ನ ಮಾದರಿಗಳನ್ನು ಕುರಿತು ಮಹತ್ವದ ಮಾಹಿತಿಗಳನ್ನೊದಗಿಸುತ್ತವೆ.

ಕನ್ನಡದ ಮತ್ತೊರ್ವ ಮಹತ್ವದ ಸ್ತ್ರೀವಾದಿ ಚಿಂತಕಿ ಹೆಚ್.ಎಸ್.ಶ್ರೀಮತಿಯವರ ಬರವಣಿಗೆಗಳು ಆಧುನಿಕ ಸಂದರ್ಭದಲ್ಲಿ ಪುರುಷಪ್ರಧಾನ ವ್ಯವಸ್ಥೆ ಹೆಣ್ಣನ್ನು ಅಧೀನವಾಗಿಸಿಕೊಳ್ಳುವಲ್ಲಿ ಹೇಗೆ ಕಾರ್ಯ ನಿರ್ವಹಿಸುತ್ತಿದೆ ಎಂಬುದನ್ನು ಕುರಿತು ಚರ್ಚಿಸುತ್ತವೆ. ಇವರ ಸಿಮೋನ್ ದಿ ಬೂವಳ **ದ ಸೆಕೆಂಡ್ ಸೆಕ್ಸ್,** ಮತ್ತು ಬೆಟ್ಟಿ ಫ್ರೀಡನ್ **ಫೆಮಿನೈನ್ ಮಿಸ್ಟೆಕ್** ಕೃತಿಗಳ ಅನುವಾದ ಪಾಶ್ಚಾತ್ಯ ಸ್ತ್ರೀವಾದಿ ಚಿಂತನೆಯನ್ನು ಕನ್ನಡಿಗರಿಗೆ ಪರಿಚಯಿಸುವುದ ಮಾತ್ರವಲ್ಲದೆ, ಸನ್ನಿವೇಶ ಪ್ರದೇಶ ಭಿನ್ನವಾದರೂ ಪ್ರಪಂಚದೆಲ್ಲೆಡೆ ಹೆಣ್ಣು

ಶೋಷಣೆಯ ವಸ್ತುವಾಗಿರುವುದನ್ನು, ಅದು ದೇಶ ಕಾಲಾತೀತವಾಗಿ ಮುಂದುವರಿಯುತ್ತಿರುವುದನ್ನು ಬಯಲಿಗೆಳೆಯುತ್ತವೆ. **ಸ್ತ್ರೀವಾದ, ಚಹರೆ, ಹೆಣ್ಣು ಹೆಂಗಸು, ಹೆಣ್ಣು ಬರಹದ ಒಳಬಂಡಾಯ, ಸ್ತ್ರೀವಾದಿ ಭಾಷಾಶಾಸ್ತ್ರ ಪ್ರವೇಶಿಕೆ, ಸ್ತ್ರೀವಾದಿ ಅನ್ವಯಿಕತೆ, ಸ್ತ್ರೀವಾದಿ ತಾತ್ವಿಕತೆ, ಸ್ತ್ರೀವಾದಿ ಸಂಶೋಧನೆ ವಿಧಿ ವಿಧಾನಗಳು** ಮುಂತಾದ ಕೃತಿಗಳು ಕನ್ನಡದಲ್ಲಿ ಸ್ತ್ರೀವಾದಿ ಚಿಂತನೆಯನ್ನು ಕಟ್ಟಿಕೊಡುವಲ್ಲಿ ಮುಖ್ಯ ಪಾತ್ರವಹಿಸುತ್ತವೆ. ಮತ್ತು ಸ್ತ್ರೀವಾದಿ ಆಲೋಚನೆಗೆ ತಾತ್ವಿಕ ತಳಹದಿಯನ್ನು ಹಾಕಿಕೊಡುತ್ತವೆ.

ಇತ್ತೀಚಿನ ದಿನಗಳಲ್ಲಿ ಮಹಿಳಾ ಸಾಹಿತ್ಯವನ್ನು ಕುರಿತಂತೆ ಮಹತ್ವದ ಅಧ್ಯಯನಗಳು ನಡೆದಿವೆ. ಹೆಣ್ಣಿನ ಅಭಿವ್ಯಕ್ತಿಯ ಹಿಂದಿನ ತುಡಿತ, ತಲ್ಲಣಗಳನ್ನು ಹಿಡಿದಿಡುವಲ್ಲಿ ಇವು ಯಶಸ್ವಿಯಾಗಿವೆ. ಪುರುಷ ಪ್ರಧಾನ ಮೌಲ್ಯವ್ಯವಸ್ಥೆ ಹೆಣ್ಣನ್ನು ನಿಯಂತ್ರಿಸುತ್ತಿರುವ ವಿಧಾನಗಳನ್ನು ಕುರಿತು ಈ ಅಧ್ಯಯನಗಳು ಮಹತ್ವದ ದಾಖಲೆಗಳನ್ನೊದಗಿಸುತ್ತವೆ. ಕವಿತಾ ರೈ, ಗೀತಾಪ್ರಸಾದ್, ಲತಾ ಅಭಯ್, ಸಬಿತಾ ಬನ್ನಾಡಿ, ಕೆ. ಷರೀಫಾ ಮುಂತಾದವರ ಪಿಎಚ್.ಡಿ ಅಧ್ಯಯನಗಳು ಪ್ರಸ್ತುತ ಅಧ್ಯಯನಕ್ಕೆ ಸಹಾಯಕ ಮಾಹಿತಿಗಳನ್ನು ಒದಗಿಸಿವೆ.

ಕವಿತಾ ರೈ **ಕನ್ನಡ ಮಹಿಳಾ ಕಾದಂಬರಿಗಳಲ್ಲಿ ವಿವಾಹ ಮತ್ತು ಕುಟುಂಬದ ಪರಿಕಲ್ಪನೆ** ಎನ್ನುವ ಪಿಎಚ್.ಡಿ ಅಧ್ಯಯನದಲ್ಲಿ ಲೇಖಕಿಯರ ಕಾದಂಬರಿ ಸಾಹಿತ್ಯದಲ್ಲಿ ವಿವಾಹ ಮತ್ತು ಕುಟುಂಬದ ಪರಿಕಲ್ಪನೆಗಳು ಚರ್ಚೆಗೊಂಡಿರುವ ವಿಧಾನಗಳನ್ನು ಸಾಮಾಜಿಕ ಪಲ್ಲಟಗಳ ಮೂಲಕ ಗುರುತಿಸುತ್ತಾರೆ. ಸ್ವಾತಂತ್ರ್ಯ ಪೂರ್ವದ ಸುಧಾರಣಾವಾದ, ಅನಂತರದ ಸಾಂಸ್ಕೃತಿಕ ಬದಲಾವಣೆಗಳು ಹಾಗೂ ಹೆಣ್ಣಿನ ಅನನ್ಯತೆಯ ದಾಖಲೆಗಳು ಮಹಿಳಾ ಕಾದಂಬರಿಗಳಲ್ಲಿ ವ್ಯಕ್ತಗೊಂಡಿರುವ ವಿಧಾನಗಳನ್ನೂ, ವಿವಾಹ ಮತ್ತು ಕುಟುಂಬದ ಸ್ಥಿತ್ಯಂತರಗಳನ್ನು ಮಹಿಳಾ ಸಾಹಿತ್ಯ ನಿರ್ವಹಿಸಿರುವ ವಿಧಾನಗಳನ್ನು ಸಮರ್ಪಕವಾಗಿ ಕಟ್ಟಿಕೊಡುತ್ತಾರೆ. ಗೀತಾ ಪ್ರಸಾದ್ **ಆಧುನಿಕ ಮಹಿಳಾ ಸಾಹಿತ್ಯ : ಸ್ವರೂಪ ಮತ್ತು ತಾತ್ವಿಕತೆ** ಎಂಬ ಅಧ್ಯಯನದಲ್ಲಿ ಸ್ವಾತಂತ್ರ್ಯ ಪೂರ್ವದ ಲೇಖಕಿಯರ ಸಾಹಿತ್ಯ ಮತ್ತು ಸಾಹಿತ್ಯೇತರ ಚಟುವಟಿಕೆಗಳನ್ನು ಕುರಿತು ಚರ್ಚಿಸಿದ್ದಾರೆ. ತಿರುಮಲಾಂಬ, ಕಲ್ಯಾಣಮ್ಮ, ರಾಜವಾಡೆ, ಜಾನಕಮ್ಮ, ಕೊಡಗಿನ ಗೌರಮ್ಮ. ಮುಂತಾದವರ ಸೃಜನಶೀಲ ಚಟುವಟಿಕೆಗಳ ಹಿಂದಿನ ಸ್ತ್ರೀಪರ ಕಾಳಜಿಗಳನ್ನು ಗುರುತಿಸಿದ್ದಾರೆ.

**ಹೊಸಗನ್ನಡ ಮಹಿಳಾ ಕಥನ ಸಾಹಿತ್ಯದಲ್ಲಿ ಪೌರಾಣಿಕ ಸ್ತ್ರೀ ಪಾತ್ರಗಳು** ಎನ್ನುವ ವಿಷಯವನ್ನು ಕುರಿತಂತೆ ಅಧ್ಯಯನ ನಡೆಸಿರುವ ಲತಾ ಅಭಯ್ ಪುರಾಣದ ಸ್ತ್ರೀಪಾತ್ರಗಳನ್ನು ಸ್ತ್ರೀವಾದಿ ಅಧ್ಯಯನಕ್ಕೆ ಒಳಪಡಿಸಿದ್ದಾರೆ. ಪುರಾಣದ ಸ್ತ್ರೀಪಾತ್ರಗಳನ್ನು ಲೇಖಕರಿಗಿಂತ ಲೇಖಕಿಯರು ಹೇಗೆ ಭಿನ್ನವಾಗಿ ಅಭಿವ್ಯಕ್ತಿಸುತ್ತಾರೆ ಎಂಬುದನ್ನು ಚರ್ಚಿಸಲಾಗಿದೆ. ಈ ಸ್ತ್ರೀ ಪಾತ್ರಗಳ ಮೂಲಕ ಲೇಖಕಿಯರು ತಮ್ಮ ಅಸ್ಮಿತೆಯನ್ನು ಗುರುತಿಸಿಕೊಳ್ಳುವ ಹಾಗೂ ಪುರುಷ ಪ್ರಧಾನ ವ್ಯವಸ್ಥೆಗೆ ಮುಖಾಮುಖಿಯಾಗುವ ವಿಧಾನಗಳನ್ನು ಅಂಚಿಗೆ ಸರಿಸಲ್ಪಟ್ಟ ಸ್ತ್ರೀ ಪಾತ್ರಗಳ ಹಿನ್ನೆಲೆಯಲ್ಲಿ ಚರ್ಚಿಸಿದ್ದಾರೆ. ಇನ್ನುಳಿದಂತೆ ಇತರೆ

ಪಿಎಚ್.ಡಿ ಅಧ್ಯಯನಗಳು ಹಾಗೂ ಪ್ರೋಜೆಕ್ಟ್ ಅಧ್ಯಯನಗಳು ಮಹಿಳಾ ಸಾಹಿತ್ಯವನ್ನು ಭಿನ್ನ ಮಾದರಿಗಳಲ್ಲಿ ಹಿಡಿದಿಡಲು ಪ್ರಯತ್ನಿಸುತ್ತವೆ ಸಬಿತಾ ಬನ್ನಾಡಿಯವರ ವಚನ ಸಾಹಿತ್ಯವನ್ನು ಕುರಿತ ಅಧ್ಯಯನ, ಉಷಾ ಎಂ.ರವರ ಆಧುನಿಕ ಮಹಿಳಾ ಸಾಹಿತ್ಯವನ್ನು ಕುರಿತ ಅಧ್ಯಯನಗಳು ಮಹಿಳಾ ಸಾಹಿತ್ಯವನ್ನು ಕುರಿತಾದ ಹಲವು ಒಳನೋಟಗಳನ್ನು ನೀಡುತ್ತವೆ.

ಈ ಅಧ್ಯಯನಗಳನ್ನು ಗಮನಿಸಿದಾಗ ಕಥನ ಪ್ರಕಾರಕ್ಕೆ ಹೋಲಿಸಿದರೆ ಕಾವ್ಯದ ಬಗೆಗೆ ಪ್ರತ್ಯೇಕವಾಗಿ ನಡೆದಿರುವ ಅಧ್ಯಯನಗಳ ಸಂಖ್ಯೆ ತೀರಾವಿರಳ. ಇನ್ನು ಸಂಶೋಧನೆಗೆ ಸಂಬಂಧಿಸಿದಂತೆ ಮಹಿಳಾ ಕಾವ್ಯವನ್ನು ಒಂದೆಡೆ ಸಂಗ್ರಹಿಸುವುದೇ ದೊಡ್ಡ ಸಮಸ್ಯೆಯಾಗಿತ್ತು. ಈ ನಿಟ್ಟಿನಲ್ಲಿ ಕಾರ್ಯ ನಿರ್ವಹಿಸಿದ ಕುಲಶೇಖರಿಯವರು “ನಾಡಿನ ನಾನಾ ಮೂಲೆಗಳಲ್ಲಿ ಚದುರಿಹೋದ, ಕಾಲದಾಳದಲ್ಲಿ ಕಳೆದುಹೋದ, ಹಲವಾರು ವರ್ಷಗಳಿಂದ ಮೂಲೆಗುಂಪಾಗಿ ಮರೆಯಾದ, ಎಲೆಮರೆಯ ಕಾಯಾಗಿ ಕಾಣದೆ ಇರುವ ಒಬ್ಬೊಬ್ಬರನ್ನೂ ಹುಡುಕಿ ತೆಗೆದೆ” ಎನ್ನುತ್ತಾರೆ. ಇಲ್ಲಿ ಮಹಿಳಾ ಕಾವ್ಯ ನಿರ್ಲಕ್ಷ್ಯಕ್ಕೆ ಒಳಗಾಗಿರುವುದನ್ನೂ, ಅದನ್ನು ಅಧ್ಯಯನ ಮಾಡಬೇಕಾದ ಅನಿವಾರ್ಯತೆಯನ್ನು ಗುರುತಿಸಬಹುದು. ಕುಲಶೇಖರಿಯವರ **ಈ ಶತಮಾನದ ಕನ್ನಡ ಕವಯತ್ರಿಯರು** ಎಂಬ ಅಧ್ಯಯನ ಕೃತಿಯಲ್ಲಿ ಆಧುನಿಕ ಕವಯತ್ರಿಯರ ಪರಿಚಯದೊಂದಿಗೆ ಅವರ ಪ್ರಾತಿನಿಧಿಕ ಕವಿತೆಗಳ ಭಾಗಗಳನ್ನು ಆರಿಸಿ ಕೊಟ್ಟಿದ್ದಾರೆ. ಇದು ಲೇಖಕಿಯರ ಮತ್ತು ಅವರ ಕೃತಿಗಳ ಪರಿಚಯವನ್ನಷ್ಟೇ ನೀಡುತ್ತದೆ. ಇಲ್ಲಿ ಕಾವ್ಯವನ್ನು ಕುರಿತಾದ ಮಹತ್ವದ ಒಳನೋಟಗಳಾಗಲೀ, ಚರ್ಚೆ, ವಿಮರ್ಶೆಗಳಾಗಲಿ ಇಲ್ಲ. ಆದರೆ ಆರಂಭದ ಹಂತದಲ್ಲಿ ಕವಯಿತ್ರಿಯರನ್ನು ಗುರುತಿಸಿ, ಅವರ ಮತ್ತು ಅವರ ಕೃತಿಗಳನ್ನು ಸಂಗ್ರಹಿಸಿ ಅದರ ಬಗೆಗೆ ಸಮಗ್ರ ಮಾಹಿತಿಯನ್ನೊದಗಿಸುವ ಇವರ ಕಾರ್ಯ ಮೆಚ್ಚುವಂತದ್ದು.

ಕರ್ನಾಟಕ ಲೇಖಕಿಯರ ಸಂಘ **ಅಜ್ಞಾತ ಕವಯಿತ್ರಿಯರು** ಎಂಬ ಕಿರುಹೊತ್ತಿಗೆಯನ್ನು ಪ್ರಕಟಿಸಿದೆಯಾದರೂ ಇಲ್ಲಿ ಆಧುನಿಕ ಕವಯಿತ್ರಿಯರನ್ನು ಕುರಿತ ಯಾವುದೇ ಚರ್ಚೆಗಳು ನಡೆದಿಲ್ಲ. ನಾಗಲಕ್ಷ್ಮಿ ವೀರೇಶ್ ಅವರ **ಎರಡು ದಶಕಗಳ ಮಹಿಳಾ ಕಾವ್ಯದ ಪರಿವರ್ತನೆಗಳು** ಎಂಬ ಪಿಎಚ್.ಡಿ ಅಧ್ಯಯನ ಮಾಹಿತಿ ಕೋಶದಂತಿದೆ. ಇಲ್ಲಿಯೂ ಕೂಡ ಮಹಿಳಾ ಕಾವ್ಯವನ್ನು ಕುರಿತಾದ ಮಹತ್ವದ ಚರ್ಚೆಗಳಾಗಲೀ, ಒಳನೋಟಗಳಾಗಲೀ ಕಂಡುಬರುವುದಿಲ್ಲ. ಆದುದರಿಂದಾಗಿ ಮಹಿಳಾ ಕಾವ್ಯಕ್ಕೆ ಬಂದಿರುವ ವಿಮರ್ಶೆ ಹಾಗೂ ಅಭಿನಂದನಾ ಗ್ರಂಥಗಳನ್ನು ಕಾವ್ಯದ ಅಧ್ಯಯನಕ್ಕೆ ಪೂರಕ ಸಾಮಗ್ರಿಗಳನ್ನಾಗಿ ಬಳಸಿಕೊಳ್ಳಲಾಗಿದೆ.

ಆಧುನಿಕ ಮಹಿಳಾಕಾವ್ಯದ ವಿಮರ್ಶೆಗೆ ಸಂಬಂಧಿಸಿದಂತೆ ಸಿಗುವ ಆಕರಗಳೆಂದರೆ ಕವನಸಂಕಲನಕ್ಕೆ ಬರೆದಿರುವ ಮುನ್ನುಡಿ, ಮಾರ್ನುಡಿಗಳು. ಆದರೆ ಇವರ ಬರವಣಿಗೆ ಪ್ರಜ್ಞಾಪೂರ್ವಕವಾಗಿಯೋ, ಅಪ್ರಜ್ಞಾಪೂರ್ವಕವಾಗಿಯೋ ಸ್ತ್ರೀತ್ವದ ನೆಲೆಗಳನ್ನು ಉತ್ತೇಜಿಸುವ ಅವನ್ನು

ಮತ್ತಷ್ಟು ಪುಷ್ಟೀಕರಿಸಲು, ಪುನರ್ ಸ್ಥಾಪಿಸಲು ಪ್ರಯತ್ನಿಸುವ ರೀತಿಯವೇ ಆಗಿವೆ. ಅಧ್ಯಯನಕ್ಕೆ ತೊಡಗಿದಾಗ ಈ ಅಂಶಗಳನ್ನು ಸೂಕ್ಷ್ಮವಾಗಿ ಗಮನಿಸಿ ಅದರಿಂದ ಬಿಡಿಸಿಕೊಳ್ಳುವ ಜವಾಬ್ದಾರಿ ಅನಿವಾರ್ಯ ಹಾಗು ಆರೋಗ್ಯಕರವಾದುದಾಗಿದೆ. ಈ ಹಿನ್ನೆಲೆಯಲ್ಲಿ ಬಿ.ಎನ್.ಸುಮಿತ್ರಾಬಾಯಿಯವರ **ಸಾರ್ವತ್ರಿಕದೆಡೆಗೆ** ೮೦ರ ದಶಕದ ಮಹಿಳಾ ಕಾವ್ಯವನ್ನು ಕುರಿತಂತೆ, ಮಹಿಳಾ ಅಭಿವ್ಯಕ್ತಿಯ ಹಿಂದಿನ ಪ್ರೇರಣೆ ಹಾಗೂ ಸವಾಲುಗಳನ್ನು ಕುರಿತಂತೆ ಮಾಹಿತಿಯನ್ನು ಒದಗಿಸುತ್ತದೆ. ಆ ಕಾಲಘಟ್ಟದ ಲೇಖಕಿಯರ ಕಾವ್ಯವನ್ನು ಪ್ರಾತಿನಿಧಿಕವಾಗಿ ಚರ್ಚೆಗೆ ಒಳಪಡಿಸಿದ್ದಾರೆ. ಇವರ ಮತ್ತೊಂದು ಮಹತ್ವದ **ಕೃತಿ ಬೊಗಸೆಯಲ್ಲಿ ಹೊಳೆನೀರು** ಇತ್ತೀಚಿನ ಮಹಿಳಾ ಕಾವ್ಯದ ಭಾಷೆ, ತಂತ್ರಗಾರಿಕೆ, ಅಭಿವ್ಯಕ್ತಿಕ್ರಮಗಳನ್ನು ಕುರಿತಂತೆ ಮಹತ್ವದ ಮಾಹಿತಿಯನ್ನು ನೀಡುತ್ತದೆ. ಎಚ್.ಎಸ್.ರಾಘವೇಂದ್ರರಾವ್ ಅವರ **ಕಣ್ಣ ಹನಿಗಳೇ ಕಾಣಿಕೆ**, ರಾಮಲಿಂಗಪ್ಪ ಟಿ.ಬೇಗೂರು ಅವರ **ಮಹಿಳೆ ಚರಿತ್ರೆ-ಪುರಾಣ** ಎನ್ನುವ ಕೃತಿಗಳು ಮಹಿಳಾ ಕಾವ್ಯವನ್ನು ನಿರ್ದಿಷ್ಟ ದೃಷ್ಟಿಕೋನದಲ್ಲಿ ನೋಡುತ್ತವೆ. ಹೀಗಾಗಿ ಕಾವ್ಯದ ಸಮರ್ಪಕವಾದ ಸ್ಥಾನನಿರ್ದೇಶನಗಳಾಗಿಲ್ಲ. ಆದುದರಿಂದ ಮಹಿಳಾ ಕಾವ್ಯದಲ್ಲಿ ಅಡಕವಾಗಿರುವ ಆಂತರಂಗಿಕ ಅಭಿವ್ಯಕ್ತಿ ಕ್ರಮ, ಮಾನಸಿಕ ಸಂದಿಗ್ಧತೆಗಳು, ಪ್ರತಿರೋಧದ ಪ್ರಯತ್ನಗಳು, ಸಮಾಜದ ವ್ಯವಸ್ಥೆಯ ಬಗೆಗೆ ವ್ಯಕ್ತವಾಗಿರುವ ದ್ವಂದ್ವ ಚಿಂತನೆಗಳು, ಬಿಡುಗಡೆಯ ತವಕ, ಗಂಭೀರವಾದ ಪ್ರತಿರೋಧ, ಪುರುಷಪ್ರಧಾನ ವ್ಯವಸ್ಥೆಗೆ ತೋರಿದ ತೀಕ್ಷ್ಣಪ್ರತಿಕ್ರಿಯೆಗಳು ಸ್ತ್ರೀವಾದಿ ಅಧ್ಯಯನದ ದೃಷ್ಟಿಯಿಂದ ಪ್ರಮುಖವಾದವಾಗಿವೆ. ಇದುವರೆಗೆ ಮಹಿಳಾ ಸಾಹಿತ್ಯಕ್ಕೆ ಸಂಬಂಧಿಸಿದಂತೆ ಸಾಕಷ್ಟು ಅಧ್ಯಯನಗಳು ನಡೆದಿವೆ, ನಡೆಯುತ್ತಿವೆಯಾದರೂ ಮಹಿಳಾ ಕಾವ್ಯದ ಅನನ್ಯತೆಯ ಶೋಧದ ಮುಂದುವರಿಕೆಯಾಗಿ **ಮಹಿಳಾ ಕಾವ್ಯ : ಸ್ಥಾಪಿತ ಮೌಲ್ಯಗಳ ಅನುಸಂಧಾನ ಮತ್ತು ಪುನರ್ರಚನೆಯ ಪ್ರಕ್ರಿಯೆ** ಎಂಬ ವಿಷಯವನ್ನು ಅಧ್ಯಯನಕ್ಕೆ ಆಯ್ಕೆ ಮಾಡಿಕೊಳ್ಳಲಾಗಿದೆ.

## ಅಧ್ಯಾಯ ೩ :

## ಸಮುದಾಯ ಹಾಗೂ ಮೌಲ್ಯ ಸಂರಚನೆ

೩.೧ ಜೈವಿಕ ನೆಲೆಯ ಮೌಲ್ಯ ವ್ಯವಸ್ಥೆ

೩.೨ ಸಾಮಾಜಿಕ ಮೌಲ್ಯಗಳು

೩.೩ ಸ್ಥಿರಮಾದರಿ ಪಾತ್ರ ವಿನ್ಯಾಸ

೩.೪ ಅಧೀನ ವ್ಯಕ್ತಿತ್ವದ ನೆಲೆಗಳು

# ಅಧ್ಯಾಯ ೩

## ಸಮುದಾಯ ಹಾಗೂ ಮೌಲ್ಯ ಸಂರಚನೆ

ಮಾನವ ಸಂಬಂಧಗಳ ಸ್ವರೂಪ ಹಾಗೂ ವಿಧಾನದ ಆಧಾರದ ಮೇಲೆಯೇ ಸಮಾಜ, ಸಮುದಾಯಗಳ ರಚನೆಯ ಸ್ವರೂಪ, ಅದರ ಕಾರ್ಯವಿಧಾನಗಳು ರೂಪಿತವಾಗುತ್ತವೆ. ಮಾನವ ಸಂಬಂಧಗಳು ಲಿಂಗವ್ಯವಸ್ಥೆಯಾಗಿ ರೂಪುಗೊಂಡಿದ್ದು, ಈ ಲಿಂಗವ್ಯವಸ್ಥೆ ಶ್ರೇಣೀಕರಣದಿಂದ ಕೂಡಿದೆ. ಸಾಮಾಜಿಕ ಸಂದರ್ಭ, ಭೌಗೋಳಿಕ ಪರಿಸರ, ಜನರ ರೂಢಿಗತ ಆಚರಣೆ, ಸಂಪ್ರದಾಯಗಳು ಸಮುದಾಯದ ಸ್ವರೂಪವನ್ನು ನಿರ್ವಚಿಸುತ್ತವೆಯಾದರೂ ಸಮುದಾಯದ ಸಂರಚನೆ ಪ್ರಧಾನವಾಗಿ ಆರ್ಥಿಕತೆ, ಜಾತಿವ್ಯವಸ್ಥೆ, ಲಿಂಗವ್ಯವಸ್ಥೆಯ ಹಿನ್ನೆಲೆಯಲ್ಲಿ ರೂಪುಗೊಂಡಿವೆ. ಲಿಂಗವ್ಯವಸ್ಥೆಯ ಶ್ರೇಣೀಕರಣವೇ ಸಮುದಾಯ ಸಂರಚನೆಯಲ್ಲಿ ಮುಖ್ಯಪಾತ್ರವಹಿಸಿ, ಗಂಡು ಹೆಣ್ಣಿನ ಸ್ಥಾನ ನಿಗಧೀಕರಣ ಮತ್ತು ಕಾರ್ಯ ಹಂಚಿಕೆಯಲ್ಲಿ ತೊಡಗಿರುವುದು ಸ್ತ್ರೀವಾದಿ ಅಧ್ಯಯನದ ಮುಖ್ಯ ಶೋಧನೆ. ಪ್ರಸ್ತುತ ಅಧ್ಯಯನವು ಮುಂದುವರಿಯಲು ಸಮುದಾಯದ ಸಂದರ್ಭದಲ್ಲಿ ಮೌಲ್ಯವ್ಯವಸ್ಥೆ ರೂಪುಗೊಂಡ ಬಗೆ ಹಾಗೂ ಅವು ಹೆಣ್ಣಿನ ಅಧೀನತೆಯನ್ನು ಅಧಿಕೃತಗೊಳಿಸುವಲ್ಲಿ ನಿರತವಾಗಿರುವ ವಿಧಾನವನ್ನು ತಿಳಿಯುವುದು ಮುಖ್ಯವಾಗಿದೆ. ಆದುದರಿಂದಾಗಿ **ಸಮುದಾಯ ಹಾಗೂ ಮೌಲ್ಯ ಸಂರಚನೆ** ಎಂಬ ಅಧ್ಯಾಯದಲ್ಲಿ ಸಮುದಾಯದ ಸಂದರ್ಭದಲ್ಲಿ ಹೆಣ್ಣು ಮತ್ತು ಗಂಡಿಗೆ ಸಂಬಂಧಿಸಿದ ಮೌಲ್ಯಗಳು ಸಂರಚನೆಗೊಂಡಿರುವ, ಆಧುನಿಕ ಸಂದರ್ಭದಲ್ಲಿ ಈ ಮೌಲ್ಯಗಳು ಮರುನಿರೂಪಣೆ ಗೊಳ್ಳುತ್ತಿರುವ ಬಗೆಗಳನ್ನೂ, ಅವು ಕಾಲ, ದೇಶ, ಸಮುದಾಯದ ಎಲ್ಲೆಗಳನ್ನು ಮೀರಿ ಹೆಣ್ಣಿನ ಅಧೀನತೆಯನ್ನು ಅಧಿಕೃತಗೊಳಿಸುವ ನಿಟ್ಟಿನಲ್ಲಿ ಕಾರ್ಯ ಪ್ರವೃತ್ತವಾಗಿರುವ ವಿಧಾನವನ್ನೂ ಸೈದ್ಧಾಂತಿಕ ವಿವರಗಳ ಮೂಲಕ ಕಟ್ಟಲು ಪ್ರಯತ್ನಿಸಲಾಗಿದೆ.

ಮಾನವ ಸಮುದಾಯ ವರ್ಗವ್ಯವಸ್ಥೆಯಿಂದ ಕೂಡಿದ್ದು, ಈ ವರ್ಗವ್ಯವಸ್ಥೆ ಸಮಾನತೆಗೆ ಬದಲಾಗಿ ಶ್ರೇಣೀಕರಣವನ್ನು ಅಧಿಕೃತಗೊಳಿಸಿದೆ. ಅದೇ ರೀತಿ ಲಿಂಗಾಧಾರಿತ ವರ್ಗೀಕರಣ ಕೂಡ ಪ್ರಪಂಚದಾದ್ಯಂತ ಪ್ರಧಾನ, ಅಧೀನ ನೆಲೆಯ ತಾರತಮ್ಯ ಧೋರಣೆಯಿಂದ ರೂಪುಗೊಂಡಿದೆ. ಸಮಾಜದ ಸಂರಚನೆಯ ವಿನ್ಯಾಸಗಳು ಕಾಲ ಕಾಲಕ್ಕೆ ಬದಲಾದಂತೆ, ಬದಲಾಗುತ್ತಿರುವಂತೆ ಕಂಡು ಬಂದರೂ ಹೆಣ್ಣಿಗೆ ಸಂಬಂಧಿಸಿದ ಮಹತ್ವದ ಅಂಶಗಳಲ್ಲಾದ ಪಲ್ಲಟಗಳು ಎಷ್ಟರ ಮಟ್ಟಿಗೆ ಹೆಣ್ಣಿಗೆ ಅನುಕೂಲಕರವಾಗಿವೆ, ಬದಲಾವಣೆಗಳನ್ನು ತಂದಿವೆ ಎಂಬುದು ಪ್ರಸ್ತುತ ಅಧ್ಯಯನದ ಮುಖ್ಯ ಕಾಳಜಿಯಾಗಿದೆ.

ಮಾನವಶಾಸ್ತ್ರ ಮತ್ತು ಜೀವಶಾಸ್ತ್ರೀಯ ಅಂಶಗಳ ಆಧಾರದಿಂದ ಮಾನವ ಸಮುದಾಯವನ್ನು ಪ್ರಧಾನವಾಗಿ ಗಂಡು, ಹೆಣ್ಣು ಎಂಬ ಎರಡು ಲಿಂಗಗಳ ಹಿನ್ನೆಲೆಯಲ್ಲಿ ಗುರುತಿಸುವ ಕ್ರಮ ಜಾರಿಯಲ್ಲಿದೆ. ಈ ವಿಭಾಗ ಗಂಡು ಹೆಣ್ಣಿನ ದೈಹಿಕ ರಚನೆಯ ಹಿನ್ನೆಲೆಯಲ್ಲಿ ರೂಪುಗೊಂಡಿರುವಂತೆ ಮೇಲ್ನೋಟಕ್ಕೆ ಕಂಡುಬಂದರೂ ಇದು ಕೇವಲ ದೇಹ ಪ್ರಧಾನ ವೈಪರೀತ್ಯಗಳನ್ನು ಮಾತ್ರ ಒಳಗೊಳ್ಳದೆ ಮಾನವ ಅಲೆಮಾರಿ ಜೀವನದಿಂದ ನಾಗರೀಕನಾಗುವ ಪ್ರಕ್ರಿಯೆಯಲ್ಲಿ ನಡೆದ 'ಸಂಸ್ಕೃತೀಕರಣ'ದ ಹಿಂದಿನ ಲಿಂಗರಾಜಕಾರಣದ ಹುನ್ನಾರವೇ ಆಗಿದೆ ಎಂಬುದು ಸ್ತ್ರೀವಾದಿ ಅಧ್ಯಯನದಿಂದ ಸ್ಪಷ್ಟವಾಗುತ್ತದೆ. ಹಾಗಾದರೆ ಈ ಬಗೆಯ ಶ್ರೇಣೀಕರಣ ವ್ಯವಸ್ಥೆ ರೂಪುಗೊಳ್ಳುವಲ್ಲಿ ಗಂಡು ಹೆಣ್ಣಿಗೆ ಸಂಬಂಧಿಸಿದ ಯಾವ ಬಗೆಯ ಆಲೋಚನಾ ಕ್ರಮಗಳು ಕೆಲಸ ಮಾಡಿವೆ ಎಂಬುದನ್ನು ಪರಿಶೀಲಿಸುವುದು ಮಹಿಳಾ ಅಧ್ಯಯನದ ದೃಷ್ಟಿಯಿಂದ ಪ್ರಮುಖವಾದದ್ದು.

### ಮೌಲ್ಯ ವ್ಯವಸ್ಥೆ ರೂಪುಗೊಳ್ಳುವಲ್ಲಿ ಕಾರಣವಾದ ಅಂಶಗಳು

ಸಾಮಾಜಿಕ ಜೀವನದಲ್ಲಿ ಗಂಡು ಹೆಣ್ಣಿನ ಶ್ರೇಣೀಕರಣ ವ್ಯವಸ್ಥೆಗೆ ಕಾರಣವಾದ ಅಂಶಗಳನ್ನು ಇದುವರೆಗೂ ನಡೆದಿರುವ ಅಧ್ಯಯನಗಳು ಗಂಡು ಹೆಣ್ಣಿನ ಸಾಮಾಜಿಕ, ಆರ್ಥಿಕ, ಜೈವಿಕ, ಮನೋವೈಜ್ಞಾನಿಕ ಅಂಶಗಳ ಹಿನ್ನೆಲೆಯಲ್ಲಿ ಗುರುತಿಸಲು ಪ್ರಯತ್ನಿಸುತ್ತವೆ. ಇದಕ್ಕೆ ಜೀವ ವಿಜ್ಞಾನ, ಮನೋವಿಜ್ಞಾನ, ಸಮಾಜಶಾಸ್ತ್ರಗಳೂ ಕೂಡ ಸೂಕ್ತ ಸಲಹೆ ಸಮರ್ಥನೆಗಳನ್ನು ಕೊಡುತ್ತಾ ಬಂದಿವೆ. ಈ ಚರ್ಚೆಗಳ ವಿಧಾನ ಸಮರ್ಥನೀಯವೇ ಎಂಬ ಅಂಶವನ್ನು ಸ್ತ್ರೀವಾದಿ ಅಧ್ಯಯನಗಳು ನಿಕಷಕ್ಕೆ ಒಡ್ಡುತ್ತವೆ.

ಮೊದಲನೆಯದಾಗಿ ಗಂಡು ಹೆಣ್ಣಿನ ದೇಹರಚನೆಗೆ ಕಾರಣವಾದ ಜೈವಿಕ ಅಂಶಗಳನ್ನು ಕುರಿತಾದ ನಂಬಿಕೆಗಳನ್ನು ಆಧಾರವಾಗಿಟ್ಟುಕೊಂಡು ಗಂಡು ಹೆಣ್ಣಿನ ನಡುವಿನ ಸಾಮಾಜಿಕ ಶ್ರೇಣೀಕರಣ ವ್ಯವಸ್ಥೆಗೆ ಸಮರ್ಥನೆಗಳನ್ನು ಕಂಡು ಕೊಳ್ಳಲಾಗಿದೆ. ಬಾಲ್ಯ, ಯೌವ್ವನ, ಪ್ರೌಢಾವಸ್ಥೆಯಲ್ಲಿ ಉಂಟಾಗುವ ದೈಹಿಕ ಬದಲಾವಣೆಗಳು, ಮಾಸಿಕ ಋತುಸ್ರಾವ, ಹೆರುವ ಕರ್ತವ್ಯ, ಅದರಿಂದಾಗಿ ರೂಪಿತಗೊಂಡ ಹೊಣೆಗಾರಿಕೆ ಮತ್ತು ಇಳಿವಯಸ್ಸಿನಲ್ಲಿ ಅನುಭವಿಸುವ ಮಾನಸಿಕ ಅಸಮತೋಲನಗಳನ್ನು ಆಧರಿಸಿ ಹೆಣ್ಣಿನ ವ್ಯಕ್ತಿತ್ವವನ್ನು ಗ್ರಹಿಸಲು ಪ್ರಯತ್ನಿಸಲಾಗಿದೆ. ಈ ಹಿನ್ನೆಲೆಯಲ್ಲಿ ಹೆಣ್ಣನ್ನು ಗಂಡಿಗಿಂತ ಕೆಳದರ್ಜೆಯ ಅಥವಾ ಎರಡನೆಯ ದರ್ಜೆಯ ಲಿಂಗವೆಂದು ಗುರಿತಿಸಲಾಗಿದೆ. ಅಲ್ಲದೆ ಈ ಸಂದರ್ಭಗಳಲ್ಲಿ ಅವಳು ಎದುರಿಸಬೇಕಾದ ದೈಹಿಕ ಮತ್ತು ಮಾನಸಿಕ ಅಸಮತೋಲನ, ಕುಟುಂಬಕ್ಕೆ ಬದ್ಧವಾಗಿರಬೇಕಾದ ಅನಿವಾರ್ಯತೆಗಳನ್ನು ಮುಖ್ಯವಾದ ಅಂಶಗಳೆಂದು ಗುರುತಿಸುವುದರ ಮೂಲಕ ಮೌಲ್ಯವ್ಯವಸ್ಥೆಯ ಇರುವಿಕೆ ಹಾಗೂ ಅನಿವಾರ್ಯತೆಯನ್ನು ಎತ್ತಿಹಿಡಿಯಲಾಗಿದೆ. ಆದರೆ ಗಂಡು ಹೆಣ್ಣಿನ ನಡುವಿನ ದೀರ್ಘವಾದ ಅಸಮಾನತೆಗೆ ಇದು ಸಮರ್ಥವಾದ ಕಾರಣವೆ? ಎಂಬುದನ್ನು ಗಮನಿಸಿದಾಗ ಬದಲಾದ ಕಾಲಗತಿಯಲ್ಲಿ ಹೆಣ್ಣು ತನ್ನ ತಾಯ್ತನ, ಮಾಸಿಕ ಬಂಧಗಳನ್ನು ಎದುರಿಸುವ ಸುಲಭೋಪಾಯಗಳನ್ನು ಕಂಡುಕೊಂಡಿದ್ದಾಳೆ.

ಹಿಂದಿನಂತೆ ಬಿಡುವಿಲ್ಲದ ಸಂತಾನಕ್ರಿಯೆಯಲ್ಲಿ ತೊಡಗಿಕೊಳ್ಳಬೇಕಾದ ಸಂದರ್ಭಗಳಾಗಲಿ, ಕುಟುಂಬದ ನಿರ್ವಹಣೆಯಲ್ಲಿಯೇ ತನ್ನ ಇಡೀ ಬದುಕನ್ನು ಕಳೆಯಬೇಕಾದ ಅನಿವಾರ್ಯತೆಯಾಗಲಿ, ಅವಶ್ಯಕತೆಗಳಾಗಲಿ ಉಳಿದಿಲ್ಲ. ಆದರೂ ಹೆಣ್ಣನ್ನು ದೇಹಪ್ರಧಾನ ಹಿನ್ನೆಲೆಯಲ್ಲಿಯೇ ಗ್ರಹಿಸುವ ಸಾಮಾಜಿಕ ನೋಟ ಕ್ರಮದಲ್ಲಿ ಯಾವುದೇ ರೀತಿಯ ಬದಲಾವಣೆಗಳು ಸಂಭವಿಸದಿರುವುದು ಹಾಗೂ ಹೆಣ್ಣಿನ ಜೀವನ ವಿಧಾನದಲ್ಲಿ ಗಣನೀಯವಾದ ಬದಲಾವಣೆಗೆ ಅವಕಾಶವಿಲ್ಲದಿರುವುದು ದೇಹಪ್ರಧಾನ ನಂಬಿಕೆಯೊಂದೇ ಹೆಣ್ಣಿನ ಅಧೀನ ಬದುಕಿಗೆ ಕಾರಣವಾಗಿರಲಾರದು ಎಂಬ ಅಂಶವನ್ನು ಮನದಟ್ಟು ಮಾಡಿಸುತ್ತದೆ.

ಎರಡನೆಯದಾಗಿ ಮಾರ್ಕ್ಸವಾದಿ ಚಿಂತನೆಯ ಹಿನ್ನೆಲೆಯಲ್ಲಿ ರೂಪುಗೊಂಡಿರುವ ಬಂಡವಾಳಶಾಹಿಯ ಹಿಡಿತ ಹಾಗೂ ಹೆಣ್ಣಿಗೆ ಆರ್ಥಿಕ ಸ್ವಾತಂತ್ರ್ಯವಿಲ್ಲದಿರುವುದೇ ಅವಳ ಅಧೀನ ಬದುಕಿಗೆ, ಸ್ವತಂತ್ರ ವ್ಯಕ್ತಿತ್ವವೊಂದನ್ನು ರೂಪಿಸಿಕೊಳ್ಳಲು ಸಾಧ್ಯವಿಲ್ಲದಿರುವಿಕೆಗೆ ಕಾರಣ ಎಂದು ಗುರುತಿಸಲಾಗಿದೆ. ಕುಟುಂಬ ನಿರ್ವಹಣೆಯ ಸಂದರ್ಭದಲ್ಲಿ ಗಂಡು ಹೆಣ್ಣುಗಳಿಬ್ಬರೂ ಕೂಡ ಸಮಾನವಾದ ಶ್ರಮವನ್ನು ವ್ಯಯಿಸಬೇಕಾದ ಅವಶ್ಯಕತೆಯ ಹಿನ್ನೆಲೆಯಲ್ಲಿ 'ಮನೆಯ ಒಳಗಿನ' ಹಾಗೂ 'ಮನೆಯ ಹೊರಗಿನ' ಕಾರ್ಯನಿರ್ವಹಣೆಯ ಹಂಚಿಕೆ ರೂಪುಗೊಂಡಿದೆ. "ಆದರೆ ಅಸಮಾನ ನೆಲೆಯ ಮೇಲೆ ರೂಪುಗೊಂಡ ಸಾಮಾಜಿಕ ವ್ಯವಸ್ಥೆ ಹೆಣ್ಣನ್ನು ಮನೆಗಂಟಿಸಿತು. ಗಂಡಿಗೆ ಪೋಷಣೆಯ ಸಂಪೂರ್ಣ ಹೊರೆಯನ್ನು ಕಡ್ಡಾಯವಾಗಿಸಿತು."[7] ಆದರೆ ಮನೆಯ ಹೊರಗೆ ದುಡಿಯುವ ಗಂಡಿನ ಶ್ರಮವನ್ನು 'ದುಡಿಮೆ ಅಥವಾ ಸಂಪಾದನೆ'ಯ ಕ್ಷೇತ್ರವೆಂತಲೂ, ಒಳಗಿನ ದುಡಿಮೆ 'ಸೇವಾಕ್ಷೇತ್ರ'ವೆಂತಲೂ ಪರಿಗಣಿಸಲ್ಪಟ್ಟಿದೆ. ಹಾಗೂ ಸೇವಾಕ್ಷೇತ್ರ ಸಂಪೂರ್ಣ ಹೆಣ್ಣಿನ ಜವಾಬ್ದಾರಿಗೆ ಒಳಗಾದದ್ದು ಅದರ ನಿರ್ವಹಣೆಯ ಜವಾಬ್ದಾರಿ ಇಂದಿಗೂ ಕೂಡ ಹೆಣ್ಣಿನದೇ ಆಗಿದೆ. ಪ್ರಸ್ತುತ ಸಂದರ್ಭದಲ್ಲಿ ಗಂಡಿಗೆ ಸಮಾನವಾಗಿ ಮನೆಯ 'ಹೊರಗಿನ' ಕೆಲಸಗಳಲ್ಲಿ ಭಾಗವಹಿಸಿ ಸಂಪಾದನೆ ಮಾಡುವ ಹೆಣ್ಣು ಸಾಂಪ್ರದಾಯಿಕ ಮೌಲ್ಯವ್ಯವಸ್ಥೆಯಿಂದ ಹೊರನಡೆದಿದ್ದಾಳೆಯೆ ಎಂಬ ಪ್ರಶ್ನೆಗೆ ಉತ್ತರವನ್ನು ಕಂಡುಕೊಳ್ಳುವುದು ಕಷ್ಟ. ಅಲ್ಲದೆ ಹೆಣ್ಣಿನ ಸಂಪಾದನೆಯನ್ನು ಸಮಾಜ, ಕುಟುಂಬ ನಿರ್ವಹಣೆಯ ಪ್ರಧಾನ ಆಕರವೆಂದು ಪರಿಗಣಿಸದಿರುವ ಹಿನ್ನೆಲೆ ಏನು? ಎಂಬುದನ್ನು ಸೂಕ್ಷ್ಮವಾಗಿ ಅವಲೋಕಿಸಿದಾಗ ಆರ್ಥಿಕವಾಗಿ ಸಬಲಳಾದ ಸಂದರ್ಭದಲ್ಲಿಯೂ ಕೂಡ ಹೆಣ್ಣಿನ ಸ್ಥಿತಿಯಲ್ಲಿ ಹೆಚ್ಚಿನ ಬದಲಾವಣೆಗಳಾಗಿಲ್ಲ ಎಂಬುದು ಮೌಲ್ಯವ್ಯವಸ್ಥೆಯ ನಿರಂತರತೆಗೂ, ಆರ್ಥಿಕ ಅಸಮಾನತೆಗೂ ಸಂಬಂಧವಿಲ್ಲ, ಹೆಣ್ಣು ಆರ್ಥಿಕವಾಗಿ ದುರ್ಬಲಳಾಗಿರುವುದು ಅವಳ ಅಧೀನ ಅಸ್ತಿತ್ವಕ್ಕೆ ಕಾರಣವಲ್ಲ ಎಂಬ ಅಂಶ ಸ್ಪಷ್ಟವಾಗುತ್ತದೆ.

ಮೂರನೆಯದಾಗಿ ಗಂಡು ಹೆಣ್ಣಿನ ಮಾನಸಿಕ ಶಕ್ತಿ ಸಾಮರ್ಥ್ಯವನ್ನು ಮನೋದೈಹಿಕ ನೆಲೆಯಲ್ಲಿ ಗುರುತಿಸುವುದರ ಮೂಲಕ ಗಂಡು ಹೆಣ್ಣಿನ ನಡುವಿನ ಅಂತರವನ್ನು ಸಮರ್ಥಿಸುವ ಚಿಂತನೆಗಳು ರೂಪುಗೊಂಡಿವೆ. ಉದಾ: ಗಂಡಿನ ದೈಹಿಕ ಶಕ್ತಿಯನ್ನೇ ಆಧಾರವಾಗಿಟ್ಟುಕೊಂಡು ಅವನನ್ನು ಸಬಲ, ನಿರ್ಧಾರಗಳನ್ನು ಕೈಗೊಳ್ಳುವವ, ಯೋಜನೆಗಳನ್ನು ರೂಪಿಸುವವ, ಮಾನಸಿಕವಾಗಿ

ದೃಢತೆಯಿಂದ ಕೂಡಿರುವವ, ಎಂಬ ರೀತಿಯಲ್ಲಿ ಬಿಂಬಿಸಲಾಗಿದೆ. ಅಲ್ಲದೆ ಇಂದಿಗೂ ಕುಟುಂಬದಲ್ಲಿ ಹಾಗೂ ಸಾಮಾಜಿಕ, ಆರ್ಥಿಕ, ರಾಜಕೀಯ ವಲಯಗಳಲ್ಲಿ ಪ್ರಮುಖ ನಿರ್ಧಾರಗಳನ್ನು ತೆಗೆದುಕೊಳ್ಳುವವನು ಗಂಡೇ ಆಗಿದ್ದಾನೆ. ಆದರೆ ಹೆಣ್ಣನ್ನು ಕುರಿತಂತೆ ಇರುವ ನಂಬಿಕೆಗಳು ಮಾತ್ರ ಭಿನ್ನವಾದವುಗಳು. ಮಾನಸಿಕವಾಗಿ ಸ್ಥಿಮಿತ ಇಲ್ಲದಿರುವವಳು, ನಿರ್ಧಾರಗಳನ್ನು ತೆಗೆದುಕೊಳ್ಳಲಾಗದವಳು, ಎಲ್ಲದ್ದಕ್ಕೂ ಗಂಡಿನ ಆಶ್ರಯವನ್ನು ಬಯಸುವವಳು, ಚಂಚಲೆ, ಕುಟಿಲೆ, ಮೋಸಗಾತಿ, ಅಲ್ಲದೆ ಗಂಡ, ಮಕ್ಕಳ ಬಗೆಗೆ ಅತಿಯಾದ ಮೋಹವುಳ್ಳವಳು, ಕುಟುಂಬದ ಹೊರಗಿನ ಕರ್ತವ್ಯಗಳನ್ನು ನಿಭಾಯಿಸಲು ಅಸಮರ್ಥಳು ಎಂಬ ಬಗೆಯವು. ಆದರೆ ಹೆಣ್ಣಿನ ಈ ಬಗೆಯ ಮನಸ್ಥಿತಿಗೆ ಕಾರಣವೇನು? ಎಂಬುದರ ಕಡೆಗೆ ಗಮನಹರಿಸಿ ಅವುಗಳಿಗೆ ಪರಿಹಾರೋಪಾಯಗಳನ್ನು ಕಂಡುಕೊಳ್ಳುವ ಬದಲಾಗಿ ಅದೇ ಬಗೆಯ ನಂಬಿಕೆಗಳನ್ನು ಇಂದಿಗೂ ಕೂಡ ಬಿತ್ತುತ್ತಾ, ಇದೇ ನಂಬಿಕೆಗಳು ಚಾಲ್ತಿಯಲ್ಲಿರುವಂತೆ ನೋಡಿಕೊಳ್ಳಲಾಗಿದೆ. ಹಾಗಾದರೆ ಹೆಣ್ಣಿಗೆ ಮಾನಸಿಕವಾದ ಶಕ್ತಿ ಸಾಮರ್ಥ್ಯಗಳಿಲ್ಲವೆಂದು ಅರ್ಥವೇ? ಅಥವಾ ಹೆಣ್ಣಿನ ಅಧೀನ ಸ್ಥಿತಿಯನ್ನು ಶಾಶ್ವತವಾಗಿಸುವ ಕಾರಣದಿಂದಾಗಿ ಪುರುಷಪ್ರಧಾನ ವ್ಯವಸ್ಥೆ ಹೆಣ್ಣಿನ ಶಕ್ತಿಯನ್ನು ದಮನ ಮಾಡುತ್ತಿರುವುದು ಕಾರಣವೇ ಎಂಬ ಅಂಶದ ಕಡೆಗೆ ಗಮನಹರಿಸಬೇಕಾಗಿದೆ. ಈ ನಿಟ್ಟಿನಲ್ಲಿ ಹೆಣ್ಣಿನ ಮಾನಸಿಕ ಮತ್ತು ದೈಹಿಕ ಅಂಶಗಳು ಮೌಲ್ಯವ್ಯವಸ್ಥೆ ರೂಪುಗೊಳ್ಳುವಲ್ಲಿ, ಮತ್ತು ಹೆಣ್ಣಿನ ಅಧೀನತೆಗೆ ಕಾರಣವಾಗಿರಲಾರವು ಎಂಬ ಅಂಶದ ಕಡೆಗೆ ಅಧ್ಯಯನ ನಡೆಯಬೇಕಾಗಿದೆ.

ಕಡೆಯದಾಗಿ ಹೆಣ್ಣಿನ ಸಾಮಾಜಿಕ ಭಾಗವಹಿಸುವಿಕೆಯನ್ನು ಕುರಿತಾದ ನಂಬಿಕೆಗಳು ಅವಳ ಅಧೀನ ಸ್ಥಿತಿಗೆ ಕಾರಣವಾದ ಅಂಶಗಳಲ್ಲೊಂದು. ಆದರೆ ಇದನ್ನು ಸಮಾಜದ ಪ್ರಮುಖ ಅಂಗಗಳಾದ ಧರ್ಮ, ರಾಜಕೀಯ, ಶಿಕ್ಷಣ ಮುಂತಾದ ಕ್ಷೇತ್ರಗಳಲ್ಲಿ ಹೆಣ್ಣಿನ ಭಾಗವಹಿಸುವಿಕೆಯ ಕೊರತೆಯನ್ನು, ಅವಳ ಅನುಪಸ್ಥಿತಿಯ ಹಿನ್ನೆಲೆಯಲ್ಲಿ ಗುರುತಿಸಲಾಗಿದೆ. ಈ ಸಂದರ್ಭದಲ್ಲಿ ಕುಟುಂಬದ ಹೊಣೆಗಾರಿಕೆಯೇ ಹೆಣ್ಣು ಸಾಮಾಜಿಕ ವಲಯದಿಂದ ದೂರ ಉಳಿಯಲು ಕಾರಣ ಎಂಬುದನ್ನು ಗುರುತಿಸುವ ಬದಲಾಗಿ ಈ ಕ್ಷೇತ್ರಗಳ ಬಗೆಗೆ ಹೆಣ್ಣಿಗಿರುವ ಅಜ್ಞಾನ, ನಿರಾಸಕ್ತಿಯನ್ನು ಎತ್ತಿ ಹಿಡಿಯಲಾಗಿದೆ. ಹೆಣ್ಣಿನ ದೈಹಿಕ ಹಾಗೂ ಮಾನಸಿಕ ಶ್ರಮದಲ್ಲಿನ ಭಿನ್ನತೆಯನ್ನು ಅವಳ ಮಿತಿಗಳಾಗಿ ಗುರುತಿಸುವ ಮೂಲಕ, ಹೆಣ್ಣಿನ ವ್ಯಕ್ತಿತ್ವವೇ ಹೀಗೆ ಎಂಬಂತೆ ಚಿತ್ರಿಸಲಾಗಿದೆ. ಹಿಂದೆ ಹೆಣ್ಣು ಹಲವು ಕಾರಣಗಳಿಂದಾಗಿ ಸಾಮಾಜಿಕ ಚಟುವಟಿಕೆಗಳಲ್ಲಿ ಸಕ್ರಿಯವಾಗಿ ಭಾಗವಹಿಸಲು ಸಾಧ್ಯವಾಗದಿರಬಹುದಾದರೂ, ಆಧುನಿಕ ಸಂದರ್ಭದಲ್ಲಿ ಹೆಣ್ಣು ಎಲ್ಲಾ ಬಗೆಯ ಕಾರ್ಯಕ್ಷೇತ್ರಗಳಲ್ಲಿಯೂ ಚಟುವಟಿಕೆಯಿಂದ ಕೂಡಿರುವುದನ್ನು, ಸಮರ್ಥವಾಗಿ ಕರ್ತವ್ಯ ನಿರ್ವಹಣೆಯಲ್ಲಿ ತೊಡಗಿಕೊಳ್ಳುತ್ತಿರುವುದನ್ನೂ ಗಮನಿಸಬಹುದು. ಆದರೂ ಕೂಡ ಸಾಮಾಜಿಕ ವ್ಯವಸ್ಥೆಯಲ್ಲಿ ಹೆಣ್ಣಿಗಿರುವ ಮಾನ್ಯತೆ ಕೇವಲ ಭಾಗವಹಿಸುವಿಕೆಗೆ ಸಂಬಂಧಿಸಿದ್ದೇ ವಿನಃ ಪಾಲುದಾರಿಕೆಯದ್ದಾಗಲೀ, ನಿರ್ಣಯ ಕೈಗೊಳ್ಳುವ ಜವಾಬ್ದಾರಿಯುತ ಸ್ಥಾನದ್ದಾಗಲೀ ಅಲ್ಲ. ಒಟ್ಟಾರೆ ಪುರುಷಪ್ರಧಾನ ವ್ಯವಸ್ಥೆ ಹೆಣ್ಣಿನ ಮಿತಿಗಳನ್ನೇ ಆಧಾರವಾಗಿಟ್ಟುಕೊಂಡು ಹೆಣ್ಣಿನ ಅಧೀನ ವ್ಯಕ್ತಿತ್ವಕ್ಕೆ ಅಧಿಕೃತತೆಯನ್ನು ನೀಡುತ್ತಾ

ಬಂದಿದೆ. ಆ ಮಿತಿಗಳನ್ನೇ ಅಂತಿಮ ಎಂದು ಬಿಂಬಿಸಿ ಹೆಣ್ಣಿನ ವ್ಯಕ್ತಿತ್ವವನ್ನು ಮಾನ್ಯ ಮಾಡದಿರುವ ವಿಧಾನ ಹೆಚ್ಚು ಪ್ರಚಲಿತದಲ್ಲಿದೆ.

ಹಾಗಾದರೆ ಹೆಣ್ಣಿನ ಈ ಸ್ಥಿತಿಗೆ ಕಾರಣವಾದ ಅಂಶಗಳು ಯಾವುವು ಎಂಬುದನ್ನು ಪರಿಶೀಲಿಸಿದಾಗ ಸಾಮಾನ್ಯವಾಗಿ ಕಂಡುಬರುವ ವಿಷಯವೆಂದರೆ ಹೆಣ್ಣಿನ ಅಧೀನ ವ್ಯಕ್ತಿತ್ವಕ್ಕೆ ಅವಳ ದೈಹಿಕ, ಸಾಮಾಜಿಕ, ಆರ್ಥಿಕ, ರಾಜಕೀಯ, ವರ್ತನೆಯಾಧಾರಿತ ನೀತಿ ನಿಯಮಗಳಷ್ಟೇ ಕಾರಣವಲ್ಲ, ಬದಲಾಗಿ ಹೆಣ್ಣನ್ನು ಸಾಂಸ್ಕೃತಿಕವಾಗಿ ರೂಪಿಸಿ, ಅವಳನ್ನು ನಿರಂತರವಾಗಿ ತನ್ನ ಅಧೀನತೆಗೆ ಒಳಪಡಿಸಿಕೊಳ್ಳಬೇಕೆಂಬ ಅಧಿಕಾರ ಕೇಂದ್ರಿತ ವ್ಯವಸ್ಥೆಯ 'ತಾರತಮ್ಯ ಧೋರಣೆ' ಎನ್ನುವುದು ಸ್ಪಷ್ಟವಾಗುತ್ತದೆ. ಮತ್ತೆ ಈ ಅಧಿಕಾರ ಕೇಂದ್ರಿತ ವಲಯ ಯಾವುದು ಎಂಬ ಪ್ರಶ್ನೆಗೆ ಬಂದಾಗ ಅದು ಪಿತೃಕೇಂದ್ರೀಯ ಕುಟುಂಬ ವ್ಯವಸ್ಥೆಯಿಂದ ಕೂಡಿದ್ದು, ನಿಯಮಗಳನ್ನು ರೂಪಿಸಿ, ನಿಯಂತ್ರಿಸಿ, ನಿರ್ದೇಶಿಸುವ ಮೂಲಕ ತನ್ನ ಅಧಿಕಾರವನ್ನು ಶಾಶ್ವತವಾಗಿ ಉಳಿಸಿಕೊಳ್ಳುವ ಉದ್ದೇಶದಿಂದ ಕರ್ತವ್ಯ ನಿರ್ವಹಿಸುತ್ತಿರುವ 'ಪುರುಷ ಪ್ರಧಾನ ವ್ಯವಸ್ಥೆ'. ಇಲ್ಲಿ ಗಂಡನ್ನು ವ್ಯಕ್ತಿಗತವಾಗಿ ಗುರುತಿಸುವುದಕ್ಕಿಂತ ಸಮಾಜದ ಭಾಗವಾಗಿರುವ, ವ್ಯವಸ್ಥೆಯ ಕೇಂದ್ರವಾಗಿರುವ 'ಪುರುಷಶಾಹಿ' ಎಂಬುದು ಮುಖ್ಯ. ಹಾಗಾಗಿ ಸಮಾಜದಲ್ಲಿ ಚಾಲ್ತಿಯಲ್ಲಿರುವ ಲಿಂಗ ಶ್ರೇಣೀಕರಣವು ಕೇವಲ ಗಂಡು ಹೆಣ್ಣಿನ ಜೈವಿಕ ಭಿನ್ನತೆಯೊಂದರಿಂದಲೆ ರೂಪುಗೊಂಡಿದ್ದಲ್ಲ. ಬದಲಾಗಿ ಗಂಡು ಹೆಣ್ಣಿನ ಜೀವನದಲ್ಲಿ ಶಾಶ್ವತವಾಗಿ ಅಡಕವಾಗಿರುವ ಈ ಬಗೆಯ ಶ್ರೇಣೀಕರಣವು ಗಂಡಿನ ಪ್ರಾಧಾನ್ಯತೆಯನ್ನೂ, ಅವನ ಯಜಮಾನ್ಯ ನೆಲೆಗಳನ್ನೂ ಶಾಶ್ವತಗೊಳಿಸುವ, ಹಾಗೂ ಹೆಣ್ಣಿನ ವ್ಯಕ್ತಿತ್ವನ್ನು ಅಧೀನತೆಗೆ ಒಳಪಡಿಸುವ ಸಲುವಾಗಿ ಪಿತೃಪ್ರಧಾನ ವ್ಯವಸ್ಥೆಯಿಂದ ಉದ್ದೇಶಪೂರ್ವಕವಾಗಿ ರೂಪುಗೊಂಡ ಹುನ್ನಾರಗಳೇ ಆಗಿವೆ. ಈ ಹಿನ್ನೆಲೆಯಲ್ಲಿ ಸಾಮಾಜಿಕ ಹಾಗೂ ಸಾಂಸ್ಕೃತಿಕ ಚಲನೆಗಳು ಮತ್ತು ಬದಲಾವಣೆಗಳು ಯಾವ ರೀತಿಯಲ್ಲಿ ಪುರುಷಪ್ರಧಾನ ಯಜಮಾನಿಕೆಯನ್ನು ಅಧಿಕೃತಗೊಳಿಸಲು ಪ್ರಯತ್ನಿಸುತ್ತವೆ ಎಂಬುದನ್ನು ಸಮುದಾಯ ಹಾಗೂ ಮೌಲ್ಯ ಸಂರಚನೆ ಎಂಬ ಅಧ್ಯಾಯದಲ್ಲಿ ವಿಸ್ತೃತವಾಗಿ ಚರ್ಚಿಸಲಾಗಿದೆ.

ಮೊದಲನೆಯದಾಗಿ ಮೌಲ್ಯವ್ಯವಸ್ಥೆ ಎಂದರೇನು? ಮತ್ತು ಹೆಣ್ಣಿನ ಜೀವನದಲ್ಲಿ ಮೌಲ್ಯವ್ಯವಸ್ಥೆಯ ತೊಡಕುಗಳು ಹಾಗೂ ಬದಲಾವಣೆಗಳು ಯಾವ ರೀತಿಯಲ್ಲಿ ಕರ್ತವ್ಯ ನಿರ್ವಹಿಸುತ್ತಿವೆ ಎಂಬುದನ್ನು ಗಮನಿಸಿದಾಗ ಮೌಲ್ಯ ಸಂರಚನೆಯ ಸ್ವರೂಪ ಹಾಗೂ ಅದರ ಕಾರ್ಯಮಾದರಿಗಳನ್ನು ಅರಿಯಲು ಸಹಾಯಕವಾಗುತ್ತದೆ. ಮೌಲ್ಯವ್ಯವಸ್ಥೆಯು ಒಳಿತು-ಕೆಡುಕು, ಮಾಡಬಹುದಾದದ್ದು-ಮಾಡಬಾರದ್ದು, ಯೋಗ್ಯ-ಅಯೋಗ್ಯಗಳ ನಡುವೆ ಭಿನ್ನತೆಯನ್ನು ಗುರುತಿಸಿ, ಜೀವಿಗಳ ಹಿತವನ್ನು ಕಾಪಾಡಿ, ಸಮುದಾಯದ ಜೀವನದಲ್ಲಿ ಏಕರೂಪತೆಯನ್ನು ಅಳವಡಿಸುವ, ಹಾಗೂ ಅದರ ಆರೋಗ್ಯವನ್ನು ಕಾಪಾಡುವ ದೃಷ್ಟಿಯಿಂದ ರೂಪುಗೊಂಡಿರುವ ಜೀವನ ವಿಧಾನವೇ ಆಗಿದೆ. ಈ ಮೌಲ್ಯಗಳು ಸಮುದಾಯದಲ್ಲಿ ಜೀವಿಸುವ ಎಲ್ಲರಿಗೂ ಏಕ ರೀತಿಯಲ್ಲಿ ಅನ್ವಯಿಸುವ, ಎಲ್ಲರ ಒಳಿತನ್ನು ಬಯಸುವ, ಜೀವಪರವಾದ ಆಶಯದಿಂದ ಕೂಡಿವೆ. ಅವು ನಾಗರಿಕತೆಯ, ಒಳಿತಿನ, ಸುಸಂಸ್ಕೃತ ವ್ಯಕ್ತಿತ್ವ ನಿರ್ಮಾಣದ, ಜೀವಪರವಾದ ಚಟುವಟಿಕೆಗಳಂತೆ

ಕಾರ್ಯನಿರ್ವಹಿಸುವ ಸಲುವಾಗಿ ರೂಪುಗೊಂಡವು. ಆದರೆ ಮಾನವ ಸಂಬಂಧವು ಲಿಂಗ ವ್ಯವಸ್ಥೆಯಾಗಿ ರೂಪುಗೊಂಡಿದ್ದು, ಲಿಂಗವ್ಯವಸ್ಥೆಯು ಶ್ರೇಣೀಕರಣಕ್ಕೆ ಒಳಪಟ್ಟಿದೆ. ಇದರಿಂದಾಗಿ ಸಮಾಜದಲ್ಲಿ ಏಕರೂಪವಾಗಿ ಅನ್ವಯವಾಗಬೇಕಿದ್ದ ಮೌಲ್ಯವ್ಯವಸ್ಥೆ ಗಂಡು ಹೆಣ್ಣಿಗೆ ಸಂಬಂಧಿಸಿದಂತೆ ಭಿನ್ನ ರೀತಿಯಲ್ಲಿ ನಿರ್ವಚನಗೊಂಡಿದೆ. ಪುರುಷಪ್ರಧಾನ ವ್ಯವಸ್ಥೆಯ ಹಿಡಿತಕ್ಕೆ ಸಿಕ್ಕ ಧರ್ಮ, ಸಮಾಜ, ಸಂಸ್ಕೃತಿಗೆ ಸಂಬಂಧಿಸಿದ ನಿಯಮಗಳು ಒಂದು ವರ್ಗಕ್ಕೆ ಅನುಕೂಲಕರವಾಗಿಯೂ, ಮತ್ತೊಂದು ವರ್ಗಕ್ಕೆ ಶೋಷಣೆಯ ಕೇಂದ್ರವಾಗಿಯೂ ಮಾರ್ಪಟ್ಟಿವೆ. ಪಿತೃಸಂಸ್ಕೃತಿಯ ಈ ನಡವಳಿಕೆಗೆ ಗಂಡು ಹೆಣ್ಣಿನ ಜೈವಿಕ ಭಿನ್ನತೆ ಕಾರಣ ಎಂಬುದು ಮೇಲ್ನೋಟಕ್ಕೆ ಕಂಡುಬಂದರೂ ಆಂತರ್ಯದಲ್ಲಿ ಲಿಂಗರಾಜಕಾರಣದ ಹುನ್ನಾರಗಳೇ ಕಾರಣ ಎಂಬುದು ವಾಸ್ತವಾಂಶ.

ಪುರುಷಪ್ರಧಾನ ವ್ಯವಸ್ಥೆ ತನ್ನ ಯಾಜಮಾನ್ಯ ಅಧಿಕಾರವನ್ನು ಸ್ಥಿರವಾಗಿಟ್ಟುಕೊಳ್ಳುವ ಸಲುವಾಗಿ ರೂಪುಗೊಂಡಿರುವುದರಿಂದಾಗಿ, ಈ ಪುರುಷ ಪ್ರಭುತ್ವ ಗಂಡು ಹೆಣ್ಣಿನ ಜೈವಿಕ, ಸಾಮಾಜಿಕ, ಸಾಂಸ್ಕೃತಿಕ, ನಿರ್ವಚನವನ್ನು ತನಗೆ ಅನುಕೂಲಕರವಾದ ರೀತಿಯಲ್ಲಿ ರೂಪಿಸಿ, ಹೆಣ್ಣು ಗಂಡಿನ ದೈಹಿಕ ಭಿನ್ನತೆಯನ್ನೇ ಅವರ ಇಡೀ ವ್ಯಕ್ತಿತ್ವ ನಿರ್ಧಾರಕ ಅಂಶಗಳೆಂದು ಪರಿಗಣಿಸುವುದರ ಮೂಲಕ ಅವರನ್ನು ಅಳಿಸಲಾಗದ ಭಿನ್ನರೇಖೆಯೊಂದರಿಂದ ವಿಭಜಿಸಿದೆ. ಜೊತೆಗೆ ಮಕ್ಕಳನ್ನು ಹೆರುವ ಕಾರಣದಿಂದಾಗಿ ಸಮುದಾಯದ ಚಟುವಟಿಕೆಗಳಿಂದ ಬೇರೆಯಾದ ಹೆಣ್ಣು ಸ್ವತಂತ್ರ ಅಸ್ತಿತ್ವವೊಂದನ್ನು ರೂಪಿಸಿಕೊಳ್ಳಲು ಸಾಧ್ಯವಾಗದ ರೀತಿಯಲ್ಲಿ ಸಾಮಾಜಿಕ ವ್ಯವಸ್ಥೆಯು ಕಾರ್ಯತಂತ್ರಗಳನ್ನು ರೂಪಿಸಿದೆ. ಅಲ್ಲದೆ ಹೆಣ್ಣಿನ ಶಕ್ತಿ ಕೇಂದ್ರವಾಗಬೇಕಿದ್ದ ಹೆರುವ ಕ್ರಿಯೆಯನ್ನು ಸಂಪೂರ್ಣ ಪುರುಷಾಧಿಕಾರಕ್ಕೆ ಅಧೀನಪಡಿಸುವುದರ ಮೂಲಕ ಹೆಣ್ಣಿನ ಬದುಕನ್ನು ಎರಡನೆಯ ದರ್ಜೆಗೆ ಇಳಿಸಲಾಗಿದೆ.

ಪುರುಷ ಪಾರಮ್ಯದ ಲಿಂಗ ಶ್ರೇಣೀಕರಣದ ಧೋರಣೆ ಹಾಗೂ ಲಿಂಗರಾಜಕಾರಣದ ಹುನ್ನಾರಗಳು ಯಜಮಾನ್ಯ ಹಾಗು ಪ್ರಭುತ್ವ ಕೇಂದ್ರಿತ ನೆಲೆಗಳಿಂದ ಕೂಡಿದ್ದು. ಮೌಲ್ಯ ಸಂರಚನೆಯಲ್ಲಿ ಇವು ಪ್ರಮುಖ ಪಾತ್ರವಹಿಸುತ್ತವೆ. ಇದರಿಂದಾಗಿ ಬದಲಾದ ಕಾಲ, ಸಾಮಾಜಿಕ, ಸಾಂಸ್ಕೃತಿಕ ಸಂದರ್ಭದಲ್ಲಿಯೂ ಕೂಡ ಸ್ಥಾಪಿತ ಮೌಲ್ಯಗಳು ಹೆಣ್ಣಿನ ಜೀವನದ ಮೇಲೆ ತನ್ನ ಹಿಡಿತವನ್ನು ಸಾಧಿಸಲು ಸಾಧ್ಯವಾಗಿದೆ. ಮೂಲದಲ್ಲಿ ಸಮುದಾಯದ 'ಒಳಿತಿ'ನ ಉದ್ದೇಶದಿಂದ ರೂಪುಗೊಂಡ ಮೌಲ್ಯಗಳು ಗಂಡು ಹೆಣ್ಣಿಗೆ ಸಂಬಂಧಿಸಿದಂತೆ ಪ್ರಧಾನ-ಅಧೀನ, ಒಡೆಯ-ಆಳು ಸ್ವರೂಪದ ಕಾರ್ಯಮಾದರಿಗಳಲ್ಲಿ ಪ್ರಕಟಗೊಳ್ಳುತ್ತವೆ. ಈ ಬಗೆಯ ಭಿನ್ನತೆ ರೂಪುಗೊಳ್ಳುವಲ್ಲಿ ಪಿತೃ ಸಂಸ್ಕೃತಿಯ ಪಾತ್ರ ಪ್ರಧಾನವಾದದ್ದು. ಮೌಲ್ಯಗಳು ನಿರಂತರವಾಗಿ ಚಲನಶೀಲವಾಗಿದ್ದು ಕಾಲದಿಂದ ಕಾಲಕ್ಕೆ ಸಂದರ್ಭಾನುಸಾರಿಯಾಗಿ ಮಾರ್ಪಾಡು ಹೊಂದುತ್ತಿರುತ್ತವೆ. ಆದರೆ ಹೆಣ್ಣಿಗೆ ಸಂಬಂಧಿಸಿದ ಜೀವನ ಮೌಲ್ಯಗಳು ಮೇಲ್ನೋಟಕ್ಕೆ ಬದಲಾದಂತೆ ಕಂಡುಬಂದರೂ ಕೂಡ ಆಂತರ್ಯದಲ್ಲಿ ಮೂಲ ಸ್ವರೂಪವನ್ನು ಎತ್ತಿ ಹಿಡಿಯುವ, ಮೂಲ ಆಶಯಕ್ಕೆ ದಕ್ಕೆಬಾರದ ರೀತಿಯಲ್ಲಿ ಬದಲಾಗುತ್ತಿವೆ. ಆದುದರಿಂದಾಗಿ ಹೆಣ್ಣಿಗೆ ಸಂಬಂಧಿಸಿದಂತೆ ಮೌಲ್ಯವ್ಯವಸ್ಥೆಯ ಮಹತ್ವದ ಅಂಶಗಳಲ್ಲಾದ ಪಲ್ಲಟಗಳು

ಕೂಡ ಅವಳ ಜೀವನದಲ್ಲಿ ಮಾರ್ಪಾಡನ್ನು ತರದೆ ಸ್ಥಗಿತತೆಗೆ ಕಾರಣವಾಗಿವೆ. ಈ ರೀತಿ ಸ್ಥಗಿತಗೊಂಡ ಮೌಲ್ಯಗಳೇ ಸ್ಥಾಪಿತ ಮೌಲ್ಯಗಳು.

ಪಿತೃಪ್ರಧಾನ ಆಲೋಚನೆಯಿಂದ ರೂಪುಗೊಂಡಿರುವ ಮೌಲ್ಯವ್ಯವಸ್ಥೆ ಮೇಲ್ನೋಟಕ್ಕೆ ಸಮಾಜದ ಜೀವಿಗಳೆಲ್ಲರಿಗೂ ಏಕರೀತಿಯಲ್ಲಿ ಅನ್ವಯವಾಗುತ್ತದೆಯಾದರೂ, ಮೌಲ್ಯಗಳ ಸಂರಚನಾ ವಿಧಾನದಲ್ಲಿಯೇ ತಾರತಮ್ಯದ ಭಾವ ನೆಲೆಗೊಂಡಿರುವುದರಿಂದಾಗಿ ಇವುಗಳ ಕಾರ್ಯ ವಿಧಾನಗಳು ಗಂಡು ಹೆಣ್ಣಿಗೆ ಸಂಬಂಧಿಸಿದಂತೆ ಭಿನ್ನತೆ ಹಾಗೂ ವೈವಿಧ್ಯತೆಯಿಂದ ಕೂಡಿವೆ. ಗಂಡಿಗೆ ಸಂಬಂಧಿಸಿದ ಮೌಲ್ಯಗಳಲ್ಲಿ ಆಯ್ಕೆಗೆ ಅವಕಾಶಗಳಿದ್ದು ಅದನ್ನು ಮೀರಿದ ಸಂದರ್ಭದಲ್ಲೂ ಕೂಡ ಅದರಿಂದ ಹೆಚ್ಚಿನ ತೊಡಕೇನೂ ಸಂಭವಿಸುವುದಿಲ್ಲ. ಅಲ್ಲದೆ ಆಯ್ಕೆಯ ಕಾರಣದಿಂದಾಗಿ ಅವನು ಸಮುದಾಯದಲ್ಲಿ ಹಲವಾರು ರೀತಿಯ ಸೌಲಭ್ಯಗಳನ್ನು ಪಡೆಯುವಂತಾಗಿದೆ. ಆದರೆ ಹೆಣ್ಣಿಗೆ ಸಂಬಂಧಿಸಿದ ಮೌಲ್ಯಗಳಲ್ಲಿ ಅವಳಿಗೆ ಯಾವುದೇ ರೀತಿಯ ಆಯ್ಕೆಗೆ ಅವಕಾಶಗಳಿಲ್ಲದಂತೆ ಕುಟುಂಬ, ದಾಂಪತ್ಯ, ಸತೀತ್ವ, ಸ್ತ್ರೀತ್ವಕ್ಕೆ ಬದ್ಧವಾಗಿರುವಂತೆ ಪ್ರೇರೇಪಿಸುತ್ತವೆ. ಮತ್ತು ಆ ರೀತಿಯಲ್ಲಿಯೇ ಬದುಕುವಂತೆ ಒತ್ತಾಯವನ್ನು ಹೇರುತ್ತವೆ ಕೂಡ. ಹೆಣ್ಣಿಗೆ ಸಂಬಂಧಿಸಿದಂತೆ ಹೇಳುವುದಾದರೆ ಮೌಲ್ಯ ಎಂದು ಕರೆಯಬಹುದಾದ ಅಂಶಗಳೆಲ್ಲವೂ ಅವಳನ್ನು ಬಂಧನದಲ್ಲಿಡುವ ಸಾಧನಗಳೇ ಆಗಿವೆ. ಯಾವುದೇ ರೀತಿಯ ಆಯ್ಕೆಯ ಸ್ವಾತಂತ್ರ್ಯವಾಗಲೀ, ಪರ್ಯಾಯದ ಅವಲಂಬನೆಗಾಗಲಿ ಸ್ಥಾಪಿತ ಮೌಲ್ಯವ್ಯವಸ್ಥೆಯಲ್ಲಿ ಅವಕಾಶವೆ ಇಲ್ಲ. ಈ ವ್ಯವಸ್ಥೆಯಲ್ಲಿ ಹೆಣ್ಣು ತನಗೆ ಇಷ್ಟವಿರಲಿ, ಇಲ್ಲದೆ ಇರಲಿ ವ್ಯವಸ್ಥೆಯಿಂದ ರೂಪುಗೊಂಡಿರುವ ಎಲ್ಲಾ ಬಗೆಯ ಆಚರಣೆಗಳನ್ನು ಒಪ್ಪಿ ನಡೆಯುವುದು ಅನಿವಾರ್ಯವಾಗಿದೆ. ಇವು ಅವಳು ಆಚರಿಸಲೇಬೇಕಾದ 'ಕಡ್ಡಾಯ' ಹಾಗೂ 'ಅನಿವಾರ್ಯ' ನಿಯಮಗಳಾಗಿರುವುದರಿಂದಾಗಿ ಹೆಣ್ಣಿಗೆ ಸಂಬಂಧಿಸಿದ ಈ ಸ್ಥಾಪಿತ ಮೌಲ್ಯಗಳು ಅವಳು ಪಾಲಿಸಿ, ಅನುಸರಿಸಲೇಬೇಕಾದ 'ಕರಾರು' ಅಥವಾ 'ಒಪ್ಪಂದ'ಗಳೇ ಆಗಿವೆ.

ಆಧುನಿಕ ಸಂದರ್ಭದಲ್ಲಿಯೂ ಕೂಡ ಹೊಸ ಹೊಸ ಮೌಲ್ಯಗಳು ಸಂರಚನೆಗೊಳ್ಳುತ್ತಿದ್ದು ಈ ಮೌಲ್ಯಗಳು ಸಂರಚನೆಗೊಳ್ಳುವ ಆಲೋಚನಾ ಕ್ರಮದಲ್ಲಿ ಹಿಂದಿಗಿಂತ ಹೆಚ್ಚಿನ ವ್ಯತ್ಯಾಸಗಳೇನೂ ಇಲ್ಲ. ಹೆಣ್ಣಿಗೆ ಸಂಬಂಧಿಸಿದ ಮೌಲ್ಯಗಳು ಸಾಮಾಜಿಕ ಸನ್ನಿವೇಶ, ಸಾಂಸ್ಕೃತಿಕ ಚಲನೆಗಳು, ಸಾಹಿತ್ಯ ಹಾಗೂ ಸಂವಹನ ಮಾಧ್ಯಮಗಳ ಮೂಲಕ ಅತ್ಯಂತ ಯಶಸ್ವಿಯಾಗಿ ಚಿತ್ರರಗೊಳ್ಳುತ್ತಿವೆ. ಈ ಸಂದರ್ಭದಲ್ಲಿ ಸೃಷ್ಟಿಗೊಳ್ಳುತ್ತಿರುವ ಹೊಸ ಮಾಲ್ಯಗಳು ಹೆಣ್ಣಿನ ಸಂಪೂರ್ಣ ಬದುಕನ್ನೇ ಬಲಿತೆಗೆದುಕೊಳ್ಳುವಂತೆ ರೂಪುಗೊಂಡಿವೆ. ಪುರುಷ ಪ್ರಭುತ್ವವೆಂಬುದು ಪ್ರತಿ ಹಂತದಲ್ಲಿಯೂ ಕೂಡ ಹೆಣ್ಣನ್ನು ತನ್ನ ಅಧೀನತೆಗೆ ಒಳಪಡಿಸುವ, ಅವಳ ಇರುವಿಕೆಯನ್ನು ನಾಶಗಳಿಸುವ, ಹೊಸ ಹೊಸ ತಂತ್ರಗಳನ್ನು ರೂಪಿಸುತ್ತಿದ್ದು, ಪ್ರಜಾತಂತ್ರ, ಸಮಾನತೆ, ಸಬಲೀಕರಣದಂತಹ ಮಾತುಗಳು ಇಡೀ ನಾಗರಿಕ ಸಮುದಾಯವನ್ನು ವಿಸ್ಮೃತಿಗೆ ತಳ್ಳಿಬಿಡುವಷ್ಟು ಅಪಾಯಕಾರಿಯಾಗಿ ಬೆಳೆದುಬಿಟ್ಟಿವೆ. ಸಮುದಾಯವನ್ನು ಕುರಿತಂತೆ ರಚಿಸಲ್ಪಟ್ಟ ಅನೇಕ ಪರಿಕಲ್ಪನೆಗಳು ಕೇವಲ ಪುರುಷ

ಸಮುದಾಯವನ್ನು ಮಾತ್ರ ಗಮನದಲ್ಲಿಟ್ಟುಕೊಂಡು ಕಾರ್ಯನಿರ್ವಹಿಸುತ್ತಿರುವುದನ್ನು ಕಾಣಬಹುದಾಗಿದೆ.

"ಸ್ತ್ರೀ-ಪುರುಷ ಅಸಮಾನತೆಗಳ ಗಂಭೀರವಾದ ಆಲೋಚನೆಗಳು ಆರಂಭಗೊಳ್ಳುವುದೇ ಒಬ್ಬರನ್ನು ತಮ್ಮ ನಿಯಂತ್ರಣದಲ್ಲಿರಿಸಿಕೊಳ್ಳಲು ಇನ್ನೊಬ್ಬರು ಮಾಡುವ ಪ್ರಯತ್ನದಿಂದಾಗಿ. ಇಂಥವರಿಗೆ ಒಬ್ಬರನ್ನು ಅಧೀನವಾಗಿಟ್ಟುಕೊಂಡರೆ ಮಾತ್ರವೇ ಜೀವನದ ಸುಖ ದಕ್ಕಿದಂತೆ. ಈ ಪ್ರಯತ್ನಕ್ಕೆ ಸುಖದ ಉದ್ದೇಶ ಎಂಬುದು ಲೌಕಿಕ ದುರಾಸೆಯ ಒಂದು ಕಾರಣವಾದರೆ, ಭಯ, ಅರಕ್ಷಿತತೆ, ಆತಂಕ, ಈ ಮೊದಲಾದ ಮಾನಸಿಕ ಸ್ಥಿತಿಗಳು ಎರಡನೆಯ ಕಾರಣ".[9] ಇದೇ ಕಾರಣದಿಂದಾಗಿ ರೂಪುಗೊಂಡ ಯಾಜಮಾನ್ಯ, ಹಾಗೂ ಪ್ರಭುತ್ವದ ನೆಲೆಗಳು ಪುರುಷ ಕೇಂದ್ರಿತವೂ ಪುರುಷಪರವೂ ಆಗಿರುವುದರಿಂದಾಗಿ ಹೆಣ್ಣು ಮತ್ತಷ್ಟು ಸಂಕಷ್ಟಕ್ಕೆ ಒಳಗಾಗುವಂತಾಗಿದೆ. ಸಾಮಾಜಿಕ ಸಂದರ್ಭದಲ್ಲಿ ಸಮಾನತೆಯ ಆಶಯದೊಂದಿಗೆ ರೂಪುಗೊಂಡ ಮೌಲ್ಯಗಳು ಒಂದು ವರ್ಗಕ್ಕೆ ಜೀವಪರವಾಗಿಯೂ ಮತ್ತೊಂದು ವರ್ಗಕ್ಕೆ ಜೀವವಿರೋಧಿಯಾಗಿಯೂ ಮಾರ್ಪಾಡಾದದ್ದು ಮಾನವ ಚರಿತ್ರೆಯಲ್ಲಾದ ಪ್ರಮುಖ ಬದಲಾವಣೆ. ಇದರಿಂದಾಗಿ ಹೆಣ್ಣು ಇಂದಿಗೂ ಕೂಡ ಪುರುಷನ ಅಧೀನ ಅಂಗತ್ವವನ್ನು ಒಪ್ಪಿ ಬದುಕಬೇಕಾದಂತಹ ಪರಿಸ್ಥಿತಿ ನಿರ್ಮಾಣವಾಗಿದೆ. ಪುರುಷನ ಯಜಮಾನ್ಯ ಅಧಿಕಾರವನ್ನು ಪುಷ್ಟೀಕರಿಸುವ ಸಲುವಾಗಿ ರೂಪುಗೊಂಡ ಅನೇಕ ಕಾರ್ಯತಂತ್ರಗಳಲ್ಲಿ ಮಿಥ್‌ಗಳ ಸೃಷ್ಟಿ ಕೂಡ ಒಂದು. ಸಮಾಜದಲ್ಲಿ ಜಾರಿಯಲ್ಲಿರುವ ಹೆಣ್ಣು ಮತ್ತು ಗಂಡಿಗೆ ಸಂಬಂಧಿಸಿದ ಕಲ್ಪಿತ ನಿಯಮಗಳು ಗಂಡಿನ ಪ್ರಧಾನತೆಯನ್ನೂ, ಯಾಜಮಾನ್ಯ ಧೋರಣೆಗಳನ್ನೂ ಸದಾಕಾಲ ಪೋಷಿಸಲು ಸಹಕಾರಿಯಾಗಿ ರೂಪುಗೊಂಡಿವೆ. ಆದರೆ ಹೆಣ್ಣಿಗೆ ಮಾತ್ರ ಇವು ಎಲ್ಲಾ ಕಾಲದಲ್ಲಿಯೂ ವ್ಯತಿರಿಕ್ತವಾಗಿವೆ.

ಆಧುನಿಕ ಕಾಲದ ಹೆಣ್ಣು ವಿದ್ಯೆ, ಉದ್ಯೋಗ, ಆರ್ಥಿಕ ಸ್ವಾತಂತ್ರ್ಯವನ್ನು ಪಡೆದಿರುವ ಸಂದರ್ಭದಲ್ಲಿಯೂ ಕೂಡ ಗಂಡಿನ ಅಪೇಕ್ಷೆಗೆ ತಕ್ಕಂತೆ ಬದುಕು ನಡೆಸುವ, ತನ್ನ ಸುಖ, ಸಂತೋಷಗಳೆಲ್ಲವನ್ನು ಬಲಿಕೊಟ್ಟಾದರೂ ಕುಟುಂಬದ, ಗಂಡನ, ಮಕ್ಕಳ ಹಿತವನ್ನು ಕಾಯ್ದುಕೊಳ್ಳುವ ವಿಧೇಯತೆ, ತ್ಯಾಗ, ಸಹನೆ, ಕರುಣೆಗಳನ್ನು ಎತ್ತಿಹಿಡಿಯುವ ಸ್ತ್ರೀಪಾತ್ರಗಳನ್ನೇ ಆದರ್ಶ ನಾರಿಯನ್ನಾಗಿ ಬಿಂಬಿಸಲಾಗಿತ್ತು. ಅದಕ್ಕೆ ವಿರುದ್ಧವಾಗಿ ವರ್ತಿಸುವ, ತನ್ನ ದುಡಿಮೆಯನ್ನು ಸ್ವಂತಕ್ಕಾಗಿ ಬಳಸುವ, ತನ್ನ ಬದುಕನ್ನು ಸ್ವತಂತ್ರವಾಗಿ ಕಟ್ಟಿಕೊಳ್ಳುವ ಪ್ರಯತ್ನದಲ್ಲಿರುವ ಸ್ತ್ರೀಪಾತ್ರಗಳನ್ನು ಖಳನಾಯಕಿ ಯರಾಗಿಯೋ ಅಥವಾ ಕುಟುಂಬ ನಾಶಕ್ಕೆ ಕಾರಣಕರ್ತರೆಂಬಂತೆ ಚಿತ್ರಿಸಲಾಗುತ್ತದೆ. ಒಂದು ವೇಳೆ ಹೆಣ್ಣು ಸ್ವತಂತ್ರವಾಗಿ ಬದುಕನ್ನು ರೂಪಿಸಿಕೊಳ್ಳಬಲ್ಲವಳಾದರೂ ಕೂಡ ಕಡೆಯಲ್ಲಿ ತನ್ನ ಸ್ವವ್ಯಕ್ತಿತ್ವವನ್ನು ತಾನೆ ಅಲ್ಲಗಳೆಯುವ ಅಥವಾ ಅದನ್ನೇ ಮಹಾಪರಾಧವೆಂದು ಪರಿಗಣಿಸಿ ಅಧೀನ ವ್ಯಕ್ತಿತ್ವದ ಅಸ್ತಿತ್ವವನ್ನೇ ರೂಪಿಸಿಕೊಳ್ಳುವ ಮಾದರಿಯ ಪಾತ್ರಗಳನ್ನು ಸೃಷ್ಟಿಸಲಾಗುತ್ತದೆ. ಈ ಮೂಲಕ ಹೆಣ್ಣನ್ನು ಬಂಧಿಯಾಗಿಸುವ, ಅಧೀನಗೊಳಿಸಲು ಸಹಕಾರಿಯಾಗುವ ಮಾದರಿಗಳನ್ನು 'ಆದರ್ಶ ಸ್ತ್ರೀ' ಪಾತ್ರಗಳೆಂದು ಬಿಂಬಿಸಿ ಸಮುದಾಯದಲ್ಲಿ ಹೊಸ ಮೌಲ್ಯಗಳನ್ನು ಬಿತ್ತರಿಸುತ್ತಾ ಬರಲಾಗಿದೆ.

ಈ ಬಗೆಯ ಮನೋದೈಹಿಕ ನಿಯಮಗಳಿಂದಾಗಿ ಹೆಣ್ಣು ಅಧೀನ ವ್ಯಕ್ತಿತ್ವದ ಸೇವಕಿಯ ಪಾತ್ರವನ್ನು ನಿರ್ವಹಿಸುವುದು ನಿರಂತರವಾಗಿ ಮುಂದುವರಿಯುವಂತಾಗಿದೆ. ಈ ಸಾಮಾಜೀಕರಣ ಪ್ರಕ್ರಿಯೆಯಲ್ಲಿ ಗಂಡು ಹೆಣ್ಣು ಇಬ್ಬರಿಗೂ ಸ್ವಾತಂತ್ರ್ಯ ಎಂಬುದು ಇಲ್ಲವಾದರೂ, ಸಾಮಾಜಿಕ ಚಿಂತನೆ, ಆಲೋಚನೆಗಳು ಪುರುಷ ಹಿತವನ್ನು ಕಾಯ್ದುಕೊಳ್ಳುವ, ಪುರುಷನ ಯಜಮಾನಿಕೆಯನ್ನು ಪ್ರಬಲಗೊಳಿಸುವ ವಿಧಾನದವೇ ಆಗಿರುವುದರಿಂದಾಗಿ ಗಂಡಿಗೆ ಆಯ್ಕೆಯ ಅವಕಾಶಗಳಿದ್ದು ಅವನು ಸ್ವತಂತ್ರವಾಗಿ ಬದುಕನ್ನು ರೂಪಿಸಿಕೊಳ್ಳಬಹುದು. ಆದರೆ ಹೆಣ್ಣು ಮಾತ್ರ ಈ ಸವಾಲುಗಳನ್ನು ಸಮರ್ಥವಾಗಿ ಎದುರಿಸುವ ಹಾದಿಗಳಿಲ್ಲದೆ ಮತ್ತಷ್ಟು ದುರ್ಬಲಳಾಗಿ ಅಧೀನತೆಗೆ ಒಳಪಡುವಂತಾಗಿದೆ.

ಶಿಕ್ಷಣ, ಉದ್ಯೋಗ, ಆಧುನಿಕತೆ, ಸ್ತ್ರೀ ಸಬಲೀಕರಣದಂತಹ ಕಾರ್ಯತಂತ್ರಗಳು ಮೇಲ್ನೋಟಕ್ಕೆ ಹೆಣ್ಣಿಗೆ ಅನುಕೂಲಕರವಾದ ವಾತಾವರಣವನ್ನೇ ನಿರ್ಮಿಸಿವೆ ಎಂಬಂತೆ ಕಂಡುಬಂದರೂ ಕೂಡ ಅವು ಚಿತ್ತರಿಸುತ್ತಿರುವ ಆಧುನಿಕ ಮೌಲ್ಯಗಳು ಹಿಂದಿಗಿಂತಲೂ ಹೆಚ್ಚು ತೀವ್ರವಾಗಿ ಹೆಣ್ಣನ್ನು ಬಂಧನಕ್ಕೊಳಪಡಿಸುತ್ತಿವೆ. ಹೆಣ್ಣನ್ನು ಕಟ್ಟಿಹಾಕುವ ಅಥವಾ ಬಂಧನದಲ್ಲಿಡುವ ಆಧುನಿಕತೆಯ ಹೊಸ ಹೊಸ ಹುನ್ನಾರಗಳು ಕಾಲದಿಂದ ಕಾಲಕ್ಕೆ ಹೊಸ ಹೊಸ ರೀತಿಯಲ್ಲಿ ಮಾರ್ಪಾಡು ಹೊಂದುತ್ತಿದ್ದು, ಹಿಂದೆ ಪುರಾಣ, ಐತಿಹ್ಯ, ಕಾವ್ಯಗಳು, ಮಿಥ್‌ಗಳನ್ನು ಸೃಷ್ಟಿಸಿದ್ದರೆ ಆಧುನಿಕ ಸಂದರ್ಭಲ್ಲಿ ಕಾಯಿದೆ, ಕಾನೂನು, ಶಿಕ್ಷಣ, ನೌಕರಿಯ ಅವಕಾಶಗಳು ಸಮಾನ ಹಕ್ಕು ಹಾಗೂ ಅಧಿಕಾರಗಳೆಂಬ ಭ್ರಮೆಗಳನ್ನು ಸೃಷ್ಠಿಸುತ್ತಾ ಹೆಣ್ಣನ್ನು ಮತ್ತಷ್ಟು ಅಧೀನ ಸ್ಥಿತಿಗೆ ತಳ್ಳಲು ಪ್ರಯತ್ನಿಸುತ್ತಿವೆ.

ಈ ಸಂದರ್ಭದಲ್ಲಿ ಹಕ್ಕುಗಳೆಲ್ಲವನ್ನು ಗಂಡಿಗೂ, ಭಾದ್ಯತೆಗಳನ್ನು ಹೆಣ್ಣಿಗೂ ಸಂಬಂಧಿಸಿದ ಸಂಗತಿಗಳೆಂದು ನಿಗಧಿಪಡಿಸಲಾಗಿದೆ. ಆದರೆ ಈ ನಿಯಮಾವಳಿಗಳು ಏಕಪಕ್ಷೀಯವಾಗಿ ಪುರುಷನ ಪ್ರಧಾನ್ಯತೆಯನ್ನೇ ಹಿತವೆಂದು ಕರೆಯುವ ಪುರುಷಪರವಾದ ಚಿಂತನೆಗಳಿಂದ ಕೂಡಿವೆ. ಸಾಮಾಜೀಕರಣ ಪ್ರಕ್ರಿಯೆಯಲ್ಲಿಯೇ ಈ ಬಗೆಯ ಮೌಲ್ಯಗಳೆಲ್ಲವೂ ರೂಪುಗೊಳ್ಳುತ್ತವೆಂಬುದು ವಿಶೇಷ. ಆಧುನಿಕ ಸಂದರ್ಭದಲ್ಲಿ ವಿವಿಧ ಕ್ಷೇತ್ರಗಳಲ್ಲಿ ಹೆಣ್ಣಿಗೆ ಸಂಬಂಧಿಸಿದ ಮೌಲ್ಯಗಳು ಸಂರಚನೆಗೊಳ್ಳುತ್ತಿರುವ ಬಗೆಯನ್ನು ಆಧುನಿಕ ಮಹಿಳಾಕಾವ್ಯದ ಆಧಾರದಿಂದ ಈ ರೀತಿಯಲ್ಲಿ ವಿವರಿಸಬಹುದಾಗಿದೆ.

### ೩.೧ ಜೈವಿಕ ನೆಲೆಯ ಮೌಲ್ಯವ್ಯವಸ್ಥೆ

ಸಾಮಾಜಿಕ ಸಂದರ್ಭದಲ್ಲಿ ಲಿಂಗ ಶ್ರೇಣೀಕರಣವನ್ನು ನೆಲೆಗೊಳಿಸಲು ಹಾಗೂ ಅದನ್ನು ಯಶಸ್ವಿಯಾಗಿ ಸಮರ್ಥಿಸಲು ಗಂಡು ಹೆಣ್ಣಿನ ಜೈವಿಕ ವ್ಯಕ್ತಿತ್ವವನ್ನು ಮುಖ್ಯ ಆಕರವನ್ನಾಗಿ ಬಳಸಲಾಗಿದೆ. ಗಂಡು ಹೆಣ್ಣಿನ ದೇಹರಚನೆ ಹಾಗೂ ಜೈವಿಕ ಸ್ಥಿತ್ಯಂತರಗಳನ್ನು ಆಧರಿಸಿ ಲಿಂಗಸಂಬಂಧೀ ತಾತ್ವಿಕತೆ ಹಾಗೂ ದೇಹ ಮೀಮಾಂಸೆಗಳು ರೂಪುಗೊಂಡಿವೆ. ಈ ಜೈವಿಕ ವ್ಯಕ್ತಿತ್ವವನ್ನೇ ಆಧಾರವಾಗಿಟ್ಟುಕೊಂಡು ಬದಲಾಗಿದೆ ಹಾಗೂ ಬದಲಾಗುತ್ತಿದೆ ಎನ್ನಲಾಗುತ್ತಿರುವ ಸಾಮಾಜಿಕ ಸನ್ನಿವೇಶದಲ್ಲಿ ಹೆಣ್ಣಿಗೆ ಸಂಬಂಧಿಸಿದಂತ ಮೌಲ್ಯಗಳು ಮತ್ತೆ ಮತ್ತೆ ಹೊಸ ಹೊಸ

ಮಾದರಿಗಳಲ್ಲಿ ಸಂರಚನೆಗೊಳ್ಳುತ್ತಿವೆ. ಈ ಹಿನ್ನೆಲೆಯಲ್ಲಿ ಸಮುದಾಯದ ಸಂದರ್ಭದಲ್ಲಿ ಮೌಲ್ಯ ಸಂರಚನೆಯೆನ್ನುವುದು ನಿರಂತರವಾದ ಪ್ರಕ್ರಿಯೆಯಾಗಿದ್ದು ಕಾಲದಿಂದ ಕಾಲಕ್ಕೆ ಹೊಸ ಹೊಸ ಮಾದರಿಗಳಲ್ಲಿ ತನ್ನ ಅಸ್ತಿತ್ವವನ್ನು ಮುನ್ನೆಲೆಗೆ ತರುವುದಲ್ಲದೆ, ಲಿಂಗಸಂಬಂಧೀ ಶ್ರೇಣೀಕರಣ ವ್ಯವಸ್ಥೆಯನ್ನು ಶಾಶ್ವತವಾಗಿ ಉಳಿಸುವ ಹುನ್ನಾರಗಳನ್ನು ನಿರಂತರವಾಗಿ ಹೆಣೆಯುತ್ತಲೇ ಇದೆ ಎನ್ನಬಹುದು.

**ಬೌದ್ಧಿಕತೆಯ ಆಯಾಮವಿಲ್ಲದ ದೇಹ ಮೀಮಾಂಸೆಯ ಭಿನ್ನ ನೆಲೆಗಳು** : ಹೆಣ್ಣಿನ ಜೈವಿಕ ಮೂಲವನ್ನು ಆಧರಿಸಿ ರೂಪುಗೊಂಡ ಹೆಣ್ಣಿನ ದೇಹಮೀಮಾಂಸೆ ಅವಳನ್ನು ದೈಹಿಕ ಸಂಪತ್ತಿನ ನೆಲೆಯಲ್ಲಿ ಗುರುತಿಸುವುದು ಮಾತ್ರವಲ್ಲದೆ ಅವಳ ಒಟ್ಟು ವ್ಯಕ್ತಿತ್ವವನ್ನೇ ಬೌದ್ಧಿಕ ನೆಲೆಯ ಆಯಾಮವಿಲ್ಲದಂತೆ ರೂಪಿಸಿದೆ. ಇದನ್ನು ಈ ರೀತಿಯಲ್ಲಿ ಗುರುತಿಸಬಹುದು. ಮೊದಲನೆಯದು 'ಲೈಂಗಿಕ ಸರ್ವಸ್ವ', ಎರಡನೆಯದಾಗಿ' ಬೌದ್ಧಿಕ ನೆಲೆಯ ಗೈರುಹಾಜರಿ'.

ಹೆಣ್ಣಿನ ದೇಹವನ್ನು ಕುರಿತಂತೆ ಆರಂಭದಿಂದಲೂ ರೂಪುಗೊಂಡ ತಪ್ಪಾದ ಗ್ರಹಿಕೆಯ ವಿಧಾನಗಳು ಇಡೀ ಹೆಣ್ಣಿನ ವ್ಯಕ್ತಿತ್ವ ಹಾಗೂ ಬದುಕಿನ ನಿರ್ವಚನದಲ್ಲಿಯೇ ಮಹತ್ವದ ಅಡ್ಡಿಯುಂಟಾಗಲು ಕಾರಣವಾಗಿದೆ. ಅವಳ ದೇಹವನ್ನು ಕುರಿತಾದ ಭಯ, ವಿಸ್ಮಯ ಮತ್ತು ಅಪನಂಬಿಕೆಗಳು ಪುರುಷ ಪ್ರಧಾನ ವ್ಯವಸ್ಥೆ ಹೆಣ್ಣಿನ ವ್ಯಕ್ತಿತ್ವವನ್ನು ತನ್ನ ಅಧೀನತೆಗೆ ಒಳಪಡಿಸಿಕೊಳ್ಳಲು ಕಾರಣವಾದ ಮೊದಲ ಅಂಶ. ಹೆಣ್ಣಿನ ಮಾಸಿಕ ಮುಟ್ಟು, ಮಕ್ಕಳನ್ನು ಪಡೆಯುವ ಸಾಮರ್ಥ್ಯ ಗಂಡಿನ ಕುತೂಹಲ ಮತ್ತು ಆತಂಕದ ಕೇಂದ್ರವಾಗಿದ್ದವು. ಹಾಗಾಗಿಯೇ ಹೆಣ್ಣಿನ ಜೈವಿಕತೆಯನ್ನು ಆಧರಿಸಿದ ಅಂಶಗಳು ಕಾಲಗತಿಯಲ್ಲಿಯೂ ಕೂಡ ತಮ್ಮ ಮೂಲ ಸ್ವರೂಪವನ್ನು ಉಳಿಸಿಕೊಂಡು ಅವಳ ಮಿತಿಗಳಾಗಿ ಮಾರ್ಪಟ್ಟಿವೆ. ಹೆಣ್ಣಿನ ಶಕ್ತಿಕೇಂದ್ರಗಳಾಗಬೇಕಿದ್ದ ಮುಟ್ಟು, ಜೀವ ಸೃಷ್ಟಿಯ ಕ್ರಿಯೆಗಳು ಕಾಲಾನಂತರದಲ್ಲಿಯೂ ಯಥಾಸ್ಥಿತಿಯನ್ನು ಕಾಯ್ದುಕೊಂಡು ಮುಂದುವರೆದಿದೆ. ಹಲವಾರು ರೀತಿಯ ಅಪನಂಬಿಕೆಗಳಿಗೆ ಕಾರಣವಾಗಿ ಮರುಹುಟ್ಟು ಪಡೆಯುತ್ತಿವೆ ಎಂಬುದು ಪುರುಷ ಪ್ರಧಾನ ವ್ಯವಸ್ಥೆ ಹೆಣ್ಣನ್ನು ತನ್ನ ಅಧೀನತೆಗೆ ಒಳಪಡಿಸಿಕೊಳ್ಳಲು ನಡೆಸಿರಬಹುದಾದ ಸಾಂಸ್ಕೃತಿಕ ರಾಜಕಾರಣದ, ಅಧಿಕಾರಶಾಹಿ ಹುನ್ನಾರದ ವಿಧಾನಗಳನ್ನು ಬಿಚ್ಚಿಡುತ್ತದೆ. ಮುಟ್ಟಾದ ಸಂದರ್ಭದಲ್ಲಿ ಹೆಣ್ಣನ್ನು ಬಹಿಷ್ಕೃತೆಯಂತೆ ಕಾಣುವುದು ಅವಳ ಮಿತಿಗಳನ್ನು ಈ ಮೂಲಕವೇ ಗುರುತಿಸುವುದು ಇಂದಿಗೂ ಕೂಡ ಚಾಲ್ತಿಯಲ್ಲಿದೆ. ಈ ಕ್ರಮ ಒಂದೆಡೆ ಹೆಣ್ಣಿನ ದೇಹದ ಬಗೆಗಿನ ತಪ್ಪುಕಲ್ಪನೆಗೆ ಕಾರಣವಾದರೆ ಮತ್ತೊಂದೆಡೆ ಈ ಕಾರಣದಿಂದಾಗಿಯೇ ಹೆಣ್ಣು ಗಂಡಿನ ಆಶ್ರಯದಲ್ಲಿಯೇ ಇರಬೇಕಾದ, ಗಂಡಿಗಿಂತ ಕೀಳು ಎಂಬ ಆಲೋಚನೆಗೆ ಒಳಪಡಬೇಕಾದ ಸಂದರ್ಭವನ್ನೇ ವಿಶ್ಲೇಷಿಸುತ್ತವೆ.

ಆಧುನಿಕ ಜಾಹಿರಾತುಗಳು ಮಾಸಿಕ ಋತುಬಂಧವನ್ನು ವಿಶ್ಲೇಷಿಸುತ್ತಿರುವ ವಿಧಾನ ಕೂಡ ಇದನ್ನೇ ಸಮರ್ಥಿಸುತ್ತದೆ. ಮುಟ್ಟಾಗುವಿಕೆ ಹೆಣ್ಣಿನ ಜೈವಿಕತೆಯ ಸಹಜಕ್ರಿಯೆ ಎಂಬುದರ ಬದಲಾಗಿ ಅದೊಂದು ಬಂಧನವೇ ಎಂಬುದನ್ನು ಇಂದಿಗೂ ಕೂಡ ಒಪ್ಪಿಸಲು ಪ್ರಯತ್ನಿಸಲಾಗುತ್ತಿದೆ. ಕಲೆ

ಸಾಹಿತ್ಯ, ವಿಜ್ಞಾನದಂತ ಕ್ಷೇತ್ರಗಳಲ್ಲಿ ಮುನ್ನಡೆಯಲು ಹಾಗೂ ಯಶಸ್ಸನ್ನು ಸಾಧಿಸಲು ಮುಟ್ಟು ಅಡ್ಡಿಯುಂಟು ಮಾಡಿರುವುದನ್ನೂ, ಆಧುನಿಕ ಸಾಧನಗಳು ಅದನ್ನು ಮೀರಲು ಸಹಕಾರಿಯಾಗಿರುವುದನ್ನು ತಿಳಿಸುವ ಮೂಲಕ ಮುಟ್ಟನ್ನು ಹೆಣ್ಣಿನ ಜೈವಿಕತೆಯ ಮಿತಿ ಎಂದೇ ಇಂದಿಗೂ ಕೂಡ ಬಿಂಬಿಸಲಾಗುತ್ತಿದೆ. ಇಲ್ಲಿ ದೈಹಿಕ ಅಸಾಮರ್ಥ್ಯಕ್ಕಿಂತ 'ಕಲೆಯಾಗುವ ಭಯ', ಅದರಿಂದುಂಟಾಗುವ ಕಿರಿಕಿರಿಗಳನ್ನು ಬಿಂಬಿಸುವ ಮೂಲಕ ಕೇವಲ ಹೆಣ್ಣು ಮಾತ್ರ ಎದುರಿಸಬೇಕಾದ ಸಮಸ್ಯೆ ಇದು ಎಂಬುದನ್ನೇ ಬೇರೆ ಬೇರೆ ರೀತಿಗಳಲ್ಲಿ ಪ್ರಚಾರಪಡಿಸಿ ಆ ಮೂಲಕ ಈ ಬಗೆಯ ನಿರ್ಬಂಧಗಳನ್ನು ಮೀರಲು ಹೆಣ್ಣಿನಿಂದ ಸಾಧ್ಯವೇ ಇಲ್ಲ ಎಂಬಂತೆ ಬಿಂಬಿಸಲಾಗುತ್ತಿದೆ.

ಜೀವಸೃಷ್ಟಿಯ ಕಾರಣದಿಂದಾಗಿ ಸಮಾಜದಲ್ಲಿ ಮೇಲ್‌ಸ್ಥರದ ಸ್ಥಾನವನ್ನು ಪಡೆಯಬೇಕಿದ್ದ ಹೆಣ್ಣಿಗೆ ಅವಳ ಹಡೆಯುವ ಸಾಮರ್ಥ್ಯವನ್ನೇ ಮಿತಿಯಾಗಿಸಿ ಪುರುಷ ಪ್ರಭುತ್ವ ಅವಳನ್ನು ತನ್ನ ಅಧೀನತೆಗೆ ಒಳಪಡಿಸಿಕೊಂಡಿದೆ. ಇದಕ್ಕೆ ಕಾರಣಗಳನ್ನು ಕುರಿತಂತೆ "ಹೆಣ್ಣಿನ ಗರ್ಭಾಶಯದಲ್ಲೇ ಮೊಳೆತು ಪೂರ್ಣಜೀವವಾಗಿ ಹೊರಬರುವ ಗಂಡಿಗೆ ಆ ಶಕ್ತಿಯ ಅಗಾಧತೆಯ ಅನುಭವ ಉಂಟಾಗಿದೆ. ಅದರ ಜೊತೆಗೆ ಈ ಶಕ್ತಿ ತನಗಿಲ್ಲ ಎಂಬ ಕೀಳರಿಮೆಯೊಂದಿಗೆ, ಭಯ ಆತಂಕಗಳೂ ಗಾಢವಾಗಿವೆ. ಈಗ ಅವಳ ಶಕ್ತಿಯನ್ನು ನಿರ್ಬಂಧಿಸುವ, ಆಕ್ರಮಿಸಿ ನಿಯಂತ್ರಿಸುವ ಕುತಂತ್ರಗಳ ಶೋಧ ಅಗತ್ಯವಾಗಿದೆ"[೩] ಎಂಬ ಹೆಚ್.ಎಸ್.ಶ್ರೀಮತಿಯವರ ಮಾತು ಪುರುಷ ಪ್ರಭುತ್ವ ಎದುರಿಸುತ್ತಿರುವ ಆತಂಕ ಮತ್ತು ತಲ್ಲಣಗಳೇ ಮೌಲ್ಯವ್ಯವಸ್ಥೆಯ ನಿರಂತರತೆಗೆ ಕಾರಣ ಎಂಬುದನ್ನು ಸ್ಪಷ್ಟಪಡಿಸುತ್ತದೆ. ಈ ಆತಂಕ ತಲ್ಲಣಗಳೇ ಹೆಣ್ಣಿನ ಮನೋದೈಹಿಕ ಸಾಮರ್ಥ್ಯವನ್ನು ಅಲ್ಲಗಳೆದು ಅವಳನ್ನು ಅಧೀನತೆಗೆ ಒಳಪಡಿಸಿಕೊಳ್ಳುವ, ಅವಳ ವ್ಯಕ್ತಿತ್ವವನ್ನು ಇಲ್ಲವಾಗಿಸುವ ಸಲುವಾಗಿ ಗಂಡಿನ ದೇಹಕ್ಕೆ ಅಗತ್ಯಕ್ಕಿಂತ ಹೆಚ್ಚಿನ ಪ್ರಾಮುಖ್ಯತೆಯನ್ನು ನೀಡಿದೆ. ಆಧುನಿಕ ಮಹಿಳಾಕಾವ್ಯ ಜೈವಿಕ ಅಂಶಗಳನ್ನು ಆಧರಿಸಿ ರೂಪುಗೊಂಡಿರುವ ಈ ಬಗೆಯ ಮೌಲ್ಯವ್ಯವಸ್ಥೆಯ ಕ್ರಮವನ್ನು ಅತ್ಯಂತ ಸೂಕ್ಷ್ಮವಾಗಿ ಗ್ರಹಿಸಿ ಅದಕ್ಕೆ ತನ್ನ ಪ್ರತಿರೋಧವನ್ನು ವ್ಯಕ್ತಪಡಿಸುತ್ತದೆ.

> ಹಾಲುಣಿಸಿ ತಣಿಸುವ ನನ್ನ
> ಜೀವಪೋಷಕ ಮೊಲೆಗಳಿಗಿಂತಲೂ
> ಕತ್ತರಿಗೆ ಸಿಕ್ಕಿ ಕಸವಾಗಿ ಬಿಡಬಹುದಾದ
> ನಿನ್ನ ಗಡ್ಡ ಮೀಸೆಗಳೇ ಮಿಗಿಲೆಂದು
> ಬೀಗುವ ನಿನ್ನ ಮೂರ್ಖತೆಗೆ ಅಚ್ಚರಿಗೊಳ್ಳುತ್ತಿದ್ದೇನೆ.[೪]

ಬಿ.ಟಿ.ಲಲಿತಾ ನಾಯಕ್‌ರವರ ಈ ಕವನ ಕೇವಲ ಹೇಳಿಕೆಯಂತೆ ಕಂಡುಬಂದರೂ ಕೂಡ ಇಲ್ಲಿ ಎತ್ತುತ್ತಿರುವ ಪ್ರಶ್ನೆಗಳು ಹೆಣ್ಣಿನ ಅಸ್ಮಿತೆಯ ಶೋಧದ ದೃಷ್ಟಿಯಿಂದ ಅತ್ಯಂತ ಪ್ರಮುಖವಾದವು. ಪುರುಷಪ್ರಧಾನ ಮೌಲ್ಯವ್ಯವಸ್ಥೆ "ಗಂಡು ಹೆಣ್ಣಿನ ನಡುವೆ ವ್ಯತ್ಯಾಸಗಳಿವೆ, ಹೆಚ್ಚುಗಾರಿಕೆಗಳಲ್ಲ. ನಡುವೆ ನಿಂತಿರುವುದು ಪರಸ್ಪರ ಗಡಿದಾಟಬಲ್ಲ ಗೆರೆಗಳು ಮಾತ್ರ, ಲಕ್ಷ್ಮಣರೇಖೆಗಳಲ್ಲ"[೫] ಎಂಬುದನ್ನು ಅಲ್ಲಗಳೆದು ಜೈವಿಕ ಅಂಶಗಳನ್ನೇ ಅಂತಿಮವಾಗಿಸಿ ಹೆಣ್ಣನ್ನು ನಿರ್ಬಂಧಿಸಿವೆ. ಜೀವಪೋಷಣೆ ಹಾಗೂ ಸೃಷ್ಟಿಕ್ರಿಯೆಯಲ್ಲಿ ಗಂಡು ಹೆಣ್ಣು ಇಬ್ಬರ ಪಾತ್ರ ಕೂಡ ಮುಖ್ಯವಾದದ್ದು. ಆದರೆ ಗಂಡು ಹೆಣ್ಣಿನ ಈ

ಜೀವಪೋಷಕ ಸಾಮರ್ಥ್ಯವನ್ನು ಒಂದೆಡೆ ತಾಯ್ತನದ ಹೊಣೆಗಾರಿಕೆಗಷ್ಟೇ ಸೀಮಿತಗೊಳಿಸಿದರೆ, ಮತ್ತೊಂದೆಡೆ ಈ ಜೈವಿಕ ಭಿನ್ನತೆಯನ್ನೇ ಅವಳ ಮಿತಿಯನ್ನಾಗಿ ಮಾರ್ಪಡಿಸಿದೆ. ಈ ಕವನ ಇದನ್ನು ಪ್ರಶ್ನಿಸುತ್ತಲೇ ಹೆಣ್ಣಿನ ದೇಹದ ಅನನ್ಯತೆಯನ್ನೂ, ಗಂಡಿನ ದೇಹದ ಮಿತಿಯನ್ನೂ ಗುರುತಿಸುವುದರೊಂದಿಗೆ ಜೈವಿಕ ಕಾರಣಗಳಿಂದಾಗಿ ರೂಪುಗೊಂಡಿರುವ ಮೌಲ್ಯವ್ಯವಸ್ಥೆಯ ಪೊಳ್ಳುತನವನ್ನೂ ಕೂಡ ಅತ್ಯಂತ ತೀವ್ರವಾಗಿ ವಿರೋಧಿಸುತ್ತದೆ.

ಜೈವಿಕತೆಯ ಹಿನ್ನೆಲೆಯಲ್ಲಿ ರೂಪುಗೊಂಡಿರುವ ಮೌಲ್ಯವ್ಯವಸ್ಥೆಯು ಹೆಣ್ಣಿನ ಬಸಿರು ಮತ್ತು ಬಾಣಂತನದಿಂದಾಗಿ ನಿರ್ಮಾಣವಾಗುವ ದೈಹಿಕ ಮಿತಿಗಳನ್ನೇ ಅವಳ ಸಾಮರ್ಥ್ಯದ ಮಿತಿಗಳನ್ನಾಗಿ ಪರಿವರ್ತಿಸಿದೆ. ಉದ್ಯೋಗದ ವಲಯದಲ್ಲಿ ಇದರಿಂದಾಗಿ ಎದುರಾಗುವ ಸಮಸ್ಯೆಗಳನ್ನು ಹೆಚ್ಚು ಮುನ್ನೆಲೆಗೆ ತರುವ ಮೂಲಕ ಅದನ್ನು ಹೆಣ್ಣಿನ ಅಸಾಮರ್ಥ್ಯವೆಂದೇ ಗುರುತಿಸಲಾಗುತ್ತಿದೆ. ಈ ಮೂಲಕ ಹೆಣ್ಣಿನ ದೈಹಿಕ ಶಕ್ತಿ ಗಂಡಿನದಕ್ಕಿಂತ ಕಡಿಮೆ ದರ್ಜೆಯದೆಂದೂ , ಅಧೀನ ಅಸ್ತಿತ್ವಕ್ಕೆ ಒಳಪಟ್ಟದ್ದೆಂಬುದನ್ನು ಸಾಬೀತುಪಡಿಸಲು ಪ್ರಯತ್ನಿಸಲಾಗುತ್ತಿದೆ.

**ಸ್ತ್ರೀದೇಹ ಸಂಪತ್ತು** : ಹೆಣ್ಣಿನ ದೇಹವನ್ನು ಪುರುಷಪ್ರಧಾನ ವ್ಯವಸ್ಥೆ ಸಂಪತ್ತಿನ ಭಾಗ ಅಥವಾ ಒಂದು ವಸ್ತುವನ್ನಾಗಿ ಗ್ರಹಿಸುವ ವಿಧಾನ ಇಂದಿಗೂ ಕೂಡ ಮುಂದುವರೆದಿದೆ. ಆಧುನಿಕ ಸಂದರ್ಭದಲ್ಲಿ ಸ್ತ್ರೀ ದೇಹನಿರ್ವಚನೆ ಹಿಂದಿಗಿಂತಲೂ ಹೆಚ್ಚು ಸಂಕೀರ್ಣತೆಯಿಂದಲೂ ಸಮಸ್ಯಾತ್ಮಕ ನೆಲೆಯಿಂದಲೂ ಕೂಡಿದ್ದುದಾಗಿದೆ. ಏಕೆಂದರೆ ಹಿಂದೆ ಹೆಣ್ಣಿನ ದೇಹದ ಮೇಲಿನ ಅಧಿಕಾರ ಸಂಪೂರ್ಣವಾಗಿ ವಿವಾಹವಾದ ಪತಿಗೆ ಸಂಬಂಧಿಸಿದ್ದಾಗಿದ್ದು, ಕುಟುಂಬದ ಒಬ್ಬ ವ್ಯಕ್ತಿಯ ಸಂಪತ್ತಿನ ಭಾಗವಾಗಿ ಮಾತ್ರ 'ಬಳಕೆ'ಗೊಳ್ಳುತ್ತಿದ್ದರೆ, ಆಧುನಿಕ ಸಂದರ್ಭದಲ್ಲಿ ಹೆಣ್ಣಿನ ದೇಹ ಮಾರುಕಟ್ಟೆಯ ಸರಕಾಗಿ ರೂಪುಗೊಂಡಿರುವುದಲ್ಲದೆ ಹತ್ತು ಹಲವು ರೀತಿಯ ಆಕ್ರಮಣಗಳಿಗೆ ಒಳಗಾಗುತ್ತಿದೆ. ಇಂದಿನ ಆಧುನಿಕತೆ, ಜಾಗತೀಕರಣ, ಕಾರ್ಪೋರೇಟ್ ವಲಯಗಳು ರೂಪಿಸುತ್ತಿರುವ 'ಸ್ತ್ರೀದೇಹ ನಿರ್ವಚನೆ' ಲೈಂಗಿಕ ಪೂರೈಕೆಗಷ್ಟೇ ಸೀಮಿತವಾಗಿರದೆ ಸೌಂದರ್ಯದ, ಆಕರ್ಷಣೆಯ, ಪುರುಷಾಪೇಕ್ಷಿತ ಅಗತ್ಯಗಳ ಪೂರೈಕೆಯ ಮಾದರಿಯಲ್ಲಿಯೇ ಮುಂದುವರಿಯುತ್ತಿರುವುದನ್ನು ಕಾಣಬಹುದು. ಈ ವಲಯಗಳು ಹೆಣ್ಣನ್ನು 'ಬಳಸಿಕೊಳ್ಳುತ್ತಿರುವ' ಬಗೆ ಕೂಡ ಸಾಂಪ್ರದಾಯಿಕ ಸ್ತ್ರೀಮಾದರಿಯನ್ನು ಎತ್ತಿ ಹಿಡಿಯುವಂತವೇ ಆಗಿವೆ ಎನ್ನಬಹುದು. ಪ್ರತಿಭಾ ನಂದಕುಮಾರ್‌ರವರ ಕವನ ಹೆಣ್ಣಿನ ದೇಹವನ್ನು ಕುರಿತಾದ ಸಾಂಪ್ರದಾಯಿಕ ನಂಬಿಕೆಗಳು ಇಂದಿಗೂ ಕೂಡ ಯಥಾಸ್ಥಿತಿಯಲ್ಲಿ ಮುಂದುವರಿಯುತ್ತಿರುವುದನ್ನು ಅತ್ಯಂತ ಸಮರ್ಥವಾಗಿ ಚಿತ್ರಿಸುತ್ತದೆ.

> ಬಿಸಿಲು ಬೀಳದ ದಂತದ ಮೈಬಣ್ಣ
> ಅದಕ್ಕೊಪ್ಪುವ ತುಂಬು ಆಭರಣ
> ಹಿಂದೆ ಬಂದ ಅಪ್ಪನ ಯಥೇಚ್ಛ ಹಣ
> ಇಷ್ಟೇ ಜನ ಅವಳಲ್ಲರಸಿದ್ದ ಗುಣ.[೬]

ಹೆಣ್ಣಿನ ದೇಹ ನಿರ್ವಚನವನ್ನು ಕುರಿತಂತೆ ಪುರುಷ ಗ್ರಹಿಕೆಯ ಮತ್ತೊಂದು ಪ್ರಮುಖ ಅಂಶ 'ದೇಹ ಬಳಕೆ'ಗೆ ಸಂಬಂಧಿಸಿದ್ದು. ಹೆಣ್ಣನ್ನು ದೇಹ ಪ್ರಧಾನ ನೆಲೆಯಲ್ಲಿ ನಿರ್ವಚಿಸುವ ಕ್ರಮ ಜಾರಿಯಲ್ಲಿದ್ದರೂ

ಕೂಡ ಅವಳ ದೇಹ ಅವಳದಲ್ಲ. ಹೆಣ್ಣಿನ ದೇಹದ ಮೇಲಿನ ಸಂಪೂರ್ಣ ಅಧಿಕಾರ ಗಂಡಿನದೇ ಆಗಿದೆ. ಹೆಣ್ಣು ತನ್ನ ದೇಹವನ್ನು ಯಾರೊಂದಿಗೆ? ಹೇಗೆ?ಎಲ್ಲಿ? ಹಂಚಿಕೊಳ್ಳಬೇಕು ಎಂಬುದನ್ನು ಇಂದಿಗೂ ಕೂಡ ನಿರ್ದೇಶಿಸುವವನು ಪುರುಷನೇ ಆಗಿದ್ದಾನೆ. ಅಲ್ಲದೆ ಹೆಣ್ಣು ಯಾರನ್ನು ವಿವಾಹವಾಗಬೇಕು. ಎಲ್ಲಿ? ಹೇಗೆ? ಯಾವ ಉದ್ಯೋಗವನ್ನು ಆರಿಸಿಕೊಳ್ಳಬೇಕು? ಎಂಬುದನ್ನು ನಿರ್ಣಯಿಸುವವನು ಗಂಡೇ. ಅವಳ ದೈಹಿಕ ಚಲನವಲನಗಳೆಲ್ಲವನ್ನೂ ನಿರ್ದೇಶಿಸಿ, ನಿಯಂತ್ರಿಸುವವನು ಪುರುಷ ಪ್ರಭುತ್ವದ ವಕ್ತಾರನೇ ಆಗಿರುವುದರಿಂದಾಗಿ ಇಂದಿಗೂ ಕೂಡ ಹೆಣ್ಣಿನ ದೇಹ ಪುರುಷನ ಇಚ್ಛೆಯನುಸಾರವೇ ಬಳಕೆಗೊಳ್ಳುವ ಸರಕಾಗಿಯೇ ಉಳಿದುಕೊಂಡಿದೆ.

ಜಾಗತೀಕರಣದ ಸಂದರ್ಭದಲ್ಲಿ ಹೆಣ್ಣಿನ ದೇಹ ಬಂಡವಾಳದ ಆಕರವಾಗಿ ಮಾರ್ಪಟ್ಟಿರುವುದನ್ನು ಡಾ.ಎಂ.ಎಸ್.ಆಶಾದೇವಿಯವರು ಈ ರೀತಿಯಲ್ಲಿ ಗುರುತಿಸುತ್ತಾರೆ. "ಜಾಗತೀಕರಣದಲ್ಲಿ ಗರಿಷ್ಟ ಲಾಭದಾಯಕವಾದ, ನಷ್ಟದ ಸಾಧ್ಯತೆಯೇ ಇಲ್ಲದ ತುಂಬಾ ಅಗ್ಗದ ಸರಕು, ಬಂಡವಾಳ ಎಂದರೆ ಹೆಣ್ಣು." ಮುಂದುವರೆದು "ಜಗತ್ತಿನ ಎಲ್ಲಾ ದೇಶಗಳ, ಎಲ್ಲಾ ವರ್ಗಗಳ ಮಹಿಳೆಯರೂ ಇದಕ್ಕೆ ಒಳಗಾಗುತ್ತಿದ್ದಾರೆ ಎನ್ನುವುದು ನಿಜವಾದರೂ ಅವರ ಪ್ರಮಾಣ ಮೂರನೇ ಜಗತ್ತಿನ ರಾಷ್ಟ್ರಗಳಲ್ಲಿ ನಿರ್ಣಾಯಕವಾಗಿ ಹೆಚ್ಚು. ಮೊದಲನೆಯದಾಗಿ ವೇಶ್ಯಾವಾಟಿಕೆ. ಇದಕ್ಕೆ ಇವತ್ತು ಹಲವಾರು ಆಧುನಿಕವಾದ, ನಾಜೂಕಾದ, ಅಶ್ಲೀಲತೆ, ಕ್ರೌರ್ಯ ಶೋಷಣೆ ಇವುಗಳನ್ನೆಲ್ಲ ಚಂದವಾಗಿ ಮುಚ್ಚಿಡುವ ಪದಪುಂಜಗಳ ಬಳಕೆಯಾಗುತ್ತಿದೆ. ಆದರೆ ವಾಸ್ತವ ಮಾತ್ರ ಅದೇ"[೭] ಎನ್ನುವ ಮಾತು ಆಧುನಿಕ ಸಂದರ್ಭದಲ್ಲಿ ಹೆಣ್ಣಿನ ದೇಹನಿರ್ವಚನೆ ಲೈಂಗಿಕ ಪ್ರವಾಸೋದ್ಯಮ, ಮಾಡಲಿಂಗ್, ಸೌಂದರ್ಯ ಸ್ಪರ್ಧೆಗಳ ಹೆಸರಿನಲ್ಲಿ ನಡೆಯುತ್ತಿರುವ ಹೆಣ್ಣಿನ ದೇಹದ ಮೇಲಿನ ಆಕ್ರಮಣದ ಭಿನ್ನ ಮಾದರಿಗಳನ್ನು ತಿಳಿಸುತ್ತದೆ. ಆಧುನಿಕ ಸಂದರ್ಭದಲ್ಲಿ ಹೆಣ್ಣಿನ ದೇಹ ಅವಳದಲ್ಲ. ಪರರ ಅಪೇಕ್ಷೆಗೆ ತಕ್ಕಂತೆ ಅದನ್ನು ಮಾರ್ಪಡಿಸಿಕೊಳ್ಳಬೇಕಾಗಿದೆ. ಎತ್ತರ, ದಪ್ಪ, ನಗು, ಹಾವ, ಭಾವ ಎಲ್ಲವೂ ಕೂಡ ಪ್ರಧಾನ ವ್ಯವಸ್ಥೆಯ, ಪ್ರಭುತ್ವದ, ಅಧಿಕಾರಶಾಹಿಯ ಅಪೇಕ್ಷೆಗೆ ತಕ್ಕಂತೆ ಮಾರ್ಪಾಡಾಗಬೇಕಾದ ಅನಿವಾರ್ಯತೆಯನ್ನು ಸೃಷ್ಟಿಸಲಾಗಿದೆ.

ಸೌಂದರ್ಯದ ಪರಿಕಲ್ಪನೆ ಹಿಂದಿಗಿಂತಲೂ ಇಂದು ಹೆಚ್ಚು ಸಂಕೀರ್ಣತೆಯಿಂದ ಕೂಡಿದ್ದು 'ಮೈಮಾಟ'ದ ಸೌಂದರ್ಯವೇ ಮುಖ್ಯವೆಂದು ಭಾವಿಸಲಾಗುತ್ತಿದೆ. ಬಂಡವಾಳಶಾಹಿ ಅಪೇಕ್ಷಿತ ಸೌಂದರ್ಯವತಿಯರಾಗಲು ತಮ್ಮ ಜೀವನದ ಆಸೆ ಆಕಾಂಕ್ಷೆಗಳೆಲ್ಲವನ್ನು ಮುಡಿಪಿಡಬೇಕಾದ ಅನಿವಾರ್ಯತೆ ಇಂದು ಸೃಷ್ಟಿಯಾಗಿದೆ. ವಿಶ್ವಸುಂದರಿ, ಭುವನಸುಂದರಿ ಸ್ಪರ್ಧೆಗಳು ಸಾಂಪ್ರದಾಯಿಕ ದೇಹಮೀಮಾಂಸೆಯನ್ನು ಮತ್ತಷ್ಟು ಪುಷ್ಠೀಕರಿಸುತ್ತವೆ. ನಟಿಯರಾಗಲು, ಐಟಿ, ಬಿಟಿ ಕಂಪನಿಗಳಲ್ಲಿ ಉದ್ಯೋಗ ಪಡೆಯಲು ದೇಹಸೌಂದರ್ಯವೇ ಮುಖ್ಯ ಮಾನದಂಡವಾಗಿದೆ. ಜೊತೆಗೆ ಆಧುನಿಕ ಜಾಹಿರಾತುಗಳು ಹೆಣ್ಣನ್ನು ಬಿಂಬಿಸುವ ಸಂದರ್ಭದಲ್ಲಿ ಕೂಡ ದೇಹಪ್ರಧಾನ, ಸೌಂದರ್ಯ ಪ್ರಧಾನ ಹೆಣ್ಣಿನ ವ್ಯಕ್ತಿತ್ವವನ್ನು ಬಿಂಬಿಸುತ್ತವೆಯೇ ವಿನಃ ಅವಳ ಬುದ್ಧಿ, ಚಾತುರ್ಯಕ್ಕೆ ಯಾವುದೇ ರೀತಿಯ ಮನ್ನಣೆಯನ್ನು ನೀಡುವುದಿಲ್ಲ. ಈ ಎಲ್ಲಾ ಅಂಶಗಳು ಆಧುನಿಕ ಸಂದರ್ಭದಲ್ಲಿ ಹೆಣ್ಣಿನ ದೇಹಪ್ರಧಾನ

ಮೌಲ್ಯವ್ಯವಸ್ಥೆ ಹೊಸ ಹೊಸ ರೂಪಗಳಲ್ಲಿ, ಬಿಡುಗಡೆಯ ಆಶಯದಲ್ಲಿ ಮತ್ತಷ್ಟು ಸಂಕೀರ್ಣವಾಗಿ ಹೆಣ್ಣನ್ನು ಬಂಧಿಯಾಗಿಸುತ್ತಿರುವುದನ್ನು ಪ್ರತಿಬಿಂಬಿಸುತ್ತವೆ.

ಈ ಲಕ್ಷ್ಮಿಗೂ ಸ್ವಾತಂತ್ರ್ಯವಿತ್ತು :
ಅವಳಜ್ಜಿಯಂತೆ ಇವಳೇನೂ ಕೂದಲಿಗೆ ನಾರು ಬಿಗಿಯಲಿಲ್ಲ
ಲಂಗವಿಲ್ಲದೆ ಸೀರೆಯುಡಲಿಲ್ಲ
ಆದರೂ ಅವಳ ಒಳತು ಹೆತ್ತವರಿಗಲ್ಲದೆ ಮತ್ತಾರಿಗೆ ತಿಳಿದೀತು ?
ಶೇಷಶಾಯಿಯ ಕಾಲಬುಡದ ಆ ಲಕ್ಷ್ಮಿಯೇ ಅವಳಾಗಿದ್ದಾಳೆ.[೮]

ಪುರುಷ ಪ್ರಧಾನ ಅಧಿಕಾರ ಕೇಂದ್ರಿತ ನೆಲೆಗಳಿಂದಲೇ ಹೆಣ್ಣಿನ ದೇಹ ನಿರ್ವಚನೆ ಹಾಗೂ ಗ್ರಹಿಕೆಗಳು ರೂಪ ಪಡೆಯುತ್ತಿರುವುದರಿಂದಾಗಿ ಹೆಣ್ಣಿನ ದೇಹ ಸ್ವಂತ ಅಸ್ತಿತ್ವದ ನೆಲೆಗಳನ್ನು ಗುರುತಿಸಿಕೊಳ್ಳಲು ಇಂದಿಗೂ ಕೂಡ ಸಾಧ್ಯವಾಗುತ್ತಿಲ್ಲ. ಅಲ್ಲದೆ ಗಂಡು ಹೆಣ್ಣನ್ನು ನಿರಂತರವಾಗಿ ತನ್ನ ಅಧೀನಕ್ಕೆ ಒಳಪಡಿಸಿಕೊಳ್ಳುವ ಹಾಗೂ ತನ್ನ ಪ್ರಭುತ್ವದ ಎಲ್ಲೆಗಳನ್ನು ವಿಸ್ತರಿಸಿಕೊಳ್ಳುವ ಅಭಿಲಾಷೆಯ ಭಾಗವಾಗಿಯೇ ಹೆಣ್ಣಿನ ದೇಹನಿರ್ವಚನೆ ಕೂಡ ರೂಪುಗೊಳ್ಳುತ್ತಿರುತ್ತದೆ. ಅಧಿಕಾರ ಕೇಂದ್ರ ಹಾಗೂ ನಿರ್ಣಯಗಳನ್ನು ಕೈಗೊಳ್ಳುವ ಅಧಿಕಾರ ನಿರಂತರವಾಗಿ ಪುರುಷನ ಅಧೀನಕ್ಕೆ ಒಳಪಟ್ಟಿರುವುದರಿಂದಾಗಿ ಅದನ್ನು ಕಳಕೊಳ್ಳದ ಹಾಗೂ ತಾನು ಇನ್ನೊಬ್ಬರ ಅಧೀನತೆಗೆ ಒಳಗಾಗಬಹುದಾದ ಭಯಗಳು ಹೆಣ್ಣಿನ ದೇಹಪ್ರಧಾನ ಅಸ್ತಿತ್ವವನ್ನೇ ಅಧಿಕೃತಗೊಳಿಸುವ ಮಾದರಿಯ ನಿರ್ವಚನೆಗಳು ರೂಪುಗೊಳ್ಳಲು ಕಾರಣವಾಗಿವೆ.

**ಲೈಂಗಿಕತೆ** : ಪ್ರಾಣಿ ಸಹಜ ಬಯಕೆಗಳಲ್ಲಿ ಲೈಂಗಿಕ ಅಪೇಕ್ಷೆ ಹಾಗೂ ಅದರ ಪೂರೈಕೆ ಅತ್ಯಂತ ಪ್ರಮುಖವಾದದ್ದು ಹಾಗೂ ಅಗತ್ಯವಾದದ್ದೂ ಕೂಡ. ಆದರೆ ಜೀವ ಸೃಷ್ಟಿ ಕಾರಣದಿಂದಾಗಿ ಲೈಂಗಿಕ ಸಂಪರ್ಕಕ್ಕೆ ಒಳಗಾದ ಹೆಣ್ಣು ಸಂತಾನೋತ್ಪತ್ತಿಗೆ ಒಳಪಟ್ಟು ಬಸಿರು, ಬಾಣಂತನಗಳಂತಹ ಹಲವಾರು ಸವಾಲುಗಳನ್ನು ಎದುರಿಸಬೇಕಾಗಿದೆ. ಮಕ್ಕಳು ಸಂಪತ್ತಿನ ಭಾಗ ಹಾಗೂ ಆಸ್ತಿಯ ಮುಂದುವರಿಕೆಯ ಕೇಂದ್ರವಾಗಿದ್ದುದ್ದರಿಂದ ಹೆಣ್ಣಿನ ಲೈಂಗಿಕತೆಯನ್ನು ವಿವಾಹಿತ ಪತಿಗೆ ಮಾತ್ರ ಮೀಸಲಾಗಿರಿಸಿ, ಪುರುಷಾಧಿಕಾರದ ಅಪೇಕ್ಷೆಯ ನೆಲೆಗಳನ್ನು ತನಗೆ ಅಗತ್ಯವಾದ ಸಂದರ್ಭಗಳಲ್ಲಿ ಮಾತ್ರ ಕೂಡಿಕೆಯಂತಹ ಕೆಲ ಅವಕಾಶಗಳಿಗೆ ವಿಸ್ತರಿಸಲಾಗಿತ್ತು. ಆದರೆ ಬದಲಾದ ಸಂದರ್ಭದಲ್ಲಿಯೂ ಹೆಣ್ಣಿನ ಲೈಂಗಿಕತೆ ಆಕೆಯ ಗಂಡನಿಗೆ ಮಾತ್ರ ಸೀಮಿತವಾದದ್ದು ಎಂಬುದನ್ನು ಯಾವುದೇ ರೀತಿಯ ವಿರೋಧವಿಲ್ಲದೆ ಒಪ್ಪಿ ಮುನ್ನಡೆಸಲಾಗುತ್ತಿದೆ. ಈ ಮೂಲಕ ಹೆಣ್ಣಿನ ಸಹಜ ಬಯಕೆ ಹಿತಾಸಕ್ತಿಗಳನ್ನು ಸಂಪೂರ್ಣ ನಿರಾಕರಿಸಲಾಗುತ್ತಿದೆ. ಈ ವಿಧಾನ ಪುರುಷಾಧಿಪತ್ಯ ಅಥವಾ ಅವನ ಒಡೆತನಕ್ಕೆ ಹೆಣ್ಣಿನ ಲೈಂಗಿಕತೆಯನ್ನು ಮೀಸಲಾಗಿರಿಸುವ ವಿಧಾನವೇ ಆಗಿದೆ.

ಗಂಡು ಹೆಣ್ಣಿನ ಲೈಂಗಿಕತೆಯ ಮುಖ್ಯ ಉದ್ದೇಶ ಸಂತಾನೋತ್ಪತ್ತಿ ಎಂಬುದಕ್ಕೆ ಹೆಚ್ಚಿನ ಪ್ರಾಮುಖ್ಯತೆಯನ್ನು ನೀಡಲಾಗಿದೆ. ಆದರೆ ಗಂಡಿನ ಲೈಂಗಿಕತೆಯನ್ನು ಮಾತ್ರ ಕೇವಲ ಸಂತಾನೋತ್ಪತ್ತಿಗೆ ಸೀಮಿತವಾಗಿರಿಸದೆ ಸಹಜ ಬಯಕೆಗಳ, ಪೂರೈಸಿಕೊಳ್ಳಲೇಬೇಕಾದ ಅಗತ್ಯಗಳ, ತಡೆಹಿಡಿಯಲಾರದ ಸ್ಥಿತಿ ಎಂಬಂತೆ ವರ್ಣಿಸಲಾಗುತ್ತಿದೆ. ಈ ಹಿನ್ನೆಲೆಯಲ್ಲಿಯೇ ಗಂಡಿಗೆ ಮುಕ್ತ

ಲೈಂಗಿಕತೆಗೆ ಅವಕಾಶವನ್ನೂ, ಹೆಣ್ಣಿಗೆ ಹಲಬಗೆಯ ನಿರ್ಬಂಧಗಳನ್ನೂ ಕೂಡ ಹೇರಲಾಗಿದೆ. ಆದರೆ ಹೆಣ್ಣಿನ ಲೈಂಗಿಕತೆ ಮಾತ್ರ ಎಲ್ಲಾ ಸಂದರ್ಭದಲ್ಲಿಯೂ ವಂಶವನ್ನು ಮುನ್ನಡೆಸುವ, ಕುಟುಂಬದ ಹೆಸರನ್ನು ಉಳಿಸುವ ಸಲುವಾಗಿ ಏರ್ಪಡಬೇಕಾದ ಸಂತಾನೋತ್ಪತ್ತಿಗೆ ಮಾತ್ರ ಸೀಮಿತಗೊಳಿಸಿ, ಇದು ಅವಳಿಂದ ನೆರವೇರಲೇಬೇಕಾದ ಅತ್ಯಂತ ಮುಖ್ಯ ಹಾಗೂ ಅಗತ್ಯದ ಕಾರ್ಯ ಎಂದು ಪರಿಗಣಿಸಲಾಗುತ್ತಿದೆ. ಇದರಿಂದಾಗಿ ಹೆಣ್ಣಿಗೆ ತನ್ನ ಲೈಂಗಿಕತೆಯ ಉದ್ದೇಶ ಸಂತಾನೋತ್ಪತ್ತಿ ಮತ್ತು ಪುರುಷನ ದೈಹಿಕ ಅಪೇಕ್ಷೆಗಳನ್ನು ಪೂರೈಸುವುದು ಎಂದು ನಂಬಿಸಿದ್ದು, ಹೆಣ್ಣು ಅಂತಹ ಮನಸ್ಥಿತಿಯಿಂದ ಹೊರಬರಲಾರದಂತೆ ನಿರಂತರವಾದ ಕಾರ್ಯತಂತ್ರಗಳನ್ನು ರೂಪಿಸಲಾಗುತ್ತಿದೆ. ಇದನ್ನು ಪ್ರತಿಭಾ ನಂದಕುಮಾರ್‌ರವರ 'ನಾವು ಹುಡುಗಿಯರೇ ಹೀಗೆ' ಅತ್ಯಂತ ಸಮರ್ಥವಾಗಿ ಚರ್ಚಿಸುತ್ತದೆ. ತನ್ನೆಲ್ಲಾ ಬಯಕೆಗಳನ್ನು 'ಹಿಟ್ಟು ಒತ್ತಿದಂತೆ ಒತ್ತಿ ಗಟ್ಟಿಮಾಡುವ' ಗುಣದಿಂದಾಗಿ ಹೆಣ್ಣು ಲೈಂಗಿಕತೆಗೆ ಸಂಬಂಧಿಸಿದ ತನ್ನ ಸಹಜ ಅಪೇಕ್ಷೆಗಳನ್ನು ವ್ಯಕ್ತಪಡಿಸದೆ ಗಂಡಿನ ಲೈಂಗಿಕ ಬಯಕೆಗಳಿಗೆ ತಕ್ಕಂತೆ ತನ್ನ ಜೀವನವನ್ನು ರೂಪಿಸಿಕೊಂಡು, ಅವನಿಗೆ ಅಧೀನವಾಗಿ ಬದುಕುವ ವಿಧಾನವೇ ಹೆಚ್ಚು ಪ್ರಚಲಿತದಲ್ಲಿದೆ.

ಹೆಣ್ಣಿನ ಲೈಂಗಿಕತೆ ಸಂಪೂರ್ಣ ಗಂಡಿನ ಅಧೀನಕ್ಕೆ ಒಳಪಟ್ಟಿರುವುದನ್ನು ತೆಹಮಿನಾ ದುರಾನಿ ತನ್ನ ಆತ್ಮಕಥನದಲ್ಲಿ ಈ ರೀತಿ ಉಲ್ಲೇಖಿಸುತ್ತಾರೆ. "ಆತನ ದೈಹಿಕ ಚೆಲ್ಲಾಟಕ್ಕೆ ಯಾವುದೇ ರೀತಿಯಲ್ಲಿ ಪ್ರತಿಕ್ರಿಯಿಸಿದರೆ ನಾನೊಬ್ಬ ಸೂಳೆಯೆಂಬ ಭಾವನೆ ಅವನಿಗೆ ಬರುತ್ತದೇನೋ ಎಂಬ ಭಯ! ಹೆಂಗಸೆಂದರೆ ಆತನ ವರ್ಗದ ಜನರಿಗೆ ಲಾಲಸೆಯನ್ನು ತಣಿಸುವ ಒಂದು ವಸ್ತು ಅಷ್ಟೇ. ಆಕೆಗೂ ದೈಹಿಕ ಬಯಕೆಗಳಿವೆ ಎಂಬುದನ್ನು ಅವಳೇನಾದರೂ ತೋರ್ಪಡಿಸಿಕೊಂಡರೆ ಆಕೆಗೆ ಕುಲಟೆಯ ಪಟ್ಟ ಸಿಗುತ್ತಿತ್ತು. ಆಕೆ ಯಾವುದೇ ನಂಬಿಕೆಗೆ ಅನರ್ಹಳು ಎಂದು ಪರಿಗಣಿಸಲಾಗುತ್ತಿತ್ತು. ನನ್ನ ದೈಹಿಕ ಬಯಕೆಗಳನ್ನು ಆತ ಹೊಸಕಿ ಹಾಕಿದ್ದ ಎನ್ನುವುದು ಆತನಿಗೇ ಗೊತ್ತಿರಲಿಲ್ಲ. ಆತ ಬಯಸಿದರೆ ಉಂಟು, ನನಗೋಸ್ಕರವಂತೂ ಎಂದೂ ಇಲ್ಲ ಎನ್ನುವುದನ್ನು ಒಪ್ಪಿಕೊಂಡ ಯಂತ್ರವಾಗಿದ್ದೆ."[೬] ಇಲ್ಲಿ ಲೈಂಗಿಕ ಬಯಕೆಗಳನ್ನು ಪೂರೈಸಿಕೊಳ್ಳುವುದಿರಲಿ, ಅದನ್ನು ಅಭಿವ್ಯಕ್ತಪಡಿಸಲೂ ಕೂಡ ಹೆಣಗಬೇಕಾದ, ಆತಂಕಕ್ಕೆ ಒಳಗಾಗಬೇಕಾದ ಪರಿಸ್ಥಿತಿ ಇರುವುದನ್ನು ಕಾಣಬಹುದು. ಈ ಅಂಶವನ್ನು ಎನ್.ವಿ. ಭಾಗ್ಯಲಕ್ಷ್ಮಿಯವರ 'ಪ್ರತಿ-ಕ್ರಿಯೆ' ಕವನ ಮತ್ತಷ್ಟು ಸಮರ್ಥವಾಗಿ ಹಿಡಿದಿಡುತ್ತದೆ.

ಹುಡುಗಿಯೊಬ್ಬಳು ಕಾಮದ ಬಗ್ಗೆ ಪದ್ಯ ಬರೆದರೆ
ಹುಡುಗರಿಗೆಲ್ಲ ಸೋಜಿಗ. . . . .
ಹುಡುಗಿಯರಿಗೆ ಕುತೂಹಲ . . . .
ಮುದುಕರಿಗೆಲ್ಲ ಚಳಿಗೆ ಹೊತ್ತಿಸಿದ ಬೆಂಕಿ. . . . .
ಮುದುಕಿಯರು ಕೆಂಡ ಉಗುಳುತ್ತಾರೆ.
ಮುಚ್ಚಿಟ್ಟದ್ದು ತೆರೆದು
ಬಟಾಬಯಲು ಮಾಡಿ
ಹೆಣ್ಣಿನ ಸ್ಥಾನ ಮಾನ
ಹ್ಹಾ !
ಸಂಸ್ಕೃತಿ ಕಳೆವಳಲ್ಲಾ

ಎಂದು ಹಲುಬಿ. . .[೧೦]

ಎನ್ನುವಲ್ಲಿ ಹೆಣ್ಣಿನ ಲೈಂಗಿಕತೆಯ ಬಗೆಗಿನ ಸಮುದಾಯದ ನಂಬಿಕೆಗಳನ್ನು ಕುರಿತಂತೆ ಚರ್ಚಿಸುತ್ತಲೇ ಅದರ ಸ್ವರೂಪವನ್ನೂ ಕೂಡ ಬಯಲಿಗೆಳೆಯುತ್ತಾರೆ.

ಹೆಣ್ಣಿನ ಲೈಂಗಿಕತೆಯ ನಿಯಂತ್ರಣ ಮುಂದುವರಿದ ಹಂತದಲ್ಲಿ 'ದೇಹಶುದ್ಧತೆ'ಗೆ ಸಂಬಂಧಿಸಿದ ಶೀಲ, ಪಾತಿವ್ರತ್ಯದಂತಹ ಮೌಲ್ಯಗಳನ್ನು ಹೇರುವುದರ ಮೂಲಕ ಹೆಣ್ಣಿನ ಜೀವನವನ್ನು ಪ್ರವೇಶಿಸಿತು. ವಿವಾಹ ಪೂರ್ವ ಹಾಗೂ ವಿವಾಹ ನಂತರದಲ್ಲಿ ಹೆಣ್ಣು ತನ್ನ ಪಾವಿತ್ರ್ಯವನ್ನು ಕಾಯ್ದುಕೊಳ್ಳುವುದು ಅತ್ಯಂತ ಮುಖ್ಯ ಎಂದು ಇಂದಿಗೂ ಕೂಡ ನಂಬಲಾಗಿದೆ. ಇದರಿಂದಾಗಿ ಹೆಣ್ಣು ಸದಾಕಾಲ ತನ್ನ ಶೀಲದ ಬಗೆಗೆ, ದೇಹ ಶುದ್ಧತೆಯ ಬಗೆಗೆ ಎಚ್ಚರಿಕೆಯಿಂದ ಇರಬೇಕಾಗುತ್ತದೆ. ಒಂದು ವೇಳೆ ಅವಳ ಇಚ್ಚೆಗೆ ವಿರುದ್ಧವಾಗಿಯಾದರೂ ಸರಿ ಅವಳ ದೇಹ ಬಳಕೆಯಾದರೆ ಅವಳದೇ ತಪ್ಪು ಎಂದು, 'ಶೀಲಗೆಟ್ಟವಳು', 'ಕುಲಗೆಟ್ಟವಳು', 'ಜಾರೆ' ಎಂದೆಲ್ಲಾ ಸಮಾಜನಿಂದನೆಗೆ ಒಳಪಡಬೇಕಾಗುತ್ತದೆ. ದೈಹಿಕವಾಗಿಯಷ್ಟೇ ಅಲ್ಲದೆ ಮಾನಸಿಕವಾಗಿಯೂ ಮತ್ತಷ್ಟು ಹಿಂಸೆಗೆ ಗುರಿಪಡಿಸಲಾಗುತ್ತದೆ. ಇದರಿಂದಾಗಿ ಹೆಣ್ಣು 'ಶೀಲ'ವನ್ನು ಕಾಪಾಡಿಕೊಳ್ಳುವುದು ತನ್ನ ಇಡೀ ಜೀವಮಾನದ ಪ್ರಮುಖ ಕರ್ತವ್ಯ ಎಂದು ನಂಬಿ ಬದುಕುವುದರಲ್ಲಿದೆ. ತನ್ನ ಮಗಳು, ನೆರೆಹೊರೆಯವರ ಮೇಲೂ ಕೂಡ ಈ ಮೌಲ್ಯವನ್ನು ಹೇರಲು ಮುಂದಾಗುವಂತೆ ಹೆಣ್ಣನ್ನು ತರಬೇತುಗೊಳಸಲಾಗಿದೆ. ಒಟ್ಟಾರೆ ಪುರುಷ ಪ್ರಧಾನ ವ್ಯವಸ್ಥೆ ಹೆಣ್ಣಿನ ಲೈಂಗಿಕತೆಯನ್ನು ಶಾಶ್ವತವಾಗಿ ತನ್ನ ಅಧೀನತೆಗೆ ಒಳಪಡಿಸಿಕೊಳ್ಳುವ ಮತ್ತು ಏಕವ್ಯಕ್ತಿಗೆ ಸೀಮಿತವಾಗಿರಿಸುವ ಸಲುವಾಗಿಯೇ ಶೀಲದಂತಹ ಮೌಲ್ಯಗಳಿಗೆ ಹೆಚ್ಚಿನ ಮಹತ್ವವನ್ನು ನೀಡಿದೆ ಎನ್ನಬಹುದು.

ಆಧುನಿಕ ಸಂದರ್ಭದಲ್ಲಿ ಕೂಡ ಹೆಣ್ಣು ಅನೇಕ ವ್ಯಕ್ತಿಗಳೊಂದಿಗೆ ಲೈಂಗಿಕ ಸಂಬಂಧ ಹೊಂದುವುದನ್ನು ಸಮಾಜಬಾಹಿರ ಚಟುವಟಿಕೆ ಎಂದೇ ಗುರುತಿಸಲಾಗುತ್ತದೆ. ಒಂದು ವೇಳೆ ಆ ರೀತಿಯ ಸಂಬಂಧಗಳಿದ್ದರೂ ಕೂಡ ಕದ್ದುಮುಚ್ಚಿ ನಡೆಯುವಂತಹವುಗಳಾಗಿರುತ್ತವೆ. ಲಿವಿಂಗ್ ಟುಗೆದರ್ ನಂತಹ ಜೀವನ ವಿಧಾನಗಳು ಮುಕ್ತ ಲೈಂಗಿಕತೆಗೆ ಅವಕಾಶವನ್ನು ನೀಡುತ್ತವೆಯಾದರೂ ಏಕ ಕಾಲದಲ್ಲಿ ಅನೇಕ ವ್ಯಕ್ತಿಗಳೊಂದಿಗೆ ಲೈಂಗಿಕ ಸಂಬಂಧವನ್ನು ಹೊಂದುವುದು ನಿಶಿದ್ಧವೇ. ಇತ್ತೀಚಿನ ಸಂದರ್ಭದಲ್ಲಿ ವಿವಾಹ ಪೂರ್ವ ಲೈಂಗಿಕತೆಯನ್ನು ಒಪ್ಪಿಸುವ ವಿಧಾನ ಜಾರಿಯಲ್ಲಿದೆಯಾದರೂ ಇದರಿಂದ ಹೆಚ್ಚು ಸಂಕಷ್ಟಕ್ಕೆ ಒಳಗಾಗುವವಳು ಹೆಣ್ಣೇ ಆಗಿದ್ದಾಳೆ.

ವಿಧವಾ ವಿವಾಹ, ಪುನರ್ ವಿವಾಹಗಳನ್ನು ನಿಷೇಧಿಸುವುದರ ಹಿನ್ನೆಲೆ ಕೂಡ ಹೆಣ್ಣಿನ ಲೈಂಗಿಕತೆ ಕೇವಲ ಒಬ್ಬ ವ್ಯಕ್ತಿಗೆ ಮಾತ್ರ ಸೀಮಿತವಾಗಿರಬೇಕು ಎಂಬ ಆಶಯದಿಂದ ಕೂಡಿದ್ದೇ ಆಗಿದೆ. ಆಧುನಿಕ ಸಂದರ್ಭದಲ್ಲಿ ಈ ಬಗೆಯ ವಿವಾಹಗಳಿಗೆ ಮಾನ್ಯತೆಯನ್ನು ನೀಡಲಾಗುತ್ತಿದೆಯಾದರೂ ಅದು ಪುರುಷನ ಅಪೇಕ್ಷೆ ಇದ್ದಲ್ಲಿ ಮಾತ್ರವೇ ನೆರವೇರುತ್ತದೆ ಎನ್ನಬಹುದು. ಅಲ್ಲದೆ ವಿಧವಾ ವಿವಾಹ

ಮತ್ತು ಪುನರ್ವಿವಾಹಗಳು ಪುರುಷನ ಅಪೇಕ್ಷೆಯ ಫಲವಾಗಿ ರೂಪುಗೊಂಡವೇ ವಿನಃ ಇಲ್ಲಿಯೂ ಕೂಡ ಹೆಣ್ಣಿನ ಅಭಿಪ್ರಾಯವಾಗಲೀ, ಆಯ್ಕೆಯಾಗಲೀ ಮುಖ್ಯವಾಗುವುದಿಲ್ಲ.

ಆಧುನಿಕ ಸಂದರ್ಭದಲ್ಲೂ ಕೂಡ ಹೆಣ್ಣು ಮುಕ್ತವಾಗಿ ತನ್ನ ಲೈಂಗಿಕ ಅಪೇಕ್ಷೆಯನ್ನು ವ್ಯಕ್ತಪಡಿಸುವುದು ಸಾಧ್ಯವೇ ಇಲ್ಲ. ಅವಳಲ್ಲಿ ಅಂತಹ ಒಂದು ಭಾವನೆ ಇರುವುದಿಲ್ಲ ಎಂಬುದರ ಕಡೆಗೆ ಪುರುಷ ಪ್ರಧಾನ ವ್ಯವಸ್ಥೆ ಹೆಚ್ಚು ಒತ್ತು ನೀಡುತ್ತದೆ. ಒಂದು ವೇಳೆ ಲೈಂಗಿಕ ಆಸಕ್ತಿಗಳನ್ನು ಹೆಣ್ಣು ಮುಕ್ತವಾಗಿ ವ್ಯಕ್ತಪಡಿಸಿದರೆ, ಹಲವು ಜನರೊಂದಿಗೆ ಸಂಬಂಧ ಹೊಂದಿದ್ದರೆ ಅಂತಹವರನ್ನು ಕುಲಟೆ, ಜಾರೆ, ಹಾದರಗಿತ್ತಿ ಎಂದು ಗುರುತಿಸುವುದರ ಮೂಲಕ ಅವರನ್ನು ಸಮಾಜದಿಂದ ಹೊರಗುಳಿಸುವ ಕೆಲಸವನ್ನು ಕೈಗೊಳ್ಳುತ್ತದೆ. ಆದರೆ ಇದೇ ಪಿತೃಸಂಸ್ಕೃತಿ ವೇಶ್ಯಾವಾಟಿಕೆಗೆ, ಅತ್ಯಾಚಾರಗಳಿಗೆ ಕುಮ್ಮಕ್ಕು ಕೊಡುವ ಮೂಲಕ ತನಗೆ ಒಪ್ಪಿಗೆಯಾದವರೊಂದಿಗೆ ಸಂಬಂಧವನ್ನು ಹೊಂದಲು ಮುಂದಾಗುತ್ತದೆ. ಇತ್ತೀಚಿನ ದಿನಗಳಲ್ಲಿ ವೇಶ್ಯಾವಾಟಿಕೆ ಆಧುನಿಕ ಸ್ವರೂಪವನ್ನು ಪಡೆಯುತ್ತಿದ್ದು, ರಾಜಾರೋಶವಾಗಿ ಗಂಡಿನ ಮುಕ್ತ ಲೈಂಗಿಕತೆಗೆ ಅವಕಾಶಗಳನ್ನು ಒದಗಿಸಲಾಗುತ್ತಿದೆ. ಆದರೆ ಇಲ್ಲಿಯೂ ಕೂಡ ದೈಹಿಕ ಮತ್ತು ಮಾನಸಿಕ ಶೋಷಣೆಗೆ ಒಳಗಾಗುತ್ತಿರುವವಳು ಹೆಣ್ಣೇ. ಇಲ್ಲಿಯೂ ಕೂಡ ಪುರುಷ ಪ್ರಧಾನ್ಯ ಯಾಜಮಾನ್ಯ ಧೋರಣೆಯೇ ಮುಖ್ಯವಾಗಿರುವುದನ್ನು ಕಾಣಬಹುದಾಗಿದೆ.

### ೩.೨ ಸಾಮಾಜಿಕ ಮೌಲ್ಯಗಳು

ಸಮಾಜ ಎನ್ನುವುದು ವಾಸ್ತವವಾಗಿ ಬಹುವಿಸ್ತಾರವಾದ ಅರ್ಥ ಸಾಧ್ಯತೆಗಳನ್ನು ಒಳಗೊಂಡಿದ್ದು ಮಾನವ ಸಮುದಾಯದ, ಅವರ ದಿನನಿತ್ಯದ ಬದುಕಿನ ಆಗುಹೋಗುಗಳನ್ನು, ಚಲನವಲನಗಳನ್ನು ಕುರಿತಂತೆ 'ಸೂಕ್ತ' ನಿರ್ಧಾರಗಳನ್ನು ಕೈಗೊಳ್ಳುವ, ನಿರ್ದೇಶನಗಳನ್ನು ನೀಡುವ ಹಲವು ಸಾಂಸ್ಥಿಕ ಘಟಕಗಳ ಒಟ್ಟು ಮೊತ್ತ. ಸಮಾಜದ ಎಲ್ಲಾ ಚಟುವಟಿಕೆಗಳೂ ಕೂಡ ಅದರ ಸಾಂಸ್ಥಿಕ ಘಟಕಗಳ ಕಾರ್ಯಮಾದರಿಗಳನ್ನು ಅನುಸರಿಸಿಯೇ ನಿರ್ಧಾರವಾಗುತ್ತಿರುತ್ತವೆ. ಇವುಗಳಲ್ಲಿ ಧರ್ಮ, ಕುಟುಂಬ, ವಿವಾಹ, ಆರ್ಥಿಕತೆ, ಶಿಕ್ಷಣದ ಪಾತ್ರ ಅತ್ಯಂತ ಪ್ರಮುಖವಾದದ್ದು. ಈ ಸಂಸ್ಥೆಗಳ ಮೂಲಕ ಸಮುದಾಯದ ಜೀವನ ವಿಧಾನಗಳೂ, ಕಾರ್ಯಮಾದರಿಗಳೂ ರೂಪುಗೊಳ್ಳುತ್ತಿರುತ್ತವೆ.

ಸಾಮಾಜಿಕ ಚಿಂತನೆಗಳು ಸಮಾಜದಲ್ಲಿರುವ ಎಲ್ಲರಿಗೂ ಕೂಡ ಒಂದೇ ರೀತಿಯಲ್ಲಿ ಅನ್ವಯಿಸಲ್ಪಡುತ್ತವೆ ಎಂಬ ನಿಯಮಾವಳಿಗಳು ಜಾರಿಯಲ್ಲಿದೆಯಾದರೂ ವಾಸ್ತವವಾಗಿ ಇದೊಂದು ಸಂಪೂರ್ಣ ಭ್ರಮಾತ್ಮಕ ಪರಿಕಲ್ಪನೆ. ಸಾಮಾಜಿಕ ಸಂರಚನಾ ವಿಧಾನವೇ ಪಿತೃ ಪ್ರಭುತ್ವದ ಪರವಾಗಿರುವುದರಿಂದ ಸಮುದಾಯ ಒಳಗೊಳ್ಳುವ ಎಲ್ಲ ಬಗೆಯ ಸ್ಥಾಪಿತ ಹಿತಾಸಕ್ತಿಗಳೂ ಕೂಡ ಪುರುಷ ಪ್ರಾಧಾನ್ಯತೆಯನ್ನು ಎತ್ತಿ ಹಿಡಿಯುತ್ತವೆ. ಆದುದರಿಂದಾಗಿ ಇಡೀ ಸಾಮಾಜಿಕ ಚಲನೆಯೇ ಶ್ರೇಣೀಕರಣದ ಹಿನ್ನೆಲೆಯಲ್ಲಿ ರೂಪುಗೊಂಡಿದ್ದು, ಅದರಲ್ಲೂ ಗಂಡು ಹೆಣ್ಣಿನ ಸಂಬಂಧದ ಸ್ವರೂಪ ಎಲ್ಲಾ ಸಮಾಜ, ಸಮುದಾಯಗಳಲ್ಲೂ ಒಂದೇ ಬಗೆಯ ಶ್ರೇಣೀಕರಣದ ಚಿಂತನೆಗೆ ಒಳಪಟ್ಟಿದೆ. ಈ ಸಾಮಾಜಿಕ ಭಿನ್ನತೆಯು ಲೈಂಗಿಕ ಭಿನ್ನತೆಯನ್ನು ಪ್ರಧಾನವಾಗಿ ಎತ್ತಿಹಿಡಿಯುತ್ತದೆ. ಅಲ್ಲದೆ ಸಾಮಾಜದ

ಪ್ರಮುಖ ಅಂಗಗಳಾದ ಧರ್ಮ, ರಾಜಕೀಯ, ಶಿಕ್ಷಣ, ಕಾನೂನು, ವ್ಯವಸ್ಥೆ ಇವುಗಳೂ ಕೂಡ ಲಿಂಗ ನಿರಪೇಕ್ಷತೆಗೆ ಬದಲಾಗಿ ಲೈಂಗಿಕತಾವಾದವನ್ನೇ ಸಮರ್ಥಿಸುತ್ತವೆ. ಸಾಮಾಜಿಕ ರಚನೆಯಲ್ಲಿ ನಿರ್ಣಾಯಕ ನಿಯಮಗಳಾದ ಇವು ಮೇಲ್ನೋಟಕ್ಕೆ ಸಮಾನತೆಯ ಆಶಯವನ್ನು ಪ್ರದರ್ಶಿಸುತ್ತವಾದರೂ ಆಂತರ್ಯದಲ್ಲಿ ಶ್ರೇಣೀಕರಣದ ವಿಧಾನವನ್ನು ಸಮರ್ಥಿಸುತ್ತಿರುತ್ತವೆ. ಒಟ್ಟಾರೆ ವ್ಯವಸ್ಥೆಯಲ್ಲಿ ಜಾರಿಯಲ್ಲಿರುವ ಸಾಮಾಜಿಕ ಸಂಸ್ಥೆಗಳು ಮತ್ತು ಅದಕ್ಕೆ ಸಂಬಂಧಿಸಿದ ನಿಯಮಗಳು ಲಿಂಗ ಶ್ರೇಣೀಕರಣವನ್ನು ಸಮರ್ಥಿಸುವ, ಅದನ್ನು ಬಲಪಡಿಸುವ ಹಾಗೂ ಲೈಂಗಿಕತಾವಾದವನ್ನೇ ಪ್ರಧಾನವಾಗಿ ಗುರುತಿಸುವ ಸ್ವರೂಪದವಾಗಿವೆ.

ಪುರುಷ ಪ್ರಧಾನ ಸಾಮಾಜಿಕ ವ್ಯವಸ್ಥೆಯಲ್ಲಿ ಲಿಂಗ ಶ್ರೇಣೀಕರಣದ ಸ್ವರೂಪ ಹಾಗು ಸ್ತ್ರೀ ಶೋಷಣೆಯ ವಿಧಾನಗಳು ಕಾಲದಿಂದ ಕಾಲಕ್ಕೆ ಭಿನ್ನ ಭಿನ್ನ ಮಾದರಿಗಳಲ್ಲಿ, ವಿಭಿನ್ನ ವಿನ್ಯಾಸಗಳಲ್ಲಿ ಮಹಿಳಾ ಬದುಕನ್ನು ಆವರಿಸುತ್ತಿರುವುದನ್ನು ಗುರುತಿಸಬಹುದು. ಆಧುನಿಕ ಸಂದರ್ಭಗಳಲ್ಲಿ ಸ್ತ್ರೀ ಪುರುಷರ ಅಸಮಾನತೆಯ ನೆಲೆಗಳು ಗುರುತಿಸಲಾರದಷ್ಟು 'ಒಳಿತಿ'ನ ಮುಖವಾಡಗಳನ್ನು ಧರಿಸಿ ಬಂದಿವೆ, ಬರುತ್ತಿವೆ. ಹಲಸಂದರ್ಭದಲ್ಲಿ ಇವುಗಳನ್ನು ಹೆಣ್ಣಿನ ಬಂಧನದ ಕೇಂದ್ರಗಳೆಂದೂ, ನಿರ್ಬಂಧದ ಸಾಧನಗಳೆಂದೂ ಗುರುತಿಸುವುದೇ ಕಷ್ಟವಾಗುತ್ತದೆ. ಹೆಣ್ಣಿಗೂ ಕೂಡ ಇದೇ ಬಗೆಯ ಬಂಧನದ ಸ್ಥಿತಿಯೇ ಅಭ್ಯಾಸವಾಗಿದ್ದು ಅದನ್ನು ಒಪ್ಪುವ, ಪುಷ್ಟೀಕರಿಸುವ ವಿಧಾನ ಕಂಡುಬರುತ್ತದೆ. ಈ ಬಗೆಯ ಸಾಮಾಜೀಕರಣ ಪ್ರಕ್ರಿಯೆಯಿಂದ ರೂಪುಗೊಳ್ಳುತ್ತಿರುವ ಮೌಲ್ಯ ವ್ಯವಸ್ಥೆಯನ್ನು ಕುರಿತು ಶೈಲಜಾ ಉಡಚಣ ಹೀಗೆ ಪ್ರತಿಕ್ರಿಯಿಸಿದ್ದಾರೆ.

ನನಗೆ ಅಭ್ಯಾಸ ತುಸು ತುಸುವೇ
Suger coted ಗಳ ತಿಂದು
ಹಿಡಿಯ ಬೇಡ
ಒಂದೇ ಸಲಕೆ
ವಿಷದ ಕುಡಿಕೆ ನನ್ನ ಮುಂದು.[77]

ಇದು ಆಧುನಿಕ ಸಂದರ್ಭಗಳಲ್ಲಿ ಮೌಲ್ಯಗಳು ಸಂರಚನೆಗೊಳ್ಳುತ್ತಿರುವ ಬಗೆಯನ್ನೂ, ಮಹಿಳಾ ಸಮುದಾಯ ಅದನ್ನು ಮಾನ್ಯ ಮಾಡುತ್ತಿರುವ ವಿಧಾನವನ್ನೂ ಬಯಲಿಗೆಳೆಯುತ್ತದೆ. ಇದೇ ರೀತಿ ಸಮುದಾಯದ ವಿವಿಧ ಸನ್ನಿವೇಶಗಳಲ್ಲಿ ಮೌಲ್ಯವ್ಯವಸ್ಥೆ ರೂಪುಗೊಳ್ಳುತ್ತಿರುವ ಬಗೆಯನ್ನು ಇಲ್ಲಿ ವಿಸ್ತೃತವಾಗಿ ಚರ್ಚಿಸಲಾಗಿದೆ.

**ಕುಟುಂಬ** : ಸಮುದಾಯದಲ್ಲಿ ಅತ್ಯಂತ ಚಿಕ್ಕ ಹಾಗೂ ಪ್ರಮುಖವಾದ ಸಾಮಾಜಿಕ ಘಟಕ ಕುಟುಂಬ. ಕುಟುಂಬದ ಮೂಲಕವೇ ಗಂಡು ಹೆಣ್ಣಿನ ಸಾಮಾಜೀಕರಣ ಪ್ರಕ್ರಿಯೆ ಆರಂಭವಾಗುತ್ತದೆ. ಗಂಡು ಹೆಣ್ಣಿಗೆ ಸಂಬಂಧಿಸಿದ ಕಾರ್ಯಹಂಚಿಕೆ, ಜವಾಬ್ದಾರಿ, ಕರ್ತವ್ಯ ಪಾಲನೆ, ಕುಟುಂಬ ಹಾಗೂ ಸಮಾಜದಲ್ಲಿ ಅವರ ನಡವಳಿಕೆಗಳಿಗೆ ಇಲ್ಲಿಂದಲೇ ಸೂಕ್ತ ನಿರ್ದೇಶನ ಮತ್ತು ಮಾರ್ಗದರ್ಶನಗಳು ದೊರೆಯುತ್ತವೆ. ಕುಟುಂಬದಲ್ಲಿ ಮಕ್ಕಳಿಗೆ ಬಾಲ್ಯದಿಂದಲೇ ದೊರೆಯುವ ಸಾಮಾಜೀಕರಣದ ಶಿಕ್ಷಣ ಸಾಮಾನ್ಯವಾಗಿ ಮೇಲ್ನೋಟಕ್ಕೆ ಸಹಜ ಎಂಬಂತೆ ಕಂಡುಬಂದರೂ ಮೂಲದಲ್ಲಿ ಗಂಡು ಹೆಣ್ಣಿಗೆ

ಸಂಬಂಧಿಸಿದಂತೆ ಲಿಂಗ ಶ್ರೇಣೀಕರಣವನ್ನು ಪುಷ್ಟೀಕರಿಸುವ ತರಬೇತಿಯೇ ಆಗಿರುತ್ತದೆ. ಮೌಲ್ಯ ವ್ಯವಸ್ಥೆಗೆ ಕುಟುಂಬದ ಮತ್ತೊಂದು ಪ್ರಮುಖ ಕೊಡುಗೆ ಎಂದರೆ ಕುಟುಂಬದೊಳಗೆ ಹೆಣ್ಣಿನ ಮೇಲೆ ನಡೆಯಬಹುದಾದ ಎಲ್ಲಾ ಬಗೆಯ ಹಿಂಸೆ, ಕ್ರೌರ್ಯ, ನೋವು, ಅಸಹಾಯಕತೆ ಅವಲಂಬನೆಗಳನ್ನೂ 'ಸಹಜ'ವೆಂಬಂತೆ ಬಿಂಬಿಸುವುದು. ಅದರೊಂದಿಗೆ ಹೆಣ್ಣೂ ಕೂಡ ಇಂದಿಗೂ ಕುಟುಂಬದ ಎಲ್ಲಾ ಹಿಂಸೆಗಳನ್ನೂ ಸಹಜವೆಂಬಂತೆ ಸಹಿಸುವ ವಿಧಾನವನ್ನು ಕಾಣಬಹುದು.

ಕುಟುಂಬದಲ್ಲಿ ಗಂಡು ಹೆಣ್ಣಿನ ಸ್ಥಾನ ನಿಗದೀಕರಣ ಶ್ರೇಣೀಕರಣದ ಹಿನ್ನೆಲೆಯಿಂದ ಕೂಡಿದ್ದು, ಗಂಡಿನದು ತಂದೆ, ಯಜಮಾನ, ಗಂಡ, ಮುಂತಾದ ಅಧಿಕಾರ ಪ್ರಧಾನ ನೆಲೆಗಳಾದರೆ ಹೆಣ್ಣಿನದು ಮಾತ್ರ ತಾಯಿ, ಹೆಂಡತಿ, ಸೊಸೆ, ಮಗಳು ಮುಂತಾದ ಗಂಡಿನ ಅಧೀನತೆಗೆ ಒಳಪಡುವ ಮಾದರಿಯದ್ದಾಗಿವೆ. ಆಧುನಿಕ ಸಂದರ್ಭದಲ್ಲಿಯೂ ಕೂಡ ಹೆಣ್ಣನ್ನು ಹೆರುವ ಕೆಲಸಕ್ಕಷ್ಟೇ ಸೀಮಿತಗೊಳಿಸಿ, ಮನೆ, ಕುಟುಂಬ, ಮಕ್ಕಳಿಗೆ ಸಂಬಂಧಿಸಿದ ಪ್ರಮುಖ ನಿರ್ಧಾರಗಳನ್ನು ತೆಗೆದುಕೊಳ್ಳುವ ಹೊಣೆಗಾರಿಕೆ ಗಂಡಿನದೇ ಎಂಬುದನ್ನು ಬಿ.ಟಿ. ಲಲಿತಾ ನಾಯಕ್‌ರವರ ಕವನ ಎತ್ತಿಹಿಡಿಯುತ್ತದೆ.

ಹೆತ್ತವಳು ಅಷ್ಟೇ ಅವ್ವ
ಬರೆದನು ಹಣೆಬರಹವ, ಅಪ್ಪ
ಎಲ್ಲ ಅವ್ವಂದಿರಿಗೂ
ಅವರಪ್ಪ ಅಜ್ಜರದೇ ಬರಹ.
ದೇವಲೋಕದಲೂ ಬ್ರಹ್ಮಪ್ಪನದೇ ಗುತ್ತಿಗೆ[13]

ಕುಟುಂಬದ ಯಜಮಾನಿಕೆಗೆ ಸಂಬಂಧಿಸಿದಂತೆ ಸಾಮಾನ್ಯವಾಗಿ ತಂದೆ ಅಥವಾ ಮನೆಯ ಹಿರಿಯ ಗಂಡು ಅದರ ಒಡೆತನವನ್ನು ಹೊಂದಿರುವುದು ಹಿಂದಿನಿಂದಲೂ ಚಾಲ್ತಿಯಲ್ಲಿರುವ ವಿಧಾನ. ಉತ್ಪಾದನಾ ಕ್ಷೇತ್ರದಲ್ಲಿ ತೊಡಗಿಕೊಂಡಿದ್ದ ಗಂಡಿಗೆ ಇದು ದಕ್ಕಿದ್ದರಲ್ಲಿ ಆಶ್ಚರ್ಯವೇನೂ ಇಲ್ಲ. ಆದರೆ ಕುಟುಂಬದ ಆರ್ಥಿಕ ಗಳಿಕೆಯಲ್ಲಿ ಹೆಣ್ಣು ಭಾಗವಹಿಸುತ್ತಿರುವ ಪ್ರಸ್ತುತ ಸಂದರ್ಭದಲ್ಲಿಯೂ ಕೂಡ ಗಂಡಿನ ಯಜಮಾನಿಕೆಯೇ ಮುಂದುವರಿಯುತ್ತಿದೆ. ಕುಟುಂಬದ ಆಗುಹೋಗುಗಳನ್ನು ಕುರಿತಂತೆ ನಿರ್ಧಾರಗಳನ್ನು ತೆಗೆದುಕೊಳ್ಳುವ, ವ್ಯವಹಾರವನ್ನು ನಡೆಸುವ ಅಧಿಕಾರ ಇಂದಿಗೂ ಕೂಡ ಗಂಡಿನದೇ ಆಗಿದೆ. ಕೆಲ ಸಂದರ್ಭಗಳಲ್ಲಿ ಹಿರಿಯ ಗಂಡಸು ಇಲ್ಲದಿದ್ದ ಪಕ್ಷದಲ್ಲಿ ಕುಟುಂಬದ ಇತರೆ ಪುರುಷನಿಗೆ ಆ ಅಧಿಕಾರ ವರ್ಗಾವಣೆಯಾಗುತ್ತದೆಯೇ ವಿನಃ ತಾಯಿ, ಪತ್ನಿ, ಮಗಳಿಗಲ್ಲ. ಈ ಮೂಲಕ ಪುರುಷ ಪ್ರಧಾನ ವ್ಯವಸ್ಥೆ ಕುಟುಂಬದಲ್ಲಿ ತನ್ನ ಯಾಜಮಾನ್ಯವನ್ನು ನಿರಂತರವಾಗಿ ಕಾಪಾಡಿಕೊಳ್ಳುವ ಸಲುವಾಗಿಯೇ ಗಂಡು ಹೆಣ್ಣಿನ ಸ್ಥಾನ ನಿಗದೀಕರಣಗೊಂಡಿರುವುದನ್ನು ತಿಳಿಯಬಹುದಾಗಿದೆ.

ಗಂಡಿಗೆ ಕುಟುಂಬ ಅಥವಾ ಮನೆ ನಿಲುಗಡೆಯ ತಂಗುದಾಣವಾದರೆ ಹೆಣ್ಣಿಗೆ ಮಾತ್ರ ಅದೇ ಸರ್ವಸ್ವವಾಗಿದೆ. ಅವಳು ಪಡೆಯಬಹುದಾದ ಎಲ್ಲಾ ಸಾಧನೆ, ಯಶಸ್ಸು, ಕೀರ್ತಿ ಅವಳ ಕುಟುಂಬ ನಿರ್ವಹಣೆಯ ಸಾಮರ್ಥ್ಯವನ್ನೇ ಅವಲಂಬಿಸಿರುತ್ತದೆ. ಹೆಣ್ಣು ಆಧುನಿಕ ಯುಗದಲ್ಲಿ ಕುಟುಂಬದ ಹೊರಗೆ ದುಡಿಯುವ ಸಂದರ್ಭದಲ್ಲಿಯೂ ಕೂಡ ಅವಳ ಪ್ರಥಮ ಆದ್ಯತೆ ಕುಟುಂಬವೇ ಆಗಿರುತ್ತದೆ.

ಆದ್ದರಿಂದಲೇ ಅವಳ ಎಲ್ಲಾ ಕಾರ್ಯಚಟುವಟಿಕೆಗಳೂ, ಶ್ರಮ, ಬಯಕೆ, ಕನಸು ಎಲ್ಲವೂ ಕುಟುಂಬದ ಒಳಿತನ್ನು ಕಾಪಾಡುವ ಸಲುವಾಗಿಯೇ ನಿರ್ಧಾರಿತವಾಗುತ್ತವೆ. ಕುಟುಂಬದ ಜವಾಬ್ದಾರಿಯನ್ನು ಹೆಣ್ಣಿಗೆ ನೀಡುವುದರ ಮೂಲಕ ಪುರುಷ ಪ್ರಧಾನ ವ್ಯವಸ್ಥೆಯು ತನ್ನ ಯಾಜಮಾನ್ಯದ ನೆಲೆಗಳನ್ನು ಕುಟುಂಬದ ಆಚೆಗೂ ಚಾಚಲು ಸಾಧ್ಯವಾಗಿದೆ. ಕುಟುಂಬ ನಿರ್ವಹಣೆಯ ಹೊಣೆ ಹೊತ್ತ ಹೆಣ್ಣು ಇತ್ತ ಕುಟುಂಬದಲ್ಲಿ ತನ್ನ ನೆಲೆ ಕಂಡುಕೊಳ್ಳಲಾಗದೆ, ಕುಟುಂಬದ ಹೊರಗೆ ತನ್ನನ್ನು ಸಂಪೂರ್ಣ ತೊಡಗಿಸಿಕೊಳ್ಳಲಾಗದೆ ತನ್ನ ಮಿತಿಗಳನ್ನು ತಾನೇ ಒಪ್ಪಿ ಅಧೀನತೆಗೆ ಒಳಪಡುವಂತಾಗಿದೆ. ಕುಟುಂಬದ ನಿರ್ವಹಣೆ ಎಲ್ಲಾ ಕಾಲದಲ್ಲಿಯೂ ಹೆಣ್ಣಿನ ಪ್ರಥಮ ಆದ್ಯತೆಯಾಗಿದ್ದು ಹೊರಗೆ ದುಡಿಯುವ ಸಂದರ್ಭದಲ್ಲಿಯೂ ಕೂಡ ಕುಟುಂಬದ ಸಂಪೂರ್ಣ ಹೊಣೆಗಾರಿಕೆ ಹೆಣ್ಣಿನದೇ. ಇದು ಅವಳ ಕೌಟುಂಬಿಕ ಬದ್ಧತೆಯನ್ನು ನಿರೀಕ್ಷಿಸುವುದು ಮಾತ್ರವಲ್ಲದೆ ಅವಳ ಮೇಲೆ ಮತ್ತಷ್ಟು ಒತ್ತಡವನ್ನೂ ಕೂಡ ಹೇರುತ್ತದೆ.

ಹೆಣ್ಣನ್ನು ಕುಟುಂಬಕ್ಕೆ ಮಾತ್ರ ಸೀಮಿತಗೊಳಿಸುವ ಪುರುಷ ಪ್ರಧಾನ ಹುನ್ನಾರ 'ಹೊಸ್ತಿಲು', 'ಬೇಲಿ' ಮುಂತಾದ ಪರಿಕಲ್ಪನೆಗಳ ಮೂಲಕ ಅತ್ಯಂತ ಯಶಸ್ವಿಯಾಗಿ ರೂಪುಗೊಂಡಿದೆ. ಮನೆಯ 'ಹೊಸ್ತಿಲನ್ನು' ಹೆಣ್ಣು ದಾಟಬಾರದ, ದಾಟಲಾಗದ ಲಕ್ಷ್ಮಣರೇಖೆಯಂತೆ ಗುರುತಿಸುವ ಕ್ರಮದಿಂದಾಗಿ ಅವಳ ಎಲ್ಲಾ ಸಾಧನೆ ಚಟುವಟಿಕೆಗಳೂ ಕೂಡ ಕುಟುಂಬಕ್ಕೆ ಮಾತ್ರ ಸೀಮಿತವಾಗಿರುವಂತಾಗಿದೆ. ಆಧುನಿಕ ಸಂದರ್ಭದಲ್ಲಿ ಹೆಣ್ಣು ಹೊರಗಿನ ದುಡಿಮೆಯಲ್ಲಿ ಭಾಗವಹಿಸುವ ಸಂದರ್ಭದಲ್ಲಿಯೂ ಕೂಡ ಹೊಸ್ತಿಲಿನ ರೂಪಕ ಹೆಣ್ಣಿನ ಬಂಧನದ ಮಾರ್ಗವೇ ಆಗಿದೆ. ಅಲ್ಲದೆ ಅದು ಹಿಂದಿನ ರೀತಿಯಲ್ಲಿಯೇ ಮುಂದುವರೆಯುತ್ತಿದೆ ಎಂಬುದನ್ನು ಶಶಿಕಲಾ ವೀರಯ್ಯಸ್ವಾಮಿಯವರ ಗುಬ್ಬಿಮನಿ ಕವನದಲ್ಲಿ ಗುರುತಿಸಬಹುದು.

ಅಲ್ಲಾ ಮಾವಾ,
ನೆನಪೈತೇನ ನಿನಗ?
ನಾ ಸಣ್ಣಾಕಿದ್ದಾಗ
ಮಳಿ ಬಂದ ನಿಂತ
ಹಸೀ ಮಣ್ಣಾಗ
ಗುಬ್ಬಿಮನಿ ಕಟ್ಟಿದ್ಯಾ
ನೀ ಅದಕೊಂದು ಬೇಲಿಕಟ್ಟಿ
ನನ್ನ ಒಳಗ ಕುಂದರಸಿ
"ಬೇಲಿ ದಾಟಿ ಹೊರಗ ಬಂದ್ರೆ
ಕಾಲ ಮುರಿದು ಕೈಯ್ಯಾಗ
ಕೊಡ್ತೀನಿ ನೋಡ"
ಅಂತ ಹೆದರಿಸ್ತಿದ್ದೆಲ್ಲ?[೧೩]

ಎನ್ನುವ ವಿವರಗಳು ಬಾಲ್ಯದ ಆಟ ಪಾಟಗಳು ವಾಸ್ತವ ಜೀವನದೊಂದಿಗೆ ತಳಕು ಹಾಕಿಕೊಂಡಿರುವುದನ್ನೂ, ಆಟದ ನಿರ್ಬಂಧಗಳೇ ನಿಜ ಜೀವನದ ಮಿತಿಗಳಾಗಿರುವುದನ್ನೂ ಇಲ್ಲಿ ವ್ಯಂಗ್ಯದ ದಾಟಿಯಲ್ಲಿ ಟೀಕಿಸಲಾಗಿದೆಯಾದರೂ, ಇಂದಿಗೂ ಹೆಣ್ಣನ್ನು ಕುಟುಂಬದ

ನಿಯಂತ್ರಣದಲ್ಲಿಡುವ ಪಿತೃಸಂಸ್ಕೃತಿಯ ಮೌಲ್ಯವ್ಯವಸ್ಥೆ ಭಿನ್ನಭಿನ್ನ ರೂಪಗಳಲ್ಲಿ ಚಾಲ್ತಿಯಲ್ಲಿರುವುದನ್ನು ತಿಳಿಸುತ್ತದೆ.

ಹೆಣ್ಣಿಗೆ ಹೊರಗಿನ ದುಡಿಮೆ ಅನಿವಾರ್ಯವಾದ ಸಂದರ್ಭದಲ್ಲಿಯೂ ಕೂಡ ಹೊಸ್ತಿಲನ್ನು ದಾಟುವುದು ಒಂದು ನಿರ್ಬಂಧವೇ ಆಗಿದೆ. ಮೇಲ್ನೋಟಕ್ಕೆ ಆ ಕ್ರಮ ಜಾರಿಯಲ್ಲಿಲ್ಲ ಎಂಬಂತೆ ಕಂಡುಬಂದರೂ ಕೂಡ ಹೆಣ್ಣು ಸ್ವತಂತ್ರ ಜೀವನ ನಡೆಸಲು, ತನ್ನ ಇಚ್ಚಾನುಸಾರವಾಗಿ ಮನೆಯಿಂದ ಹೊರನಡೆಯಲು, ಕುಟುಂಬದ ಹೊರಗಿನ ಬದುಕನ್ನು ತನ್ನ ಆಯ್ಕೆಗೆ ತಕ್ಕಂತೆ ರೂಪಿಸಿಕೊಳ್ಳಲು ಯಾವುದೇ ರೀತಿಯ ಅವಕಾಶಗಳು ಇರುವುದಿಲ್ಲ. ದುಡಿಮೆಯ ಕಾರಣದಿಂದ ಹೊಸ್ತಿಲನ್ನು ದಾಟಿ ಹೊರಬಂದ ಸಂದರ್ಭದಲ್ಲಿಯೂ ಕೂಡ ನಿಗದಿತ ಸಮಯದಲ್ಲಿ ಕುಟುಂಬದ ಇತರೆ ಸದಸ್ಯರೊಂದಿಗೆ ಸೇರಿಕೊಳ್ಳುವುದನ್ನು ಕಾಣಬಹುದು. ಅಲ್ಲದೆ ಹೊಸ್ತಿಲನ್ನು ದಾಟುವುದು ಎಂಬುದು ಹೆಣ್ಣು ಕುಟುಂಬದಿಂದ ತಾತ್ಕಾಲಿಕವಾಗಿ ಹೊರನಡೆಯಬಹುದಾದ ಅವಕಾಶವೇ ವಿನ: ಶಾಶ್ವತವಾಗಿ ಕುಟುಂಬದಿಂದ ಬಿಡುಗಡೆ ಎಂಬುದಿಲ್ಲ. ಈ ಹಿನ್ನೆಲೆಯಲ್ಲಿ 'ಹೊಸ್ತಿಲು ದಾಟುವಿಕೆ' ಎಂಬುದು ಹೆಣ್ಣಿನ ಮಟ್ಟಿಗೆ ಇಂದಿಗೂ ಕೂಡ ಪುರುಷಾಪೇಕ್ಷಿತ ಕಾರ್ಯಮಾದರಿಯಲ್ಲಿಯೇ ಕೆಲಸ ಮಾಡುತ್ತಿರುವುದನ್ನು ಕಾಣಬಹುದು. ಇದು ಮೌಲ್ಯವ್ಯವಸ್ಥೆಯ ನಿರಂತರತೆಯನ್ನು ಸೂಚಿಸುತ್ತದೆ. ಒಟ್ಟಿನಲ್ಲಿ ಕುಟುಂಬವೇ ಹೆಣ್ಣಿನ ಅನನ್ಯತೆಯನ್ನು ಗುರುತಿಸುವ ಮುಖ್ಯ ಆಕರವಾಗಿರುವುದನ್ನು ಇಂದಿಗೂ ಕೂಡ ಗುರುತಿಸಬಹುದು. ಹೆಣ್ಣಿನ ಯಶಸ್ಸು, ಸಾಧನೆ, ಅವಳ ಕಾರ್ಯ ಕ್ಷಮತೆಯನ್ನು ಗುರುತಿಸುವ ಸಂದರ್ಭದಲ್ಲಿ ಅವಳ ಕೌಟುಂಬಿಕ ಬದುಕಿನ ಹಿನ್ನೆಲೆಯನ್ನು ಗಮನಿಸುವ ಕಾರ್ಯಮಾದರಿ ಇಂದಿಗೂ ಕೂಡ ಚಾಲ್ತಿಯಲ್ಲಿರುವುದನ್ನು ಗುರುತಿಸಬಹುದು.

ಕುಟುಂಬದ 'ಗೌರವ ಕಾಪಾಡುವ ಹೊಣೆಗಾರಿಕೆ' ಎಂಬ ಮೌಲ್ಯವನ್ನೂ ಕೂಡ ಹೆಣ್ಣಿನ ಮೇಲೇ ಹೇರಲಾಗಿದ್ದು, ಅವಳ ಪ್ರತಿಯೊಂದು ಕ್ರಿಯೆ, ಚಲನವಲನಗಳನ್ನೂ ಕೂಡ ನಿಯಂತ್ರಿಸಲಾಗುತ್ತದೆ. ವಿವಾಹ ಪೂರ್ವ ಹಾಗೂ ವಿವಾಹ ನಂತರದಲ್ಲಿ ಹೆಣ್ಣಿಗೆ ತನ್ನ ಸ್ವ ಅಸ್ತಿತ್ವವನ್ನು ಕುಟುಂಬದ ಮೂಲಕ ಗುರುತಿಸಿಕೊಳ್ಳಲು ಸಾಧ್ಯವಿಲ್ಲದಿದ್ದರೂ ಕೂಡ 'ಕುಟುಂಬದ ಹಿತ', ' ಕುಟುಂಬದ ಗೌರವ'ದ ದೃಷ್ಟಿಯಿಂದ ಅವಳನ್ನು ತನ್ನ ಅಪೇಕ್ಷೆಗೆ ತಕ್ಕಂತೆ ಒಳಪಡಿಸಿಕೊಂಡಿರುವುದನ್ನು ಗುರುತಿಸಬಹುದು. ಪ್ರತಿಭಾ ನಂದಕುಮಾರ್‌ರವರ 'ನಾನು' ಕವನ ಹೆಣ್ಣಿಗೆ ಸ್ವ ಅಸ್ತಿತ್ವವೇ ಇಲ್ಲದ ಸ್ಥಿತಿಯನ್ನು ಕುರಿತು ಚರ್ಚಿಸುವುದರೊಂದಿಗೆ ಮೌಲ್ಯವ್ಯವಸ್ಥೆಯ ಹುನ್ನಾರವನ್ನು ಬಯಲಿಗೆಳೆಯಲು ಪ್ರಯತ್ನಿಸುತ್ತದೆ.

ನನಗೆ ಅದೂ ಮನೆಯಲ್ಲ
ಇದೂ ಮನೆಯಲ್ಲ
ನನ್ನದೊಂದು ಮನೆಯೇ ಇಲ್ಲ
ಆದರೂ ಇದನ್ನು ಬಿಟ್ಟು ಹೋದರೆ
'ಮನೆಯ ಮಾನ' ಕಳೆಯುವ ಹೆದರಿಕೆ.
ಹಾಗಾಗಿ ಇದ್ದಲ್ಲೇ ಇರುತ್ತೇನೆ.
ಹಾಗೇ ಕೆಸರೊಗಳಗೆ ಮುಳುಗುತ್ತಾ
ಕೊನೆಗೊಮ್ಮೆ ಇಲ್ಲವಾಗುತ್ತೇನೆ.[೧೪]

ಎಲ್ಲಾ ಸಂದರ್ಭದಲ್ಲಿಯೂ ಕೂಡ ಗಂಡ ಬೇರೆಡೆಗೆ ಹೋದರೆ, ಮಕ್ಕಳು ಹಾಳಾದರೆ ಹೆಣ್ಣನ್ನೇ ದೂಷಿಸುವ ವಿಧಾನವನ್ನು ಇದು ಪ್ರಶ್ನಿಸುತ್ತದೆ.

**ವಿವಾಹ ಮತ್ತು ದಾಂಪತ್ಯ** : ಸಾಮಾಜಿಕ ಸಂದರ್ಭದಲ್ಲಿ ಹೆಣ್ಣು ತನ್ನ ಅಸ್ತಿತ್ವಕ್ಕೊಂದು ಅಧಿಕೃತತೆಯನ್ನೂ, ಸಾಮಾಜಿಕ ಮಾನ್ಯತೆಯನ್ನೂ ಪಡೆದುಕೊಳ್ಳಬೇಕಾದರೆ ಅವಳು 'ವಿವಾಹ'ವೆಂಬ ಸಂಸ್ಥೆಗೆ ಒಳಪಟ್ಟಿರಬೇಕು. ಇದರಿಂದ ಏರ್ಪಡುವ ದಾಂಪತ್ಯ ಗಂಡು, ಹೆಣ್ಣು ಇಬ್ಬರಿಗೂ ಅನಿವಾರ್ಯವೂ, ಅಗತ್ಯವೂ, ಪರಸ್ಪರ ಪೂರಕವೂ ಆಗಿರುವ ಸಂದರ್ಭದಲ್ಲಿಯೂ ವಿವಾಹದಿಂದಾಗಿ ಹೆಣ್ಣಿನ ಮೇಲೆ ಹೇರಲ್ಪಡುವ ಗೃಹಿಣಿತ್ವ ಅವಳ ವ್ಯಕ್ತಿತ್ವಕ್ಕೆ ದೊರಕಬಹುದಾದ ಅಧಿಕೃತತೆಯನ್ನು ನಾಶಗೊಳಿಸಿ ಅವಳನ್ನು ಕುಟುಂಬದ, ದಾಂಪತ್ಯದ ಚೌಕಟ್ಟಿಗೆ ಒಳಪಡಿಸುತ್ತದೆ. ಇದರಿಂದಾಗಿ ಹೆಣ್ಣಿಗೆ ದೊರೆಯುವ 'ಗೃಹಿಣಿ' ಎಂಬ ಪಟ್ಟ ಮೇಲ್ನೋಟಕ್ಕೆ ಮನೆಯ 'ಅಧಿಕಾರಿ'ಎಂಬ ಅರ್ಥವನ್ನು ಕೊಟ್ಟರೂ ಅದು ಮೂಲತ: ಹೆಣ್ಣನ್ನು ಗಂಡಿನ ಅಧೀನತೆಗೆ ಒಳಪಡಿಸಿಕೊಳ್ಳುವ ಆಶಯದ್ದೇ ಆಗಿದೆ. ಆದುದರಿಂದಾಗಿಯೇ ಮಾನವ ಸಮುದಾಯ ಎಷ್ಟೇ ಆಧುನಿಕವಾದರೂ ಕುಟುಂಬದ, ಗೃಹಿಣಿತ್ವದ ಸಂಬಂಧಾಧಾರಿತ ಹೆಣ್ಣಿನ ಅಸಾಹಯಕತೆಯನ್ನಾಗಲೀ, ಅಧೀನತೆಯನ್ನಾಗಲೀ, ಹೋಗಲಾಡಿಸಲು ಸಾಧ್ಯವಾಗುತ್ತಿಲ್ಲ. ಈ ಕುಟುಂಬ ವ್ಯವಸ್ಥೆಯನ್ನು ಬಲವಂತವಾಗಿ, ಬಲವಾಗಿ ನಿಲ್ಲಿಸುತ್ತಿರುವುದು ವಿವಾಹ ಎಂಬ ವ್ಯವಸ್ಥೆಯೇ. ಮದುವೆ ಗಂಡು ಹೆಣ್ಣು ಇಬ್ಬರಿಗೂ ಅಗತ್ಯವಾದರೂ ಈ ಮದುವೆಯಿಂದಾಗಿ ದೌರ್ಜನ್ಯಕ್ಕೆ ಗುರಿಯಾಗುವುದು, ತನ್ನ ಅಸ್ತಿತ್ವವನ್ನು ಕಳೆದುಕೊಳ್ಳುವುದು ಸಾಮಾನ್ಯವಾಗಿ ಮಹಿಳೆಯರೆ.

ಗಂಡು ಹೆಣ್ಣಿನ ಸಹಬಾಳ್ವೆ ಹಾಗೂ ಸಹಚರ್ಯದ ಮೂಲ ಉದ್ದೇಶ ಕಾಮ ಮತ್ತು ಲೈಂಗಿಕ ತೃಪ್ತಿ. ಇದನ್ನು ಸಾಮಾಜೀಕರಣ ಪ್ರಕ್ರಿಯೆ ವಿವಾಹ ಎಂದು ಕರೆಯುತ್ತದೆ. ಇದರೊಂದಿಗೆ ಗಂಡು ಹೆಣ್ಣಿನ ಲೈಂಗಿಕ ಬದ್ಧತೆಯನ್ನು ನಿರೀಕ್ಷಿಸಲಾಗುತ್ತದೆ. ಲೈಂಗಿಕತೆ ಗಂಡು ಹೆಣ್ಣು ಇಬ್ಬರಿಗೂ ಕೂಡ ಸಮಾನ ಅಗತ್ಯ ಹಾಗೂ ಅಭಿರುಚಿಯದ್ದಾದರೂ ವಿವಾಹದ ನಿಯಮಾವಳಿಗಳು ಗಂಡು ಮತ್ತು ಹೆಣ್ಣಿಗೆ ಅದನ್ನು ಪ್ರತ್ಯೇಕ ಎಂಬಂತೆ ಬೋಧಿಸುತ್ತದೆ. ಜೊತೆಗೆ ವಿವಾಹವೆಂಬ ಸಂಸ್ಥೆಯ ಮೂಲಕ ರೂಪುಗೊಳ್ಳುತ್ತಿರುವ ಎಲ್ಲಾ ಬಗೆಯ ಮೌಲ್ಯಗಳೂ ಹೆಣ್ಣಿನ ಅಧೀನತೆಯನ್ನು ಪುಷ್ಟೀಕರಿಸಿ, ಅವಳ ಇಡೀ ವ್ಯಕ್ತಿತ್ವವನ್ನು ಗಂಡಿಗೆ, ಕುಟುಂಬಕ್ಕೆ ನಿಷ್ಠವಾಗಿರಿಸುವ, ಆ ಚೌಕಟ್ಟಿನೊಳಗೇ ಹೆಣ್ಣು ತನ್ನ ಬದುಕಿನ ಸಮಸ್ತವನ್ನೂ ಕಂಡುಕೊಳ್ಳುವ ಹಾಗೂ ಪಡೆದುಕೊಳ್ಳುವ ತರಬೇತಿಯನ್ನು ಮಾನ್ಯಮಾಡುತ್ತವೆ.

ಹಿಂದೆ ವಿವಾಹಕ್ಕೆ ಆಧ್ಯಾತ್ಮದ ನೆಲೆಗಟ್ಟನ್ನು ನೀಡುವುದರ ಮೂಲಕ ಹೆಣ್ಣನ್ನು ಗಂಡಿನ ಅಧೀನಕ್ಕೆ ಒಳಪಡಿಸಲಾಗಿತ್ತು. ದೈವಪ್ರೇರಣೆ, ವಿಧಿಲಿಖಿತ, ಮದುವೆ ಸ್ವರ್ಗದಲ್ಲಿಯೇ ನಡೆಯುತ್ತದೆ, ಜನ್ಮಾಂತರದ ಬಂಧ ಎಂಬ ನಂಬಿಕೆಗಳನ್ನು ಬಿತ್ತುವುದರ ಮೂಲಕ ಗಂಡಿನ ಪ್ರಾಧಾನ್ಯತೆಯನ್ನು ಒಪ್ಪಿ ಹೆಣ್ಣು ಬಾಳಬೇಕಾದ ಅನಿವಾರ್ಯತೆಯನ್ನು ಸೃಷ್ಟಿಸಲಾಗಿತ್ತು. ಆದುದರಿಂದಾಗಿ ವಿವಾಹ ಬಂಧನದಿಂದ ಹೊರಬರುವುದು, ವಿವಾಹೇತರ ಜೀವನವನ್ನು ರೂಪಿಸಿಕೊಳ್ಳುವುದು ಹೆಣ್ಣಿನ ಮಟ್ಟಿಗೆ ನಿಷೇಧಿಸಲ್ಪಟ್ಟಿತ್ತು.

ಗಂಡು ಹೆಣ್ಣು ಒಮ್ಮೆ ವಿವಾಹಬಂಧನಕ್ಕೆ ಒಳಗಾದರೆ ಎಂತಹ ಪರಿಸ್ಥಿತಿಯಲ್ಲಿಯೂ ಹೆಣ್ಣುಮಾತ್ರ ಅದರಿಂದ ಹೊರಬರಲು ಸಾಧ್ಯವೇ ಇಲ್ಲದ ಸ್ಥಿತಿ ಬಹುಕಾಲದವರೆಗೂ ಚಾಲ್ತಿಯಲ್ಲಿತ್ತು. ಆಧುನಿಕ ಸಂದರ್ಭದಲ್ಲಿ ವಿವಾಹ ವಿಚ್ಛೇದನಕ್ಕೆ ಅವಕಾಶವಿದೆಯಾದರೂ ಹಳ್ಳಿಗಾಡಿನ, ಅಶಿಕ್ಷಿತ ಮಹಿಳೆಯರು ಕುಟುಂಬ ವ್ಯವಸ್ಥೆಯಿಂದ ಹೊರಬರುವುದು ಕಷ್ಟಸಾಧ್ಯ. ಹಿಂದಿನಿಂದಲೂ ಗಂಡಿಗೆ ಮಾತ್ರ ವಿವಾಹ, ದಾಂಪತ್ಯ ಜೀವನ ಆಯ್ಕೆಯ ನೆಲೆಯದ್ದಾಗಿದ್ದು, ವಿವಾಹಪೂರ್ವ ಹಾಗೂ ವಿವಾಹನಂತರದಲ್ಲಿ ಯಾವಾಗಬೇಕಾದರೂ ಅದರಿಂದ ಹೊರಬಂದು ಸ್ವತಂತ್ರ ಬದುಕನ್ನು ರೂಪಿಸಿಕೊಳ್ಳುವ ಮುಕ್ತ ಅವಕಾಶಗಳಿರುತ್ತವೆ. ಈ ಮೂಲಕ ವೈವಾಹಿಕ ಬಂಧನವನ್ನು ಒಂದು ಸಾಮಾಜಿಕ ಮೌಲ್ಯವಾಗಿಸಿ, ಹೆಣ್ಣು ಅದರ ಎಲ್ಲಾ ನಿಯಮಗಳಿಗೂ ಪ್ರಾಮಾಣಿಕವಾಗಿ ಬದ್ಧರಾಗಿ ನಡೆದುಕೊಳ್ಳುವಂತೆ ಮಾರ್ಗದರ್ಶನ ನೀಡಲಾಗುತ್ತಿತ್ತು. ಬೆಳಗೆರೆ ಜಾನಕಮ್ಮನವರ 'ಕಲ್ಯಾಣ' ಕವನ ವಿವಾಹದ ಮೂಲಕ ಮೌಲ್ಯವ್ಯವಸ್ಥೆಯ ಚೌಕಟ್ಟಿನೊಳಗೆ ಗಂಡು ಹೆಣ್ಣು ಎಂಬ ಭೇದವಿಲ್ಲದೆ ಬದುಕಬೇಕಾದ ಅನಿವಾರ್ಯತೆಯನ್ನು ಅತ್ಯಂತ ಸಹಜ ಎಂಬಂತೆ ಎತ್ತಿಹಿಡಿಯುತ್ತದೆ.

ತತ್ವವೆಲ್ಲವು ಅಡಗಿಕೊಂಡಿದೆ
ಮಾನವರ ದಾಂಪತ್ಯದಿ
ಎರಡನೊಂದಾಗಿಸುವ ಸಂಗಮ
ಕ್ಷೇತ್ರವೀ ಸಂಸಾರವು.[೧೫]

ಎನ್ನುತ್ತಾರೆ. ಆದರೆ ಪಿತೃಪ್ರಧಾನ ಮೌಲ್ಯವ್ಯವಸ್ಥೆ ಮಾತ್ರ ಇದನ್ನು ತನ್ನ ಅನುಕೂಲಕ್ಕೆ ತಕ್ಕಂತೆ ಮಾರ್ಪಡಿಸಿಕೊಂಡಿದೆ.

ವಿವಾಹದ ಮೂಲಕ ಹೆಣ್ಣನ್ನು ವಿಧಿಬದ್ಧವಾಗಿ ಹಾಗೂ ಸಾಮಾಜಿಕ ಒಪ್ಪಿತ ಮಾದರಿಯಲ್ಲಿ ಗಂಡಿನ ಅಧೀನತೆಗೆ ಒಳಪಡಿಸಲಾಗುತ್ತದೆ. ಇಲ್ಲಿ ಹೆಣ್ಣಿನ ಶಕ್ತಿ, ಸಾಮರ್ಥ್ಯ, ಬಯಕೆ, ಅಭಿವ್ಯಕ್ತಿ, ಲೈಂಗಿಕತೆ ಎಲ್ಲವೂ ಕೂಡ ಗಂಡಿನ ಹಿಡಿತಕ್ಕೆ ಒಳಪಟ್ಟಿದ್ದಾಗಿರುತ್ತದೆ. ವಿವಾಹಿತ ಹೆಣ್ಣು ತನ್ನ ಗಂಡನ ಜೊತೆಯಲ್ಲಿ ಅವನ ವ್ಯಕ್ತಿತ್ವದ ನೆರಳಿನಲ್ಲಿ ಬದುಕುವುದು ಕಡ್ಡಾಯ. ತಂದೆಯ ನಂತರ ಗಂಡ ರಕ್ಷಕನ ಸ್ಥಾನವನ್ನು ವಹಿಸುತ್ತಾನೆ. ಈ ಮೂಲಕ ಹೆಣ್ಣಿನ ಇಡೀ ಬದುಕನ್ನು ಕುಟುಂಬ, ದಾಂಪತ್ಯ, ಗಂಡ, ಮನೆ, ಮಕ್ಕಳ ಸೇವೆಗೆಂದೇ ಸೀಮಿತಗೊಳಿಸಲಾಗುತ್ತದೆ. ಇದರ ಜೊತೆಗೆ ಹೆಣ್ಣನ್ನು ವಿವಾಹ ಬಂಧನದಲ್ಲಿ ಶಾಶ್ವತವಾಗಿ ನೆಲೆಗೊಳಿಸುವ ನಿಟ್ಟಿನಲ್ಲಿ 'ಶೀಲ', 'ಪಾತಿವ್ರತ್ಯ' ಎಂಬ ಮೌಲ್ಯಗಳನ್ನು ಸೃಷ್ಟಿಸಿ, ಹೆಣ್ಣು ಕಡ್ಡಾಯವಾಗಿ ಈ ಮೌಲ್ಯಗಳನ್ನು ಕಾಯ್ದುಕೊಳ್ಳುವಂತೆ ಪ್ರೇರೇಪಿಸಲಾಗುತ್ತದೆ. ಜೊತೆಗೆ ಒಳಿತು, ಕೆಡುಕಿನ, ಸರಿ, ತಪ್ಪಿನ ಪಾತ್ರಗಳನ್ನು ಸೃಷ್ಟಿಸುವುದರ ಮೂಲಕ ಮಹಿಳಾ ಸಮುದಾಯದಲ್ಲಿಯೇ ಬಿರುಕುಗಳನ್ನು ಮೂಡಿಸಲಾಗಿದೆ. ತನ್ನ ಪಾವಿತ್ರ್ಯವನ್ನು ಕಳೆದುಕೊಂಡ ಹೆಣ್ಣನ್ನು ಸ್ತ್ರೀ ಸಮುದಾಯದಿಂದಲೇ ಹೊರಗಿಡುವ, ಅವಳ ಇಡೀ ವ್ಯಕ್ತಿತ್ವವನ್ನೇ ಅಲ್ಲಗಳೆಯುವ ಮೂಲಕ ಪಾತಿವ್ರತ್ಯ, ಶೀಲದಂತಹ ಮೌಲ್ಯಗಳಿಗೆ ಹೆಚ್ಚಿನ ಮಾನ್ಯತೆಯನ್ನು ನೀಡಲಾಗಿದೆ.

ಕುಲಗೆಟ್ಟ ಹೆಣ್ಣಿವಳು ಅನ್ನದಿರಿ ಜೋಕೆ
ಹುಳುಕು ತುಂಬಿಹುದಂತೆ ಗೊಡವೆ ನಮಗೇಕೆ
ಪತಿಹೀನೆಯಾದವಳು  ಗತಿಹೀನೆಯಾದವಳು
ಸುತರಿಲ್ಲದೇ ಮುಕ್ತಿ ಹೀನೆಯಾದವಳು
ನರಕದೊಳು ಬೀಳುವಳೋ ನರಿ ನಾಯಿಯಾಗುವಳೋ
ಹರಿಯ ಸೇವೆಗೆ ಪಾಪಿ ಸಲ್ಲದಾಗಿಹಳು[೧೨]

ಎನ್ನುವ ಬೆಳಗೆರೆ ಜಾನಕಮ್ಮನವರ ಕವನ ಮೌಲ್ಯ ಸಂರಚನೆಯ ವಿಧಾನವನ್ನು ತಿಳಿಯಲು ಸಹಾಯಕವಾಗುತ್ತದೆ. ಒಂದು ಕಡೆ ಪಾತಿವ್ರತ್ಯ ಹೆಣ್ಣು ಕಾಯ್ದುಕೊಳ್ಳಲೇ ಬೇಕಾದ ಮೌಲ್ಯವಾಗಿ ಕಂಡುಬಂದರೆ ಮತ್ತೊಂದೆಡೆ ಅದಕ್ಕೆ ಒಳಗಾಗದ ಹೆಣ್ಣು ಅನುಭವಿಸಬೇಕಾದ ಕಷ್ಟ, ಕೋಟಲೆಗಳ ಲೋಕವನ್ನು ತೆರೆದಿಡುತ್ತದೆ. ಜೊತೆಗೆ ಸ್ವರ್ಗ ನರಕಗಳ ಕಲ್ಪನೆಯ ಮೂಲಕ ಈ ಮೌಲ್ಯವ್ಯವಸ್ಥೆಯನ್ನು ಮತ್ತಷ್ಟು ಗಟ್ಟಿಗೊಳಿಸುವ ವಿಧಾನವನ್ನು ಕಾಣಬಹುದು. ಎಲ್ಲಕ್ಕಿಂತ ಮುಖ್ಯವಾಗಿ ಇಂತಹವರ ಬಗೆಗೆ ತನಗಿರುವ ಸಹಜ ಮರುಕ ಸಹಾನುಭೂತಿಯನ್ನೂ ಕೂಡ ವ್ಯಕ್ತಪಡಿಸಲು ಸಾಧ್ಯವಾಗದ ಪರಿಸ್ಥಿತಿಯ ಅನಾವರಣ ಕೂಡ ಈ ಕವನದಲ್ಲಿದೆ. ಇದರಿಂದಾಗಿ ಹೆಣ್ಣು ತನ್ನ ಸಹಜ ವ್ಯಕ್ತಿತ್ವವನ್ನು ಕಳೆದುಕೊಂಡು ಪಿತೃಪ್ರಧಾನ ಮೌಲ್ಯವ್ಯವಸ್ಥೆಯ ಆಶಯಕ್ಕೆ ತಕ್ಕಂತೆ ತನ್ನ ಬದುಕನ್ನು ರೂಪಿಸಿಕೊಳ್ಳಬೇಕಾದ ಸಾಮಾಜಿಕ ಅನಿವಾರ್ಯತೆಯನ್ನು ಎತ್ತಿಹಿಡಿಯುತ್ತದೆ. ಇದನ್ನು ಕುರಿತಂತೆ ಚಲಂ "ಪಾತಿವ್ರತ್ಯದಿಂದ ಸ್ತ್ರೀಯಲ್ಲಿ ಧೈರ್ಯ ,ಸ್ವಾತಂತ್ರ್ಯ, ಪ್ರಾಮಾಣಿಕತೆ, ಧೀರತ್ವ, ಉದಾರ ಲೋಕಜ್ಞಾನ, ಶಿಕ್ಷಣ, ಆರೋಗ್ಯ, ಚಾತುರ್ಯ, ಮುಂತಾದ ಗುಣಗಳೆಲ್ಲ ಹೋದವೆಂದು"[೧೨] ಹೇಳುತ್ತಾರೆ. ಮೌಲ್ಯವ್ಯವಸ್ಥೆಯ ಹೆಸರಿನಲ್ಲಿ ಹೆಣ್ಣನ್ನು ಅಜ್ಞಾನ, ಅಂಧಕಾರದ ಕೂಪಕ್ಕೆ ತಳ್ಳಿರುವ ಪಿತೃಪ್ರಧಾನ ವ್ಯವಸ್ಥೆಯ ಲಿಂಗರಾಜಕಾರಣದ ಧೋರಣೆಯನ್ನು ವಿವರಿಸುವುದರೊಂದಿಗೆ ಅದರಿಂದ ಹೆಣ್ಣಿನ ಜೀವನದಲ್ಲಾದ ಮಹತ್ವದ ಪಲ್ಲಟಗಳನ್ನೂ, ಸ್ತ್ರೀ ಶೋಷಣೆಯ ಮಜಲುಗಳನ್ನೂ ಈ ಹೇಳಿಕೆ ಅನಾವರಣಗೊಳಿಸುತ್ತೆ. ಮಹಿಳಾ ಕಾವ್ಯ ದೈಹಿಕ ಶುದ್ಧತೆಯ ಹೆಸರಿನಲ್ಲಿ ಹೆಣ್ಣಿನ ಮೇಲೆ ನಡೆಯುತ್ತಿರುವ ಮೌಲ್ಯ ವ್ಯವಸ್ಥೆಯ ನಿರಂತರತೆಯನ್ನೂ, ಹೆಣ್ಣು ಅದನ್ನು ಅಸಹಾಯಕವಾಗಿ ಒಪ್ಪಿ ನಡೆಯಬೇಕಾದ ಅನಿವಾರ್ಯತೆಯನ್ನೂ ಎತ್ತಿಹಿಡಿಯುತ್ತದೆ. ಶಶಿಕಲಾ ವೀರಯ್ಯಸ್ವಾಮಿ "ಸೀರೆಯ ಸೆರಗು ಜಾರದಂತೆ ಕಳಸ ಹೊತ್ತು ನಡೆದಿದ್ದೇನೆ" ಎನ್ನುವಲ್ಲಿ ಮೌಲ್ಯ ವ್ಯವಸ್ಥೆಯ ಕಾರ್ಯಮಾದರಿಗಳ ಬಗೆಗೆ ವ್ಯಂಗ್ಯ, ನೋವು, ಆಕ್ರೋಶ ಇದೆಯಾದರೂ ಅದನ್ನು ಮೀರಲಾರದ ಅಸಹಾಯಕತೆಯನ್ನೂ ಕೂಡ ಧ್ವನಿಸುತ್ತದೆ.

ವಿವಾಹವೆಂಬ ಸಂಸ್ಥೆಗೆ ಒಳಪಡಿಸುವುದರ ಮೂಲಕ ಗಂಡು, ಹೆಣ್ಣಿನ ಲೈಂಗಿಕತೆಯನ್ನು ನಿಯಂತ್ರಿಸುವ ಹಾಗೂ ಹೆಣ್ಣಿನ ಲೈಂಗಿಕತೆಯನ್ನು ಒಬ್ಬ ವ್ಯಕ್ತಿಗೆ ಸೀಮಿತಗೊಳಿಸುವ ವಿಧಾನ ಕಂಡುಬರುತ್ತದೆ. ಹೆಣ್ಣಿನ ಲೈಂಗಿಕತೆಯನ್ನು ಒಬ್ಬ ಗಂಡಸಿನ ಯಜಮಾನಿಕೆಗೆ ಒಳಪಡಿಸುವುದರ ಮೂಲಕ ಹೆಣ್ಣಿನ ಲೈಂಗಿಕತೆಯನ್ನು ನಿಯಂತ್ರಿಸಲು ಪ್ರಯತ್ನಿಸಲಾಗಿದೆ. ಹೆಣ್ಣಿನ ಈ ಲೈಂಗಿಕತೆಯ ನಿರ್ಬಂಧವು ಸಮಾಜದಲ್ಲಿ ಹಲವು ಸಮಸ್ಯೆಗಳ ಹುಟ್ಟಿಗೆ ಕಾರಣವಾಗಿದೆ. ವಿವಾಹ ಬಂಧನಕ್ಕೆ ಒಳಪಡುವ ಹೆಣ್ಣು ತನ್ನ ಲೈಂಗಿಕತೆಯನ್ನು ಒಬ್ಬ ಗಂಡಸಿಗೆ ಅಧೀನ ಪಡಿಸಿದರೆ ಅದೇ ಚೌಕಟ್ಟಿನೊಳಗೆ

ಬದುಕುವ ಗಂಡಿಗೆ ಮಾತ್ರ ಮುಕ್ತ ಲೈಂಗಿಕತೆಗೆ ಅವಕಾಶವನ್ನು ಕಲ್ಪಿಸಲಾಗಿದೆ. ಅಥವಾ ದಾಂಪತ್ಯದ ಹೊರಗಿನ ಲೈಂಗಿಕ ಸಂಬಂಧಗಳನ್ನು ಹೊಂದಲು ಗಂಡಿಗೆ ಸಾಕಷ್ಟು ಅವಕಾಶವಿದೆ. ಬಹುಪತ್ನಿತ್ವ, ವಿಧುರ ವಿವಾಹಗಳು ಒಂದೆಡೆಯಾದರೆ, ವೇಶ್ಯಾವಾಟಿಕೆ, ದೇವದಾಸಿ ಪದ್ಧತಿಗಳು ಗಂಡಿನ ಮುಕ್ತ ಲೈಂಗಿಕತೆಗೆ ಸಾಮಾಜಿಕ ಮಾನ್ಯತೆಯನ್ನು ಒದಗಿಸುತ್ತವೆ. ಗಂಡ ಸತ್ತನಂತರ ಹೆಣ್ಣನ್ನು ವಿರೂಪಗೊಳಿಸಿ ವಿಧವೆ ಪಟ್ಟವನ್ನು ವೈಭವೀಕರಿಸುವ ಪುರುಷಪ್ರಧಾನ ವ್ಯವಸ್ಥೆಗೆ ಹೆಣ್ಣಿನ ಮೇಲೆ ಗಂಡು ಹೊಂದಿರಬಹುದಾದ ಲೈಂಗಿಕ ಯಾಜಮಾನ್ಯವನ್ನು ಕಡೆಯವರೆಗೂ ಹಾಗೆಯೇ ಉಳಿಸಿಕೊಳ್ಳುವ ಹಾಗೂ ಅದನ್ನು ಮತ್ತೊಂದು ಗಂಡಿನೊಂದಿಗೆ ಹಂಚಿಕೊಳ್ಳಲಾಗದ ವಸ್ತುವೆಂಬಂತೆ ಪರಿಗಣಿಸಲಾಗಿದೆ.

ಹೆಣ್ಣಿನ ಲೈಂಗಿಕತೆಯನ್ನು ಪುರುಷಾಧೀನಕ್ಕೆ ಒಳಪಡಿಸುವ ಹಾಗೂ ಅದನ್ನು ಶಾಶ್ವತವಾಗಿ ಉಳಿಸಿಕೊಳ್ಳುವ ಸಲುವಾಗಿ ರೂಪುಗೊಂಡ ಮತ್ತೊಂದು ಸಾಮಾಜಿಕ ಮೌಲ್ಯ 'ಶೀಲ'ಕ್ಕೆ ಸಂಬಂಧಿಸಿದ್ದಾಗಿದೆ. ಲೈಂಗಿಕ ಬದ್ಧತೆ ಮತ್ತು ನಿಷ್ಠೆ ಗಂಡು ಹೆಣ್ಣಿಗೆ ಸಂಬಂಧಿಸಿದಂತೆ ಒಂದೇ ಬಗೆಯದ್ದಾದರೂ ಗಂಡಿಗೆ ಮಾತ್ರ ಈ ನಿಷ್ಠೆ ಉಳಿಸಿಕೊಳ್ಳಲೇ ಬೇಕಾದ ಮೌಲ್ಯವಾಗೇನೂ ಉಳಿದಿಲ್ಲ. ಆದರೆ ಹೆಣ್ಣು ಮಾತ್ರ ವಿವಾಹ ಪೂರ್ವ ಹಾಗೂ ವಿವಾಹದ ನಂತರದಲ್ಲಿ ತನ್ನ ಶೀಲವನ್ನು ಜೋಪಾನವಾಗಿ ಕಾಯ್ದಿರಿಸಿಕೊಳ್ಳಲೇಬೇಕೆಂಬ ನಿಯಮಗಳಿಗೆ ಹೆಚ್ಚು ಒತ್ತುಕೊಡಲಾಗಿದೆ. 'ಶೀಲ'ದ ಪರಿಕಲ್ಪನೆ ಹೆಣ್ಣಿನ ವಿವಾಹದ ಹೊರಗಿನ ಲೈಂಗಿಕತೆಯನ್ನು ನಿರ್ಬಂಧಿಸುವ ಉದ್ದೇಶದಿಂದಲೇ ರೂಪುಗೊಂಡಂತದ್ದಾಗಿದೆ. ಈ ಮೂಲಕ ಹೆಣ್ಣಿನ ದೇಹದ ಮೇಲಿನ ಅಧಿಕಾರವನ್ನು ವಿವಾಹಿತನ ಅಧೀನತೆಗೆ ಒಳಪಡಿಸಲಾಗಿದೆ. ಕೆಲ ಸಂದರ್ಭಗಳಲ್ಲಿ ವಿವಾಹದ ಪರಿಧಿಯಾಚೆ ಏರ್ಪಡುವ ಗಂಡು ಹೆಣ್ಣಿನ ಸಂಬಂಧಗಳು ಅತ್ಯಾಚಾರ, ಅನೈತಿಕ ಸಂಬಂಧಗಳೆಂಬ ಹಣೆಪಟ್ಟಿಯನ್ನು ಪಡೆದಿರುತ್ತದೆ. ಈ ಸಂಬಂಧಗಳಲ್ಲಿ ಲೈಂಗಿಕತೆ ಹೆಣ್ಣಿನ ಆಯ್ಕೆ ಆಗಿರಲಿ ಅಥವಾ ಇಲ್ಲದಿದ್ದಲ್ಲಿ ಕೂಡ ಸಮಾಜದ ನಿಂದನೆಗೆ ಶಿಕ್ಷೆಗೆ ಗುರಿಯಾಗುವವಳು ಹೆಣ್ಣೇ ಆಗಿದ್ದಾಳೆ. ಅತ್ಯಾಚಾರದಂತಹ ಪುರುಷಾಕ್ರಮಣಕ್ಕೆ ಒಳಪಟ್ಟ ಸಂದರ್ಭದಲ್ಲಿಯೂ ಕೂಡ ಹೆಣ್ಣನ್ನೇ ಅಪರಾಧಿಯೆಂದು ಪರಿಗಣಿಸಲಾಗುತ್ತದೆ. ಮತ್ತು ಹೆಣ್ಣಿಗೆ ಶಿಕ್ಷೆಯನ್ನು ವಿಧಿಸಲಾಗುತ್ತದೆ. ಗಂಡ ಸತ್ತ ಸಂದರ್ಭದಲ್ಲಿ ಅಥವಾ ಗಂಡನಿಂದ ಬಿಡುಗಡೆ ಪಡೆದ ಸಂದರ್ಭದಲ್ಲಿಯೂ ಕೂಡ ಹೆಣ್ಣು ಮುಕ್ತವಾಗಿ ಮತ್ತೊಬ್ಬ ಪುರುಷನೊಂದಿಗೆ ಲೈಂಗಿಕ ಸಂಬಂಧವನ್ನು ಹೊಂದಲು ಸಾಧ್ಯವಿಲ್ಲ. ಹಾಗೇನಾದರೂ ಘಟಿಸಿದ ಸಂದರ್ಭದಲ್ಲಿಯೂ ಕೂಡ ಹೆಣ್ಣನ್ನೇ ನಿರ್ದಾಕ್ಷಿಣ್ಯವಾಗಿ ದೋಷಿ ಎಂದು ತೀರ್ಮಾನಿಸಿಬಿಡಲಾಗುತ್ತದೆ. ಈ ಎಲ್ಲಾ ವಿಧಾನಗಳಿಂದ ಹೊರತಾಗಿ ಹೆಣ್ಣು ವಿವಾಹವಾಗದೇ ಸ್ವತಂತ್ರವಾಗಿ ಜೀವನ ಸಾಗಿಸುವ ಸಂದರ್ಭದಲ್ಲಿಯೂ ಕೂಡ ಅಂತಹ ಹೆಣ್ಣಿಗೆ ಯಾವುದೇ ಬಗೆಯ ಲೈಂಗಿಕ ಸ್ವಾತಂತ್ರ್ಯವಿಲ್ಲ ಎಂಬುದರ ಜೊತೆಗೆ ಅಂತಹ ಹೆಣ್ಣಿಗೆ ಯಾವುದೇ ರೀತಿಯ ಸಾಮಾಜಿಕ, ಕೌಟುಂಬಿಕ ಮಾನ್ಯತೆಯನ್ನಾಗಲೀ, ಸ್ಥಾನವನ್ನಾಗಲೀ ನೀಡದೆ ಸಮಾಜದಿಂದ ಹೊರಗಿಡಲು ಪ್ರಯತ್ನಿಸಲಾಗುತ್ತದೆ.

ಬಾಲ್ಯವಿವಾಹವನ್ನು ಪ್ರೋತ್ಸಾಹಿಸುವ, ವಿಧವಾ ವಿವಾಹವನ್ನು ನಿಷೇಧಿಸುವುದರ ಹಿಂದಿನ ಹುನ್ನಾರಗಳು ಹೆಣ್ಣಿನ ಲೈಂಗಿಕ ನಿಷ್ಠೆಯನ್ನು ಉಳಿಸುವ ಯತ್ನವಷ್ಟೇ ಅಲ್ಲದೆ ಅವಳನ್ನು ಮಾನಸಿಕವಾಗಿ

ಕೂಡ ತನ್ನ ಅಧೀನತೆಗೆ ಒಳಪಡಿಸಿಕೊಳ್ಳುವ ಪ್ರಯತ್ನವೇ ಆಗಿದೆ. ಇನ್ನು ಗಂಡ ಸತ್ತ ನಂತರ ಹೆಣ್ಣು ವಿಧವೆಯಾದ ಸಂದರ್ಭದಲ್ಲಿ ಹೆಣ್ಣಿನ ವಯಸ್ಸನ್ನೂ ಕೂಡ ಪರಿಗಣಿಸದೆ ಬಾಲ ವಿಧವೆಯರಿಂದ ಹಿಡಿದು ವಯಸ್ಸಾದ ಹಿರಿಯ ವಿಧವೆಯರವರೆಗೂ ಎಲ್ಲರನ್ನೂ ಒಂದೇ ರೀತಿಯಲ್ಲಿ ನಡೆಸಿಕೊಳ್ಳಲಾಗುತ್ತದೆ. ತಲೆಕೂದಲನ್ನು ತೆಗೆಸಿ, ಬಿಳಿ ಸೀರೆ ಉಡಿಸಿ, ಅವರನ್ನು ವಿರೂಪಗೊಳಿಸುವ ಕ್ರಮ ಒಂದೆಡೆಯಾದರೆ ವ್ಯವಸ್ಥೆ ನಿರ್ದಾಕ್ಷಿಣ್ಯವಾಗಿ ಅವರ ಎಲ್ಲಾ ಬಗೆಯ ಬಯಕೆಗಳನ್ನು ತಿರಸ್ಕರಿಸಿ ಅವರ ಬದುಕನ್ನು ದುಸ್ತರವಾಗಿಸುವ ವಿಧಾನ ಮತ್ತೊಂದು ಬಗೆಯದ್ದು. ಆದರೆ ಗಂಡಿಗೆ ಮಾತ್ರ ಹೆಂಡತಿ ಸತ್ತ ನಂತರದಲ್ಲೂ ಕೂಡ ಮರುವಿವಾಹವಾಗಲು ಬೇರೆಯವರೊಂದಿಗೆ ಲೈಂಗಿಕ ಸಂಬಂಧವನ್ನು ಹೊಂದಲು ಮುಕ್ತ ಅವಕಾಶವನ್ನು ನೀಡಲಾಗಿದೆ. ಆಧುನಿಕ ಸಂದರ್ಭದಲ್ಲಿ ವಿಧವೆಯರು ಮರುವಿವಾಹವಾಗಲು ಅವಕಾಶವನ್ನು ಕಲ್ಪಿಸಲಾಗಿದೆಯಾದರೂ ಈ ಸಂದರ್ಭದಲ್ಲಿಯೂ ಕೂಡ ಹೆಣ್ಣಿನ ಲೈಂಗಿಕತೆ ಮತ್ತೊಬ್ಬ ಪುರುಷನ ಅಧೀನತೆಗೆ ಒಳಪಡುತ್ತದೆಯೇ ವಿನಃ ಸ್ವಾತಂತ್ರ್ಯಕ್ಕೆ ಅವಕಾಶವಿಲ್ಲ. ಅಲ್ಲದೆ ವಿಧವಾ ಮರುವಿವಾಹ ಸಮಾಜದ, ಗಂಡಿನ, ಅಪೇಕ್ಷೆಯಾಗಿದ್ದ ಸಂದರ್ಭದಲ್ಲಿ ನೆರವೇರುವಷ್ಟು ಸುಲಭವಾಗಿ ಹೆಣ್ಣಿನ ಆಯ್ಕೆಯಾಗಿದ್ದಾಗ ನಡೆಯಲು ಸಾಧ್ಯವಿಲ್ಲ.

ಒಟ್ಟಾರೆ ವಿವಾಹವೆಂಬ ಸಂಸ್ಥೆಯು ಹಿಂದಿನಿಂದ ಇಂದಿನವರೆಗೂ ಹೆಣ್ಣಿನ ಲೈಂಗಿಕತೆಯನ್ನು ಏಕ ವ್ಯಕ್ತಿಗೆ ಸೀಮಿತಗೊಳಿಸುವ, ಪುರುಷಾಧಿಪತ್ಯಕ್ಕೆ ಒಳಪಡಿಸುವ ಕ್ರಮವಾಗಿಯೇ ಕಂಡು ಬರುತ್ತದೆ. ಇಲ್ಲಿಯೂ ಕೂಡ ಗಂಡು ಹೆಣ್ಣಿನ ಮೇಲೆ ನಿರಂತರವಾಗಿ ತನ್ನ ಅಧಿಕಾರ ಚಲಾಯಿಸುವ, ತನ್ನ ಅಧಿಪತ್ಯಕ್ಕೆ ಮಾನ್ಯತೆಯನ್ನು ಪಡೆದುಕೊಳ್ಳುವ ಹಾಗೂ ತನ್ನ ಯಜಮಾನಿಕೆಯನ್ನು ಶಾಶ್ವತವಾಗಿ ಉಳಿಸಿಕೊಳ್ಳುವ ಆಶಯವೇ ಪ್ರಮುಖವಾದುದಾಗಿದೆ.

ಮದುವೆಯಿಂದ ಮಹಿಳೆಗೆ ಲಭಿಸುವ ಮತ್ತೆರಡು ಸಂಕೋಲೆಗಳು ಮನೆಚಾಕರಿ ಮತ್ತು ಮಕ್ಕಳನ್ನು ಸಾಕುವುದು. ಮಕ್ಕಳಿಗಾಗಿ ಮಹಿಳೆ ತನ್ನ ಸರ್ವಸ್ವವನ್ನು ಬಿಡಬೇಕೆಂದು ಈ ಸಾಮಾಜಿಕ ಮೌಲ್ಯವ್ಯವಸ್ಥೆ ಪ್ರಚಾರ ಮಾಡುತ್ತದೆ. ಆದರೆ ಹೆಣ್ಣಿಗೆ ಮಾತ್ರ ತಾನು ಹೆತ್ತು ಪ್ರೀತಿಯಿಂದ ಬೆಳೆಸಿದ ಮಕ್ಕಳ ಮೇಲೆ ಯಾವ ರೀತಿಯಲ್ಲಿಯೂ ಕೂಡ ಹಕ್ಕಿಲ್ಲ. ಮಕ್ಕಳ ಮೇಲಿನ ಸಂಪೂರ್ಣ ಅಧಿಕಾರ ತಂದೆಗೆ ಸೇರಿದ್ದು. ಅವರ ಓದು, ವಿದ್ಯಾಭ್ಯಾಸ, ಆಸೆ, ಆಸಕ್ತಿ ಎಲ್ಲವನ್ನೂ ಕೂಡ ನಿರ್ಣಯಿಸುವವನು ತಂದೆಯೇ. ಪ್ರತಿಭಾ ನಂದಕುಮಾರ್‌ರವರ 'ನಾನು' ಕವನ ಕುಟುಂಬ ವ್ಯವಸ್ಥೆ ಹೆಣ್ಣಿನ ಬದುಕನ್ನು ಸಂಪೂರ್ಣ ಪುರಷಾಧೀನಗೊಳಿಸುವುದರ ಜೊತೆಗೆ ಅವಳ ಸ್ವಂತಿಕೆ, ಬಯಕೆಗಳನ್ನು ಇಲ್ಲವಾಗಿಸಿರುವ ಪರಿಯನ್ನು ಕುರಿತು ಚರ್ಚಿಸುತ್ತದೆ. ಮಕ್ಕಳ ಮೂಲಕ ತನ್ನ ಅಸ್ತಿತ್ವದ ಇರುವಿಕೆಯನ್ನು ಕಂಡುಕೊಳ್ಳಲು ಪ್ರಯತ್ನಿಸುವ ತಾಯಿಗೆ ಅದೂ ಕೂಡ ದೊರಕದಂತೆ ಮಾಡಿರುವ ಪುರುಷ ಪ್ರಧಾನ ಮೌಲ್ಯ ಸಂರಚನೆಯ ಕ್ರಮವನ್ನು ತಿಳಿಸಿಕೊಡುತ್ತದೆ.

> ನನ್ನದೇ ಮಕ್ಕಳ ಚಪ್ಪಲಿ
> ಚಾಕಲೇಟು ಸ್ಲೇಟುಗಳು
> ನನ್ನ ಪರಿಧಿ ಮೀರಿದ ವಿಷಯಗಳು[71]

ಎನ್ನುವಲ್ಲಿ ಪುರುಷಪ್ರಧಾನ ಮೌಲ್ಯವ್ಯವಸ್ಥೆ ತನ್ನ ಅಧಿಕಾರವನ್ನು ಸ್ಥಾಪಿಸುವ ನೆಲೆಯಲ್ಲಿ ನಡೆಸಿರುವ ಅಂಗರಾಜಕಾರಣದ ಹುನ್ನಾರಗಳನ್ನೂ ಇದರಿಂದಾಗಿ ಸಂಕಷ್ಟದಲ್ಲಿ ಸಿಲುಕಿರುವ ಹೆಣ್ಣಿನ ಸ್ಥಿತಿಯನ್ನೂ ಒಟ್ಟಿಗೆ ಗುರುತಿಸಬಹುದಾಗಿದೆ.

ಮನೆಚಾಕರಿಯ ಸಂಪೂರ್ಣ ಜವಾಬ್ದಾರಿಯನ್ನು ಹೆಣ್ಣಿನ ಮೇಲೆ ಹೇರಲಾಗಿದ್ದು, ಇದು ಅವಳ ಜೀವನಸಾರವನ್ನೆಲ್ಲ ಹೀರಿಹಾಕುತ್ತದೆ, ಆಯಾಸಗೊಳಸುತ್ತದೆ. ಇದರಿಂದಾಗಿ ಹೆಣ್ಣಿನ ಶ್ರಮ ಶಕ್ತಿ, ಸಾಮರ್ಥ್ಯ ಎಲ್ಲವೂ ಕುಟುಂಬಕ್ಕೆ ವಿನಿಯೋಗವಾಗುವುದರೊಂದಿಗೆ ಅವಳ ಸೃಜನಶೀಲತೆ, ಸಮಯ ಎಲ್ಲವೂ ಕೂಡ ವ್ಯರ್ಥವಾಗುತ್ತದೆ. ಅಲ್ಲದೆ ಇದರಿಂದಾಗಿ ಯಾವುದೇ ಹೆಣ್ಣಿಗೆ ಯಾವುದೇ ರೀತಿಯ ಮಾನ್ಯತೆಯಾಗಲಿ, ಗಳಿಕೆಯಾಗಲಿ ದೊರೆಯುವುದಿಲ್ಲ. ಮುಸುರೆ ತಿಕ್ಕುವುದು, ಕಸ ಗುಡಿಸುವುದು, ಬಟ್ಟೆ ತೊಳೆಯುವುದು ಈ ಕೆಲಸಗಳಿಗೆ ಕೊನೆಯೆಂಬುದು ಇರುವುದಿಲ್ಲ. ಈ ಕೆಲಸಗಳನ್ನು ಮಾಡುವುದರಲ್ಲಿ ಯಾವ ಆನಂದವೂ ಇರುವುದಿಲ್ಲ. ಈ ಕೆಲಸಗಳು ಎಂದಿಗೂ ಪೂರ್ಣವಾಗಲಾರವು. ಈ ಕೆಲಸಗಳನ್ನು ಮಾಡುವುದರಿಂದ ಮನುಷ್ಯರಲ್ಲಿ ಸೃಜನಾತ್ಮಕ ಶಕ್ತಿ ಯಾವ ರೀತಿಯಲ್ಲೂ ತೃಪ್ತಿಪಡುವುದಿಲ್ಲ. ಮನುಷ್ಯನನ್ನು ಈ ಕೆಲಸಗಳು ಕೀಳುಗಳೆಯುತ್ತವೆ ಮತ್ತು ಜಡಗೊಳಸುತ್ತವೆ. ಆಧುನಿಕ ಸಂದರ್ಭದಲ್ಲಿ ಗೃಹನಿರ್ವಹಣೆಗೆ ಸಂಬಂಧಿಸಿದಂತೆ ಹೊಸ ಹೊಸ ಸಾಧನಗಳು ಬಳಕೆಯಲ್ಲಿವೆಯಾದರೂ ಅವು ಹೆಣ್ಣನ್ನು ಕುಟುಂಬದ ಕೆಲಸಗಳಿಂದ ಮುಕ್ತಗೊಳಸಿಲ್ಲ ಎಂಬುದು ವಿಶೇಷ. ಅಲ್ಲದೆ ಆಧುನಿಕ ಹೆಣ್ಣು ಈ ಸಾಧನಗಳೊಂದಿಗೆ ಎದುರಿಸುತ್ತಿರುವ ಸವಾಲುಗಳೂ ಕೂಡ ಅಷ್ಟೇ ಮುಖ್ಯವಾದದ್ದು. ಹೊಸ ಹೊಸ ಸಾಧನಗಳೊಂದಿಗೆ ಹೊಸ ಹೊಸ ಸವಾಲುಗಳೂ, ಹೆಚ್ಚು ಹೆಚ್ಚು ಜವಾಬ್ದಾರಿಗಳೂ, ಒತ್ತಡಗಳೂ ಹೆಣ್ಣಿನ ಬದುಕನ್ನು ಆವರಿಸುತ್ತವೆ. ಆಧುನಿಕ ಅವಕಾಶಗಳೆಲ್ಲ ದತ್ತವಾಗಿರುವ ಸಂದರ್ಭದಲ್ಲಿಯೂ ಕೂಡ ಒಂದು ಕಡೆ ಗೃಹಕೃತ್ಯದ ಹೆಸರಿನಲ್ಲಿ ಹೆಣ್ಣನ್ನು ಮನೆಯ ಗುಲಾಮಳನ್ನಾಗಿ ನೋಡುತ್ತಿದ್ದರೆ, ಮತ್ತೊಂದೆಡೆ ಹೆಣ್ಣನ್ನು ಭೋಗದ ಸರಕಾಗಿ ಪರಿಗಣಿಸಲಾಗುತ್ತಿದೆ. ಆದುದರಿಂದಾಗಿ ಆಧುನಿಕ ಹೆಣ್ಣು ಕುಟುಂಬದ ಒಳಗೆ ಹಾಗೂ ಹೊರಗೆ ಎರಡು ಕಡೆಯೂ ಸರಕಿನ ರೀತಿಯಲ್ಲಿಯೇ ಕಾರ್ಯನಿರ್ವಹಿಸುತ್ತಿರುವುದನ್ನು ಕಾಣಬಹುದು. ವಿವಾಹದ ನಿಯಮಾವಳಿಗಳಡಿಯಲ್ಲಿ ಹೆಣ್ಣು ತಾಯಿ, ಹೆಂಡತಿ, ಸೊಸೆ, ಮುಂತಾದ ಬಹುರೂಪಿ ಪಾತ್ರಗಳನ್ನು ನಿಷ್ಠೆಯಿಂದ ನಿರ್ವಹಿಸಬೇಕಾಗಿದೆ. ಇದರಿಂದ ಹೆಣ್ಣಿಗೆ ಬಿಡುಗಡೆ ಎಂಬುದೇ ಇಲ್ಲ.

ವೈವಾಹಿಕ ಸಂಬಂಧದಿಂದ ಏರ್ಪಡುವ ಸಂಬಂಧಗಳು ಅಕ್ಷರಶಃ ಹೆಣ್ಣನ್ನು ನಿರ್ಗತಿಕಳನ್ನಾಗಿಸುತ್ತದೆ. ವಿವಾಹದ ನಿಯಮಗಳ ಪ್ರಕಾರ 'ಪಿತೃ ಸ್ಥಾನೀಯ' ಕುಟುಂಬಕ್ಕೆ ಸೇರ್ಪಡುವ ಹೆಣ್ಣು ತನ್ನದು ಎಂಬ ಸ್ವಂತ ನೆಲೆಯೊಂದನ್ನು ಕಟ್ಟಿಕೊಳ್ಳಲಾಗದಂತಹ ಸ್ಥಿತಿಯನ್ನು ನಿರ್ಮಿಸಲಾಗಿದೆ. ವಿವಾಹದ ಪೂರ್ವದಲ್ಲಿ ತಂದೆಯ ನಂತರ ಗಂಡನ ಆಶ್ರಯದಲ್ಲಿ ಬದುಕಬೇಕೆಂಬ ನಿಯಮವೇ ಹೆಣ್ಣು ತನ್ನ ನೆಲೆಯನ್ನು ಕಂಡುಕೊಳ್ಳಲಾರದಂತಹ ಸ್ಥಿತಿಯನ್ನು ನಿರ್ಮಿಸಿ ಬಿಡುತ್ತದೆ. ಹೆಣ್ಣು ಜೀವಮಾನವಿಡೀ ಗಂಡಿನ ಯಜಮಾನಿಕೆಯ ಅಧೀನತೆಯಲ್ಲಿಯೇ ಜೀವನ ನಡೆಸಬೇಕಾದ ಸ್ಥಿತಿಯಿಂದಾಗಿ ಹೆಣ್ಣು ಗಂಡಿನ ಯಜಮಾನಿಕೆಯನ್ನು ಒಪ್ಪಿ ಅಧೀನತೆಗೆ ಒಳಪಡಬೇಕಾದ ಅನಿವಾರ್ಯತೆಯನ್ನು ಸೃಷ್ಟಿಸಲಾಗಿದೆ.

ವಿವಾಹವೆಂಬ ಸಂಸ್ಥೆ ಪುರುಷಾಧಿಪತ್ಯವನ್ನು ನಿರಂತರವಾಗಿ ಕಾಯ್ದುಕೊಳ್ಳುವ ಹಾಗೂ ಹೆಣ್ಣಿನ ಅಧೀನ ಅಸ್ತಿತ್ವವನ್ನು ಅಧಿಕೃತಗೊಳಸುವ ಪ್ರಮುಖ ಸಾಧನವಾಗಿದೆ. ಒಂದೆಡೆ ವಿವಾಹದ ನಿಯಮಾವಳಿಗಳು ಹೆಣ್ಣಿನ ಅಧೀನತೆಯನ್ನು ಎತ್ತಿಹಿಡಿಯುವಂತಿದ್ದರೆ ಮತ್ತೊಂದೆಡೆ ವಿವಾಹ ಬಂಧನಕ್ಕೆ ಒಳಪಟ್ಟ ಹೆಣ್ಣು ಜೀವನ ಪರ್ಯಂತ ಗಂಡನ ಯಾಜಮಾನ್ಯದ ಅಡಿಯಲ್ಲಿಯೇ ಜೀವನ ನಿರ್ವಹಿಸಬೇಕಾದ ಸಂದಿಗ್ಧತೆಗೆ ಒಳಗಾಗಿರುತ್ತಾಳೆ. ಎಲ್ಲಕ್ಕಿಂತ ಮುಖ್ಯವಾಗಿ ವಿವಾಹದಿಂದಾಗಿ ಹೆಣ್ಣು ಆರ್ಥಿಕ ಸ್ವಾತಂತ್ರ್ಯವನ್ನು ಪಡೆಯಲು ಸಾಧ್ಯವಾಗುತ್ತಿಲ್ಲ ಎಂಬುದು ಮತ್ತೊಂದು ಪ್ರಮುಖವಾದ ಸಂಗತಿಯಾಗಿದೆ.

**ದುಡಿಮೆ ಮತ್ತು ಆರ್ಥಿಕತೆ** : ಸಮುದಾಯದ ಸಂರಚನೆಯಲ್ಲಿ ದುಡಿಮೆ ಮತ್ತು ಆರ್ಥಿಕತೆಯ ನಡುವೆ ನೇರವಾದ ಸಂಬಂಧವಿದ್ದು ದುಡಿಮೆಯಿಂದ ವ್ಯಕ್ತಿ ಆರ್ಥಿಕವಾಗಿ ಸ್ವಾವಲಂಬಿಯಾಗಲು, ತನ್ನ ಅವಶ್ಯಕತೆಗಳನ್ನು ಪೂರೈಸಿಕೊಳ್ಳಲು ಅವಕಾಶವನ್ನು ಕಲ್ಪಿಸಲಾಗಿದೆ. ಆದರೆ ಪಿತೃಪ್ರಧಾನ ಮೌಲ್ಯವ್ಯವಸ್ಥೆ ಗಂಡು ಹೆಣ್ಣಿಗೆ ಸಂಬಂಧಿಸಿದಂತೆ 'ದುಡಿಮೆ'ಯ ನಿರ್ವಚನದಲ್ಲಿಯೇ ಭಿನ್ನತೆಯನ್ನು ಅನುಸರಿಸಿರುವುದು ಮೇಲ್ನೋಟಕ್ಕೆ ಕಂಡುಬರುತ್ತದೆ. ಸಾಮಾನ್ಯವಾಗಿ ಉತ್ಪಾದನೆ ಹಾಗೂ ಅನುಭೋಗ ಕುಟುಂಬದ ಸದಸ್ಯರೆಲ್ಲರ ಶ್ರಮವನ್ನು ಅಪೇಕ್ಷಿಸುತ್ತಿದ್ದುದ್ದರಿಂದ ಗಂಡು ಮತ್ತು ಹೆಣ್ಣು ತಮ್ಮ ತಮ್ಮ ಅನುಕೂಲಕ್ಕೆ ಅನುಸಾರವಾಗಿ ಶಕ್ತಿ ಮತ್ತು ಸಮಯವನ್ನು ಈ ಚಟುವಟಿಕೆಗಳಲ್ಲಿ ತೊಡಗಿಸಿಕೊಳ್ಳಲು ಸಾಧ್ಯವಾಯಿತು. ಹೆಣ್ಣಿನ ಜೈವಿಕತೆ ಹಾಗೂ ಶಿಶುಪಾಲನೆಯಂತಹ ಅನಿವಾರ್ಯ ಕಾರಣಗಳಿಂದಾಗಿ ಅವಳ ದುಡಿಮೆಯ ಕ್ಷೇತ್ರ ಗೃಹಾಧಾರಿತವಾದುದಾಗಿತ್ತು. ಆದರೆ ಸಾಮಾಜಿಕ ಪ್ರಕ್ರಿಯೆಯಲ್ಲಿ ಮಹಿಳೆ ಮತ್ತು ದುಡಿಮೆ ಇವುಗಳ ನಡುವಿನ ಬಂಧ ಹಾಗೂ ಬಾಂಧವ್ಯ ನಿರಂತರವಾಗಿದ್ದು ಇದು ಅತ್ಯಂತ ಸಂಕೀರ್ಣ ರೀತಿಯಲ್ಲಿ ಬೆಸೆದುಕೊಂಡಿದೆ. ಆದರೆ ಪಿತೃ ಪ್ರಭುತ್ವ ಕುಟುಂಬ ಕೇಂದ್ರಿತ ಹೆಣ್ಣಿನ ದುಡಿಮೆಯನ್ನು ಆರ್ಥಿಕತೆಯಿಂದ ಹೊರಗಿಡುವುದರ ಮೂಲಕ ಅವಳು ಸ್ವಾವಲಂಬನೆಯನ್ನು ಹೊಂದದಂತೆ, ತನ್ನ ಅವಶ್ಯಕತೆಗಳಿಗೆ ಗಂಡನ್ನು ಆಶ್ರಯಿಸಬೇಕಾದ ಅನಿವಾರ್ಯತೆಯನ್ನು ನಿರ್ಮಿಸಿ ಅವಳ ಬದುಕನ್ನು ಅಧೀನತೆಗೆ ಒಳಪಡಿಸಿದೆ.

ಗಂಡು ಹೆಣ್ಣಿಗೆ ಸಂಬಂಧಿಸಿದಂತೆ ಹಿಂದಿನಿಂದಲೂ ರೂಢಿಯಲ್ಲಿರುವ ಶ್ರಮದ ಹಂಚಿಕೆಯ ಕ್ರಮವನ್ನು ಗಮನಿಸುವುದಾದರೆ ಶ್ರಮದ ಹೊರೆ ಇಬ್ಬರಿಗೂ ಸಮಾನವಾಗಿ ಹಂಚಿಕೆಯಾಗಿದ್ದರೂ ಕೂಡ ಅದರ ಅಂತಿಮ ಫಲ ಮಾತ್ರ ಗಂಡಿಗೆ ಲಾಭದಾಯಕವಾಗಿದ್ದರೆ, ಹೆಣ್ಣಿನ ಮಟ್ಟಿಗೆ ಅವಳ ಶೋಷಣೆಯ ಮೂಲವಾಗಿರುವುದು ಕಂಡುಬರುತ್ತದೆ. ಗಂಡಿನ ದುಡಿಮೆ 'ಉತ್ಪಾದನೆ' ಹಾಗೂ 'ಗಳಿಕೆ'ಗೆ ಸಂಬಂಧಿಸಿದ್ದಾದರೆ ಹೆಣ್ಣಿನದು 'ಅನುಭೋಗ' ಹಾಗೂ 'ಹಂಚಿಕೆ'ಗೆ ಸಂಬಂಧಿಸಿದ್ದು. ಗಂಡು ದುಡಿದು ತಂದಿದ್ದನ್ನು ಸಿದ್ಧಗೊಳಿಸಿ ಕುಟುಂಬದ ಸದಸ್ಯರೆಲ್ಲರಿಗೆ ಸಮಾನವಾಗಿ ಹಂಚಿಕೆ ಮಾಡುವುದು, ಬೇಕು ಬೇಡಗಳನ್ನು ಅರಿತು ಪೂರೈಕೆ ಮಾಡುವುದು ಹೆಣ್ಣಿನ ಕೆಲಸವಾಗಿದೆ. ಹಿಂದಿನಿಂದಲೂ ಕೌಟುಂಬಿಕ ವ್ಯವಸ್ಥೆಯಲ್ಲಿ 'ತಂದುಹಾಕುವ ಕೆಲಸ' ಗಂಡಿನದೆಂದೂ, 'ಮಾಡಿ ಹಾಕುವ ಕೆಲಸ' ಹೆಣ್ಣಿನದೆಂದೂ

ನಿಯಮಗಳನ್ನು ರೂಪಿಸಿ ಶ್ರಮವನ್ನು ಹಂಚಲಾಗಿದೆ. ಈ ವಿಧಾನ ಇಂದಿಗೂ ಕೂಡ ಜಾರಿಯಲ್ಲಿರುವುದನ್ನು ಗಮನಿಸಬಹುದು. ಆದರೆ ಈ ಬಗೆಯ ವಿಭಜನೆ ಗಂಡಿನ ಶ್ರಮವನ್ನು 'ಉತ್ಪಾದನೆ', 'ಗಳಿಕೆ' ಎಂದೂ ಹೆಣ್ಣಿನ ಶ್ರಮವನ್ನು 'ಸೇವೆ' ಎಂದೂ ಪರಿಗಣಿಸುವುದರ ಮೂಲಕ ಹೆಣ್ಣಿನ ದುಡಿಮೆಗೆ ಯಾವುದೇ ರೀತಿಯ ಪ್ರತಿಫಲ ದೊರೆಯದಂತೆ ಮಾಡಿದೆ. ಹೆಣ್ಣಿನ ದುಡಿಮೆಯನ್ನು ಸೇವೆ ಎಂದು ವ್ಯಾಖ್ಯಾನಿಸುವುದರಿಂದ ಅಲ್ಲಿನ ಉತ್ಪಾದನೆ, ಗಳಿಕೆಗಳು 'ಅದೃಶ್ಯ'ವಾಗಿ ಅವಳದು 'ಶೂನ್ಯ'ಗಳಿಕೆಯಾಗುತ್ತದೆ. ಅಂದರೆ ಹೆಣ್ಣು ತನ್ನ ಶ್ರಮ ಸಮಯಗಳನ್ನೇ ವ್ಯಯಿಸಿದ ನಂತರದಲ್ಲೂ ಕೂಡ ಯಾವುದೇ ಬಗೆಯ ಆರ್ಥಿಕ ಸಂಪಾದನೆಯಷ್ಟೇ ಅಲ್ಲದೆ, ಮಾಡಿದ ಕೆಲಸಕ್ಕೆ ತಕ್ಕ ಪರಿಗಣನೆಯೂ ಇಲ್ಲದಂತಾಗುತ್ತದೆ.

ಈ ಬಗೆಯ ಶ್ರಮ ವಿಭಜನೆಯ ಫಲವಾಗಿ ಗಂಡು ಆರ್ಥಿಕವಾಗಿ ಸ್ವತಂತ್ರನಾಗಲು ಸಾಧ್ಯವಿದ್ದು ಹೆಣ್ಣಿನ ಮೇಲೆ ಅಧಿಕಾರವನ್ನು ಸಾಧಿಸಲು, ಯಜಮಾನಿಕೆಯನ್ನು ಹೊಂದಲು ಅವಕಾಶವಿದೆ. ಆದರೆ ಹೆಣ್ಣಿನ 'ಸೇವಾವಲಯವು' ಅವಳ ಎಲ್ಲಾ ಬಗೆಯ ಶ್ರಮವನ್ನು ಶೋಷಿಸುವುದರೊಂದಿಗೆ, ಅದನ್ನು ಅತ್ಯಂತ ಸಹಜವಾಗಿ ನಿರ್ಲಕ್ಷಿಸಿ ಬಿಡಲು ಅವಕಾಶವನ್ನು ಕಲ್ಪಿಸುತ್ತದೆ. ಇದರಿಂದಾಗಿ ಉತ್ಪಾದನಾವಲಯದಿಂದ ಹೊರಗುಳಿದ ಹೆಣ್ಣು ಆರ್ಥಿಕವಾಗಿ ಸ್ವತಂತ್ರಳಾಗಲು ಸಾಧ್ಯವಾಗದೆ ಪರಾವಲಂಬಿಯಾಗಿ 'ಅಧೀನತೆಯ' ಬದುಕಿಗೆ ಒಳಪಡಬೇಕಾಗಿದೆ. ಎಲ್ಲಕ್ಕಿಂತ ಮುಖ್ಯವಾಗಿ ಗೃಹಕೃತ್ಯಗಳು ಎಲ್ಲ ಸಂದರ್ಭದಲ್ಲಿಯೂ ಹೆಣ್ಣು ನಿರ್ವಹಿಸಲೇಬೇಕಾದ ಕರ್ತವ್ಯವಾಗಿ, ಆ ಸೇವೆಯನ್ನು ಪಡೆಯುವುದು ಗಂಡಿನ ಹಕ್ಕಾಗಿ ಪರಿವರ್ತನೆಗೊಂಡಿದೆ. ಜೊತೆಗೆ ಹೆಣ್ಣಿನ ದುಡಿಮೆಗೆ ಶ್ರಮ ಹಾಗೂ ಸಮಯದ ಮಿತಿ ಇಲ್ಲದೆ, ನಿರಂತರವಾದ ಕಾರ್ಯಚಟುವಟಿಕೆಗಳ ಸಾಲಿಗೆ ಸೇರಿಸಲಾಗಿದೆ. ಒಟ್ಟಾರೆ ಪುರುಷ ಪ್ರಧಾನ ವ್ಯವಸ್ಥೆ ಹೆಣ್ಣಿನ ಶ್ರಮ ಮತ್ತು ದುಡಿಮೆಯನ್ನು ನಿರ್ವಚಿಸಿರುವ ಬಗೆ ಒಂದೆಡೆ ಅವಳ ದುಡಿಮೆಯನ್ನು ಸೇವಾ ವಲಯಕ್ಕೆ ಸೇರಿಸುವುದರ ಮೂಲಕ ಅದನ್ನು ಅವಳ ಕರ್ತವ್ಯವಾಗಿ ಮಾರ್ಪಡಿಸಿದರೆ, ಮತ್ತೊಂದೆಡೆ ಅವಳ ಶ್ರಮ ಹಾಗೂ ದುಡಿಮೆಯನ್ನು 'ವ್ಯರ್ಥ' ಗಳಿಕೆಯ ಪಟ್ಟಿಗೆ ಸೇರಿಸುವುದರ ಮೂಲಕ ಹೆಣ್ಣಿನ ದುಡಿಮೆಯ ಮಹತ್ವವನ್ನು ನಿರ್ಲಕ್ಷ್ಯಕ್ಕೆ ಒಳಪಡಿಸುತ್ತದೆ. ಹೆಣ್ಣಿನ ಶ್ರಮ ಹಾಗು ದುಡಿಮೆಗಳು ಮನೆಯ ಒಳಗೆ ಮತ್ತು ಹೊರಗೆ 'ಸೇವೆ'ಯ ಹೆಸರಿನಲ್ಲಿ ಗುರುತಿಸಲ್ಪಡುತ್ತವೆಯಾದ್ದರಿಂದ ಅವುಗಳು ತಮ್ಮ ಚಹರೆಯನ್ನು ಉಳಿಸಿಕೊಳ್ಳಲೂ ಕೂಡ ಸಾಧ್ಯವಾಗುವುದಿಲ್ಲ. ಇದರಿಂದಾಗಿ ಹೆಣ್ಣಿನ ಶ್ರಮಕ್ಕೆ ಸಾಮಾಜಿಕ ವಲಯದಲ್ಲಿ ಯಾವುದೇ ಬಗೆಯ ಮೌಲ್ಯವೂ ಇಲ್ಲದಂತಾಗಿದೆ.

ಆಧುನಿಕ ಅವಕಾಶಗಳ ಫಲವಾಗಿ ಹೆಣ್ಣು ಕುಟುಂಬದ ಹೊರಗೆ ದುಡಿಯುವ ಅನುಕೂಲಗಳನ್ನು ಕಲ್ಪಿಸಲಾಗಿದೆಯಾದರೂ ಗೃಹನಿರ್ವಹಣೆ, ಗೃಹಿಣಿತ್ವದ, ಮನೆಕೆಲಸದ ಹೊರೆಯಿಂದ ಹೆಣ್ಣು ಮುಕ್ತಳಾಗಲು ಸಾಧ್ಯವಾಗಿಲ್ಲ ಎಂಬುದು ಹೆಣ್ಣಿಗೆ ಹಿಂದಿನಿಂದ ರೂಪಿಸಿಕೊಂಡು ಬರಲಾಗಿರುವ ಅಧೀನ ನೆಲೆಯ ಕಾರ್ಯ ಹಂಚಿಕೆಯ ಮೌಲ್ಯವ್ಯವಸ್ಥೆಯ ನಿರಂತರತೆಯನ್ನು ಎತ್ತಿ ಹಿಡಿಯುತ್ತದೆ.

ಆಧುನಿಕ ಸಂದರ್ಭದಲ್ಲಿ ಮಹಿಳೆಗೆ ಮನೆಯ 'ಹೊರಗೆ' ದುಡಿಯುವ ಅವಕಾಶಗಳನ್ನು ಕಲ್ಪಿಸಲಾಗಿದೆಯಾದರೂ ಅವು ಹಲವು ರೀತಿಗಳಲ್ಲಿ ನಿರ್ಬಂದಕ್ಕೆ ಒಳಪಟ್ಟಿರುವುದನ್ನು ಗಮನಿಸಬಹುದು. ಮನೆಯ ಹೊರಗಿನ ಹೆಣ್ಣಿನ ದುಡಿಮೆಯ ಕ್ಷೇತ್ರಗಳನ್ನು ಸೂಕ್ಷವಾಗಿ ಪರಿಶೀಲಿಸಿದರೆ ದಾದಿ, ವೈದ್ಯೆ, ಶಿಕ್ಷಕಿ ಮುಂತಾದ ಅಧೀನ ನೆಲೆಯಲ್ಲಿ ಗುರುತಿಸಬಹುದಾದ ಅವಕಾಶಗಳನ್ನೇ ಕಲ್ಪಿಸಲಾಗಿದೆಯೇ ವಿನಃ ಹೆಣ್ಣು ಸ್ವತಂತ್ರವಾಗಿ ಕಾರ್ಯನಿರ್ವಹಿಸುವ ಅಧಿಕಾರ ಚಲಾಯಿಸುವ, ನಿರ್ಧಾರಗಳನ್ನು ಕೈಗೊಳ್ಳುವಂತಹ ಕಾರ್ಯ ಕ್ಷೇತ್ರದಿಂದ ದೂರವಿರಿಸಲಾಗಿದೆ. ಕೆಲ ಸಂದರ್ಭಗಳಲ್ಲಿ ಅಂತಹ ಅವಕಾಶಗಳನ್ನು ಕಲ್ಪಿಸುವ ರೀತಿಯ ವಾತಾವರಣವನ್ನು ನಿರ್ಮಿಸಲಾಗುತ್ತದೆಯಾದರೂ ಹೆಣ್ಣು ಸ್ವತಂತ್ರ ನಿರ್ಧಾರಗಳನ್ನು ಕೈಗೊಳ್ಳಲಾರದಂತರ, ಅದರಲ್ಲಿ ಸಕ್ರಿಯವಾಗಿ ತೊಡಗಿಕೊಳ್ಳಲು ಸಾಧ್ಯವಾಗದಂತಹ ನಿರ್ಬಂಧಗಳನ್ನು ಹೆಣೆಯಲಾಗುತ್ತಿದೆ. ಅಂದರೆ ಮನೆಯ ಹೊರಗಿನ ಕೆಲಸಗಳ ನಿರ್ವಹಣೆಯ ಸಂದರ್ಭದಲ್ಲಿಯೂ ಕೂಡ ಹೆಣ್ಣಿಗೆ ಅಧಿಕಾರದ, ಉತ್ಪಾದನಾವಲಯದ ಅವಕಾಶಗಳು ಲಭ್ಯವಾಗದಂತೆ ಕಾರ್ಯತಂತ್ರಗಳನ್ನು ರೂಪಿಸಲಾಗಿದೆ, ಅಲ್ಲದೆ ಹೆಣ್ಣಿಗೆ ದೊರೆತ ಈ ಅವಕಾಶಗಳು ಗಂಡಿನ 'ಔದಾರ್ಯದ' ಸಂಕೇತವಾಗಿಬಿಡುವುದರಿಂದ ಹೆಣ್ಣಿಗೆ 'ಆಯ್ಕೆಯ' ಅವಕಾಶವೇ ದೊರೆಯದ ಹೊರಗಿನ ದುಡಿಮೆ ಕೂಡ ಮನೆಯ ಒಳಗಿನ 'ಸೇವಾ ವಲಯದ' ವಿಸ್ತರಣೆಯಾಗಿ ಮಾರ್ಪಟ್ಟಿವೆ.

ಬರೆಯುವಳೆಂದರೆ ಮನೆಯ ಧೂಳು
ಕೊಡಹುವದರಿಂದ ವಿನಾಯಿತಿಯಿದೆಯೇ
ಅಥವಾ ಪಾತ್ರೆ ಉಜ್ಜುವುದರಿಂದ
ಈಗಂತೂ ಮೂರು ಬಗೆಯ ದ್ರಾವಣ
ಬಳಸಿ ತೊಳೆಯಬೇಕು
ನಾಗರೀಕತೆ ತಂದೆಳೆಯುವ ಕೊಳೆಯ
ನೆಲಹಾಸಿಗೆ ಸ್ವಲ್ಪ ಮೃದು ಗುಣವುಳ್ಳದ್ದು
ಬಚ್ಚಲ ಪಾಚಿಗೆ ತೀವ್ರ ಕ್ರಯಾಪರದ್ದು
ಟಾಯ್ಲೆಟ್ಟಿಗಂತೂ ಕಟುವಾಸನೆಯದ್ದೇ
ಚಿಮ್ಮಿಸುತ್ತಾ ಗೋಡೆಸಮೇತ
ಪರಪರ ಬ್ರಷ್ಷಾಡಿಸಿ
ಈಚೆಗೆ ಬರುವಷ್ಟರಲ್ಲಿ ಬಲಭುಜದ ಮೂಲೆಯಲ್ಲಿ
ಶುರುವಾಗಿ ಬೆನ್ನಹುರಿಯವರೆಗೂ
ಚಳುಕು
. . . . . . . . .
(ಇಷ್ಟೆಲ್ಲಾ ಮಾಡಿದ ಮೇಲೂ ಸಿಗುವ ಬಿರುದು)
ತಿಕದ ಮೇಲೆ ಸೀರೆಯುಟ್ಟಿದ್ದಕ್ಕೆ
ಇಷ್ಟೂ ಮಾಡಬೇಡವೇ
ಹೇಳಕೊಂಡರೆ ಸುಗುವ ಬಿರುದುಬಾವಲಿ ಇಷ್ಟೆ
. . . . . . . .
ಈ ಮನೆಕೆಲಸವೆಂದರೆ ಸೋಜಿಗ
ಮಾಡುತ್ತಲೇ ಇದ್ದರೂ ಗುರುತಿಸುವುದೇ
ಇಲ್ಲ ಒಬ್ಬರೂ; [೧೯]

ಲಲಿತಾ ಸಿದ್ಧಬಸವಯ್ಯರವರ 'ಪುಷ್ಟರಗಳೆ' ಕವನ ಆಧುನಿಕತೆ ಹೆಣ್ಣಿನ ಜೀವನದಲ್ಲಿ ತಂದೊಡ್ಡಿರುವ ಹೊಸ ಹೊಸ ಸವಾಲುಗಳನ್ನು ಒಂದೊಂದಾಗಿ ಬಿಚ್ಚಿಡುತ್ತದೆ. ಸೃಜನಶೀಲ ಚಟುವಟಿಕೆಗಳಲ್ಲಿ

ತೊಡಗಿಸಿಕೊಂಡಿರುವ ಹೆಣ್ಣಿನ ಸಾಮರ್ಥ್ಯವನ್ನು ನಿರ್ಧಾಕ್ಷಿಣ್ಯವಾಗಿ ಅಲ್ಲಗಳೆಯುವ ಪುರುಷ ಪ್ರಧಾನ ವ್ಯವಸ್ಥೆ ಹಿಂದಿನ ಮೌಲ್ಯವ್ಯವಸ್ಥೆಯ ಪರಿಧಿಯಲ್ಲಿ ಹೆಣ್ಣನ್ನು ಬಂಧಿಸಿಡಲು ನಡೆಸಿರುವ ಹುನ್ನಾರಗಳನ್ನು ಬಯಲಿಗೆಳೆಯಲು ಪ್ರಯತ್ನಿಸುತ್ತದೆ. ಏನೆಲ್ಲಾ ಸಾಧಿಸಿದರೂ, ಎಷ್ಟು ಹೆಸರುಗಳಿಸಿದರೂ ಗೃಹಕೃತ್ಯವೆಂಬ ಬಂಧನದಿಂದ ಮಾತ್ರ ಬಿಡುಗಡೆ ಇಲ್ಲ. ಜೊತೆಗೆ ಆಧುನಿಕತೆಯ ಸ್ಪರ್ಷದಿಂದ ಈ ಬಂಧನ ಇನ್ನಷ್ಟು ಮತ್ತಷ್ಟು ಬಿಗಿಯಾಗುತ್ತಿರುವುದನ್ನು ಈ ಕವನ ಚರ್ಚಿಸುತ್ತದೆ.

> ಕೆಡದಂತೆ ಉಪ್ಪಿನಕಾಯನ್ನೂ ಬಾಡದಂತೆ ಸೊಪ್ಪನ್ನು
> ಕುಟ್ಟೆ ಹಿಡಿಯದಂತೆ ಕಾಳನ್ನೂ
> ಅವಳು ಜೋಪಾನ ಮಾಡುತ್ತಾಳೆ.
> ಮಡಿಕೆ ಕುಡಿಕೆ ಪಿಂಗಾಣಿಗಳ ಒಡೆಯದಂತೆ ಒಪ್ಪ ಮಾಡುತ್ತಾಳೆ.
> ಅವಳನ್ನೇನು ಒಪ್ಪಮಾಡಬಹುದು?
> ಮನದ ಕನ್ನಡಿಯಲ್ಲಿ ಯಾರೂ ಬಿಂಬಿಸದೆ ಬದುಕು ಒರಸಿಟ್ಟು ಹೋದಾಗ
> ನೆಲವ ಕನ್ನಡಿ ಮಾಡಿ ತನ್ನ ತಾನೇ ನೋಡಿಕೊಳ್ಳುತ್ತಾಳೆ. [೨೦]

ಮನೆಯ ಹೊರಗೆ ಹೆಣ್ಣು- ಗಂಡಿನ ಭಾಗವಹಿಸುವಿಕೆ ಹಾಗೂ ಸಮಯ ಪಾಲನೆಗೆ ಸಂಬಂಧಿಸಿದಂತೆ ಸ್ಥಾಪಿತ ಮೌಲ್ಯಗಳಲ್ಲಿ ಯಾವುದೇ ರೀತಿಯ ಬದಲಾವಣೆಗೆ ಅವಕಾಶವಿಲ್ಲದಿರುವುದನ್ನು ಕಾಣಬಹುದಾಗಿದೆ. ಸಮಾಜದಲ್ಲಿ ಸ್ವತಂತ್ರವಾಗಿ ಸುತ್ತಲು ಗಂಡಿಗೆ ಯಾವುದೇ ರೀತಿಯ ನಿರ್ಬಂಧಗಳಾಗಲಿ ಸಮಯದ ಮಿತಿಯಾಗಲೀ ಇಲ್ಲ. ಒಂಟಿಯಾಗೋ ಒಂದು ಗುಂಪಿನಲ್ಲೋ ತನ್ನಿಚ್ಚೆಗೆ ಅನುಸಾರವಾಗಿ ಓಡಾಡುವ ಸ್ವಾತಂತ್ರ್ಯವಿದೆ. ಆದರೆ ಹೆಣ್ಣಿಗೆ ಮಾತ್ರ ಸಮಯದ ಮಿತಿಯನ್ನು ಹೇರಿ ಅದನ್ನು ಕಟ್ಟುನಿಟ್ಟಾಗಿ ಪಾಲಿಸಲು ಒತ್ತಾಯಿಸಲಾಗುತ್ತದೆ. ಇಡೀ ಕುಟುಂಬದ ಆರ್ಥಿಕ ಹೊಣೆಯನ್ನು ಹೆಣ್ಣೇ ಹೊತ್ತಿರುವ ಸಂದರ್ಭದಲ್ಲಿಯೂ ಕೂಡ ಅವೇಳೆಯಲ್ಲಿ ಮನೆಗೆ ಬರುವುದು, ಮನೆಯಿಂದ ಹೊರಗೆ ಉಳಿಯುವುದು ನಿಷಿದ್ಧವೇ. ಮನೆಯ ಹೊಸ್ತಿಲನ್ನು ದಾಟುವುದೇ ಅಪರಾಧ ಎಂದು ಪರಿಗಣಿಸುವ ವ್ಯವಸ್ಥೆ ಹೊರಗಿನ ಕೆಲಸಗಳೇನಿದ್ದರೂ 'ಹೊತ್ತು ಮುಳುಗುವ ಒಳಗೆ' ಮುಗಿಸಿ ಮನೆ ಸೇರುವ ನಿಯಮಕ್ಕೆ ಒಳಪಡಿಸುವಂತೆ ಪ್ರೇರೇಪಿಸುತ್ತದೆ. ಇದು ಒಂದು ಬಗೆಯಲ್ಲಿ ಹೆಣ್ಣು ಹೊಸ್ತಿಲನ್ನು ದಾಟದಂತೆ 'ಗೃಹ ಬಂಧನಕ್ಕೆ' ಒಳಪಡಿಸಿದ ಅಲಿಖಿತ ಶಾಸನದ ಮುಂದುವರಿಕೆಯೇ ಆಗಿದೆ.

ಆಧುನಿಕ ಸಂದರ್ಭದಲ್ಲಿ ರಾತ್ರಿ ಪಾಳಯದಲ್ಲಿ ದುಡಿಯುವ ಹೆಣ್ಣಿನ ಪರಿಸ್ಥಿತಿ ಕೂಡ ಇದಕ್ಕಿಂತ ಹೊರತಾಗಿಲ್ಲ. ರಾತ್ರಿ ಕೆಲಸಕ್ಕೆ ತೆರಳುವ ಸಂದರ್ಭದಲ್ಲಿ ಮತ್ತೊಬ್ಬ ಪುರುಷನ ರಕ್ಷಣೆಯಲ್ಲಿಯೇ ತನ್ನ ಓಡಾಟವನ್ನು ನಡೆಸಬೇಕಾಗಿದೆ. ಕೆಲಸ ನಿರ್ವಹಿಸುವ ವಾತಾವರಣದಲ್ಲಿಯೂ ಕೂಡ ಪುರುಷನ ಯಜಮಾನ್ಯ ಧೋರಣೆಯ ಬಿಗಿಭದ್ರತೆಯ ಮುಸುಕಿನಲ್ಲಿಯೇ ಇರುವಂತೆ ಪ್ರೇರೇಪಿಸಲಾಗುತ್ತದೆ. ಮೇಲ್ನೋಟಕ್ಕೆ ಇವು ಹೆಣ್ಣಿನ ಬಿಡುಗಡೆಯ ಸಂಕೇತಗಳಂತೆ ಕಂಡುಬಂದರೂ ಕುಟುಂಬದ ಒಳಗಿನ ಪುರುಷಾಧಿಪತ್ಯದ ಒಳಗೆ ನಲುಗುತ್ತಿದ್ದ ಹೆಣ್ಣು ಇಂದು ಬೇರೆ ಬೇರೆ ಪುರುಷರ ಅಧಿಕಾರದ ವಲಯದಲ್ಲಿ ತನ್ನ ಅಧೀನತೆಯನ್ನು ಒಪ್ಪಿ ಬದುಕಬೇಕಾದ ಸಂದರ್ಭ ನಿರ್ಮಾಣವಾಗಿದೆ. ವಸಾಹತುಶಾಹಿ ಆಡಳಿತದ ಸಂದರ್ಭದಲ್ಲಿ ಹೆಣ್ಣಿನ ಸ್ಥಿತಿ ಮತ್ತಷ್ಟು ಶೋಚನೀಯವಾಯಿತು. ಹಾಗೂ ಶೋಷಣೆಯ

ಮೂಲಗಳೂ ಕೂಡ ವಿಸ್ತೃತಗೊಂಡವು. "ದುಡಿಯುವ ಮಹಿಳೆಯರ ಬದುಕು ವಸಾಹತು ಆಡಳಿತದಲ್ಲಿ ದುಸ್ತರವಾಯಿತು. ಆಧುನಿಕ ವಲಯಗಳಲ್ಲಿ ಸೃಷ್ಟಿಗೊಳ್ಳುತ್ತಿದ್ದ ಉದ್ಯೋಗಗಳು ಪಾರಂಪರಿಕ ಉದ್ಯಮಗಳ ಅವನತಿಗೆ ಕಾರಣವಾದವು. ಈ ಪ್ರಕ್ರಿಯೆಯಲ್ಲಿ ಗಂಡಸರು ಹೆಂಗಸರೆನ್ನದೆ ಎಲ್ಲರೂ ಅಧೋಗತಿಗೆ ಇಳಿದರು. ಆದರೂ ಮಹಿಳೆಯರು ಗಂಡಸರಿಗಿಂತ ಹೆಚ್ಚಿನ ಕಷ್ಟನಷ್ಟಗಳಿಗೆ ಗುರಿಯಾದರು. ಏಕೆಂದರೆ ಆಗ ಕೂಲಿಕೆಲಸಗಳೇ ಅಧಿಕವಾಗಿದ್ದುದು. ತರಬೇತಿ ತಜ್ಞತೆಗಳು ಬೇಕಿಲ್ಲದೆ, ಯಾಂತ್ರೀಕರಣಗೊಂಡಿಲ್ಲದ ಈ ವಿಭಾಗಗಳಲ್ಲಿ ಮಹಿಳೆಯರು ಕನಿಷ್ಠ ಕೂಲಿಗೆ ದುಡಿಯುತ್ತಿದ್ದರು. ಅಲ್ಲದೆ, ಈ ಕೆಲಸಗಳಲ್ಲಿ ಉನ್ನತಿಗೇರುವ ಅವಕಾಶಗಳೂ ಕೂಡ ಶೂನ್ಯವಾಗಿದ್ದವು".[೨೧] ಇದರಿಂದಾಗಿ ಹೆಣ್ಣಿನ ದುಡಿಮೆಗೆ ತಕ್ಕ ಕೂಲಿಯೂ ಸಿಗದೆ, ನಿರಂತರವಾದ ದುಡಿಮೆಯಿಂದ ಆರೋಗ್ಯವನ್ನೂ ಕೂಡ ಹಾಳುಮಾಡಿಕೊಂಡು ನರಳುವಂತಾಯಿತು.

ಹೆಣ್ಣಿನ ಅರ್ಥಗಳಿಕೆಯನ್ನು ಪಿತೃಸಂಸ್ಕೃತಿ ನಿರ್ವಚಿಸುವ ಬಗೆ ಕೂಡ ಅವಳ ಅಧೀನತೆಗೆ ಅಧಿಕೃತತೆಯನ್ನು ನೀಡುವಂತದ್ದೇ ಆಗಿದೆ. ಹೊರಗಿನ ದುಡಿಮೆಯಲ್ಲಿ ಗಂಡು ಹೆಣ್ಣು ಇಬ್ಬರೂ ಸಮಾನ ಶ್ರಮವನ್ನು ವ್ಯಯಿಸಿದರೂ ಕೂಡ ಗಂಡು ಹೆಣ್ಣಿಗೆ ನೀಡುವ ವೇತನದಲ್ಲಿನ ತಾರತಮ್ಯ, ಅವಳ ದುಡಿಮೆಯನ್ನು ಪರಿಗಣಿಸುವ ಬಗೆ, ಬಡ್ತಿ ಮುಂತಾದ ವಿಷಯಗಳಲ್ಲಿ ತೋರುವ ಧೋರಣೆ ಇವೆಲ್ಲವೂ ಮೌಲ್ಯವ್ಯವಸ್ಥೆಯಿಂದ ಹೆಣ್ಣು ಹೊರಬರದಂತೆ ರೂಪಿಸಿರುವ ಕಾರ್ಯತಂತ್ರಗಳೇ ಆಗಿವೆ. ಈ ಮೂಲಕ ಹೆಣ್ಣಿನ ದುಡಿಮೆಯನ್ನು ಗಂಡಿನ ದುಡಿಮೆಗಿಂತ ಕೆಳದರ್ಜೆಯದೆಂದು ಪ್ರತಿಬಿಂಬಿಸುವ ಹಾಗು ಅವಳ ದುಡಿಮೆಯನ್ನು 'ಅಧೀನತೆಗೆ' ಒಳಪಡಿಸುವ ಹುನ್ನಾರವೇ ಕಂಡುಬರುತ್ತದೆ. ಜೊತೆಗೆ ಪುರುಷ ಪ್ರಧಾನ ವ್ಯವಸ್ಥೆ ಹೆಣ್ಣಿನ ದುಡಿಮೆಯನ್ನು ಅಲ್ಲಗಳೆಯುವ ಮೂಲಕ ಅವಳ ದುಡಿಮೆಯ ಅಗತ್ಯತೆಯನ್ನು ನಿರಾಕರಿಸುತ್ತದೆ. ಮಹಿಳೆ ಅತ್ಯಂತ ಉನ್ನತ ಸ್ಥಾನದಲ್ಲಿದ್ದು, ಗಂಡಿಗೆ ಸಮಾನ ವೇತನವನ್ನೇ ತರುವ ಸಂದರ್ಭದಲ್ಲಿಯೂ ಕೂಡ ಗಂಡಿನ ದುಡಿಮೆಯೇ ಕುಟುಂಬದ ನಿರ್ವಹಣೆಯ ಮೂಲ ಆದಾಯ. ಹೆಣ್ಣಿನದು ಕೇವಲ ಅಲಂಕಾರ ಸಾಮಗ್ರಿಗಳ, ಬೇಡದ ವಸ್ತುಗಳಿಗೆ ವಿನಿಯೊಗಿಸ್ಪಡುವ ದುಂದುಗಾರಿಕೆಗೆ ಬಳಕೆಯಾಗುವುದು ಎಂಬ ರೀತಿಯಲ್ಲಿಯೇ ಬಿಂಬಿಸಲಾಗುತ್ತದೆ. ಇದರಿಂದಾಗಿ ಹೆಣ್ಣು ತನ್ನ ದುಡಿಮೆಯಿಂದಾಗಿ ತನ್ನ ಸ್ವತಂತ್ರ ಬದುಕನ್ನು ರೂಪಿಸಿಕೊಳ್ಳಲು ಇಂದಿಗೂ ಕೂಡ ಹೆಣಗಬೇಕಾಗಿದೆ.

ಹಿಂದಿನಂತೆ ಇಂದಿಗೂ ಕೂಡ ಕುಟುಂಬ ನಿರ್ವಹಣೆಗೆ ಸಂಬಂಧಿಸಿದ ಆಯವ್ಯಯಗಳ ಸಂಪೂರ್ಣ ಜವಾಬ್ದಾರಿ ಗಂಡಿನದೇ ಆಗಿದೆ. ಹೆಣ್ಣು ತಾನು ದುಡಿದು ತಂದದ್ದನ್ನು ಸಂಪೂರ್ಣ ತಂದೆ, ಅಥವಾ ಗಂಡನಿಗೆ ಒಪ್ಪಿಸಿ ತನ್ನ ದಿನದ ಖರ್ಚಿಗೆ ಅವನ ಮುಂದೆ ಅಂಗಲಾಚುವ ಹೆಣ್ಣಿನ ಅಧೀನಸ್ಥಿತಿ ಇಂದಿಗೂ ಕೂಡ ಮುಂದುವರೆದಿದೆ. ಅಲ್ಲದೆ ಹೆಣ್ಣು ಸ್ವತಂತ್ರವಾಗಿ ದುಡಿಯುವ ಸಂದರ್ಭದಲ್ಲಿಯೂ ಕೂಡ ಅವಳ ಹಣದ ವಿನಿಯೋಗ ಯಾವ ಯಾವ ಕ್ಷೇತ್ರದಲ್ಲಿ ಎಷ್ಟೆಷ್ಟು ಪ್ರಮಾಣದಲ್ಲಿರಬೇಕು ಎಂಬುದನ್ನು ನಿರ್ಣಯಿಸುವ ಅಧಿಕಾರ ಮಾತ್ರ ಯಾಜಮಾನ್ಯ ಕೇಂದ್ರಿತ ನೆಲೆಯದ್ದೇ ಆಗಿರುತ್ತದೆ. ಹೆಣ್ಣು ತನ್ನ ದುಡಿಮೆಯನ್ನು ಸ್ವತಂತ್ರವಾಗಿ, ಬಂಡವಾಳವನ್ನಾಗಿ ಬಳಸುವ

ಸ್ವತಂತ್ರ ಇಲ್ಲ. ಈ ಎಲ್ಲಾ ಅಂಶಗಳು ಹೆಣ್ಣಿನ ಆರ್ಥಿಕ ಅಧೀನತೆಗೆ ಸಂಬಂಧಿಸಿದಂತೆ ಆಧುನಿಕ ಸಂದರ್ಭದಲ್ಲಿ ಮೌಲ್ಯ ಸಂರಚನೆಗೊಳ್ಳುತ್ತಿರುವ ವಿಧಾನಗಳನ್ನು ಸ್ಪಷ್ಟಪಡಿಸುತ್ತದೆ.

**೩.೩ ಸ್ಥಿರಮಾದರಿ ಪಾತ್ರ ವಿನ್ಯಾಸ**

ಪುರುಷ ಪ್ರಧಾನ ಮೌಲ್ಯವ್ಯವಸ್ಥೆ ಗಂಡು ಹೆಣ್ಣಿನ ಕಾರ್ಯಮಾದರಿಗಳು ಹಾಗೂ ಅವರ ವ್ಯಕ್ತಿತ್ವ ರೂಪುಗೊಳ್ಳುವುದಕ್ಕೆ ಸಂಬಂಧಿಸಿದಂತೆ ಕೆಲವು ನಿರ್ದಿಷ್ಟ ಪಾತ್ರ ಮಾದರಿಗಳನ್ನು ನಿರ್ಮಿಸಿ ಅದಕ್ಕೆ ಬದ್ಧರಾಗಿರುವಂತೆ ಒತ್ತನ್ನು ನೀಡುತ್ತಾ ಬಂದಿದೆ. ಗಂಡಿಗೆ ತಂದೆ, ಪೋಷಕ, ಗಂಡ ಯಜಮಾನನ ಸ್ಥಾನವನ್ನು ನೀಡಿದರೆ, ಹೆಣ್ಣಿಗೆ ತಾಯಿ, ಹೆಂಡತಿ, ಸೇವಕಿ ಮುಂತಾದ ಅಧೀನ ನೆಲೆಯ ಸ್ಥಾನವನ್ನು ನಿಗದಿಪಡಿಸಿದೆ. ಆದರೆ ಗಂಡು ತನ್ನ ಪಾತ್ರ ನಿರ್ವಹಣೆಗೆ ಸಂಬಂಧಿಸಿದಂತೆ ಅದನ್ನು ಮೀರಲು ಅವಕಾಶಗಳನ್ನೂ, ಹಲವು ಸಾಧ್ಯತೆಗಳನ್ನು ನೀಡಿದೆಯಾದರೂ, ಹೆಣ್ಣು ಮಾತ್ರ ಎಲ್ಲಾ ಕಾಲದಲ್ಲಿಯೂ ಈ ಪಾತ್ರಗಳಿಗೆ ನಿಷ್ಠಳಾಗಿ ವರ್ತಿಸಬೇಕಾದ, ಆ ಚೌಕಟ್ಟಿನೊಳಗೇ ತನ್ನೆಲ್ಲಾ ಕಾರ್ಯಚಟುವಟಿಕೆಗಳನ್ನು ರೂಪಿಸಿಕೊಳ್ಳಬೇಕಾದ ಅನಿವಾರ್ಯತೆಯನ್ನು ಸೃಷ್ಟಿಸಿ ಮೌಲ್ಯವ್ಯವಸ್ಥೆಯಿಂದ ಯಾವುದೇ ಹಂತದಲ್ಲಿಯೂ ಕೂಡ ಹೊರನಡೆಯದಂತೆ ಕಾರ್ಯತಂತ್ರಗಳನ್ನು ರೂಪಿಸಿದೆ. ಈ ಪಾತ್ರಗಳು ಕಾಲ, ದೇಶ, ಸಂದರ್ಭಗಳನ್ನು ಮೀರಿ ತಮ್ಮ ಅಸ್ತಿತ್ವವನ್ನು ಉಳಿಸಿಕೊಂಡಿವೆ ಹಾಗೂ ಹೆಣ್ಣಿನ ಮೇಲೆ ಒತ್ತಾಯ ಪೂರ್ವಕವಾಗಿಯಾದರೂ ಸರಿ ಹೇರಲ್ಪಡುತ್ತವೆ.

ಈ ಸ್ಥಿರಮಾದರಿ ಪಾತ್ರಗಳು ಕಾಲದಿಂದ ಕಾಲಕ್ಕೆ ತನ್ನ ಅಸ್ತಿತ್ವವನ್ನು ಉಳಿಸಿಕೊಂಡು ಬಂದಿರುವ ಬಗೆಗಳನ್ನು ಮಹಿಳಾ ಕಾವ್ಯ ಪ್ರಧಾನವಾಗಿ ಚರ್ಚೆಗೆ ಒಳಪಡಿಸುತ್ತದೆ. ಡಿ.ಬಿ. ರಜಿಯಾರವರ 'ಅಪಹಾಸ್ಯ' ಕವನ ಕಾಲ ಬದಲಾದಂತೆ ಹೆಣ್ಣಿನ ವೇಷಭೂಷಣಗಳು ಬದಲಾದರೂ ಕೂಡ ಹೆಣ್ಣಿನ ಬಗೆಗಿನ ಸ್ಥಾಪಿತ ಹಿತಾಸಕ್ತಿಗಳು ಯಥಾವತ್ತಾಗಿ ಮುಂದುವರಿಯುತ್ತಿರುವುದನ್ನು ದಾಖಲಿಸುತ್ತದೆ.

> ಅಮ್ಮ ಉಟ್ಟ
> ಆರುಮೊಳದ ಸೀರೆ
> ಅಕ್ಕನುಟ್ಟ ಗಾರ್ಡನ್ ಸ್ಯಾರಿಯೂ
> ಶುಷ್ಮಾಳು ತೊಟ್ಟ ಸಲ್ವಾರು
> ಸಾಲು – ಸಾಲಾಗಿ ಬದಲಾಗುತ್ತಿದ್ದರೂ
> ಬದಲಾಗಲಿಲ್ಲಾ
> ಒಳ ಚಿಂತನೆಗಳಲ್ಲಿ
> ಒತ್ತಿಕೊಂಡ "ಹಳೆಯದೇ ಸೀಲು"[೨೨]

ಮುಂದುವರೆದು ಇದು ಬದಲಾಗದಿರುವುದಕ್ಕೆ ಕಾರಣಗಳನ್ನೂ, ಅದಕ್ಕೆ ಪಿತೃ ಪ್ರಭುತ್ವದ ಕೊಡುಗೆಯನ್ನೂ ಕವನ ಅತ್ಯಂತ ಯಶಸ್ವಿಯಾಗಿ ದಾಖಲಿಸುತ್ತದೆ.

**ಪಾತ್ರ ನಿರ್ದಿಷ್ಟತೆ :** ಕುಟುಂಬ ಹಾಗೂ ಸಾಮಾಜಿಕ ಸಂದರ್ಭದಲ್ಲಿ ಹೆಣ್ಣಿನ ವ್ಯಕ್ತಿತ್ವವನ್ನು ಸೀಮಿತ ಚಹರೆ ಅಥವಾ ಕೆಲ ನಿರ್ದಿಷ್ಟ ಪಾತ್ರಗಳಿಗೆ ಸೀಮಿತಗೊಳಿಸಿ ಆ ರೀತಿಯಲ್ಲಿ ಹೆಣ್ಣು ಬದುಕನ್ನು ರೂಪಿಸಿಕೊಳ್ಳುವಂತೆ ಒತ್ತಾಯಿಸಲಾಗುತ್ತಿದೆ. ಸಾಮಾಜಿಕ ಸಂದರ್ಭದಲ್ಲಿ ಹೆಣ್ಣಿನ ಭಾಗವಹಿಸುವಿಕೆ ಸಂಪೂರ್ಣ ಶೂನ್ಯವೇ ಆದರೂ ಕುಟುಂಬದಲ್ಲಿ ಅವಳು ನಿರ್ವಹಿಸುವ ಪಾತ್ರ ತಾಯಿ, ಹೆಂಡತಿ, ಮಗಳು, ಅತ್ತೆ, ಸೊಸೆ, ಅತ್ತಿಗೆ, ನಾದಿನಿ, ಅಕ್ಕ, ತಂಗಿ ಮುಂತಾದವುಗಳು. ಈ ಪಾತ್ರಗಳಿಗೆ ನಿರ್ದಿಷ್ಟ ಕಾರ್ಯಮಾದರಿಗಳನ್ನು, ಪಾತ್ರ ವಿಶಿಷ್ಟತೆಯನ್ನು ನಿಗದಿಪಡಿಸಲಾಗಿದ್ದು ಅದೇ ರೀತಿಯಲ್ಲಿ ನಡೆದುಕೊಳ್ಳುವಂತೆ ಎಲ್ಲಾ ಕಾಲದಲ್ಲಿಯೂ ಕೂಡ ಪ್ರೇರೇಪಿಸಲಾಗುತ್ತದೆ. ಕೆಲ ಸಂದರ್ಭದಲ್ಲಿ ಇವು ಒಂದಕ್ಕೊಂದು ಪೂರಕವಾಗಿಯೂ, ಕೆಲ ಸಂದರ್ಭದಲ್ಲಿ ವೈರುಧ್ಯದಿಂದ ಕೂಡಿಯೂ ಇರುತ್ತವೆ. ಅತ್ತೆ-ಸೊಸೆ, ಹೆಂಡತಿ-ಸೂಳೆ, ಅತ್ತಿಗೆ-ನಾದಿನಿ, ಮುಂತಾದ ಪಾತ್ರಗಳು ಪರಸ್ಪರರಲ್ಲಿ ಹೊಂದಾಣಿಕೆ ಇಲ್ಲದೆ ದ್ವೇಷ, ಅಸೂಯೆಯಿಂದ ವರ್ತಿಸಬೇಕಾದ ಸಂದರ್ಭಗಳನ್ನು ಸೃಷ್ಟಿಸಲಾಗಿದೆ. ಆದರೆ ಅವರುಗಳು ಆ ಪಾತ್ರಗಳಿಗೆ ನಿಷ್ಠರಾಗಿರುವಂತೆ, ಅದಕ್ಕೆ ಪೂರಕವಾಗಿ ತಮ್ಮ ವ್ಯಕ್ತಿತ್ವವನ್ನು ರೂಪಿಸಿಕೊಳ್ಳುವಂತೆ ಪುರುಷ ಪ್ರಭುತ್ವ ಪ್ರೇರೇಪಣೆಯನ್ನು ನೀಡುತ್ತದೆ. ಇದರಿಂದಾಗಿ ಹೆಣ್ಣಿಗೆ ಹೆಣ್ಣೇ ಶತ್ರು ಎಂಬಂತೆ ಮೇಲ್ನೋಟಕ್ಕೆ ಕಂಡುಬರುವುದಲ್ಲದೆ ಆ ಬಗೆಯ ಆಲೋಚನೆಯೇ ಎಲ್ಲಾ ಕಾಲದಲ್ಲಿಯೂ ಸತ್ಯ ಎಂಬ ರೀತಿಯಲ್ಲಿ ಬಿಂಬಿತವಾಗುತ್ತಿದೆ. ಆದರೆ ಕುಟುಂಬದಲ್ಲಿ ಯಜಮಾನನ ಸ್ಥಾನವನ್ನು ಪಡೆದಿರುವ ಗಂಡು ತಂದೆ, ಗಂಡ, ಅಣ್ಣ, ತಮ್ಮ ಮುಂತಾದ ಪಾತ್ರಗಳನ್ನು ನಿರ್ವಹಿಸುತ್ತಾರಾದರೂ ಅದಕ್ಕೆ ಬದ್ಧವಾಗಿರಬೇಕಾದ ಅನಿವಾರ್ಯತೆಯಾಗಲೀ ಒತ್ತಡವಾಗಲೀ ಇಲ್ಲ. ಅದನ್ನು ಮೀರಿ ತನ್ನ ವ್ಯಕ್ತಿತ್ವವನ್ನು ರೂಪಿಸಿಕೊಳ್ಳಲು ನಮ್ಮ ಸಾಮಾಜಿಕ ವ್ಯವಸ್ಥೆಯಲ್ಲಿ ಅವಕಾಶವನ್ನು ಕಲ್ಪಿಸಿಕೊಡಲಾಗಿದೆ.

ಇವುಗಳಲ್ಲಿ ತಾಯಿಯ ಪಾತ್ರ ಹೆಚ್ಚು ಗೌರವಾನ್ವಿತವಾದದ್ದು ತನ್ನ ಮಕ್ಕಳ ಹೊಣೆ, ಪಾಲನೆ, ಪೋಷಣೆಯಿಂದ ಹಿಡಿದು ಗೃಹ ನಿರ್ವಹಣೆ, ಗೃಹ ಕಾರ್ಯ ಎಲ್ಲವೂ ಇವಳ ಜವಾಬ್ದಾರಿ. ನಗುಮೊಗದಿಂದ ಅದೆಲ್ಲವನ್ನೂ ನಿರ್ವಹಿಸುವ, ಎಂತಹ ಕಷ್ಟದ ಸ್ಥಿತಿಯಲ್ಲಿಯೂ ಮಕ್ಕಳಿಗೆ ಕೆಡುಕಾಗದಂತೆ ಕಾಯುವ ತಾಯಿಯ ಪಾತ್ರ ಚಿತ್ರಣವನ್ನು ಬಿತ್ತುವ ಮೂಲಕ ತಾಯಿಗೆ ಮಕ್ಕಳ ಸಂಪೂರ್ಣ ಹೊಣೆಗಾರಿಕೆ ಇಷ್ಟವಿರಲಿ, ಇಲ್ಲದಿರಲಿ ಅನಿವಾರ್ಯವಾಗಿ ಅದನ್ನು ನಿರ್ವಹಿಸಬೇಕಾದಂತ ರೀತಿಯಲ್ಲಿ ಹೆಣ್ಣಿನ ಮನಸ್ಥಿತಿಯನ್ನು ರೂಪಿಸಲಾಗಿದೆ. ಅಲ್ಲದೆ ತಾಯ್ತನದ ಹೊಣೆಗಾರಿಕೆಯನ್ನು, ಮಕ್ಕಳ ಬಗೆಗಿನ ಅಕ್ಕರೆ, ಪ್ರೀತಿ, ಮಮಕಾರಗಳನ್ನು ಹೆಣ್ಣಿನ ಹುಟ್ಟುಗುಣಗಳು ಎಂಬಂತೆ ಬಿಂಬಿಸಿ ಅದಕ್ಕೆ ಬದ್ಧವಾಗಿರಬೇಕಾದ ಅನಿವಾರ್ಯ ವಾತಾವರಣವನ್ನು ಸೃಷ್ಟಿಸಲಾಗಿದೆ. ಬಿ.ಟಿ.ಲಲಿತಾನಾಯಕ್ ತಾಯ್ತನವನ್ನು ಮೌಲ್ಯವಾಗಿಸುವುದರ ಬಗೆಗಿನ ಪಿತೃಪ್ರಭುತ್ವದ ಹುನ್ನಾರಗಳನ್ನು ಪ್ರಶ್ನಿಸುವುದರ ಮೂಲಕ ಅದರ ಸಹಜತೆಯನ್ನು ಮನದಟ್ಟುಮಾಡಿಕೊಡಲು ಪ್ರಯತ್ನಿಸುತ್ತಾರೆ. ಅವರ ಚಿಲ್ಲರೆಯಾಗುತ್ತಿದ್ದೇನೆ ಕವನ ಮೌಲ್ಯವ್ಯವಸ್ಥೆಯ ಹೆಸರಿನಲ್ಲಿ ಇಡೀ ಹೆಣ್ಣಿನ ಬದುಕೇ ಪುರುಷ ಪ್ರಭುತ್ವದ ಅಧೀನಕ್ಕೆ ಒಳಪಟ್ಟಿರುವುದನ್ನು ಚರ್ಚೆಗೆ ಒಳಪಡಿಸುತ್ತದೆ.

‘ತಂದೆತನ’ ನಿನ್ನ ಬದುಕಿನ ಒಂದಂಶ ಮಾತ್ರವಾದರೆ
ಆ ಮಾತು ಅನ್ವಯಿಸುವುದು ನನ್ನ ‘ತಾಯ್ತನ’ಕ್ಕೂ ಕೂಡ
ಎಂಬ ಕಿವಿಮಾತೊಂದ ನಿನಗೆ ಹೇಳಲು
ಸಮಯ ಕಾಯುತ್ತಿದ್ದೇನೆ. . . [೨೭]

ಆದರೆ ಈ ಮೌಲ್ಯವ್ಯವಸ್ಥೆ ಬದಲಾಗದೆ ತನ್ನ ಮೂಲ ಸ್ವರೂಪವನ್ನು ಇಂದಿಗೂ ಕೂಡ ಕಾಯ್ದುಕೊಂಡು ಬಂದಿರುವುದನ್ನು ಮಹಿಳಾ ಕಾವ್ಯ ತೆರೆದಿಡುತ್ತದೆ. ತಾಯ್ತನ ಹೆಣ್ಣಿನ ಜೀವನದ ಅತ್ಯಂತ ಶ್ರೇಷ್ಠ ಅನುಭವವಾದರೂ ಕೂಡ ಈ ಹೊಣೆಗಾರಿಕೆಯ ಮಿತಿಗಳು ಹೆಣ್ಣನ್ನು ಹಿಡಿದಿಡುವ ಬಗೆಯನ್ನು ಮಹಿಳಾ ಕಾವ್ಯ ಮತ್ತೆ ಮತ್ತೆ ಚರ್ಚೆಗೆ ಒಳಪಡಿಸುತ್ತದೆ. ಅವರ ಸಾಮಾಜಿಕ, ಔದ್ಯೋಗಿಕ ಭಾಗವಹಿಸುವಿಕೆಯ ಸಂದರ್ಭದಲ್ಲಿ ಅದರ ಮಿತಿಗಳು ಅವಳ ವ್ಯಕ್ತಿತ್ವವನ್ನು ಸೀಮಿತಗೊಳಿಸಿಬಿಡುವ ಸಾಧ್ಯತೆಗಳನ್ನು ಗುರುತಿಸಬಹುದು. ಅದೇ ರೀತಿ ಹೆಂಡತಿ, ಮಗಳು, ಅತ್ತೆ, ಸೊಸೆ ಮುಂತಾದ ಪಾತ್ರಗಳಗೂ ಕೂಡ ನಿರ್ದಿಷ್ಟ ಕಾರ್ಯ ವಿಧಾನಗಳನ್ನು ಹೇರುವ ಮೂಲಕ ಪುರುಷ ಪ್ರಭುತ್ವದ ಅಪೇಕ್ಷೆಗೆ ತಕ್ಕಂತೆ ಹೆಣ್ಣಿನ ಬದುಕನ್ನು ರೂಪಿಸಲಾಗುತ್ತಿದೆ.

ಬದಲಾದ ಕಾಲ, ಸಂದರ್ಭದಲ್ಲಿ ಹೆಣ್ಣು ಆಧುನಿಕತೆಯಿಂದ ದೊರೆತ ಉದ್ಯೋಗ, ಶಿಕ್ಷಣದ ಹೊಸ ಅವಕಾಶಗಳ ನಡುವೆಯೂ ತನ್ನ ಪಾತ್ರಕ್ಕೆ ಧಕ್ಕೆಯುಂಟಾಗದ ರೀತಿಯಲ್ಲಿ ದ್ವಿಮುಖ ಪಾತ್ರವನ್ನು ನಿರ್ವಹಿಸಬೇಕಾಗಿದೆ. ಹೊರಗೆ ದುಡಿದು ಆಯಾಸಗೊಂಡ ಸಂದರ್ಭದಲ್ಲಿಯೂ ಕೂಡ ತಾಯಿಯ ಪಾತ್ರವನ್ನಾಗಲೀ, ತಾಯ್ತನದ ಹೊಣೆಗಾರಿಕೆಯನ್ನಾಗಲೀ ಮೀರಿ ನಡೆಯುವಂತಿಲ್ಲ. ‘ಒಳ್ಳೆಯ’ ತಾಯಿಯಾಗಿ, ‘ಉತ್ತಮ’ ಗೃಹಿಣಿಯಾಗಿ, ‘ಆದರ್ಶ’ಸತಿಯಾಗಿ ಬಾಳುವ ಹಂಬಲದಲ್ಲಿ ಹೆಣ್ಣು ಮತ್ತಷ್ಟು ಸಂಕಷ್ಟಗಳಿಗೆ ಒಳಗಾಗುತ್ತಿರುವುದನ್ನು ಪ್ರತಿಭಾ ನಂದಕುಮಾರ್‌ರವರ ‘ಮಧ್ಯಂತರ’ ಕವನ ಈ ರೀತಿಯಲ್ಲಿ ಪ್ರಕಟಗೊಳಸುತ್ತದೆ.

ಸೆಮಿನಾರುಗಳಲ್ಲಿ ತೂಕಡಿಸುತ್ತ
ನಾಳೆಯ ಅಡಿಗೆಯ ಯೋಚನೆ
ಯಾರದೋ ಸಲಹೆಯ ಮೇರೆಗೆ
ಬೆಳಗಿನ ವಾಕಿಂಗ್ ಪ್ರಾರಂಭಿಸಿ ಇನ್ನಷ್ಟು ರಗಳೆ.
ಕಪ್ಪಾದ ಮುಖ ಬ್ಲೀಚ್ ಮಾಡಿಸಿಕೊಂಡ ದಿನ
ಎಲ್ಲದರ ಬಗ್ಗೆ ವಿಶೇಷ ಆಸಕ್ತಿ.
ಹುಬ್ಬು ಬೆಳೆದು ಪೊದೆಯಾಗಿ ತಿದ್ದಿಸಿಕೊಳ್ಳಲು
ಸಮಯವಿಲ್ಲದಾಗ ಮಾತು ಮಾತಿಗೆ ಜಗಳ[೨೮]

ಎಲ್ಲಾ ಕಾಲದಲ್ಲಿಯೂ ಕೂಡ ಹೆಣ್ಣು ನಿರ್ದಿಷ್ಟಗೊಳಿಸಲ್ಪಟ್ಟ ಪಾತ್ರ ಮಾದರಿಗಳನ್ನು ಮೀರಲಾರದೆ ಸಂಕಷ್ಟಕ್ಕೆ ಗುರಿಯಾಗುತ್ತಿರುವುದನ್ನೂ, ಆಧುನಿಕತೆಯು ಹೆಣ್ಣಿಗೆ ಬಿಡುಗಡೆಯ ದಾರಿಗಳನ್ನು ತೋರುವ ಬದಲು ಅವಳನ್ನು ಮತ್ತಷ್ಟು ಬಂಧಿಯಾಗಿಸುತ್ತಿರುವುದನ್ನೂ ಮಹಿಳಾ ಕಾವ್ಯ ಚರ್ಚಿಸುತ್ತದೆ. ಅಲ್ಲದೆ ಗಂಡ ಹೆಂಡತಿ ಇಬ್ಬರೂ ದುಡಿಯುವ ಸಂದರ್ಭದಲ್ಲಿಯೂ ಮಕ್ಕಳಿಗೆ ತೊಂದರೆಯಾದಲ್ಲಿ ಅವರ ಆರೋಗ್ಯ ಕೆಟ್ಟಲ್ಲಿ ಎಂತಹ ಸ್ಥಾನದಲ್ಲಿದ್ದರೂ ಹೆಣ್ಣು ತನ್ನ ಹೊಣೆಗಾರಿಕೆಯಿಂದ ಮಾತ್ರ ನುಣಿಚಿಕೊಳ್ಳುವಂತಿಲ್ಲ. ಆದರೆ ಗಂಡಿಗೆ ಮಾತ್ರ ಈ ಒತ್ತಡಗಳಿರುವುದಿಲ್ಲ. ಅದು ಅವನ

ಆಯ್ಕೆಯಾಗಿರುತ್ತದೆ. ಒಂದು ವೇಳೆ ಮಕ್ಕಳ ಬಗ್ಗೆ ಕಾಳಜಿಯನ್ನು, ಹೆಂಡತಿಯ ಬಗ್ಗೆ ಒಲವನ್ನು ಹೊಂದಿದ್ದರೆ ಅದು ಗಂಡಿನ ಉದಾತ್ತ ವ್ಯಕ್ತಿತ್ವದಂತೆ ಬಿಂಬಿತವಾಗುತ್ತದೆ.

**ಮಾದರಿ ಪಾತ್ರಗಳು** : ಪುರುಷ ಪ್ರಧಾನ ಮೌಲ್ಯವ್ಯವಸ್ಥೆ ಹೆಣ್ಣನ್ನು ಚೌಕಟ್ಟಿನೊಳಗೆ ನಿರ್ದಿಷ್ಟಗೊಳಿಸುವುದರೊಂದಿಗೆ ಆ ಪಾತ್ರಗಳನ್ನು ಮೌಲ್ಯವ್ಯವಸ್ಥೆಯ ಚೌಕಟ್ಟಿನೊಳಗೆ 'ಮಾದರಿ ಪಾತ್ರ'ಗಳನ್ನಾಗಿ ನಿರ್ಮಿಸಿದೆ. ಈ ಮೂಲಕ ಹೆಣ್ಣಿನ ಪಾತ್ರ ನಿರ್ದಿಷ್ಟ ಸಾಂಸ್ಕೃತಿಕ ಮೌಲ್ಯಗಳಾಗಿ, ಸಮಾಜ ಒಪ್ಪಿತ ಮಾದರಿಗಳಾಗಿ ಮಾರ್ಪಟ್ಟಿವೆ. ತಾಯ್ತನ, ಸತೀತ್ವ, ಸಾಧ್ವಿ, ಪತಿವ್ರತೆ ಮುಂತಾದ ಪಾತ್ರ ಮಾದರಿಗಳು ಹೆಣ್ಣನ್ನು ದೈಹಿಕ ಹಾಗೂ ಮಾನಸಿಕವಾಗಿ ಕುಟುಂಬಕ್ಕೆ ನಿಷ್ಠವಾಗಿರುವಂತೆ ಪ್ರೇರೇಪಿಸುತ್ತದೆ. ಈ ಪಾತ್ರ ಮಾದರಿಗಳ ಮೂಲಕ ಹೆಣ್ಣಿನ ಸ್ವಂತ ಅಸ್ತಿತ್ವಕ್ಕೆ, ಅವಳ ವ್ಯಕ್ತಿತ್ವಕ್ಕೆ ಒಂದು ಘನತೆ ದೊರಕಬಹುದಾದರೆ ಅದು ಗಂಡಿನಿಂದ, ಗಂಡಿನ ಮೂಲಕ ಮತ್ತು ಗಂಡಿಗಾಗಿ ಮಾತ್ರ ಎಂಬಂತೆ ಬಿಂಬಿಸಲಾಗಿದೆ. ಮಕ್ಕಳಿಗೆ ತಕ್ಕ ತಾಯಿಯಾಗಿ, ಗಂಡನಿಗೆ ನಿಷ್ಠ ಸತಿಯಾಗಿ, ಕುಟುಂಬದ ಒಳಿತು ಘನತೆ ಮರ್ಯಾದೆಗಳಿಗೆ ತನ್ನ ಬದುಕನ್ನು ಮುಡುಪಾಗಿಡುವ 'ಆದರ್ಶ ಗೃಹಿಣಿ'ಯಾಗಿ ಬದುಕನ್ನು ರೂಪಿಸಿಕೊಳ್ಳಲು ಈ ಪಾತ್ರಮಾದರಿಗಳು ಒತ್ತಾಯಿಸುತ್ತವೆ. ಇದಕ್ಕೆ ವಿರುದ್ಧವಾಗಿ ನಡೆದುಕೊಂಡ ಸಂದರ್ಭದಲ್ಲಿ ಆಕೆಯ ಇಡೀ ವ್ಯಕ್ತಿತ್ವವೇ ಶೂನ್ಯವೆನಿಸಿ ಸಮಾಜದ ಅಪನಿಂದನೆಗೆ ಗುರಿಯಾಗಬೇಕಾಗುತ್ತದೆ. ಆದರೆ ಗಂಡಿಗೆ ಮಾತ್ರ ಈ ಪಾತ್ರ ಮಾದರಿಗಳು ಅನ್ವಯಿಸುವುದಿಲ್ಲ. ಹೆಂಡತಿಗೆ ನಿಷ್ಠನಾಗಿರುವ, ಕುಟುಂಬಕ್ಕೆ ಬದ್ಧನಾಗಿರುವ ಗಂಡ ಸಮಾಜದಲ್ಲಿ ಉತ್ತಮ ವ್ಯಕ್ತಿಯೆಂದು ಬಿರುದು ಪಡೆಯುತ್ತಾನೆ. ಮಾತ್ರವಲ್ಲದೆ ಎಲ್ಲರಿಂದ ಗೌರವಕ್ಕೆ ಪಾತ್ರನಾಗುತ್ತಾನೆ. ಆದರೆ ಹೆಣ್ಣು ಮಾತ್ರ ಈ ಸ್ಥಾನಕ್ಕೇರಲು ತನ್ನ ಜೀವಮಾನವಿಡೀ ಶ್ರಮಿಸಬೇಕಾಗುತ್ತದೆ.

ಹೊಸ ಹೊಸ ಅವಕಾಶಗಳು, ಅನುಕೂಲಗಳು ಹೆಣ್ಣು ಗಂಡು ಇಬ್ಬರಿಗೂ ದತ್ತವಾಗಿರುವ ಸಂದರ್ಭದಲ್ಲಿಯೂ ಹೆಣ್ಣು ಮಾತ್ರ ಈ ಮಾದರಿಗಳಿಂದ ಒಂದಿಂಚೂ ಆಚೀಚೆ ಸರಿಯದಂತೆ ಎಚ್ಚರ ವಹಿಸಲಾಗುತ್ತಿದೆ. ಉದ್ಯೋಗಸ್ಥರಾಗಿರಲಿ ಇಲ್ಲದಿರಲಿ, ಸಾಮಾಜಿಕ ಚಟುವಟಿಕೆಗಳಲ್ಲಿ ಭಾಗವಹಿಸುತ್ತಿರಲಿ ಬಿಡಲಿ ಹೆಣ್ಣು ಮಾತ್ರ ತಾಯ್ತನ, ಸತೀತ್ವ, ಪಾತಿವ್ರತ್ಯದಂತಹ ಮೌಲ್ಯಗಳಿಗೆ ಸ್ವಲ್ಪವೂ ದಕ್ಕೆಯುಂಟಾಗದ ರೀತಿಯಲ್ಲಿ ಇರುವುದನ್ನೇ ಇಂದಿಗೂ ಕೂಡ ನಿರೀಕ್ಷಿಸಲಾಗುತ್ತದೆ.

ಹೆಣ್ಣಿನ ಮೇಲೆ ಮೌಲ್ಯವ್ಯವಸ್ಥೆಯನ್ನು ಕಟ್ಟುನಿಟ್ಟಿನಲ್ಲಿ ಹೇರುವ ಸಲುವಾಗಿ ಪುರಾಣದ ಸ್ತ್ರೀ ಪಾತ್ರಗಳ ಮೂಲಕ ಮೌಲ್ಯಗಳನ್ನು ಹೇರಲಾಗಿದೆ. ಸೀತೆ, ಸಾವಿತ್ರಿ, ಮಂಡೋದರಿ, ಶಕುಂತಲೆ ಮುಂತಾದ ಪಾತ್ರಗಳ ಗಟ್ಟಿ ವ್ಯಕ್ತಿತ್ವದಾಚೆಗೆ ನಿಲ್ಲಬಹುದಾದ ಸತೀತ್ವ, ಪಾತಿವ್ರತ್ಯ, ಧರ್ಮ ಪರಿಪಾಲನೆ ಮುಂತಾದ ಮೌಲ್ಯಗಳನ್ನು ಈ ಪಾತ್ರಗಳ ಮೂಲಕ ವೈಭವೀಕರಿಸಿ ಆ ರೀತಿಯಲ್ಲಿ ಬದುಕುವುದು ಹಾಗೂ ತನ್ನ ಜೀವನವನ್ನು ರೂಪಿಸಿಕೊಳ್ಳುವುದು ಪ್ರತಿ ಹೆಣ್ಣಿನ ಆದ್ಯ ಕರ್ತವ್ಯ ಎಂಬ ಮನೋಭಾವನೆಯನ್ನು ಬಿತ್ತಲಾಗಿದೆ. ಈ ಮೂಲಕ ಧರ್ಮ, ಸಮಾಜ, ಇತಿಹಾಸದಲ್ಲಿ ಹೆಣ್ಣು ಶಾಶ್ವತವಾಗಿ ಉಳಿಯಬಹುದು ಎಂಬ ಪ್ರಲೋಭನೆಗಳನ್ನು ಒಡ್ಡಿ ಹೆಣ್ಣಿನ ವ್ಯಕ್ತಿತ್ವ ಈ ಮೌಲ್ಯಗಳನ್ನು

ಉಳಿಸಿಕೊಳ್ಳುವುದಕ್ಕಾಗಿಯೇ ಬದುಕುವುದು ಎಂಬಂತೆ ಚಿತ್ರಿಸಲಾಯಿತು. ಇಂದಿಗೂ ಈ ಪಾತ್ರಗಳೇ ಹೆಣ್ಣಿನ ಆದರ್ಶ ಮಾದರಿಗಳು. ಗಂಡನ ಸಂತೋಷಕ್ಕಾಗಿ ಎಲ್ಲವನ್ನೂ ತ್ಯಾಗ ಮಾಡುವ ಅವನ ಒಳಿತಿಗಾಗಿ ತನ್ನ ಬದುಕನ್ನು ಮುಡಿಪಾಗಿಡುವ ಹೆಣ್ಣಿಗೆ ಇಂದಿಗೂ ಸಮಾಜದಲ್ಲಿ ಹೆಚ್ಚಿನ ಮಾನ್ಯತೆ. ಗಂಡನ ಎಲ್ಲ ದುರ್ನಡತೆಗಳನ್ನು ಅನಾಚಾರಗಳನ್ನು ಕ್ಷಮಿಸಿ ಅವನೊಂದಿಗೆ ಜೀವಿಸುವ ಹೆಣ್ಣು ಸಾಧ್ವಿಯಾಗಿ, ಕ್ಷಮಯಾಧರಿತ್ರಿಯಾಗಿ ಬಿಂಬಿಸಲ್ಪಡುತ್ತಾಳೆ. ಈ ರೀತಿಯಲ್ಲಿ ತಮ್ಮ ಜೀವನವನ್ನು ರೂಪಿಸಿಕೊಳ್ಳುವ ಒತ್ತಡಕ್ಕೆ ಸಿಲುಕಿರುವ ಎಷ್ಟೋ ಹೆಣ್ಣುಗಳು ನೋವು, ಸಂಕಟ, ಹತಾಶೆ, ನಿರಾಶೆಗಳಿಗೆ ಒಳಗಾಗಿ ತಮ್ಮ ಆಯ್ಕೆಯ ಬದುಕನ್ನು ಕಟ್ಟಿಕೊಳ್ಳುವಲ್ಲಿ ವಿಫಲರಾಗಿದ್ದಾರೆ.

ನಮ್ಮ ಸಾಮಾಜಿಕ ಸಂದರ್ಭದಲ್ಲಿ ಹೆಂಗಸರನ್ನು ಕುರಿತ ಚರ್ಚೆಗಳು ಎರಡು ವಿಪರೀತ ವೈರುಧ್ಯದ ನೆಲೆಯಲ್ಲಿ ರೂಪುಗೊಳ್ಳುತ್ತವೆ. ಮೊದಲನೆಯ ಮಾದರಿಯಲ್ಲಿ ಆದಿಶಕ್ತಿ, ಜಗಜ್ಜನನಿ, ಎಂಬ ಸ್ತ್ರೀ ಮಾದರಿ ಪಾತ್ರಗಳ ವೈಭವೀಕರಣವಾದರೆ ಎರಡನೆಯ ಮಾದರಿಯಲ್ಲಿ ಬದುಕನ್ನು ಕೆಡಿಸುವ ವಿಘ್ನಕಾರಿಯಾದ ಮಾಯೆ, ಕಾಳಿಯ ರೂಪಗಳು. ಭಾರತೀಯ ಆದರ್ಶ ಸ್ತ್ರೀ ಪಾತ್ರಗಳಾದ ಸೀತೆ, ಸಾವಿತ್ರಿ, ಪಾರ್ವತಿಯರು ಹೆಚ್ಚು ಮಾನ್ಯತೆಯನ್ನು ಪಡೆದದ್ದೂ ಕೂಡ ಪುರಷಾಧಿಪತ್ಯವನ್ನು ವಿರೋಧವಿಲ್ಲದೆ ಒಪ್ಪಿ ತಮ್ಮ ಸ್ವಂತಿಕೆಯನ್ನು ಬಲಿಕೊಟ್ಟ ಕಾರಣಕ್ಕಾಗಿಯೇ ಎಂದೆನಿಸುತ್ತದೆ. ಏಕೆಂದರೆ ಅಹಲ್ಯೆ, ಕುಂತಿ, ತಾರೆ, ಮಂಡೋದರಿಯರಾಗಲೀ, ದಮಯಂತಿ, ಶಕುಂತಲಾ, ಮೈತ್ರೇಯಿ, ಗಾರ್ಗಿ, ಗಾಲವಿಯರಾಗಲೀ ತಮ್ಮ ಸ್ವಂತ ಅಸ್ತಿತ್ವವನ್ನು ಗುರುತಿಸಿಕೊಳ್ಳಲು ಪ್ರಯತ್ನಿಸಿದ್ದು, ಹೊಗಳಿಕೆಗೆ ಮಾನ್ಯವೇ ಹೊರತು ಅನುಕರಣಾ ಯೋಗ್ಯರಲ್ಲ ಎನ್ನುವ ಮೂಲಕ ವ್ಯವಸ್ಥೆ ಪ್ರತ್ಯಕ್ಷವಾಗಿ ಹಾಗೂ ಪರೋಕ್ಷವಾಗಿ ಹೆಣ್ಣಿನ ಅಧೀನ ನೆಲೆಯನ್ನೇ ಹೆಚ್ಚು ಹೆಚ್ಚು ಮುನ್ನೆಲೆಗೆ ತರಲು ಪ್ರಯತ್ನಿಸುತ್ತಿದೆ ಎಂಬುದು ಸ್ಪಷ್ಟವಾಗುತ್ತದೆ.



ಒಟ್ಟಾರೆ ಸಮುದಾಯದ ಸಂದರ್ಭದಲ್ಲಿ ಹೆಣ್ಣಿಗೆ ಸಂಬಂಧಿಸಿದಂತಹ ಮೌಲ್ಯಗಳು ಕಾಲ ದೇಶಗಳ ಎಲ್ಲೆಗಳನ್ನು ಮೀರಿ ಮರುನಿರ್ಮಾಣ ಹಾಗೂ ನಿರೂಪಣೆಗೆ ಒಳಗಾಗುತ್ತಿವೆ. ಆದರೆ ಬದಲಾಗಿದೆ, ಬದಲಾಗುತ್ತಿದೆ ಎನ್ನಲಾಗುತ್ತಿರುವ ಸಾಮಾಜಿಕ ಸಂದರ್ಭದಲ್ಲಿಯೂ ಕೂಡ ಹೆಣ್ಣನ್ನು ಕುರಿತಾದ ಮೌಲ್ಯಗಳು ಹೊಸ ಹೊಸ ರೂಪಗಳಲ್ಲಿ ತಮ್ಮ ಮೂಲ ಆಶಯಕ್ಕೆ ಧಕ್ಕೆ ಬಾರದ ರೀತಿಯಲ್ಲಿ ಜಾರಿಗೊಳ್ಳುತ್ತಿವೆ ಹಾಗೂ ಅವು ಹಿಂದಿಗಿಂತಲೂ ಇಂದು ಹೆಚ್ಚು ಶಕ್ತವಾಗಿಯೂ, ಪ್ರಬಲವಾಗಿಯೂ ಕಾರ್ಯನಿರ್ವಹಿಸುತ್ತಿವೆ ಎನ್ನಬಹುದು.

**೩.೪ ಅಧೀನ ಅಸ್ತಿತ್ವದ ಚಹರೆಗಳು :**

ಪ್ರಕೃತಿಯಲ್ಲಿ ಹುಟ್ಟುವ ಪ್ರತಿಜೀವಿಯೂ ಕೂಡ ತನ್ನದೇ ಆದ ಸಹಜ ನಡವಳಿಕೆ, ಹಾವ, ಭಾವ ಅಭಿವ್ಯಕ್ತಿ ಕ್ರಮಗಳನ್ನು ಒಳಗೊಂಡಿರುತ್ತದೆ. ಅದೇ ರೀತಿ ಮಾನವ ಕೂಡ ತನ್ನ ನಡವಳಿಕೆಗಳನ್ನು ಹೊಂದಿರುವುದು ಸಹಜ. ಆದರೆ ಸಂಸ್ಕೃತೀಕರಣ, ಸಾಮಾಜೀಕರಣ, ನಾಗರೀಕತೆಯ ಪ್ರಕ್ರಿಯೆಗಳು ಮಾನವ ಸಹಜ ವರ್ತನೆಗಳ ಮೇಲೆ ನಿಯಂತ್ರಣವನ್ನು ಸಾಧಿಸಿ, ಮಾನವನ ನಡವಳಿಕೆಗಳನ್ನು ಒಂದು

ನಿರ್ಧಿಷ್ಟ ಚೌಕಟ್ಟಿಗೆ ಒಳಪಡಿಸಿವೆ. ಆದರೆ ಮಾನವ ಸಮುದಾಯದ ಒಂದು ವರ್ಗ ತನ್ನ ಬುದ್ಧಿಶಕ್ತಿ, ಚಾತುರ್ಯ, ಅವಕಾಶಗಳನ್ನು ಸ್ವಾರ್ಥಸಾಧನೆಗಾಗಿ ಉಪಯೋಗಿಸಿಕೊಂಡು ಇನ್ನೊಂದು ವರ್ಗದ ಸಹಜ ನಡವಳಿಕೆಗಳನ್ನು ಇಲ್ಲವಾಗಿಸಿ, ಅದರ ಮೇಲೆ ಸಂಪೂರ್ಣ ಹಿಡಿತವನ್ನು ಹೊಂದಿದೆ. ಸಾಮಾಜೀಕರಣ ಪ್ರಕ್ರಿಯೆಯಲ್ಲಿ ಕುಟುಂಬವು ಗಂಡು ಹೆಣ್ಣಿನ ವರ್ತನೆ ಹಾಗೂ ನಡವಳಿಕೆಗೆ ಸಂಬಂಧಿಸಿದಂತೆ ಬಾಲ್ಯದಿಂದಲೇ ತರಬೇತಿಯನ್ನು ನೀಡುತ್ತದೆ. ಇದು ಗಂಡು ಹೆಣ್ಣು ಇಬ್ಬರ ಸಹಜ ವರ್ತನೆಗಳನ್ನು ನಿಯಂತ್ರಿಸುತ್ತದೆಯಾದರೂ ಗಂಡಿಗೆ ಈ ನಿಯಮಗಳು ಅನುಕೂಲಕರವಾಗಿಯೂ, ಮಿತಿಗಳಿಂದ ಹೊರ ನಡೆಯಲು ಪೂರಕವಾಗಿಯೂ ರೂಪುಗೊಂಡಿವೆ. ಆದರೆ ಹೆಣ್ಣಿನ ವರ್ತನೆಗೆ ಸಂಬಂಧಿಸಿದಂತೆ ದೊರೆಯುವ ತರಬೇತಿಯು ಅವಳ ಕೀಳರಿಮೆಯನ್ನು ಅಧೀನ ನೆಲೆಯನ್ನು ದೃಢಗೊಳಿಸುವ ಮಾದರಿಯವೇ ಆಗಿರುತ್ತವೆ.

ಸಮಾಜವನ್ನು ಲಿಂಗವ್ಯವಸ್ಥೆಯ ಆಧಾರದಿಂದ ವಿಭಜಿಸುವುದರೊಂದಿಗೆ ಮಾನವ ಸಹಜ ಗುಣ ಹಾಗು ವರ್ತನೆಗಳನ್ನು ಗಂಡು ಹಾಗು ಹೆಣ್ಣಿಗೆ ಬೇರೆ ಬೇರೆ ಎಂಬಂತೆ ವಿಭಜಿಸಿ ಅವು ಗಂಡು-ಹೆಣ್ಣು ದೇಹದಲ್ಲಿಯೇ ನೆಲೆಸಿವೆ ಎಂಬಂತೆ ಒಪ್ಪಿಸಲಾಗುತ್ತದೆ. ಗಂಡು ಗುಣಗಳು ಅವನ ಶ್ರೇಷ್ಠತೆಯನ್ನು ಸಾಬೀತುಪಡಿಸಲು ಮುಂದಾದರೆ ಹೆಣ್ಣು ಗುಣಗಳು ಅಧೀನತೆಯ ವ್ಯಕ್ತಿತ್ವಕ್ಕೆ ಒಳಪಡುವ ಸಾಧನಗಳಾಗಿ ಬಳಕೆಯಾಗುತ್ತಿವೆ. ಈ ಸಾಮಾಜೀಕರಣ ಪ್ರಕ್ರಿಯೆಯು ಮಾನವ ಸಮುದಾಯದ ಇಡೀ ಬದುಕನ್ನು ಆವರಿಸಿರುವುದಲ್ಲದೆ ಅದು ಮಾನವನ ಅಂತರ್ಗತ ಚಟುವಟಿಕೆಯೇ ಇವು ಎಂಬಂತೆ ನಿರಂತರತೆಯನ್ನು ಪಡೆದು ಕೊಂಡಿದೆ. ಹುಟ್ಟಿನಿಂದ ಆರಂಭವಾಗುವ ವ್ಯಕ್ತಿಯ ತೀರ ವೈಯಕ್ತಿಕ ಚಟುವಟಿಕೆಗಳಾದ ನಡೆ, ನುಡಿ, ನೋಟ, ಆಟ, ಪಾಠ, ವೇಷಭೂಷಣ, ಗುಣ, ಸ್ವಭಾವ, ನಡವಳಿಕೆ, ಆಸೆ ಆಕಾಂಕ್ಷೆಗಳಿಂದ ಹಿಡಿದು ಬದುಕಿನ ಸಂಪೂರ್ಣ ಅಂತರಂಗ ಹಾಗು ಬಹಿರಂಗದ ಪ್ರತಿಯೊಂದು ಆಗುಹೋಗುಗಳು ಸಮಾಜದ ಒಳಿತಿನ ಆಶಯ, ಚಿಂತನೆ, ಮತ್ತು ಆದೇಶಗಳನ್ನು ಹೊತ್ತು ಮಾನವನ ಸಹಜ ವರ್ತನೆಗಳ ಮೇಲೆ ನಿಯಂತ್ರಣವನ್ನು ಸಾಧಿಸಿವೆ.

ಈ ಬಗೆಯ ವರ್ತನೆಯಾಧಾರಿತ ಮೌಲ್ಯಗಳು ಹೆಣ್ಣಿನ ನಡೆ ನುಡಿ,ಹಾವ ಭಾವ, ಚಲನ ವಲನಗಳಿಂದ ಹಿಡಿದು ಉಡುಗೆ ತೊಡುಗೆ, ಊಟ ಉಪಚಾರ, ಭಾವನೆ ಅಭಿವ್ಯಕ್ತಿಯವರೆಗೆ ಪ್ರತಿಯೊಂದು ಚಟುವಟಿಕೆಯನ್ನು ನಿಯಂತ್ರಿಸುತ್ತದೆ. ಇದರ ಆಧಾರದ ಮೇಲೆ ಅವಳ ಗುಣ, ಸ್ವಭಾವ, ವ್ಯಕ್ತಿತ್ವವನ್ನು ನಿರ್ಣಯಿಸುವ ವಿಧಾನ ಕಂಡುಬರುತ್ತದೆ. ಹೀಗಾಗಿ ಹೆಣ್ಣಿನ ಮೇಲೆ ಹೇರಲ್ಪಟ್ಟ ವರ್ತನೆಗಳು ಅವಳ ಸಹಜ ವರ್ತನೆಗಳೇ ಎಂಬಂತೆ ಭಾಸವಾಗುತ್ತಿವೆ. ಇಲ್ಲಿ ಮುಖ್ಯವಾಗಿ ಗಮನಿಸಬೇಕಾದ ಸಂಗತಿ ಎಂದರೆ ಹೆಣ್ಣಿನ ಮೇಲೆ ಹೇರಲ್ಪಟ್ಟ ಸಾಮಾಜಿಕ, ಜೈವಿಕ, ಆರ್ಥಿಕ, ಸಾಂಸ್ಕೃತಿಕ, ಮೌಲ್ಯವ್ಯವಸ್ಥೆಯನ್ನು ಗುರುತಿಸಲು ಸಾಧ್ಯವಿರುವಂತೆ ಅವಳ ಮೇಲೆ ಹೇರಲ್ಪಟ್ಟಿರುವ ವರ್ತನೆಯಾಧಾರಿತ ಮೌಲ್ಯಗಳನ್ನು ಅವಳ ವ್ಯಕ್ತಿತ್ವದಿಂದ ಬೇರ್ಪಡಿಸಿ ನೋಡಲು ಸಾಧ್ಯವೇ ಇಲ್ಲ. ಏಕೆಂದರೆ ಇವು ಅವಳ ವ್ಯಕ್ತಿತ್ವದ ಭಾಗವಾಗಿ, ಅವಳ ಅಸ್ತಿತ್ವದ ಕುರುಹುಗಳಾಗಿ ರೂಪುಗೊಂಡಿವೆ. ಇದರಿಂದಾಗಿ ಹೆಣ್ಣು ಈ ಮಿತಿಗಳಿಗೆ ಒಳಪಟ್ಟು ಬದುಕುವುದೇ ಹೆಣ್ಣಿನ ಸಹಜ ವ್ಯಕ್ತಿತ್ವ ಎಂಬ

ಮನೋಭಾವನೆಯನ್ನು ಇಂದಿಗೂ ಕೂಡ ನಾಗರೀಕ ಸಮಾಜ ಅತ್ಯಂತ ನಿಷ್ಠೆಯಿಂದ ಒಪ್ಪಿ ಮುನ್ನೆಡೆಸುತ್ತಿದೆ. ಕೆಲ ಸಂದರ್ಭಗಳಲ್ಲಿ ಹೆಣ್ಣಿನ ವರ್ತನೆಯಲ್ಲಿ ಯಾವುದೇ ಬದಲಾವಣೆಗಳು ಸಂಭವಿಸಿದ್ದರೆ ಅದು ಕುಟುಂಬದ, ಗಂಡ ಮಕ್ಕಳ ಸಲುವಾಗಿ ಮಾತ್ರ. ಆ ರೀತಿಯಾಗಿದ್ದಲ್ಲಿ ಅದಕ್ಕೊಂದು ಮಾನ್ಯತೆ, ಬೆಲೆ ಇರುತ್ತದೆ. ಇಲ್ಲದಿದ್ದ ಪಕ್ಷದಲ್ಲಿ ಹೆಣ್ಣಿನ ಇಡೀ ವ್ಯಕ್ತಿತ್ವವೇ ಅಸ್ತಿತ್ವ ಹೀನವಾಗಿ, ಕಳಾರಹಿತವಾಗಿ ಸಾಮಾಜಿಕ ವಲಯದಿಂದ ಹೊರದಬ್ಬಲ್ಪಡುತ್ತದೆ.

ಪುರುಷ ಕಲ್ಪಿತ ಮಿಥ್‌ಗಳು ಗಂಡು ಹೆಣ್ಣಿನ ಗುಣ, ಸ್ವಭಾವಗಳಲ್ಲಿಯೂ ಕೂಡ ವಿಭಿನ್ನ ನಡವಳಿಕೆಗಳನ್ನು ಅನ್ವಯಿಸುತ್ತದೆ. ಈ ಕ್ರಮದಿಂದಾಗಿ ಮಾನವ ಸಹಜ ಸ್ವಭಾವಗಳನ್ನು ಗಂಡು ಹೆಣ್ಣಿಗೆ ಸಂಬಂಧಿಸಿದಂತೆ ಪ್ರತ್ಯೇಕವಾಗಿ ಗುರುತಿಸಲಾಗಿದೆ. ಗಂಡು ಗುಣಗಳನ್ನು ಯಾಜಮಾನ್ಯದ, ಅಧಿಕಾರದ, ನಿರ್ಣಯ ಕೈಗೊಳ್ಳುವ ವಿಧಾನಕ್ಕೆ ಸಂಬಂಧಿಸಿದಂತೆ ಗುರುತಿಸಿದರೆ ಹೆಣ್ಣಿನ ಗುಣಗಳನ್ನು ಅಧೀನ ವ್ಯಕ್ತಿತ್ವಕ್ಕೆ ಸಹಕಾರಿಯಾಗುವಂತೆ ರೂಪಿಸಲಾಗಿದೆ. ಒಂದು ವೇಳೆ ಸ್ತ್ರೀ ಪುರುಷರಲ್ಲಿ ಯಾರಾದರೂ ಈ ಮಿಥ್‌ಗಳನ್ನೇ ಸುಳ್ಳು ಮಾಡುವ ರೀತಿಯ ನಡವಳಿಕೆಗಳನ್ನು ಪ್ರದರ್ಶಿಸಿದರೆ ಅದನ್ನು ವ್ಯಕ್ತಿತ್ವದ ದೋಷವೆಂದು ಪರಿಗಣಿಸಲಾಗುತ್ತದೆ. ಅಷ್ಟೇ ಅಲ್ಲದೆ ಗಂಡಿನಲ್ಲಿರಬಹುದಾದ ಹೆಣ್ಣು ಗುಣಗಳನ್ನು ಕರುಣೆಯ, ಅಂತಕರಣದ, ಒಪ್ಪಬಹುದಾದ, ಸ್ವೀಕರಿಸಬಹುದಾದ ಮೌಲ್ಯಗಳೆಂದು ಪರಿಗಣಿಸಿದರೆ ಹೆಣ್ಣಿನಲ್ಲಿ ಕಂಡು ಬರುವ ಗಂಡು ಗುಣಗಳನ್ನು ಅಹಂಕಾರದ, ಅಪರಾಧದ, ನಿಷೇಧಿತ ವ್ಯಕ್ತಿತ್ವದ ರೀತಿಯಲ್ಲಿ ಗುರುತಿಸಲಾಗುತ್ತದೆ. ಈ ಮೂಲಕ ಗಂಡು ಮತ್ತು ಹೆಣ್ಣಿಗೆ ಸಂಬಂಧಿಸಿದ ಗುಣ ಸ್ವಭಾವಗಳನ್ನು ವ್ಯಕ್ತಿವಿಶೇಷತೆಯ ಹಿನ್ನೆಲೆಯಲ್ಲಿ ಗ್ರಹಿಸದೆ ಅವರಲ್ಲಿ ಇರಲೇಬೇಕಾದ, ಮೀರಲಾಗದ ಮೌಲ್ಯವೆಂದು ಚಿತ್ತರಿಸಲಾಗುತ್ತದೆ. ಅಲ್ಲದೇ ಈ ಗುಣಗಳನ್ನು ಹೊಂದಿರುವುದೇ ವ್ಯಕ್ತಿಯ ಪ್ರಧಾನ ಲಕ್ಷಣವೆಂದು ಪರಿಗಣಿಸಲಾಗುತ್ತದೆ.

ಮಕ್ಕಳನ್ನು ಬೆಳೆಸುವ ಹಂತದಲ್ಲಿಯೇ ಅವರ ವೇಷ-ಭೂಷಣ, ಮಾತು-ಕತೆ, ಆಹಾರ-ವಿಹಾರಗಳನ್ನೇ ನಿಯಂತ್ರಿಸುತ್ತಾ ಮೆದುಗುಣ, ಕೀಳರಿಮೆಯ ದುರ್ಬಲ ಸ್ವಭಾವ, ಆಸೆ ಆಕಾಂಕ್ಷೆಗಳ ಕನಸನ್ನೇ ಕಾಣದ ಸೇವಾ ವಲಯಗಳನ್ನು ಹೆಣ್ಣು ಮಕ್ಕಳಿಗೂ, ಸುಗುಣ, ಪ್ರತಿಷ್ಠೆಯ, ಅಹಂಭಾವದ, ಆಸೆ ಆಕಾಂಕ್ಷೆಗಳ ಕುದುರೆಯನ್ನೇರಿ ಸಾಗುವ ಯಜಮಾನ ಗುಣಗಳನ್ನು ಗಂಡು ಮಕ್ಕಳಿಗೂ ತರಬೇತಿ ನೀಡಲಾಗುತ್ತದೆ. ಇವು ಸಾಮಾಜಿಕ ವಲಯದ ಮನೆ, ಶಿಕ್ಷಣ, ವ್ಯವಹಾರ, ವಿವಾಹ ಮುಂತಾದ ಹಲವು ಸಂದರ್ಭಗಳಲ್ಲಿ ನಿರ್ದೇಶಿಸಲ್ಪಡುತ್ತಿರುತ್ತವೆ. ಹೆಣ್ಣಿನ ಗುಣ ನಡತೆ ವರ್ತನೆಗಳನ್ನು ವಿವರಿಸುವ ಸಂದರ್ಭದಲ್ಲಿ ಪಿತೃ ಸಂಸ್ಕೃತಿ ಮುಂಚೂಣಿಯಲ್ಲಿ ನಿಂತು ಕೆಲಸ ನಿರ್ವಹಿಸುತ್ತದೆ.

ಪುರುಷ ಪ್ರಧಾನ ಮೌಲ್ಯವ್ಯವಸ್ಥೆ ತನ್ನ 'ಪ್ರಧಾನ ನೆಲೆ'ಯನ್ನು ಸ್ಥಿರಗೊಳಿಸಲು ಪೂರಕವಾಗುವ ರೀತಿಯಲ್ಲಿಯೇ ಹೆಣ್ಣಿನ ವರ್ತನೆಯ ಚಹರೆಗಳನ್ನು ರೂಪಿಸಿ ತರಬೇತುಗೊಳಿಸಿದೆ. ಬಾಲ್ಯದಿಂದಲೇ ಹೆಣ್ಣನ್ನು ಬೆಳೆಸುವ ಸಂದರ್ಭದಲ್ಲಿ ಅಧೀನತೆಯ ವ್ಯಕ್ತಿತ್ವನ್ನೇ ಅಧಿಕೃತಗೊಳಿಸುವ ನಿಯಮಗಳನ್ನು ರೂಪಿಸಿ ಅದನ್ನು ಇಂದಿಗೂ ಕೂಡ ಕಾಯ್ದುಕೊಂಡು ಬರಲಾಗುತ್ತಿದೆ. ಒಂದು

ಹಂತದವರೆಗೂ ಗಂಡು ಹೆಣ್ಣುಗಳಿಬ್ಬರು ತಂದೆಯ ಯಜಮಾನಿಕೆಗೆ ಒಳಪಡುತ್ತಾರಾದರೂ ನಂತರದಲ್ಲಿ ಗಂಡು ಸ್ವತಂತ್ರ ವ್ಯಕ್ತಿತ್ವವನ್ನು ರೂಪಿಸಿಕೊಳ್ಳುವ, ತನ್ನ ಆಯ್ಕೆಯಂತೆ ಬದುಕುವ ಅವಕಾಶವಿದೆ. ಆದರೆ ಹಿಂದಿನಿಂದಲೂ ಜಾರಿಯಲ್ಲಿರುವಂತೆ ಹೆಣ್ಣು ತಂದೆ, ಗಂಡ, ಮಕ್ಕಳ ಆಶ್ರಯದಲ್ಲಿರಬೇಕೆಂಬ ಅಲಿಖಿತ ನಿಯಮಗಳು ಪುರುಷನ ಯಜಮಾನ್ಯ ಧೋರಣೆಗಳನ್ನು ಇಂದಿಗೂ ಕೂಡ ಎತ್ತಿ ಹಿಡಿಯುತ್ತವೆ. ಅಷ್ಟೇ ಅಲ್ಲದೆ ಹೆಣ್ಣಿನ ಅಧೀನ ವ್ಯಕ್ತಿತ್ವವನ್ನೇ ನಿರಂತರವಾಗಿ ಕಾಯ್ದುಕೊಳ್ಳುವ ಹಾಗೂ ಅದನ್ನೇ ಸ್ಥಿರ ಮಾದರಿ ಪಾತ್ರವಾಗಿಸಿಬಿಡುವ ಕಾರ್ಯತಂತ್ರಗಳು ಪುರುಷ ಪ್ರಧಾನ ಚಿಂತನೆ ಮತ್ತು ಆಲೋಚನಾ ಕ್ರಮದ ಭಾಗಗಳೇ ಆಗಿವೆ. ಮೇಲ್ನೋಟಕ್ಕೆ ಮುಕ್ತತೆ, ಸ್ವಾತಂತ್ರ್ಯದ ಮಾತುಗಳನ್ನಾಡುತ್ತಿದ್ದರೂ ಕೂಡ ಹೆಣ್ಣಿನ ವಿಷಯದಲ್ಲಿ ಮಾತ್ರ ಸಾಂಪ್ರದಾಯಿಕ ಧೋರಣೆಗೆ ಬದ್ಧವಾಗಿರುವ ಪುರುಷ ಹಿತಾಸಕ್ತಿಯನ್ನು ವಿಜಯಾದಬ್ಬೆಯವರ ಕವನ ಅತ್ಯಂತ ಸಮರ್ಥವಾಗಿ ಹಿಡಿದಿಡುತ್ತದೆ.

> ಕಚೇರಿಯಲ್ಲೊಬ್ಬಳು ವಿವಾಹಿತೆ
> ಪರಪುರುಷನೊಡನೆ ಸಲ್ಲಾಪವಾಡಿದಳಂತೆ
> ನಿರ್ದೇಶಕರು ಕೇಳಿದರು : 'ಇದು ಸರಿಯೇನ್ರಿ'?
> ಅದೇ ಕಚೇರಿಯಲ್ಲಿ ಸರ್ವಪಲ್ಲಿಯವರ
> ಮುಕ್ತಲೈಂಗಿಕತೆಯ ಚರ್ಚೆಯಲ್ಲಿ
> ಅದೇ ನಿರ್ದೇಶಕರು ಹೇಳಿದರು : 'ಅದು ಮೋರ್ ಹ್ಯೂಮನ್'[೨೫]

ಸಮಾಜದಲ್ಲಿ ಚಾಲ್ತಿಯಲ್ಲಿರುವ ಒಡೆಯ-ಆಳು, ಪ್ರಧಾನ –ಅಧೀನ, ಪ್ರಭು-ಸೇವಕ ಮುಂತಾದ ಶ್ರೇಣೀಕರಣಗಳಲ್ಲಿ ಕಾಲ ದೇಶಗಳ ಎಲ್ಲೆಯನ್ನು ಮೀರಿ ಹೆಣ್ಣಿನ ಸ್ಥಾನ ಅಧೀನತೆಗೆ ಒಳಪಟ್ಟ 'ಸೇವಕಿ'ಯ ರೂಪದ್ದೇ ಆಗಿದೆ. ತಾಯಿ, ಹೆಂಡತಿ, ಗೃಹಿಣಿ ಮುಂತಾದ ಪಾತ್ರಗಳು ಹೆಣ್ಣಿಗೆ ಕೊಟ್ಟಿದೆ ಎನ್ನಲಾಗುತ್ತಿರುವ 'ಹಿರಿಮೆ'ಯನ್ನು ಎತ್ತಿಹಿಡಿಯುತ್ತವೆಯಾದರೂ ಅವುಗಳ ಕಾರ್ಯ ಚಟುವಟಿಕೆಗಳು ಮಾತ್ರ ಹೆಣ್ಣಿನ ಅಧೀನ ಅಸ್ತಿತ್ವಕ್ಕೆ ಮತ್ತಷ್ಟು ಪುಷ್ಟಿಯನ್ನು ನೀಡುತ್ತವೆ. ಮಕ್ಕಳ ಪಾಲನೆ ಪೋಷಣೆ ಹೆಣ್ಣಿನ ಜೀವನದ ಆದ್ಯ ಕರ್ತವ್ಯ, ಗೃಹನಿರ್ವಹಣೆಯೇ ಹೆಣ್ಣಿನ ಪ್ರಮುಖ ಆದ್ಯತೆ ಎಂಬ ಮೌಲ್ಯಗಳನ್ನು ಬಿತ್ತಲಾಗಿದೆ. ಈ ಮೂಲಕ ಹೆಣ್ಣು 'ಒಳ್ಳೆಯ' ಹೆಂಡತಿ, ಗೃಹಿಣಿ, ತಾಯಿಯಾಗುವ ಭರದಲ್ಲಿ ತನ್ನ ಸ್ವಂತ ವ್ಯಕ್ತಿತ್ವವನ್ನೇ ಕಳೆದುಕೊಂಡು 'ಗಂಡಿನ' ಸೇವೆಗೆ ಮೀಸಲಾಗಿರುವುದನ್ನು ಇಂದಿಗೂ ಕೂಡ ಗುರುತಿಸಬಹುದು. ಸಮಾನ ಆಸಕ್ತಿ, ಅವಕಾಶ, ಆಲೋಚನೆಗಳನ್ನು ಹೊಂದಿರುವ ಸಂದರ್ಭದಲ್ಲಿಯೂ ಕೂಡ 'ಕುಟುಂಬನಿಷ್ಠ'ವಾಗಿರುವ, ಕೀಳರಿಮೆ, ಸಂಕೋಚಗಳಿಂದ ಬಳಲುತ್ತಿರುವ, ಸ್ವಂತ ನಿರ್ಧಾರಗಳನ್ನು ತೆಗೆದುಕೊಳ್ಳಲಾರದೆ ಎಲ್ಲಕ್ಕೂ ಪುರುಷ ಪಾರಮ್ಯದ ಓಲೈಕೆಗೆ ಮನಕೊಡುವ ಅದೆಷ್ಟೋ ಉದಾಹರಣೆಗಳು ನಮ್ಮ ಮುಂದಿವೆ. ಉದ್ಯೋಗ, ಶಿಕ್ಷಣ ಮುಂತಾದ ಸಾಧನೆಯ ಕ್ಷೇತ್ರವನ್ನು ಆಯ್ಕೆ ಮಾಡಿಕೊಂಡಿರುವ ಸಂದರ್ಭದಲ್ಲಿಯೂ ಕುಟುಂಬದ ಕರ್ತವ್ಯಗಳಿಗೆ ವಂಚನೆ ಮಾಡಿದ ಅಪರಾಧಿ ಪ್ರಜ್ಞೆಯಿಂದ ಬಳಲುತ್ತಿರುವ ಮಹಿಳೆಯರ ಜೀವನ ಕ್ರಮಗಳು ಪುರುಷ ಪ್ರಧಾನ ಮೌಲ್ಯ ವ್ಯವಸ್ಥೆಗೆ ಪೂರಕವಾಗುವ ರೀತಿಯಲ್ಲಿ ರೂಪುಗೊಂಡಿರುವಂತಹವುಗಳೇ ಆಗಿವೆ.

ಹೆಣ್ಣಿನ ವರ್ತನೆಗೆ ಸಂಬಂಧಿಸಿದಂತೆ ಹಲವು ಗುಣ, ಸ್ವಭಾವಗಳನ್ನು ಅವಳ ಸಹಜ ನಡವಳಿಕೆಗಳೆಂಬಂತೆ ಬಿಂಬಿಸಲಾಗಿದೆ. ಉದಾಃ ನಯ, ನಾಚಿಕೆ, ಸಹನೆ, ತ್ಯಾಗ, ನಲ್ಮೆ,

ಸೇವಾಮನೋಭಾವಗಳಂತಹ ಅನೇಕಾನೇಕ ಮೃದು ಗುಣಗಳು ಮತ್ತು ಕೀಳರಿಮೆ, ಅಂಜಿಕೆ, ಭಯ, ತಲೆತಗ್ಗಿಸಿ ನಡೆಯುವುದು, ಎದುರು ಮಾತನಾಡದಿರುವುದು, ಗಂಡನ, ತಂದೆಯ ಮಾತನ್ನು ಪಾಲಿಸುವುದು, ಮುಂತಾದ ಅನೇಕ ದೌರ್ಬಲ್ಯಗಳು ಅವಳ ಸಹಜ ಗುಣಗಳು ಎಂಬಂತೆ ನಿರ್ಧರಿಸಲ್ಪಟಿವೆ. ಜೊತೆಗೆ ಹೆಣ್ಣು ಅಬಲೆ, ದೈಹಿಕ ಮಾನಸಿಕ ಶಕ್ತಿಹೀನೆ, ವಿವೇಚನಾ ಸಾಮರ್ಥ್ಯ ಇಲ್ಲದವಳು, ಮೂರ್ಖಳು, ಚಂಚಲೆ, ಅಸೂಯಾಪರೆ, ಕೋಮಲೆ ಎಂದು ಬಿಂಬಿಸುವುದರ ಮೂಲಕ ಅವಳ ಸ್ವತಂತ್ರ ವ್ಯಕ್ತಿತ್ವವನ್ನು ಅಲ್ಲಗಳೆಯಲಾಗಿದೆ. ಆದರೆ ಈ ಗುಣ ಸ್ವಭಾವಗಳು ಹೆಣ್ಣಿನಲ್ಲಾಗಲಿ, ಗಂಡಿನಲ್ಲಾಗಲಿ, ಹುಟ್ಟಿನಿಂದ ಬರಲು ಸಾಧ್ಯವಿಲ್ಲ, ಇವುಗಳನ್ನು ಸಮಾಜವು ವ್ಯಕ್ತಿಗಳಲ್ಲಿ ಪ್ರಯತ್ನ ಪೂರ್ವಕವಾಗಿ ಬಿತ್ತಿ ಬೆಳೆಸುತ್ತವೆ. ಇದರಿಂದಾಗಿಯೇ ಅವರ ವ್ಯಕ್ತಿತ್ವಗಳಲ್ಲಿ ಭಿನ್ನತೆ ಕಂಡುಬರುತ್ತದೆ. ಜೊತೆಗೆ ಈ ಬಗೆಯ ಗುಣ, ಸ್ವಭಾವ, ವರ್ತನೆ, ನಡವಳಿಕೆಗಳು, ಆಯಾ ಸಾಮಾಜಿಕ ಪರಿಸರದಲ್ಲಿ ವ್ಯಕ್ತಿ ಭಿನ್ನತೆಗೆ ಅನುಗುಣವಾಗಿ ಅಳವಡಿಸಿಕೊಳ್ಳಬಹುದಾದ ವಿಷಯಗಳಾಗಿವೆ. ಆದರೆ ಪುರುಷ ಪ್ರಭುತ್ವ ಮೌಲ್ಯ ವ್ಯವಸ್ಥೆಯ ಹೆಸರಿನಲ್ಲಿ ಗಂಡು ಮತ್ತು ಹೆಣ್ಣಿಗೆ ಸಂಬಂಧಿಸಿದಂತೆ ಪ್ರತ್ಯೇಕವಾಗಿ ಗುಣ ಸ್ವಭಾವಗಳ ಪಟ್ಟಿಯನ್ನೇ ನಿರ್ಮಿಸಿದೆ. ಈ ಗುಣ ಸ್ವಭಾವಗಳು ಪುರುಷ ಪ್ರಧಾನ ಸಮಾಜದ ಚಿಂತನೆ, ಆಶಯಗಳಿಗೆ ಅನುಗುಣವಾಗಿಯೆ ರೂಪುಗೊಂಡಿವೆ. ಅಲ್ಲದೆ ಈ ಪ್ರತ್ಯೇಕ ನಿಯಮಗಳು ಗಂಡು ಹೆಣ್ಣುಗಳ ಜೀವಿತಾವಧಿಯ ಉದ್ದಕ್ಕೂ ಪಾಲಿಸಲೇಬೇಕಾದ ಹಕ್ಕು ಬಾಧ್ಯತೆಗಳಾಗಿ ಮಾರ್ಪಟ್ಟಿವೆ. ಈ ಬಗೆಯ ತರಬೇತಿಗಳಿಂದಾಗಿ ಹೆಣ್ಣು ಅಧೀನ ವ್ಯಕ್ತಿತ್ವದ ಸೇವಕಿಯ ಪಾತ್ರವನ್ನು ಪಡೆಯುವಂತಾಗಿದೆ. ಈ ಸಾಮಾಜೀಕರಣ ಪ್ರಕ್ರಿಯೆಯಲ್ಲಿ ಗಂಡು ಹೆಣ್ಣು ಇಬ್ಬರಿಗೂ ಸ್ವತಂತ್ರ ಆಯ್ಕೆ ಎಂಬುದಿಲ್ಲವಾದರೂ ಸಾಮಾಜಿಕ ಚಿಂತನೆ, ಆಲೋಚನೆಗಳು ಪುರುಷ ಹಿತವನ್ನು ಕಾಯ್ದುಕೊಳ್ಳುವ ಪುರುಷ ಯಜಮಾನಿಕೆಯನ್ನೇ ಪ್ರಬಲಗೊಳಿಸುವ ವಿಧಾನವೇ ಆಗಿರುವುದರಿಂದಾಗಿ ಹೆಣ್ಣು ಮತ್ತಷ್ಟು ದುರ್ಬಲವಾಗಿ ಅಧೀನತೆಗೆ ಒಳಪಡುವಂತಾಗಿದೆ.

ಹೆಣ್ಣಿನ ಅಸ್ತಿತ್ವ ನಿರಾಕರಣೆಯ ಕ್ರಮ ಕೂಡ ವ್ಯವಸ್ಥೆಯ ಕಾರ್ಯ ಮಾದರಿಗಳಲ್ಲಿ ಒಂದು. ಒಂದೆಡೆ ಬಾಲ್ಯದಿಂದ ಹುಟ್ಟಿ, ಬೆಳೆದ ಸನ್ನಿವೇಶದದಲ್ಲಾಗಲಿ, ವಿವಾಹದ ನಂತರ ಗಂಡನ ಮನೆ, ಮನೆಯವರೊಂದಿಗೆಯಾಗಲಿ ತನ್ನ ಅಸ್ತಿತ್ವವನ್ನು ಕಂಡುಕೊಳ್ಳಲು ಸಾಧ್ಯವಾಗದ ವಾತಾವರಣವಿದ್ದರೆ ಮತ್ತೊಂದೆಡೆ ತನ್ನದೇ ಮಕ್ಕಳೊಂದಿಗೆ ಕೂಡ ತನ್ನನ್ನು ಗುರುತಿಸಿಕೊಳ್ಳಲಾರದಂತಹ ಸ್ಥಿತಿಯನ್ನು ನಿರ್ಮಿಸಲಾಗಿದೆ. ಆದರೆ ಅದೇ ಹೆಣ್ಣು ತನ್ನ ಮಕ್ಕಳಿಗಾಗಿ ಸರ್ವಸ್ವವನ್ನು ಬಿಡಬೇಕೆಂದು ಈ ಸಾಮಾಜಿಕ ಮೌಲ್ಯವ್ಯವಸ್ಥೆ ಪ್ರಚಾರ ಮಾಡುತ್ತದೆ. ತನಗೆ ಯಾವ ಹಕ್ಕುಗಳೂ ಇಲ್ಲದ ಮಕ್ಕಳಿಗೆ ಎಲ್ಲ ಚಾಕರಿಗಳನ್ನು ಮಾಡಿ ಯಾವ ದಿನ ಮಕ್ಕಳನ್ನು ಬಿಟ್ಟು ಹೋಗೆಂದು ಗಂಡ ಹೇಳಿದರೆ ಆ ದಿನ ಮಕ್ಕಳನ್ನು ಕಳೆದುಕೊಳ್ಳುವುದು ಹೆಣ್ಣಿನ ಅಸ್ತಿತ್ವ ನಿರಾಕರಣೆಯ ಕ್ರಮದೊಂದಿಗೆ ಅವಳನ್ನು ಮಾನಸಿಕವಾಗಿ ದುರ್ಬಲಗೊಳಿಸುವ ಸಂಗತಿ ಕೂಡ ಆಗಿದೆ.

ಇನ್ನು ಹೆಣ್ಣಿನ ಅಭಿವ್ಯಕ್ತಿಗೆ ಸಂಬಂಧಿಸಿದಂತೆ ಹೇಳುವುದಾದರೆ ಕಲೆ ಸಾಹಿತ್ಯ, ಸಂಗೀತ, ನೃತ್ಯ ಮುಂತಾದ ಕ್ಷೇತ್ರಗಳಲ್ಲಿನ ಹೆಣ್ಣಿನ ಅಭಿವ್ಯಕ್ತಿಯನ್ನೂ ಕೂಡ ಎರಡನೆಯ ದರ್ಜೆಯದನ್ನಾಗಿಯೇ

ಪರಿಗಣಿಸಲಾಗುತ್ತದೆ. ಹಿಂದೆಲ್ಲಾ ಸಂಗೀತ, ನೃತ್ಯಗಳ ಕಲಿಕೆಯನ್ನು ಸಾಮಾನ್ಯ 'ಗೃಹಿಣಿ'ಯರ ವಲಯದಿಂದ ಹೊರಗಿಟ್ಟು ಅವರ ಕಲಿಕೆಗೆ ಒಂದು ರೀತಿಯ ತೊಡಕನ್ನುಂಟುಮಾಡಿದರೆ, ಪಿತೃ ಕೇಂದ್ರಿತ ಕುಟುಂಬದ ಪರಿಕಲ್ಪನೆ ಹೆಣ್ಣಿಗೆ ಹೆಚ್ಚಿನ ಅವಕಾಶಗಳನ್ನು ನೀಡಲಿಲ್ಲ ಎಂಬುದು ಮತ್ತೊಂದು ಪ್ರಮುಖವಾದ ಅಂಶ. ಸಂಗೀತ ನೃತ್ಯಗಳು ಸಾಹಿತ್ಯಕ್ಕಿಂತ ಭಿನ್ನವಾದ ಸಾಮಾಜಿಕ ಪರಿಸರದಲ್ಲಿ ಅಭಿವ್ಯಕ್ತಿಗೊಳ್ಳುವಂತಹವು ಮತ್ತು ಈ ಕ್ಷೇತ್ರದಲ್ಲಿ ಹೆಚ್ಚಿನ ಸಾಧನೆ ಮಾಡಿದ ಹಾಗೂ ಮಾಡಬಯಸಿದ ಸ್ತ್ರೀಯರು ಕುಟುಂಬದ, ವಿವಾಹದ ಬಂಧನಗಳಿಂದ ಹೊರನಡೆಯಬೇಕಾದದ್ದು ಒಂದು ರೀತಿಯಲ್ಲಿ ಅನಿವಾರ್ಯವೇ ಆಗಿತ್ತು. ಆದರೆ ಪುರುಷ ಪ್ರಧಾನ ವ್ಯವಸ್ಥೆ ಕಲಾ ಕ್ಷೇತ್ರದಲ್ಲಿ ಸಾಧನೆ ಮಾಡಿದ ಮಹಿಳೆಯರಿಗೆ ಗೌರವಾಧಾರಗಳನ್ನು ನೀಡುವ ಬದಲಾಗಿ ವೇಶ್ಯೆ, ದೇವದಾಸಿಯರಿಗೆ ಮಾತ್ರ ಈ ಕಲೆಗಳು ಮೀಸಲು ಎಂದು ಪರಿಗಣಿಸಿದೆ. ಮತ್ತು ತಮ್ಮ ಕೃಪಾಪೋಷಕರ ಆಯ್ಕೆಗೆ ತಕ್ಕಂತೆ ಅದನ್ನು ಬಳಸಲಾಗುತ್ತಿದೆ. ಈ ಸಂದರ್ಭದಲ್ಲಿ ಅವಳ ಕಲಾ ಕೌಶಲ್ಯಕ್ಕೆ ತಕ್ಕ ಮಾನ್ಯತೆಯನ್ನು ನೀಡದೆ ಕೀಳು ಅಭಿರುಚಿಯ, ಕೆಳಮಟ್ಟದ ಕಲೆ ಎಂದು ಗುರುತಿಸುವ ಕ್ರಮ ಜಾರಿಯಲ್ಲಿದೆ.

ಮಹಿಳಾ ಅಭಿವ್ಯಕ್ತಿಯ ಮತ್ತೊಂದು ಸಮಸ್ಯೆ ವಿಧಾನ ಹಾಗೂ ವಿಷಯಕ್ಕೆ ಸಂಬಂಧಿಸಿದ್ದು. ಎಷ್ಟೋ ಸಂದರ್ಭದಲ್ಲಿ ಪುರುಷಾಧಿಕಾರದ ಹಿಡಿತಕ್ಕೊಳಪಟ್ಟ ಹೆಣ್ಣು ಗಂಡಿನ ಯಜಮಾನ್ಯದ ನೆಲೆಗಳನ್ನು ವಿರೋಧಿಸಲಾಗದ, ಒಪ್ಪಿ ಮುನ್ನಡೆಯಲಾಗದ ಸಂದಿಗ್ಧಗಳಿಗೆ ಸಿಕ್ಕಿ ತೊಳಲಾಡುವಂತಾಗುತ್ತದೆ. ಆದರೆ ಸಾಮಾಜಿಕ, ಸಾಂಸ್ಕೃತಿಕ ಒತ್ತಡಗಳು ಹೆಣ್ಣಿನ ಸಂದಿಗ್ಧಗಳಿಗೆ ಸಾಂಪ್ರದಾಯಿಕ ವಿಧಾನದ ಪರಿಹಾರವನ್ನೇ ಸೂಚಿಸುತ್ತವೆ. ಇದರ ಹಿಂದಿನ ಕಾರಣಗಳೇನೇ ಇದ್ದರೂ ಕೂಡ ಮಹಿಳೆ ತನ್ನ ಚಿಂತನೆ ಆಲೋಚನೆಗಳಿಗೆ ಸಮರ್ಥವಾದ ಅಭಿವ್ಯಕ್ತಿಯನ್ನು ನೀಡಲು ಸಾಧ್ಯವಾಗುತ್ತಿಲ್ಲ. ಈ ಮಿತಿಗಳನ್ನು ಹೆಣ್ಣಿನ ಅಭಿವ್ಯಕ್ತಿಯ ದೋಷಗಳೆಂದೇ ಪರಿಗಣಿಸುವ ಪ್ರಧಾನ ವ್ಯವಸ್ಥೆ ಇಂದಿಗೂ ಕೂಡ ಈ ಸಾಂಸ್ಕೃತಿಕ ವಲಯಗಳಲ್ಲಿ ಹೆಣ್ಣಿನ ಪಾಲ್ಗೊಳ್ಳುವಿಕೆಯನ್ನು ಎರಡನೆಯ ದರ್ಜೆಯದೆಂದೇ ಪರಿಗಣಿಸುತ್ತದೆ.

ಆಧುನಿಕ ಸಂದರ್ಭದಲ್ಲಿ ಎಷ್ಟೆಲ್ಲಾ ಅವಕಾಶಗಳು, ಬದಲಾವಣೆಗಳು ಮೇಲಿಂದ ಮೇಲೆ ಸಂಭವಿಸುತ್ತಿದ್ದರೂ ಕೂಡ ಹೆಣ್ಣಿಗೆ ಸಂಬಂಧಿಸಿದ ಮೌಲ್ಯವ್ಯವಸ್ಥೆಯಲ್ಲಿ ಮಾತ್ರ ಹೆಚ್ಚಿನ ಬದಲಾವಣೆಗಳಾಗಿಲ್ಲ ಎಂಬುದು ಮಹಿಳಾಕಾವ್ಯದ ಸಾಮಾಜಿಕ ಅಧ್ಯಯನದಿಂದ ಸ್ಪಷ್ಟವಾಗುತ್ತದೆ. ಜೊತೆಗೆ ಮೇಲ್ನೋಟಕ್ಕೆ ಬದಲಾದಂತೆ, ಬದಲಾಗುತ್ತಿರುವಂತೆ ಕಂಡುಬರುತ್ತಿರುವ ಸಾಮಾಜಿಕ, ರಾಜಕೀಯ, ಸನ್ನಿವೇಶಗಳು ಹೆಣ್ಣನ್ನು ಅಧೀನ ಸ್ತರದಲ್ಲಿ ಅಥವಾ ಪ್ರತ್ಯೇಕ ಅಂಗಿಯಾಗಿ ನೋಡಬಯಸುತ್ತವೆಯೇ ವಿನಃ ಸಮಾನತೆಯ ಮನೋಭಾವದಲ್ಲಿ ಗ್ರಹಿಸಲು ಸಾಧ್ಯವಿಲ್ಲ ಎಂಬುದು ಕೂಡ ಈ ಮೇಲಿನ ಅಂಶಗಳಿಂದ ಸ್ಪಷ್ಟವಾಗುತ್ತದೆ. ಆಧುನಿಕ ಸಂದರ್ಭಗಳಲ್ಲಿ ಈ ಮೌಲ್ಯವ್ಯವಸ್ಥೆಯ ಕಾರ್ಯಮಾದರಿಗಳು ಇಂದಿಗೂ ಕೂಡ ಹೊಸ ಹೊಸ ರೂಪ, ವೈವಿಧ್ಯಗಳೊಂದಿಗೆ ಹೆಣ್ಣಿನ ಜೀವನವನ್ನು ಪ್ರವೇಶಿಸುತ್ತಿವೆ.

**ಕೊನೆ ಟಿಪ್ಪಣಿ**


೧. ಸಂವಾದ ; ಮಹಿಳಾ ವಿಶೇಷಾಂಕ, ನೇಮಿಚಂದ್ರ, ಪು.ಸಂ.೧೧
೨. ಚಹರೆ – ಡಾ. ಹೆಚ್.ಎಸ್. ಶ್ರೀಮತಿ ಪು.ಸಂ.೧೨೩
೩. ಅದೇ, ಪು.ಸಂ.೧೫೨
೪. ಬಿದಿರು ಮೆಳೆ ಕಂಟಿಯಲಿ, ಬಿ.ಟಿ.ಲಲಿತಾನಾಯಕ್, ಪು.ಸಂ.೧೧೪
೫. ಚಹರೆ – ಡಾ. ಹೆಚ್.ಎಸ್. ಶ್ರೀಮತಿ ಪು.ಸಂ.೧೫೨
೬. ಮುನ್ನುಡಿ ಬೆನ್ನುಡಿಗಳ ನಡುವೆ, ಪ್ರತಿಭಾ ನಂದಕುಮಾರ್ ಪು.ಸಂ.೧೬
೭. ಸ್ತ್ರೀಮತವನುತ್ತರಿಸಲಾಗದೆ? ಡಾ.ಎಂ.ಎಸ್.ಆಶಾದೇವಿ. ಪು.ಸಂ.೯೧
೮. ಇತಿಗೀತಿಕೆ, ವಿಜಯಾದಬ್ಬೆ: ಪು.ಸಂ. ೩೮
೯. ಹೇಳುತೇನೆ ಕೇಳು, ಸುಕನ್ಯಾ ಕನಾರಳ್ಳಿ, ಪು.ಸಂ. ೧೦೯
೧೦. ಬೆರಳಸಂದಿಯ ಬದುಕು, ಎನ್.ವಿ.ಭಾಗ್ಯಲಕ್ಷ್ಮಿ, ಪು.ಸಂ.೪೫
೧೧. ಶೈಲಜಾ ಸಮಗ್ರ ಕಾವ್ಯ, ಶೈಲಜಾ ಉಡಚಣ, ಪು.ಸಂ.೨
೧೨. ಬಿದಿರು ಮೆಳೆ ಕಂಟಿಯಲಿ, ಬಿ.ಟಿ.ಲಲಿತಾನಾಯಕ್, ಪು.ಸಂ.೪೮
೧೩. ಗುಬ್ಬಿಮನಿ, ಶಶಿಕಲಾ ವಸ್ತ್ರದ, ಪು.ಸಂ.೩೯
೧೪. ಮುನ್ನುಡಿ ಬೆನ್ನುಡಿಗಳ ನಡುವೆ, ಪ್ರತಿಭಾ ನಂದಕುಮಾರ್, ಪು.ಸಂ.೯
೧೫. ಬೆಳಗೆರೆ ಜಾನಕಮ್ಮ ಬದುಕು – ಬರಹ, ಸಂ.ನೇಮಿಚಂದ್ರ, ಪು.ಸಂ.೨೫
೧೬. ಅದೇ, ಪು.ಸಂ.೬೨
೧೭. ಕುಟುಂಬ ವ್ಯವಸ್ಥೆ ಮಾರ್ಕ್ಸವಾದ–ಸ್ತ್ರೀ ವಾದ. ಓಲ್ಗಾ,
೧೮. ಮುನ್ನುಡಿ ಬೆನ್ನುಡಿಗಳ ನಡುವೆ, ಪ್ರತಿಭಾ ನಂದಕುಮಾರ್, ಪು.ಸಂ.೯
೧೯. ಮೊದಲ ಸಿರಿ, ಲಲಿತಾ ಸಿದ್ಧಬಸವಯ್ಯರವರ, ಪು.ಸಂ.೮,
೨೦. ಇತಿಗೀತಿಕೆ, ವಿಜಯಾದಬ್ಬೆ, ಪು.ಸಂ. ೫೨
೨೧. ಆಧುನಿಕ ಭಾರತದಲ್ಲಿ ಮಹಿಳೆ, ಅನು: ಎಚ್.ಎಸ್.ಶ್ರೀಮತಿ, ಪು.ಸಂ೨೪೬
೨೨. ರಜಿಯಾರವರ ಕವಿತೆಗಳು, ಡಿ.ಬಿ.ರಜಿಯಾ, ಪು.ಸಂ.೭೭
೨೩. ಬಿದಿರು ಮೆಳೆ ಕಂಟಿಯಲಿ, ಬಿ.ಟಿ.ಲಲಿತಾನಾಯಕ್, ಪು. ಸಂ. ೧೧೪
೨೪. ಮುನ್ನುಡಿ ಬೆನ್ನುಡಿಗಳ ನಡುವೆ, ಪ್ರತಿಭಾ ನಂದಕುಮಾರ್ ಪು.ಸಂ.೩೩೪
೨೫. ಇತಿಗೀತಿಕೆ, ವಿಜಯಾದಬ್ಬೆ ಪು.ಸಂ.೨೮

## ಅಧ್ಯಾಯ ೪ :

# ಸ್ಥಾಪಿತ ಮೌಲ್ಯಗಳ ಅನುಸಂಧಾನ ಪ್ರಕ್ರಿಯೆ ಮತ್ತು ಮುಖಾಮುಖಿ

೪.೧ ಸುಧಾರಣಾವಾದಿ ನೆಲೆಗಳು ಹಾಗೂ ಪಲ್ಲಟಗಳು

೪.೨ ಆಧುನಿಕತೆಯೊಂದಿಗಿನ ಮುಖಾಮುಖಿ : ಅಸ್ಮಿತೆಯ ವಿಭಿನ್ನ ವಿನ್ಯಾಸಗಳು

# ಅಧ್ಯಾಯ ೪

## ಸ್ಥಾಪಿತ ಮೌಲ್ಯಗಳ ಅನುಸಂಧಾನ ಮತ್ತು ಪುನರ್‍ರಚನೆಯ ಪ್ರಕ್ರಿಯೆ

ಮಹಿಳಾ ಕಾವ್ಯ ಮಹಿಳಾ ಸಾಮಾಜಿಕತೆಯೊಂದಿಗೆ ನಿಕಟ ಸಂಬಂಧವನ್ನು ಹೊಂದಿರುವುದರಿಂದ ಹೆಣ್ಣಿನ ಬದುಕಿನ ಪಲ್ಲಟಗಳು ಮಹಿಳಾ ಕಾವ್ಯದಲ್ಲಿ ಸಹಜವಾಗಿಯೇ ದಾಖಲೆಗೊಂಡಿರುತ್ತವೆ. ಮಹಿಳೆ, ಸಾಹಿತ್ಯ, ಸಮಾಜ ಇವು ಮೂರೂ ಒಂದರೊಡನೊಂದು ಅವಿನಾಭಾವ ಸಂಬಂಧವನ್ನು ಹೊಂದಿದ್ದು ಸಾಮಾಜಿಕ ಚಲನೆಗಳು ಹೆಣ್ಣಿನ ಬದುಕನ್ನೂ, ಹೆಣ್ಣಿನ ಬದುಕಿನ ಚಲನೆಗಳು ಮಹಿಳಾ ಸಾಹಿತ್ಯವನ್ನೂ ಪ್ರಭಾವಿಸುತ್ತವೆ. ಇದರಿಂದಾಗಿ ಪುರುಷ ಪ್ರಧಾನ ಮೌಲ್ಯವ್ಯವಸ್ಥೆಯಿಂದ ನಿರ್ದೇಶಿಸಲ್ಪಟ್ಟ 'ಹೆಣ್ಣಿನ ಜೀವನ ವಿಧಾನ' ಹಾಗೂ ಹೆಣ್ಣಿನ 'ಸ್ವಂತ ಆಯ್ಕೆ' ಇವುಗಳನ್ನು ಸ್ಪಷ್ಟವಾಗಿ ಬಿಡಿಸಿ ನೋಡಲು ಸಾಧ್ಯವಾಗುವುದಿಲ್ಲ. ಆದ್ದರಿಂದ ಹೆಣ್ಣಿಗೆ ಮೌಲ್ಯವ್ಯವಸ್ಥೆಯೊಂದಿಗಿನ ಅನುಸಂಧಾನ ಅಗತ್ಯವೂ, ಅನಿವಾರ್ಯವೂ ಆಗಿದೆ. ಮಹಿಳಾ ಕಾವ್ಯದಲ್ಲಿ ಮಹಿಳೆ ಮೌಲ್ಯವ್ಯವಸ್ಥೆಯೊಂದಿಗೆ ನಡೆಸುವ ಅನುಸಂಧಾನದ ಕ್ರಮಗಳು ಕಾಲ ಕಾಲಕ್ಕೆ ವಿಭಿನ್ನ ವಿನ್ಯಾಸಗಳಲ್ಲಿ, ಸಂದರ್ಭಕ್ಕನುಗುಣವಾಗಿ ಭಿನ್ನ ಭಿನ್ನ ಮಾದರಿಗಳಲ್ಲಿ ದಾಖಲಾಗಿವೆ. ಇದೊಂದು ನಿರಂತರವಾದ ಪ್ರಕ್ರಿಯೆಯಾಗಿದ್ದು, ಹೆಣ್ಣಿನ ಜೀವನದೊಂದಿಗೆ ಸಂಬಂಧ ಹೊಂದಿರುವುದನ್ನು ಮಹಿಳಾ ಕಾವ್ಯದ ಸ್ತ್ರೀವಾದಿ ಅಧ್ಯಯನದಿಂದ ಸ್ಪಷ್ಟಪಡಿಸಬಹುದು. ಮೌಲ್ಯವ್ಯವಸ್ಥೆಯೊಂದಿಗಿನ ನಿರಂತರ ಮುಖಾಮುಖಿ ಹೆಣ್ಣಿನ ಬದುಕು, ವ್ಯಕ್ತಿತ್ವ ಹಾಗೂ ಅಭಿವ್ಯಕ್ತಿಯನ್ನು ಆವರಿಸಿರುವುದರಿಂದಾಗಿ ಮೌಲ್ಯವ್ಯವಸ್ಥೆಯನ್ನು ಕುರಿತಾದ ಹೆಣ್ಣಿನ ಅಭಿವ್ಯಕ್ತಿಯು ಸಾಮಾಜಿಕ ಪಲ್ಲಟಗಳನ್ನೂ, ಸಾಂಸ್ಕೃತಿಕ ಆಯಾಮಗಳನ್ನೂ ಏಕಕಾಲಕ್ಕೆ ವಿವರಿಸುವುದರೊಂದಿಗೆ ಅವುಗಳೊಂದಿಗಿನ ಸಂಘರ್ಷ ಹಾಗೂ ಸಂಧಾನದ ವಿಧಾನಗಳನ್ನು ಚರ್ಚೆಗೆ ಒಳಪಡಿಸುತ್ತದೆ.

ಈ ಹಿನ್ನೆಲೆಯಲ್ಲಿ ಮಹಿಳಾ ಕಾವ್ಯ ಮೌಲ್ಯವ್ಯವಸ್ಥೆಯೊಂದಿಗೆ ಹೊಂದಿರುವ ಅನುಸಂಧಾನ ಹಾಗೂ ಪುನರ್‍ರಚನಾ ಪ್ರಕ್ರಿಯೆಯ ಮಾದರಿಗಳನ್ನು ಪ್ರಸ್ತುತ ಅಧ್ಯಾಯದಲ್ಲಿ ಚರ್ಚಿಸಲಾಗುವುದು. ಪ್ರಸ್ತುತ ಅಧ್ಯಯನದಲ್ಲಿ ಅನುಸಂಧಾನ ಪ್ರಕ್ರಿಯೆ ಎನ್ನುವುದು ರಾಜಿ, ಹೊಂದಾಣಿಕೆ ಎಂಬ ಸಾಮಾನ್ಯಾರ್ಥಕ್ಕಿಂತ ಭಿನ್ನವಾದ ಸಾಮರಸ್ಯ, ಮುಖಾಮುಖಿ, ಮುರಿದುಕಟ್ಟುವ ಬಗೆ ಎಂಬ ವಿಶಾಲಾರ್ಥವನ್ನು ಒಳಗೊಂಡಿದೆ. ಇಲ್ಲಿ ಸಂವಾದ, ಚರ್ಚೆ, ತಕರಾರು ಮತ್ತು ಸಹಮತಗಳಿಗೆ ಅವಕಾಶವಿದ್ದು ಮಹಿಳಾ ಸಾಹಿತ್ಯದಲ್ಲಿ ಇದು ವಿಭಿನ್ನ ಆಯಾಮಗಳಲ್ಲಿ ಚರ್ಚೆಗೆ ಒಳಪಟ್ಟಿರುವುದನ್ನು ಗುರುತಿಸಲಾಗಿದೆ.

ನಿರ್ದೇಶನ, ನಿಯಂತ್ರಣ ಹಾಗೂ ನಿರ್ಬಂಧಗಳ ಮೂಲಕ ಸದಾ ಹೆಣ್ಣನ್ನು ತನ್ನ ಅಧೀನದಲ್ಲಿರಿಸಿಕೊಳ್ಳಲು ಪ್ರಯತ್ನಿಸುವ ಪುರುಷ ಪ್ರಭುತ್ವ ತನ್ನ ಅಧಿಪತ್ಯವನ್ನು ಶಾಶ್ವತಗೊಳಿಸುವ ನಿಟ್ಟಿನಲ್ಲಿ ಪಿತೃ ಸಂಸ್ಕೃತಿಯ ಮೂಲಕ ಬೇರೆ ಬೇರೆ ರೀತಿಯ ಕಾರ್ಯಮಾದರಿಗಳಲ್ಲಿ ಕಾಲ, ದೇಶ, ಸನ್ನಿವೇಶ, ಸಂದರ್ಭಕ್ಕನುಸಾರವಾಗಿ ಹೊಸ ಹೊಸ ಆಶಯಗಳೊಂದಿಗೆ ಮಹಿಳಾ ಬದುಕನ್ನು ಪ್ರವೇಶಿಸುತ್ತಿದೆ. ಮಹಿಳಾ ಬದುಕು ಮತ್ತು ಸಾಹಿತ್ಯ ಒಂದಕ್ಕೊಂದು ಅವಿನಾಭಾವ ಸಂಬಂಧವನ್ನು ಹೊಂದಿರುವುದರಿಂದ ಮೌಲ್ಯ ವ್ಯವಸ್ಥೆಯೊಂದಿಗಿನ ಅನುಸಂಧಾನ ಮತ್ತು ಪುನರ್ರಚನೆಯ ಪ್ರಕ್ರಿಯೆಯನ್ನು ಆಧುನಿಕ ಮಹಿಳಾ ಕಾವ್ಯ ಸಮರ್ಥವಾಗಿ ಚರ್ಚೆಗೆ ಒಳಪಡಿಸುತ್ತದೆ. ಸಂದರ್ಭಕ್ಕೆ ತಕ್ಕಂತೆ ಮೌಲ್ಯವ್ಯವಸ್ಥೆ ಹೆಣ್ಣನ್ನು ಆಕ್ರಮಿಸುವ ವಿಧಾನವನ್ನೂ, ಪುರುಷ ಪ್ರಧಾನ ಮೌಲ್ಯವ್ಯವಸ್ಥೆಯ ಆಶಯಗಳ ಪರಿಧಿಯೊಳಗೆ ತನ್ನ ಅಸ್ಮಿತೆಯನ್ನು ಕಂಡುಕೊಳ್ಳುವ ಹೆಣ್ಣಿನ ಆಂತರಿಕ ಶಕ್ತಿಯನ್ನೂ ಮಹಿಳಾ ಕಾವ್ಯ ಕಾಲ ಕಾಲಕ್ಕೆ ತಕ್ಕಂತೆ ಭಿನ್ನ ರೀತಿಯಲ್ಲಿ ಅಭಿವ್ಯಕ್ತಗೊಳಿಸಿದೆ. ಇದನ್ನು ಅಧ್ಯಯನದ ಅನುಕೂಲಕ್ಕಾಗಿ ಮಹಿಳಾ ಕಾವ್ಯದಲ್ಲಿ ವ್ಯಕ್ತವಾಗುವ ಧೋರಣೆ ಹಾಗೂ ಪಿತೃ ಸಂಸ್ಕೃತಿಗೆ ಮುಖಾಮುಖಿಯಾಗುವ ವಿಧಾನಗಳ ಹಿನ್ನೆಲೆಯಲ್ಲಿ ಈ ಕೆಳಕಂಡಂತೆ ಗುರುತಿಸಲಾಗಿದೆ. ಅವುಗಳೆಂದರೆ

- ಸುಧಾರಣಾವಾದಿ ನೆಲೆಗಳು ಹಾಗೂ ಪಲ್ಲಟಗಳು
- ಆಧುನಿಕತೆಯೊಂದಿಗಿನ ಮುಖಾಮುಖಿ : ಅಸ್ಮಿತೆಯ ವಿಭಿನ್ನ ವಿನ್ಯಾಸಗಳು

ಆಧುನಿಕ ಮಹಿಳಾ ಕಾವ್ಯದಲ್ಲಿ ಈ ಅಂಶಗಳು ಸಂಧಾನ, ಸಂಘರ್ಷ, ಮತ್ತು ಸ್ವಾಯತ್ತತೆಯನ್ನು ಕಂಡುಕೊಳ್ಳುವ ಮೂಲಕ ಪಿತೃ ಪ್ರಧಾನ ಮೌಲ್ಯವ್ಯವಸ್ಥೆಯೊಂದಿಗೆ ಮುಖಾಮುಖಿಯಾಗುತ್ತಿರುತ್ತವೆ. ಬದಲಾದ ಕಾಲ, ಸನ್ನಿವೇಶಕ್ಕನುಗುಣವಾಗಿ ಮಹಿಳಾ ಸಾಮಾಜಿಕತೆ ಮೌಲ್ಯವ್ಯವಸ್ಥೆಯೊಂದಿಗೆ ಅನುಸಂಧಾನಗೊಂಡಿರುವ ಪ್ರಕ್ರಿಯೆಯ ಮಾದರಿಗಳು ಭಿನ್ನ ಭಿನ್ನ ಆಶಯಗಳೊಂದಿಗೆ ಮಹಿಳಾ ಬದುಕನ್ನು ಆವರಿಸಿದ್ದರೂ ಈ ಎಲ್ಲಾ ಬಗೆಯ ಚಟುವಟಿಕೆಗಳೂ ಕೂಡ ಮಹಿಳಾ ಕಾವ್ಯದಲ್ಲಿ ಸಂಧಾನ, ಸಂಘರ್ಷ ಮತ್ತು ಸ್ವಾಯತ್ತತೆಯನ್ನು ಕಂಡುಕೊಳ್ಳುವ ಪ್ರಯತ್ನದ ಮೂಲಕ ಪುರುಷ ಪ್ರಭುತ್ವದೊಂದಿಗೆ ಅನುಸಂಧಾನಕ್ಕೆ ಒಳಗಾಗುತ್ತವೆ.

### ೩.೧ ಸುಧಾರಣವಾದಿ ನೆಲೆಗಳು ಹಾಗೂ ಪಲ್ಲಟಗಳು

ಭಾರತೀಯ ಸಮುದಾಯದಲ್ಲಿ ಸುಧಾರಣಾವಾದವು ಮುಖ್ಯವಾದ ಘಟ್ಟ. ಭಾರತೀಯ ಸಾಮಾಜಿಕ ವ್ಯವಸ್ಥೆ ತನ್ನನ್ನು ತಾನು ಆತ್ಮವಿಮರ್ಶೆಗೆ, ಮರುಶೋಧಕ್ಕೆ ಒಳಗುಮಾಡಿಕೊಂಡ ಕಾಲ ಇದು. ಇಲ್ಲಿ ಆದಂತಹ ಖಚಿತವಾದ ಬದಲಾವಣೆಗಳು ಮೌಲ್ಯವ್ಯವಸ್ಥೆಯನ್ನು ಸುಧಾರಣೆಗೆ ಒಳಗು ಮಾಡಿದವು. “ಒಂದು ರೀತಿಯಲ್ಲಿ ಈ ಸುಧಾರಣಾವಾದವು ಪರಿಷ್ಕರಣವಾದವೇ ಆಗಿದೆ. ಅಂದರೆ ಹಿಂದೂ ಧರ್ಮದ ‘ನಿಜಸತ್ವ’ದ ಸುತ್ತ ಆವರಿಸಿರುವ ಧೂಳನ್ನು ತೊಡೆದು ಅದನ್ನು ‘ಶುದ್ಧರೂಪ’ಗೊಳ್ಳುವಂತೆ

ಮಾಡಬೇಕೆನ್ನುವುದೇ ಆಗಿದೆ".[7] ಎನ್ನುವುದು ಸುಧಾರಣಾವಾದದ ಹೆಸರಿನಲ್ಲಿ ಪುರುಷ ಪ್ರಧಾನ ಯಜಮಾನ್ಯ ಸ್ವಹಿತಾಸಕ್ತಿಯಿಂದ ವ್ಯವಹರಿಸಿದೆ ಎಂಬುದನ್ನು ಸ್ಪಷ್ಟಪಡಿಸುತ್ತದೆ. ಇದರ ನಡುವೆಯೂ ಶೋಷಿತ ಸಮುದಾಯಗಳಿಗೆ ಹೊಸ ಅವಕಾಶಗಳ ಬಾಗಿಲು ಸುಧಾರಣಾವಾದಿಗಳ ಪ್ರಯತ್ನದಿಂದ ತೆರೆಯಿತು. ಆದರೆ "ಸುಧಾರಣಾವಾದವು ಇತಿಹಾಸ ಕಾಣುವಷ್ಟು ಸರಳವಾದದ್ದಲ್ಲ. ಒಂದೊಂದು ಸುಧಾರಣೆಯ ಜೊತೆಯಲ್ಲಿ ಅದರ ವಿರೋಧಿಯಾದ ಬೇರೆ ಹಿತಾಸಕ್ತಿಗಳೂ ಕ್ರಿಯಾಶೀಲವಾಗಿರುವುದರಿಂದ ತೀರ್ಮಾನವಾಗುತ್ತಿರುತ್ತವೆ".[8] ಎನ್ನುವ ಬಿ.ಎನ್.ಸುಮಿತ್ರಾಬಾಯಿಯವರ ಅಭಿಪ್ರಾಯ ಭಾರತೀಯ ಸಂದರ್ಭದಲ್ಲಿ ಸುಧಾರಣಾವಾದವು ಬಹುಮುಖಿಯಾದ ನೆಲೆಗಳಿಂದ ಕೂಡಿದ್ದು ಅದು ಏಕಕಾಲಕ್ಕೆ ಬಿಡುಗಡೆಯ ಅವಕಾಶಗಳನ್ನೂ, ಬಂಧನದ ಮಿತಿಗಳನ್ನೂ ಒಳಗೊಂಡಿದೆ. ಇದು ಹಲವು ವೇಶಗಳನ್ನು ಧರಿಸಿ ಹೆಣ್ಣಿನ ಬದುಕನ್ನು ಆವರಿಸಿದೆ ಎಂಬುದಕ್ಕೆ ಪುಷ್ಠಿ ನೀಡುತ್ತದೆ. ಸುಧಾರಣಾವಾದಿ ಧೋರಣೆಯಿಂದ ದೊರೆತ ಅವಕಾಶಗಳು ಹಾಗೂ ಅವುಗಳನ್ನು ಪಡೆದ ಹೆಣ್ಣು ಮೌಲ್ಯವ್ಯವಸ್ಥೆಯೊಂದಿಗೆ ನಡೆಸಿದ ಅನುಸಂಧಾನದ ವಿಧಾನಗಳನ್ನು ಮಹಿಳಾ ಕಾವ್ಯ ಸಮರ್ಥವಾಗಿ ತೆರೆದಿಡುತ್ತದೆ.

ಇದರಿಂದಾಗಿ ಆರಂಭಘಟ್ಟದ ಮಹಿಳಾ ಕಾವ್ಯದಲ್ಲಿ ಕಂಡುಬರುವ ಮೌಲ್ಯವ್ಯವಸ್ಥೆಯೊಂದಿಗಿನ ಅನುಸಂಧಾನದ ಬಗೆಗಳು ಪಿತೃ ಸಂಸ್ಕೃತಿಯು ಹೆಣ್ಣನ್ನು ಅಧೀನವಾಗಿರಿಸಿಕೊಳ್ಳುವ ಸಲುವಾಗಿ ಸ್ವಾತಂತ್ರ್ಯ ಪೂರ್ವದಲ್ಲಿ ಆರಂಭಿಸಿದ ಸ್ತ್ರೀಪರವಾದ ಚಿಂತನೆ ಮತ್ತು ಆಲೋಚನೆಗಳ ಪ್ರಭಾವದಿಂದ ರೂಪುಗೊಂಡ ಸುಧಾರಣಾವಾದಿ ದೃಷ್ಟಿಕೋನದಿಂದ ಕೂಡಿದೆ. ಇದಕ್ಕೆ "ಸುಧಾರಣಾವಾದಿ ಚಳುವಳಗಳ ಪ್ರಭಾವ, ವಸಾಹತುಶಾಹಿಯಿಂದ ಕಲಿತ ಆಂಗ್ಲಭಾಷೆ, ಮತ್ತು ವಸಾಹತುಶಾಹಿಯ ವಿರುದ್ಧ ಮೂಡತೊಡಗಿದ್ದ ರಾಷ್ಟ್ರೀಯ ಜಾಗೃತಿ ಪ್ರೇರಣೆಗಳಾಗಿದ್ದವು"[9] ಎಂಬುದು ಗಮನಾರ್ಹವಾದ ಅಂಶ. ಹಿಂದಿನಿಂದಲೂ ಹೇರಲ್ಪಟ್ಟ ರೂಢಿ, ಸಂಪ್ರದಾಯ, ಆಚರಣೆಗಳ ಪ್ರಭಾವದಿಂದಾಗಿ ಸ್ವಾತಂತ್ರ್ಯ ಪೂರ್ವದ ಮಹಿಳೆಗೆ ಸಾಮಾಜಿಕ ಭಾಗವಹಿಸುವಿಕೆ ಸಂಪೂರ್ಣ ನಿಷೇಧಿಸಲ್ಪಟಿತ್ತು. ಬಾಲ್ಯವಿವಾಹ, ವೈಧವ್ಯ ಪರಿಪಾಲನೆ, ಪರದಾಪದ್ಧತಿ, ಸತೀಪದ್ಧತಿಯಂತಹ ಕಠೋರ ನಿಯಮಗಳಿಗೆ ಒಳಪಟ್ಟು ನಲುಗುತ್ತಿದ್ದ ಹೆಣ್ಣಿಗೆ 'ಬಿಡುಗಡೆ'ಯ ಮಾರ್ಗವನ್ನು ತೋರಿದವರು ಆ ಕಾಲದ ಸಮಾಜ ಸುಧಾರಕರು. ರಾಜಾರಾಂ ಮೋಹನ ರಾಯ್, ಈಶ್ವರಚಂದ್ರ ವಿದ್ಯಾಸಾಗರ, ಕೇಶವಚಂದ್ರ ಸೇನ್, ವಿವೇಕಾನಂದ, ದಯಾನಂದ ಸರಸ್ವತಿ, ರಾಯ ಸಾಲಿಗಾಮ ಹುಜೂರ, ಖ್ವಾಜಾ ಅಲ್ತಾಫ್ ಹುಸೇನ್ ಅಲಿ, ಶೇಖ್ ಮೊಹಮ್ಮದ್ ಅಬ್ದುಲ್ಲಾ, ಮಹಾದೇವ ಗೋವಿಂದ ರಾನಡೆ, ವೀರೇಶ ಲಿಂಗಂ ಪಂತಲು, ಆರ್. ವೆಂಕಟರತ್ನಂ ನಾಯ್ಡು, ಮಹಾತ್ಮ ಗಾಂಧೀಜಿ ಮುಂತಾದ ಸುಧಾರಣಾವಾದಿಗಳು ಸ್ತ್ರೀ ಶಿಕ್ಷಣ, ವಿಧವಾ ವಿವಾಹ, ಅಸಮಾನ ವಯಸ್ಕರ ನಡುವೆ ವಿವಾಹ, ಮಹಿಳಾ ಪುನಶ್ಚೇತನ, ಬಾಲ್ಯವಿವಾಹ ನಿಷೇಧ, ವರದಕ್ಷಿಣೆ, ಬಹುಪತ್ನಿತ್ವ, ಸತೀಪದ್ಧತಿ, ದೇವದಾಸಿ ಪದ್ಧತಿಗಳ ನಿಷೇಧಕ್ಕೆ ಒತ್ತು ನೀಡಿ ಅದರ ಪರವಾಗಿ ಹೋರಾಟ ನಡೆಸಿದರು. ಈ

ಕಾರಣದಿಂದಾಗಿ ಮಹಿಳೆಗೆ ದತ್ತವಾದ ಅವಕಾಶಗಳು ಹೆಣ್ಣು ತನ್ನನ್ನು, ತನ್ನಂತೆ ಇರುವ ಇತರರನ್ನು ಕುರಿತು ಆಲೋಚಿಸಲು ಪ್ರೇರಕವಾಯಿತು ಇದರಿಂದಾಗಿ ಹೆಣ್ಣು ವಿಮೋಚನೆಯ ಹಾದಿಯನ್ನು ಕಂಡುಕೊಳ್ಳಲು ನೆರವಾಯಿತಾದರೂ ಇವು ಮೂಲದಲ್ಲಿ ಸಾಂಪ್ರದಾಯಿಕ ಮೌಲ್ಯ ಪ್ರತಿಪಾದನೆ ಹಾಗೂ ಆರ್ಯಸ್ತ್ರೀ ಪ್ರತಿಮೆಗಳನ್ನು ನಿರ್ಮಿಸುವುದು ಮತ್ತು ಅದಕ್ಕಾಗಿ ತರಬೇತಿಯನ್ನು ನೀಡುವ ಉದ್ದೇಶವನ್ನು ಹೊಂದಿದ್ದವು ಎನ್ನುವುದು ಸ್ತ್ರೀವಾದಿ ಸಾಹಿತ್ಯ ಅಧ್ಯಯನದಿಂದ ಸ್ಪಷ್ಟವಾಗುತ್ತದೆ.

ಇದೇ ಸಂದರ್ಭದಲ್ಲಿ ತೀವ್ರತೆಯನ್ನು ಪಡೆದುಕೊಂಡಿದ್ದ ರಾಷ್ಟೀಯ ಚಳುವಳಿಯಲ್ಲಿ ಭಾಗವಹಿಸಲು ಸುಧಾರಕರು ಮತ್ತು ರಾಷ್ಟ್ರೀಯ ಮುಖಂಡರು ಮಹಿಳೆಯರಿಗೆ ಉತ್ತೇಜನ ನೀಡಿದರು. ಈ ಮೂಲಕ ಮಹಿಳೆಯರ ಸಾಮಾಜಿಕ ಸಹಭಾಗಿತ್ವಕ್ಕೆ ಪ್ರೋತ್ಸಾಹ ದೊರೆಯಿತು. ಈ ಸಾಮಾಜಿಕ ಸಹಭಾಗಿತ್ವ ಪುರುಷನ ಅಪೇಕ್ಷಿತ, ಪುರುಷ ನಿರ್ದೇಶಿತ ವಲಯಕ್ಕೆ ಮಾತ್ರ ಸೀಮಿತವಾಗಿತ್ತೇ ವಿನಃ ಹೆಚ್ಚಿನ ಆಯ್ಕೆಯ ಪ್ರಶ್ನೆಯೇ ಇರಲಿಲ್ಲ. ಹಿಂದಿನಿಂದ ರೂಢಿಯಲ್ಲಿದ್ದ ಭೂಮಿ ಮತ್ತು ಹೆಣ್ಣಿನ ಸಮೀಕರಣ ಇಲ್ಲಿ ವಿಭಿನ್ನ ವಿನ್ಯಾಸಗಳಲ್ಲಿ ಮಾನ್ಯತೆ ಪಡೆಯಿತು. ಈ ಸಂದರ್ಭದಲ್ಲಿ ಹೆಣ್ಣಿನ ಪಾತ್ರ ಕನ್ನಡಾಂಬೆ, ಭಾರತಾಂಬೆ, ವಿಶ್ವಮಾತೆ, ಜಗಜ್ಜನನಿ, ಮಹಾಮಾಯಿ, ಮುಂತಾದ ಮಾದರಿಗಳಲ್ಲಿ ಪ್ರಕಟಗೊಂಡವು. ಭೂಮಿ, ತಾಯಿಯಾಗಿ 'ಸಹನೆಯ' ಭಾರವನ್ನು ಹೊತ್ತಿದ್ದವಳು ಪ್ರಾಣತ್ಯಾಗ, ಬಲಿದಾನ, ಕೋಮುಹಿಂಸೆಗಳನ್ನು ಮೂಕವಾಗಿ ಒಪ್ಪಿಕೊಳ್ಳುವ 'ಆದರ್ಶ ಭಾರತೀಯನಾರಿ'ಯಾಗಿ ಮಾರ್ಪಾಡಾಗುವ ಅನಿವಾರ್ಯತೆ ಉಂಟಾಯಿತು. ಭಾರತಾಂಬೆಯಂತೆ ಇವಳೂ ಕೂಡ ಪರಕೀಯರಿಂದ ರಕ್ಷಣೆಗೆ ಒಳಗಾಗಬೇಕಾದ, ಅದರಲ್ಲೂ ಪುರುಷನಿಂದ ಮಾತ್ರ ರಕ್ಷಣೆ ಮತ್ತು ಬಿಡುಗಡೆ ಸಾಧ್ಯ ಎಂಬ ನಿಲುವಿನೊಂದಿಗೆ, ದೇಶಹಿತದ ಮುಂದೆ ಕುಟುಂಬದ, ವೈಯಕ್ತಿಕ ಹಿಂಸೆ, ನೋವು ಎಲ್ಲವೂ ಕೂಡ ಅಲ್ಪ ಎಂಬ ಮನೋಭಾವ ಮೂಡಿತು. ತಿರುಮಲೆ ರಾಜಮ್ಮನವರ 'ರಾಷ್ಟ್ರ ಶಕ್ತಿ', 'ರಾಷ್ಟ್ರಭಕ್ತಿ' ಕವನ ಸಂಕಲನಗಳು, ಬೆಳಗೆರೆ ಜಾನಕಮ್ಮನವರ 'ಜಯಭಾರತ ಜನನಿ', 'ಭಾರತ ಮಾತೆಯವಾಕ್ಯ' ಮುಂತಾದ ಕವಿತೆಗಳು ಪರಕೀಯರ ಆಕ್ರಮಣಗಳಿಂದ ಭಾರತ ಎದುರಿಸುತ್ತಿರುವ ಹಿಂಸೆ ಹಾಗೂ ಹೆಣ್ಣಿನ ಹಿಂಸೆಗಳನ್ನು ಒಂದೇ ಎಂದು ಚಿತ್ರಿಸಿ, ಆ ಮೂಲಕ ಪುರುಷಾಪೇಕ್ಷಿತ 'ಆದರ್ಶನಾರಿ' ಪರಿಕಲ್ಪನೆಯನ್ನು ಸನಾತನ ಪರಂಪರೆಯ ವೈಭವದ ಹಿನ್ನೆಲೆಯಲ್ಲಿ ಕಟ್ಟಿಕೊಡಲು ಪ್ರಯತ್ನಿಸುತ್ತಾರೆ. ಆದರೆ ಇದೇ ರಾಷ್ಟ್ರೀಯ ಚಳುವಳಿ ಮತ್ತು ಗಾಂಧಿ ತತ್ವದಿಂದ ಪ್ರಭಾವಿತರಾದ ಇತರೆ ಲೇಖಕಿಯರ ಕಥನ ಸಾಹಿತ್ಯ ಸ್ತ್ರೀಸುಧಾರಣೆಯ ಬಗೆಗೆ ಆಸಕ್ತವಾಗಿದೆ. ಪ್ರಮುಖವಾಗಿ ಕೊಡಗಿನ ಗೌರಮ್ಮನವರ ಕಥೆಗಳಲ್ಲಿ ಕಂಡುಬರುವ ಸ್ತ್ರೀಪಾತ್ರಗಳು ಸ್ವಬಯಕೆ ಮತ್ತು ಆಯ್ಕೆಗಳನ್ನು ಸ್ವತಂತ್ರವಾಗಿ ರೂಪಿಸಿಕೊಳ್ಳುವ ಸಾಮರ್ಥ್ಯವನ್ನು ಹೊಂದಿದ್ದು, ಮಹತ್ವದ ನಿರ್ಧಾರಗಳನ್ನು ತೆಗೆದುಕೊಳ್ಳುತ್ತಾರೆ. ಇದು ಆಧುನಿಕ ಶಿಕ್ಷಣ ಮತ್ತು ಗಾಂಧೀ ಚಿಂತನೆ ಕನ್ನಡ ಲೇಖಕಿಯರ ಮೇಲೆ ಬೀರಿದ ಪರಿಣಾಮದ ಫಲ.

ಸುಧಾರಣವಾದಿ ಧೋರಣೆಯಿಂದ ಉತ್ತೇಜಿತರಾದ ಆರಂಭ ಘಟ್ಟದ ಲೇಖಕಿಯರ ಬರವಣಿಗೆಯಲ್ಲಿ ಕಂಡುಬರುವ ಮೌಲ್ಯವ್ಯವಸ್ಥೆಯೊಂದಿಗಿನ ಅನುಸಂಧಾನದ ಬಗೆಯನ್ನು 'ಸಂಧಾನದ ಮಾದರಿ' ಎಂದು ಗುರುತಿಸಬಹುದು. ಈ ಕಾಲಘಟ್ಟದ ಲೇಖಕಿಯರ ಬರೆಹಗಳಲ್ಲಿ ಕಂಡುಬರುವ ಅನುಸಂಧಾನ ಪ್ರಕ್ರಿಯೆ ಪಿತೃ ಸಂಸ್ಕೃತಿಯ 'ಅಪೇಕ್ಷಿತ' ಸುಧಾರಣವಾದಿ ಧೋರಣೆಯಿಂದ ದತ್ತವಾದ ಶಿಕ್ಷಣಾವಕಾಶಗಳಂದ ಪ್ರೇರೇಪಿತವಾದದ್ದು. ಪಿತೃ ಸಂಸ್ಕೃತಿಯಿಂದ ಕೊಡಮಾಡಲ್ಪಟ್ಟ ಶಿಕ್ಷಣ ಇವರಲ್ಲಿ ಹೊಸ ಅರಿವನ್ನು ಮೂಡಿಸುವುದರೊಂದಿಗೆ ಮೌಲ್ಯವ್ಯವಸ್ಥೆಯನ್ನು ಮೀರದಂತೆ ಅವರನ್ನು ತರಬೇತುಗೊಳಿಸಿತು. ಆದರೆ ಈ ಕಾಲಘಟ್ಟದ ಬರಹಗಾರ್ತಿಯರು ತಮಗೆ ದೊರೆತ ಅವಕಾಶಗಳಂದ ಪಿತೃಪ್ರಧಾನ ಮೌಲ್ಯವ್ಯವಸ್ಥೆಯ ಚೌಕಟ್ಟಿನ ಪರಿಮಿತಿಯಲ್ಲಿಯೇ ತಮ್ಮ ವ್ಯಕ್ತಿತ್ವ ಅನಾವರಣದ ಹಾದಿಗಳನ್ನು ಕಂಡುಕೊಳ್ಳಲು ಪ್ರಯತ್ನಿಸಿದರು. ಇದರಿಂದಾಗಿ ಸಾಮಾಜಿಕ ಶ್ರೇಣೀಕರಣದಲ್ಲಿನ ಹೆಣ್ಣಿನ ಅಧೀನಸ್ಥಿತಿಯ ಬಗೆಗಿನ ಅರಿವು, ನೋವು ಇವರಿಗೆ ಇದೆಯಾದರೂ ಅದನ್ನು ವಿರೋಧಿಸುವ ವಿಧಾನ ಮಾತ್ರ ಪ್ರತಿರೋಧದ ಮಾದರಿಯದ್ದಾಗಿರದೆ ಮೌಲ್ಯವ್ಯವಸ್ಥೆಯನ್ನು ಒಪ್ಪಿನಡೆಯುವ 'ಅನುನಯನದ' ಮಾದರಿಯದ್ದಾಗಿದೆ. ಈ ಹಂತದ ಮಹಿಳಾ ಕಾವ್ಯದಲ್ಲಿ ಗಂಡು ಹೆಣ್ಣಿನ ಅಸಮಾನತೆಯ ನೆಲೆಗಳ ಅರಿವಿನ ಪ್ರಕ್ರಿಯೆ ಆರಂಭಗೊಂಡಿದ್ದು, ನಂಜನಗೂಡಿನ ತಿರುಮಲಾಂಬ, ಬೆಳಗೆರೆ ಜಾನಕಮ್ಮ, ಸರಸ್ವತಿಬಾಯಿ ರಾಜವಾಡೆ, ತಿರುಮಲೆ ರಾಜಮ್ಮ. ಕೊಡಗಿನ ಗೌರಮ್ಮ, ಆರ್.ಕಲ್ಯಾಣಮ್ಮ, ಹೆಚ್.ವಿ.ಸಾವಿತ್ರಮ್ಮ, ಶ್ಯಾಮಲಾದೇವಿ ಬೆಳಗಾಂವಕರ ಮುಂತಾದವರ ಸಾಹಿತ್ಯದಲ್ಲಿ ಇದನ್ನು ಸ್ಪಷ್ಟವಾಗಿ ಗುರುತಿಸಬಹುದು .

ಈ ಕಾಲಘಟ್ಟದ ಲೇಖಕಿಯರ ಬರವಣಿಗೆ ಮೇಲ್ನೋಟಕ್ಕೆ ಮೌಲ್ಯವ್ಯವಸ್ಥೆಗೆ ಬದ್ಧವಾಗಿರುವ, ಅದನ್ನು ಒಪ್ಪಿ ಅನುಮೋದಿಸುವ, ಅಸಹಾಯಕತೆಯಂತೆ, ಪಿತೃ ಪ್ರಭುತ್ವದ ಮುಂದುವರಿಕೆಯಂತೆ ಕಂಡುಬಂದರೂ ಆಂತರ್ಯದಲ್ಲಿ ಮೌಲ್ಯವ್ಯವಸ್ಥೆಯೊಂದಿಗೆ ತೆರೆಮರೆಯ ಸಂವಾದವೊಂದು ನಿರಂತರವಾಗಿ ಏರ್ಪಟ್ಟಿದೆ. ಹೆಣ್ಣಿನ ವ್ಯಕ್ತಿತ್ವದ ಘನತೆಗೆ ಧಕ್ಕೆಯುಂಟಾಗದ ರೀತಿಯಲ್ಲಿ ಮೌಲ್ಯವ್ಯವಸ್ಥೆಯೊಂದಿಗೆ ಸಂಧಾನಕ್ಕೆ ಮುಂದಾಗುವುದು ಈ ಕಾಲಘಟ್ಟದ ಲೇಖಕಿಯರ ಬರವಣಿಗೆಯ ವಿಶೇಷ. ಇದರ ಜೊತೆಗೆ ಮೌಲ್ಯವ್ಯವಸ್ಥೆಯ ಸ್ತ್ರೀ ವಿರೋಧಿ ಧೋರಣೆಗಳನ್ನು ಸ್ತ್ರೀಪರವಾಗಿಸುವ, ಅವಳ ಬೇಕು ಬೇಡಗಳಿಗೆ ಸ್ಪಂದಿಸುವ, ಮೌಲ್ಯವ್ಯವಸ್ಥೆಯ ಪುನರ್ರಚನೆಯ ಕ್ರಮವೂ ಕೂಡ ಇವರ ಬರವಣಿಗೆಯಲ್ಲಿ ಕಂಡುಬರುತ್ತದೆ.

ಈ ಕಾಲಘಟ್ಟದ ಮುಖ್ಯ ಲೇಖಕಿಯರಾದ ನಂಜನಗೂಡು ತಿರುಮಲಾಂಬ, ಕಲ್ಯಾಣಮ್ಮ, ರಾಜವಾಡೆ ಮುಂತಾದವರು ಸ್ತ್ರೀಯರ ಬದುಕನ್ನು ಸುಧಾರಿಸುವ ಸಲುವಾಗಿ ಹಲವು ರೀತಿಯಲ್ಲಿ ತಮ್ಮನ್ನು ತಾವು ತೊಡಗಿಸಿಕೊಂಡರು. ಈ ಹಂತದಲ್ಲಿ 'ಸಾಹಿತ್ಯ ಮತ್ತು ಪತ್ರಿಕೋದ್ಯಮ' ಜೊತೆ ಜೊತೆಯಾಗಿಯೇ ಮಹಿಳಾ ಅಸ್ಮಿತೆಯನ್ನು ಕಂಡುಕೊಳ್ಳುವ ಹಾಗೂ ಮಹಿಳಾ ಬದುಕನ್ನು ಕಟ್ಟುವ

ಕೆಲಸದಲ್ಲಿ ತೊಡಗಿದವು. ಈ ಕಾಲಘಟ್ಟದ ಬಹುತೇಕ ಬರಹಗಾರ್ತಿಯರು ತಮಗೆ ದೊರೆತ ಶಿಕ್ಷಣದ ಪ್ರಭಾವದಿಂದ ಪತ್ರಿಕೆಗಳನ್ನು ಆರಂಭಿಸುವುದರ ಮೂಲಕ ತಮ್ಮ ವ್ಯಕ್ತಿತ್ವ ಅನಾವರಣಕ್ಕೆ ವೇದಿಕೆಯನ್ನು ಸಿದ್ಧಗೊಳಿಸಿಕೊಂಡಿದ್ದು ಮಾತ್ರವಲ್ಲದೆ, ಸ್ತ್ರೀ ಸಮುದಾಯದ ಏಳ್ಗೆಗೆ, ಅವರ ಶೋಷಣೆ, ನೋವು, ಹಿಂಸೆಗಳ ನಿವಾರಣೆಗೆ, ಅವಿರತವಾಗಿ ಶ್ರಮಿಸಿದರು. ಜೊತೆಗೆ ಹೆಣ್ಣಿನ ಅನುಭವಕ್ಕೆ ಮಾನ್ಯತೆಯನ್ನೂ, ಅಭಿವ್ಯಕ್ತಿಗೊಂದು ವೇದಿಕೆಯನ್ನೂ ನಿರ್ಮಿಸಿದ್ದು, ಪುರುಷ ಪ್ರಭುತ್ವದ ಅಪೇಕ್ಷಿತ ನೆಲೆಗಳ ಒಳಗೇ ತಮ್ಮ ಬಿಡುಗಡೆಯ ಹಾದಿಗಳನ್ನು ಕಂಡುಕೊಂಡಿದ್ದರ ರೂಪಕವಾಗಿ ಕಂಡುಬರುತ್ತದೆ. ಹೆಣ್ಣನ್ನು ಕೇವಲ ನಾಲ್ಕು ಗೋಡೆಗಳ ಒಳಗೆ ಹಿಡಿದಿಡಲು ಪ್ರಯತ್ನಿಸುವ ಪುರುಷ ಪ್ರಧಾನ ಸಮಾಜದ ಎದುರು ಅವಳಿಗೊಂದು ಸಾಮಾಜಿಕ ಮಾನ್ಯತೆಯನ್ನು ತಂದುಕೊಡಲು ಪ್ರಯತ್ನಿಸಿದ್ದು ಆ ಕಾಲದ ಲೇಖಕಿಯರ ಪ್ರಮುಖ ಪ್ರಯತ್ನ. ಇವರು ಮೌಲ್ಯವ್ಯವಸ್ಥೆಯೊಂದಿಗೆ ರಾಜಿಮಾಡಿಕೊಳ್ಳುತ್ತಾರಾದರೂ 'ಸ್ತ್ರೀ ಅಸ್ತಿತ್ವದ ಅನಾವರಣ'ಕ್ಕೆ ಇವರು ಕೊಡುವ ಮಾನ್ಯತೆ ಪ್ರಮುಖವಾದದ್ದು. ಇದರಿಂದಾಗಿ ಅವರು ಎದುರಿಸಿದ ಸಮಸ್ಯೆಗಳು ಹಲವು ಬಗೆಯವು. ಸಾಂಪ್ರದಾಯಿಕ ಶಿಕ್ಷಣ ಹಾಗೂ ಒಂದೆಡೆ ಸಮುದಾಯದ, ಸಾಹಿತ್ಯವಲಯದ ಕಠೋರ ಟೀಕೆ, ವಿಮರ್ಶೆಗಳ ಮೂಲಕ ಸ್ವಾತಂತ್ರ್ಯ ಮತ್ತು ಆಯ್ಕೆಯ ಬದುಕಿನ ಬಗೆಗಿನ ದ್ವಂದ್ವ ಗೊಂದಲಗಳಾದರೆ ಮತ್ತೊಂದೆಡೆ ಇವರು ಹೊರಗಿನ ಶತ್ರುಗಳಿಗಿಂತ ತನ್ನೊಳಗಿನ ಸಂಘರ್ಷವನ್ನು ನಿಭಾಯಿಸುವುದೇ ಬಹುಮುಖ್ಯ ಸಮಸ್ಯೆಯಾಯಿತು. ಇದರಿಂದಾಗಿಯೇ ಈ ಕಾಲಘಟ್ಟದ ಎಲ್ಲಾ ಲೇಖಕಿಯರು ತಮ್ಮೊಳಗಿನ ದ್ವಂದ್ವ, ಗೊಂದಲ ಹೋರಾಟಗಳ ನಡುವೆ ಮೌಲ್ಯವ್ಯವಸ್ಥೆಯೊಂದಿಗಿನ ಅನುಸಂಧಾನಕ್ಕೆ ಮುಂದಾಗುತ್ತಾರೆ. ಆದರೆ ಈ ಕಾಲಘಟ್ಟದ ಲೇಖಕಿಯರ ಬರವಣಿಗೆಯಲ್ಲಿ ತಮ್ಮ ಬಗೆಗಿನ, ತಮ್ಮ ಸಾಮರ್ಥ್ಯದ ಬಗೆಗಿನ ಆತ್ಮವಿಶ್ವಾಸದ ಕೊರತೆ ಮತ್ತು ಕೀಳರಿಮೆಯ ಮನೋಭಾವ ಕಂಡುಬರುತ್ತದೆ. ಇದರಿಂದಾಗಿಯೆ ಮೊದಲ ತಲೆಮಾರಿನ ಲೇಖಕಿಯರು ತಮ್ಮ ಸೃಜನಶೀಲ ಚಟುವಟಿಕೆಗಳನ್ನು ಕುರಿತಂತೆ ಪುರುಷಶಾಹಿಯ ಪ್ರತಿಕ್ರಿಯೆ, ಅದರಲ್ಲೂ ಅವರನ್ನು ಮೆಚ್ಚಿಸಬೇಕೆಂಬ ಇರಾದೆಯೇ ಹೆಚ್ಚಿನ ಪ್ರಮಾಣದಲ್ಲಿದೆ. ಎಲ್ಲವನ್ನೂ ಗೆಲ್ಲಬಲ್ಲ ಶಕ್ತಿ, ಸಾಮರ್ಥ್ಯ ತಮ್ಮಲ್ಲಿ ಇದೆಯಾದರೂ ಅವರು ಅದನ್ನು ಗುರುತಿಸಿಕೊಂಡದ್ದು ತೀರಾ ಕಡಿಮೆ. ತಮ್ಮ ಎಲ್ಲ ಚಟುವಟಿಕೆಗಳನ್ನು ಪಿತೃ ಪ್ರಧಾನತೆಯ ಉದಾರವಾದಿ ಮನೋಭಾವದ ಹಿನ್ನೆಲೆಯಲ್ಲಿಯೇ ಗ್ರಹಿಸುತ್ತಾರೆ.

ಸುಧಾರಣವಾದಿ ಧೋರಣೆಯಿಂದ ದತ್ತವಾದ ಸ್ತ್ರೀಶಿಕ್ಷಣದ ಮುಖ್ಯ ಉದ್ದೇಶ ಹೆಣ್ಣನ್ನು ಉತ್ತಮ ಗೃಹಿಣಿಯಾಗಿ ರೂಪಿಸುವುದೇ ಆಗಿತ್ತು. ಈ ಹಿನ್ನೆಲೆಯಲ್ಲಿ ಕೊಡಮಾಡಿದ ಶಿಕ್ಷಣ ಕೂಡ ಇದನ್ನೇ ಸಮರ್ಥಿಸುವಂತಿತ್ತು. ಕಲ್ಯಾಣಮ್ಮನವರು "'ಸ್ತ್ರೀಶಿಕ್ಷಣ ಕ್ರಮ' ಎಂಬ ಲೇಖನದಲ್ಲಿ ಸ್ತ್ರೀಯರಿಗೆ ನೀಡುವ ಶಿಕ್ಷಣದಲ್ಲಿ ಚರಿತ್ರೆ, ಭೂಗೋಳ, ಲೆಕ್ಕ, ವ್ಯಾಕರಣ ಮೊದಲಾದ ವಿಷಯಗಳು ಅವರ ಜ್ಞಾನವನ್ನು ಹೆಚ್ಚಿಸಲು ನೆರವಾಗುವಂತೆ ಇರಬೇಕು ಹೊಲಿಗೆ, ಅಡಿಗೆ, ಶಿಶುಪೋಷಣೆಯಂತಹ ಕಲಿಕೆಗಳು ಅವರ ಸಾಂಸಾರಿಕ

ಜೀವನಕ್ಕೆ ಒದಗುವಂತಾಗಬೇಕು . . . ಸ್ತ್ರೀಯರಲ್ಲಿ ಪಾತಿವ್ರತ್ಯ ಗೃಹಕೃತ್ಯ, ಮತ್ತು ಭಗವದ್ಭಕ್ತಿಗಳ ಬಗ್ಗೆ ಅರಿವು ಮೂಡಿಸುವುದಕ್ಕಾಗಿ ಶಿಕ್ಷಣದಲ್ಲಿ ಪ್ರಾಚೀನ ಗ್ರಂಥಗಳ ಅಧ್ಯಯನಕ್ಕೆ ಅವಕಾಶ ಕಲ್ಪಿಸಬೇಕು. ಇಂಥ ಅಧ್ಯಯನದಿಂದ ದಾನ, ದಯೆ, ಪರೋಪಕಾರಗಳ ಭಾವನೆಯನ್ನು ಪ್ರಚೋದಿಸಿ ಸ್ತ್ರೀಯರ ಸ್ವಾರ್ಥಪರತೆಯನ್ನು ತಿದ್ದಿ ಅಂತಃಕರಣವನ್ನು ವಿಕಾಸಗೊಳಸುವ ಯತ್ನ ನಡೆಯಬೇಕು"[೪] ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾರೆ. ಇಲ್ಲಿ ಗೃಹಿಣಿತ್ವದ ಕಡ್ಡಾಯ ಪಾಲನೆಗೆ ಆದ್ಯತೆಯನ್ನು ನೀಡುವುದರ ಜೊತೆಗೆ ಚರಿತ್ರೆ, ಭೂಗೋಳ, ಲೆಕ್ಕ, ವ್ಯಾಕರಣಗಳನ್ನೂ ಕೂಡ ಗೃಹ ನಿರ್ವಹಣೆಗೆ ಪೂರಕವಾಗುವ ರೀತಿಯಲ್ಲಿ, ಹೆಣ್ಣಿನ ವ್ಯಕ್ತಿತ್ವದ ಅನಾವರಣಕ್ಕೆ ಅವಕಾಶವಾಗುವ ರೀತಿಯಲ್ಲಿ ಬಳಸಿಕೊಳ್ಳಬೇಕೆನ್ನುತ್ತಾರೆ. ಈ ಮೂಲಕ ಪುರುಷ ಪ್ರಧಾನ ಮೌಲ್ಯವ್ಯವಸ್ಥೆಯನ್ನು ಹೆಣ್ಣಿನ ವ್ಯಕ್ತಿತ್ವದ ಉನ್ನತಿಗೆ, ಅಭಿವ್ಯಕ್ತಿಯ ಆಲೋಚನೆಗೆ ಸಾಧನವಾಗಿ ಬಳಸಿಕೊಳ್ಳಲು ಉತ್ತೇಜನವನ್ನು ನೀಡಿದರು.

ಕಲ್ಯಾಣಮ್ಮನವರು 'ಸರಸ್ವತಿ'ಯ ಸಂಪಾದಕೀಯದಲ್ಲಿ ಪತ್ರಿಕೆಯ ಆಶಯವನ್ನು ವ್ಯಕ್ತಪಡಿಸುತ್ತಾ "ಸ್ತ್ರೀಯರ ಆಶ್ಚರ್ಯಕಾರ್ಯಗಳೂ, ತಮ್ಮ ಪಾತಿವ್ರತ್ಯ ರಕ್ಷಣೆಗಾಗಿ ಅವರು ತೋರ್ಪಡಿಸಿದ ಸಾಹಸವೂ ಕಾರ್ಯ ದಕ್ಷತೆಯೂ ಈ ಭರತಖಂಡಕ್ಕೆ 'ಪುಣ್ಯಭೂಮಿ' ಎಂಬ ಅನ್ವರ್ಥನಾಮವನ್ನುಂಟುಮಾಡಿದವು. ಆದ್ದರಿಂದ ಅವರ ಚರಿತ್ರೆಯಿಂದ ನಾವು ಕಲಿಯಬೇಕಾದ ನೀತಿಗಳನ್ನೂ ಈ 'ಸರಸ್ವತಿ'ಗ್ರಂಥದಲ್ಲಿ ಆಗಾಗ್ಗೆ ಪ್ರಕಟಿಸಲಾಗುತ್ತದೆ".[೫] ಎನ್ನುತ್ತಾರೆ. ಈ ರೀತಿಯಲ್ಲಿ ಹೆಣ್ಣನ್ನು ಭೂಮಿತಾಯಿಗೆ ಹೋಲಿಸುವ, ಆ ಗುಣಗಳನ್ನು ಹೆಣ್ಣಿನಲ್ಲಿ ಹುಡುಕುವ ವಿಧಾನ ಆರಂಭಘಟ್ಟದ ಲೇಖಕಿಯರ ಆಸಕ್ತಿಯ ಕೇಂದ್ರವಾಗಿದ್ದಿತ್ತು. ಇದರ ಪರಿಣಾಮವಾಗಿಯೇ ಪುರುಷ ಪ್ರಧಾನ ಮೌಲ್ಯವ್ಯವಸ್ಥೆಯನ್ನು ಇವರು ಇನ್ನಷ್ಟು ಬಲಪಡಿಸಲು ಪರೋಕ್ಷವಾಗಿ ಸಹಾಯಕರಾದರು. ತಿರುಮಲಾಂಬರವರ 'ನಭಾ' ಕಾದಂಬರಿಯ ನಾಯಕಿ ವಿಧವಾ ವಿವಾಹವನ್ನು ಕುರಿತಂತೆ ಮಾತನಾಡುವ ಸಂದರ್ಭದಲ್ಲಿ ಹೆಣ್ಣು ಯಾರಿಗೆ ಸೇರಬೇಕು ಎಂಬುದನ್ನು ಕುರಿತಂತೆ ಭೂಮಿ ಮತ್ತು ಮಾಲಿಕನ ಸಂಬಂಧದ ಹಿನ್ನೆಲೆಯಲ್ಲಿ ಚರ್ಚಿಸುತ್ತಾಳೆ. "ಒಬ್ಬ ಉದಾರಿಯಾದ ಜಮೀನುದಾರನು ಒಂದು ಕ್ಷೇತ್ರವನ್ನು ಒಬ್ಬ ಬ್ರಾಹ್ಮಣನಿಗೆ ದಾನ ಮಾಡುವನೆಂದು ಭಾವಿಸಿರಿ. ಹಾಗೆ ದಾನವಾದ ಸ್ವತ್ತಿನ ಮೇಲೆ ದಾನಕೊಟ್ಟವನ ಅಧಿಕಾರವೇನೋ ಇರದು. ಅದರ ಫಲವನ್ನು ದಾನ ತೆಗೆದುಕೊಂಡವನೇ ಅನುಭವಿಸಬೇಕು"೬. ಇಲ್ಲಿಯೂ ಕೂಡ ಹೆಣ್ಣು ಭೂಮಿಯಂತೆ ಕ್ರಯ ವಿಕ್ರಯಗಳಿಗೆ ಒಳಗಾಗ ಬಹುದಾದ ವಸ್ತು. ತ್ಯಾಗ, ಕರುಣೆ, ಅಂತಕರಣಗಳ ಪ್ರತಿಬಿಂಬ ಎಂದು ವೈಭವೀಕರಿಸುವುದರ ಮೂಲಕ ಅವಳ ಸಹಜ ವ್ಯಕ್ತಿತ್ವವನ್ನು ಸಂಪೂರ್ಣ ಅಲ್ಲಗಳೆಯಲಾಗುತ್ತದೆ.

ಆರಂಭಘಟ್ಟದ ಮೊದಲ ಲೇಖಕಿಯೆಂದೇ ಗುರುತಿಸಲ್ಪಡುವ ತಿರುಮಲಾಂಬರವರು ಮೌಲ್ಯವ್ಯವಸ್ಥೆಗೆ ಮುಖಾಮುಖಿಯಾಗುವ ಬಗೆ ವಿಶಿಷ್ಟವಾದದ್ದು. ಪಾತಿವ್ರತ್ಯ, ಸತೀತ್ವ, ವೈಧವ್ಯ ಮುಂತಾದ ಆರ್ಯಸ್ತ್ರೀ ಮಾದರಿಯಂತೆ ಹೆಣ್ಣು ಬದುಕುವುದಕ್ಕೆ ಪ್ರೇರೇಪಣೆಯನ್ನು ನೀಡುತ್ತಲೆ, ತನ್ನ ಸ್ವಂತಿಕೆಯನ್ನು

ಕಟ್ಟಿಕೊಳ್ಳುವ ಹೆಣ್ಣಿನ ವ್ಯಕ್ತಿತ್ವಕ್ಕೆ ಅಧಿಕೃತ ಮಾನ್ಯತೆಯನ್ನು ನೀಡುತ್ತಾರೆ. ಇವರ ಕಾದಂಬರಿಗಳಲ್ಲಿ ಈ ಬಗೆಯ ಚಿತ್ರಣವನ್ನು ಗಮನಿಸಬಹುದು. ಅವರ ನಭಾ, ವಿರಾಗಿಣಿ ಕಾದಂಬರಿಗಳ ನಾಯಕಿಯರು ಮೌಲ್ಯವ್ಯವಸ್ಥೆಯ ಪ್ರಮುಖ ಪ್ರತಿಪಾದಕರಾಗಿದ್ದು, ವಿಧವಾ ವಿವಾಹವನ್ನು ತೀವ್ರವಾಗಿ ಪ್ರತಿರೋಧಿಸುತ್ತಾರೆ. ಅಲ್ಲದೆ ಸುಪ್ರಭಾತ ಪತ್ರಿಕೆಯ ತಿರುಮಲಾಂಬರವರ ಬರಹಗಳೂ ಕೂಡ ಇದನ್ನೇ ಅನುಮೋದಿಸುವಂತಿವೆ. ಆದರೆ ಇದೇ ಲೇಖಕಿ ತಮ್ಮ ಕಾದಂಬರಿಗಳ ನಾಯಕಿಯರ ಮೂಲಕ ಸ್ತ್ರೀ ಶಿಕ್ಷಣ, ಸಮಾನತೆ, ಅಭಿವ್ಯಕ್ತಿ ಸ್ವಾಂತ್ರ್ಯಕ್ಕೆ ಮಾನ್ಯತೆಯನ್ನು, ಅದಕ್ಕೊಂದು ಸ್ಪಷ್ಟ ರೂಪವನ್ನೂ ನೀಡುತ್ತಾರೆ. ಮತ್ತು ಹೆಣ್ಣಿನ ವ್ಯಕ್ತಿತ್ವಕ್ಕೆ ಕುಂದನ್ನುಂಟುಮಾಡಬಹುದಾದ ಸ್ತ್ರೀ ಪಾತ್ರಗಳಗೆ ಪರ್ಯಾಯವಾಗಿ ತಮ್ಮ ಕಾದಂಬರಿಗಳ ನಾಯಕಿಯರ ಪಾತ್ರ ಚಿತ್ರಿಸಿ, ಅವರು ಮೌಲ್ಯವ್ಯವಸ್ಥೆಗೆ ಬದ್ಧವಾಗಿದ್ದರೂ ತನ್ನ ವ್ಯಕ್ತಿತ್ವವನ್ನು ಪ್ರತಿಪಾದಿಸುವ, ಅದನ್ನು ಕಡೆಯವರೆಗೂ ಕಾಯ್ದುಕೊಳ್ಳುವ, ಸಮಾಜದ ಮನ್ನಣೆಗೆ ಪಾತ್ರವಾಗುವ ಘನ ಸ್ತ್ರೀ ಪಾತ್ರಗಳ ಅನಾವರಣದ ಮೂಲಕ ಹೆಣ್ಣಿನ ಬದುಕಿನ ಬದಲಾವಣೆಗೆ ನಾಂದಿಯಾಗುತ್ತಾರೆ.

ತಿರುಮಲಾಂಬರವರ ಕಾವ್ಯ ಮೌಲ್ಯವ್ಯವಸ್ಥೆಯೊಂದಿಗೆ ಅನುಸಂಧಾನ ನಡೆಸುವ ವಿಧಾನ ಮತ್ತೊಂದು ಬಗೆಯದ್ದು. ಇದನ್ನು ತಿರುಮಲಾಂಬ ಬಹಳ ಎಚ್ಚರಿಕೆಯಿಂದ ಬಳಸುದಾರಿಯ ಮೂಲಕ ಸಾಧಿಸುತ್ತಾರೆ. ಇಲ್ಲಿ ಪುರಾಣ ಪ್ರಸಿದ್ಧ ಪುರುಷ ಮಾದರಿಗಳನ್ನು ವಿಮರ್ಶೆಗೆ ಒಳಪಡಿಸಿ ಪುರುಷ ಶ್ರೇಷ್ಠತೆಯನ್ನು ಪರಿಶೀಲಿಸುವ, ಡಾಂಭಿಕತೆಯನ್ನು ಅಲ್ಲಗಳೆಯುವ, ಸ್ತ್ರೀವಿರೋಧಿ ನಿಲುವುಗಳನ್ನು ಪ್ರತಿರೋಧಿಸುವ, ನೊಂದ ಮನಸ್ಸಿಗೆ ಸಾಂತ್ವಾನವನ್ನು ನೀಡುವ ವಿಧಾನವಿದೆ. ಸ್ತ್ರೀ ಶೋಷಣೆಗೆ ಕಾರಣರಾದವರನ್ನು ತೀವ್ರವಾಗಿ ತರಾಟೆಗೆ ತೆಗೆದುಕೊಳ್ಳುವುದಲ್ಲದೆ ಅವರ ವ್ಯಕ್ತಿತ್ವದಲ್ಲಿನ ಕುಂದುಗಳನ್ನು ಗುರುತಿಸಿ ನಿಂದಿಸುತ್ತಾರೆ. ವಿಷ್ಣುವಿನ ದಶಾವತಾರದ ವರ್ಣನೆಯ ಗೀತೆಗಳಲ್ಲಿ ಗಂಡಾದ ಕಾರಣದಿಂದ ವಿಷ್ಣು ಪಡೆದಿರಬಹುದಾದ ಎಲ್ಲಾ ಬಗೆಯ 'ಮೇಲ್ಮೆ'ಗಳ ಸತ್ಯಾಸತ್ಯತೆಯನ್ನು ಪರಿಶೀಲನೆಗೆ ಒಳಪಡಿಸುತ್ತಾರೆ. ವಿಷ್ಣುವಿನ ದಶಾವತಾರಗಳನ್ನು ಹಾಡಿ ಹೊಗಳುವ ಸಂದರ್ಭದಲ್ಲಿ ತಿರುಮಲಾಂಬ ಭಿನ್ನವಾಗಿ ವಿಷ್ಣುವಿನ ವ್ಯಕ್ತಿತ್ವದಲ್ಲಿನ ವೈರುಧ್ಯಗಳನ್ನು ಗುರುತಿಸುತ್ತಾರೆ.

ಕೊಳೆತು ನಾರುತಲಿಹಗೆ ಲಲಿತ ವಸ್ತ್ರಗಳೇಕೆ
ಹೊಲಸು ಮಯ್ಯಿಗೆ ಗಂಧ ಬಳಯಲೇಕೆ
ಜಲಧಿಯಲಿ ವಾಸಿಪಗೆ ಪಲವಿಧದ ತೊಡವುಗಳೆ
ನೆಲೆಯಿಲ್ಲದಾತಂಗೆ ಲಲನೆ ಸುತರೆ,
ಹುಳುಕು ಮೋರೆಯು ಮತ್ತೆ ಕೊಳಕು ದೇಹದ ಕಾಂತ,
ಹುಳುಕು ಬೇರನು ಮೆಲುವನರೆರೆ ಚೆಲುವ
ಕೋರೆಯದು ಮೊಳಯುದ್ದ ಮೀರಿಹುದು ತುಟಿಯನ್ನು
ಕ್ರೂರರೂಪವನಾಂತ ಧೀರನಹುದು.
ಅಬ್ಬಬ್ಬ ಈ ವರನ ಅದ್ಭುತಾಕೃತಿ ನೋಡಿ
ಉಬ್ಬಸವು ಮಿಗಿಲಾಯ್ತು ಸಹಿಪೆನೆಂತು

ಕೆಮ್ಮೀಸೆ ಕೆಂಗಣ್ಣು ಕೆಂಪಾದ ರೋಮಗಳು
ಹೆಮ್ಮಾರಿಯಂದದೊಳು ಮೊರೆವಮಿಗಿಲು [1]

ಇಲ್ಲಿ ಯಾವುದನ್ನು ಪುರುಷ ಪ್ರಭುತ್ವ ಗಂಡಿನ ಶ್ರೇಷ್ಠ ಗುಣಗಳು, ಅವನ ವ್ಯಕ್ತಿತ್ವದ ಘನತೆಗೆ ಕಾರಣವಾದ ಅಂಶಗಳು ಎಂದು ಗುರುತಿಸಿ ಮಾನ್ಯ ಮಾಡಿತ್ತೊ, ಆ ಗುಣಗಳ ಹಿಂದಿನ ಜೀವವಿರೋಧಿ ಧೋರಣೆಗಳನ್ನು ತಿರುಮಲಾಂಬ ಕಟುವಾಗಿ ಟೀಕಿಸುತ್ತಾರೆ. ಕೊಳೆತು ನಾರುವವಗೆ ಲಲಿತ ವಸ್ತ್ರಗಳು, ಹೊಲಸು ಮೈಯಿಗೆ ಗಂಧ, ನೆಲೆಯಿಲ್ಲದಾತಂಗೆ ಲಲನೆ ಸುತರು ಇವೆಲ್ಲಾ ಪುರುಷ ಪ್ರಧಾನ ಮೌಲ್ಯವ್ಯವಸ್ಥೆ ಗಂಡಿಗೆ ಕೊಡಮಾಡಿರುವ ಅವಕಾಶಗಳು. ತನ್ನೆಲ್ಲಾ ಮಿತಿ ಹಾಗೂ ದೌರ್ಬಲ್ಯಗಳನ್ನು ಪುರುಷಶಾಹಿ ತನ್ನ ಶಕ್ತಿ, ಸಾಮರ್ಥ್ಯವೆಂದು ಬಿಂಬಿಸುತ್ತಿದೆ. ಇದರಲ್ಲಿನ ವೈರುಧ್ಯ ಹಾಗೂ ಪೊಳ್ಳುತನವನ್ನು ಲೇಖಕಿ ವಿಮರ್ಶೆಗೆ ಒಳಪಡಿಸುತ್ತಾರೆ. ಕೆಮ್ಮೀಸೆ, ಕೆಂಗಣ್ಣು , ಕೆಂಪಾದ ರೋಮಗಳು ಪುರುಷ ಶ್ರೇಷ್ಠತೆಯ ಪ್ರತೀಕವಾದರೆ ಇವು ಹೆಮ್ಮಾರಿಯ ರೀತಿಯಲ್ಲಿ ಹೆಣ್ಣಿನ ಬದುಕನ್ನು ಬಲಿ ತೆಗೆದುಕೊಳ್ಳುತ್ತಿರುವ ಬಗೆಯನ್ನು 'ಅದ್ಭುತಾಕೃತಿ ನೋಡಿ ಉಬ್ಬಸವು ಮಿಗಿಲಾಯ್ತು ಸಹಿಪೆನೆಂತು' ಎನ್ನುವ ಮೂಲಕ ಹೆಣ್ಣನ್ನು ಶೋಷಿಸುವ ಎಂತಹ 'ಶ್ರೇಷ್ಠ ವ್ಯಕ್ತಿ'ಯನ್ನಾದರೂ ಸಹಿಸುವುದು ಸಾಧ್ಯವಿಲ್ಲ ಎನ್ನುತ್ತಾರೆ. ಈ ಮೂಲಕ ಗಂಡಿನ ಶ್ರೇಷ್ಠತೆಯ ವ್ಯಸನವನ್ನು ವ್ಯಂಗ್ಯಮಾಡುತ್ತಾರೆ. ಮತ್ತೊಂದು ಪದ್ಯದಲ್ಲಿ

ಕುಟಿಲವೇ ಭೂಷಣವು ಸೆಟೆಯಿದುವೆ ಕುಲದೈವ
ವಟುವೇಷಧರನಿವನುಅಹುದು ಚೆಲುವ
ಕೃಪಣರೋಳಗ್ರಣಿಯು ಕಪಟ ಗುಣಗಳ ಗಣಿಯು
ಕೃಪೆಯೆಂಬುದೆಳ್ಳನಿತು ಕಾಣದವನು.

. . . . . . . .

ಮಾತಿನೊಳು ಕಡುಜಾಣ ನೀತಿಯೆಂಬುದ ಕಾಣ
ಪ್ರೀತಿಯಿಲ್ಲದ ಪ್ರಾಣನಾಥನಮ್ಮ
ಕಪಿಜನಗಳೊಡನಾಡಿ ಚಪಲಚಿತ್ತನುಮಾದ
ಕೃಪೆಯಿಲ್ಲವೆಳ್ಳನಿತು ಕೃಪಣನಕಟ
ಸ್ತ್ರೀಹತ್ಯ ನರಹತ್ಯ ಬ್ರಹ್ಮಹತ್ಯವಗೈದ
ಸಾಹಸಿಯೆದೇನೆಂಬ ಘನನಿತಂಬೆ
ಪಕ್ಷಪಾತಿಗಳೊಳಗೆ ಈಕ್ಷಿಸಲು ಧರೆಯೊಳಗೆ
ದಕ್ಷನೀತಗೆ ಸರಿಯೆ ಪೇಳೆ ಸಖಿಯೆ.[2]

ಈ ಕೀರ್ತನೆಯಲ್ಲಿ ತಿರುಮಲಾಂಬ 'ಮರ್ಯಾದಾ ಪುರುಷೋತ್ತಮ' ಶ್ರೀರಾಮನ ಮತ್ತೊಂದು ವ್ಯಕ್ತಿತ್ವವನ್ನು ಅನಾವರಣಗೊಳಸುತ್ತಾರೆ. ಇಲ್ಲಿ ಮಾನವ ಸಹಜ ಗುಣಗಳನ್ನು ಮೀರಿ ಬದುಕುತ್ತಿರುವ ಗಂಡಿನ ಬಗೆಗೆ ಕನಿಕರ ಮತ್ತು ವಿರೋಧ ಒಟ್ಟಿಗೆ ವ್ಯಕ್ತವಾಗಿದೆ. ಅವನ ಧೈರ್ಯ, ಸಾಹಸ, ಶ್ರೇಷ್ಠತೆಯನ್ನು ಹೊಗಳುವ ಸಡಗರದಲ್ಲಿ ಪ್ರಧಾನ ವ್ಯವಸ್ಥೆ ಅದಕ್ಕೆ ಬಲಿಯಾದವರ, ನೊಂದವರ, ನೋವುಂಡವರ ಧ್ವನಿಯನ್ನು ಅದೃಶ್ಯವಾಗಿಸಿರುವುದನ್ನು ತಿರುಮಲಾಂಬ ಗುರುತಿಸುತ್ತಾರೆ. 'ಪ್ರೀತಿಯಿಲ್ಲದ ಪ್ರಾಣನಾಥ' ಎನ್ನುವುದು ಗಂಡು ಹೆಣ್ಣಿನ ಸಂಬಂಧದ ವೈರುಧ್ಯವನ್ನೂ, ಹೆಣ್ಣಿನ ಅಸಹಾಯಕತೆಯನ್ನೂ

ಎತ್ತಿಹಿಡಿಯುತ್ತದೆ. ಪ್ರೀತಿಯಿಲ್ಲದಿದ್ದರೂ ಅವನನ್ನು ಪ್ರಾಣನಾಥನಾಗಿ ಸ್ವೀಕರಿಸಬೇಕಾದ, ಪುರಸ್ಕರಿಸಬೇಕಾದ ಅನಿವಾರ್ಯತೆಯನ್ನು ನಿರ್ಮಿಸಲಾಗಿದೆ. ಈ ವ್ಯವಸ್ಥೆಯ ಬಗೆಗೆ ಅರಿವು, ವಿರೋಧ, ಮೀರುವ ಮನೋಭಾವವಿದ್ದಾಗ್ಯೂ ಅವುಗಳನ್ನು ಮೀರಲಾರದ ಸ್ಥಿತಿಯನ್ನು ಇವರ ಮತ್ತೊಂದು ಕೀರ್ತನೆ ವಿವರಿಸುತ್ತದೆ.

ಮುಪ್ಪಾದಮುಳ್ಳವನೆ ಕಪ್ಪಬಣ್ಣದ ವರನೆ
ಅಪ್ಪನೇಕಿವಗೆನ್ನನೊಪ್ಪಿಸಿದನೆ
ಮೀನಾಕ್ಷಿ ಯೀ ಚಿಂತೆ ನಿನಾಂತುದೇಕಾಂತೆ
ಮೌನವೇ ಮತಿವಂತೆ ಬಿರುಸದೆನಿತೆ
ಕುಹಕರುಕ್ತಿಯ ಕೇಳ ಕಡುಕೋಪವನು ತಾಳ
ಬಹುವಿಧದಿ ಬಳಲಿಸುವೆ ವಿಹಿತವೇನೆ
ಹೆಬ್ಬುಲಿಯ ತೆರದಿಂದ ಬೊಬ್ಬಿರಿದು ಮತಿಯುಳದು
ಅಬ್ಬರಿಸಿ ಕೂಗುವರೆ ಅಬ್ಜನೇತ್ರೆ
ಕೈಪಿಡಿದ ರಮಣನೊಳುಮುನಿಸೆ ತರುಣಿ
ತಾಪಶಮನವ ಮಾಡು ನೋಡು ರಮಣಿ
ಓಪನೆಂದೊಲಿದಾಡು ಕರವನೀಡು
ಭೂಪಶೇಷಾದ್ರೀಶನತ್ತ ನೋಡು [8]

ಈ ಕೀರ್ತನೆ ಪಿತೃ ಪ್ರಧಾನ ವ್ಯವಸ್ಥೆಯ ಕಾರ್ಯಮಾದರಿಗಳನ್ನೂ, ಅವು ಹೆಣ್ಣನ್ನು ನಿಯಂತ್ರಿಸುತ್ತಿರುವ ಬಗೆಗಳನ್ನೂ ಏಕಕಾಲಕ್ಕೆ ತೆರೆದಡುತ್ತದೆ. 'ಅಪ್ಪನೇಕಿವಗೆನ್ನನೊಪ್ಪಿಸಿದನೆ' ಎನ್ನುವುದು ಹೆಣ್ಣಿನ ಇಚ್ಛೆಗೆ ವಿರುದ್ಧವಾಗಿ ನಡೆಯುತ್ತಿರುವ ವಿವಾಹದ ಬಗೆಗಿನ ಅಸಮಾದಾನವೂ ಕೂಡ ಆಗಿದೆ. ಆದರೆ ಈ ವ್ಯವಸ್ಥೆಯನ್ನು ಸುಲಭವಾಗಿ ಬದಲಿಸಲು ಸಾಧ್ಯವಿಲ್ಲ ಎಂಬ ಅರಿವು ಸಾಂತ್ವಾನದ, ಸಮಾಧಾನದ ಉಪದೇಶವಾಗಿ ರೂಪಪಡೆದಿದೆ. 'ಹೆಬ್ಬುಲಿಯ ತೆರದಿಂದ ಬೊಬ್ಬಿರಿದು ಮತಿಯುಳದು ಅಬ್ಬರಿಸಿ ಕೂಗುವರೆ ಅಬ್ಜನೇತ್ರೆ' ಎನ್ನುವುದು 'ಕೂಗಬಾರದ' ಪಿತೃಪ್ರಭುತ್ವದ ಅಪೇಕ್ಷೆಗಿಂತ ಕೂಗನ್ನು ನಿರರ್ಥಕವಾಗಿಸುತ್ತಿರುವ, ಇಲ್ಲವಾಗಿಸುತ್ತಿರುವ ಪ್ರಧಾನ ವ್ಯವಸ್ಥೆಯ ಹುನ್ನಾರಗಳನ್ನು ಧ್ವನಿಸುತ್ತದೆ. ನಯವಾಗಿ, ಅನುನಯನದ ಮೂಲಕ ಬಾಳನ್ನು ಹಸನಾಗಿಸಿಕೊಳ್ಳುವ ಹಾದಿಗಳನ್ನು ಕಂಡುಕೊಳ್ಳುವುದರ ಕಡೆಗೆ ಲೇಖಕಿಯ ಗಮನವಿದೆ. ಈ ಕಾಲಘಟ್ಟದ ಲೇಖಕಿಯರು ಪಿತೃ ಪ್ರಧಾನ ಮೌಲ್ಯ ವ್ಯವಸ್ಥೆಯ ಎದುರು ನಿಂತು ಅದನ್ನು ನೇರವಾಗಿ ವಿರೋಧಿಸಲು ಸಾಧ್ಯವಿಲ್ಲದಿದ್ದರೂ, ಸುಧಾರಣಾವಾದದಿಂದ ದತ್ತವಾದ ಅವಕಾಶಗಳ ಫಲವಾಗಿ ಪುರುಷ ಪ್ರಧಾನ ಮೌಲ್ಯ ವ್ಯವಸ್ಥೆಯ ಸ್ತ್ರೀ ವಿರೋಧಿ ನೀತಿಯನ್ನು ವಿರೋಧಿಸುವ, ಮೌಲ್ಯ ವ್ಯವಸ್ಥೆಯ ಚೌಕಟ್ಟಿನೊಳಗೆ ಸ್ತ್ರೀ ಸುಧಾರಣೆಗಾಗಿ ದುಡಿಯುವ ಆಸಕ್ತಿಯನ್ನು ಹೊಂದಿದ್ದರು. ತಿರುಮಲಾಂಬರವರ ಗದ್ಯ ಬರಹಗಳಲ್ಲಿ ಪಿತೃ ಪ್ರಭುತ್ವದ ಓಲೈಕೆಯ, ಮೌಲ್ಯ ವ್ಯವಸ್ಥೆಯ ಪ್ರತಿಪಾದನೆಯನ್ನು ಸಾರುತ್ತಲೇ ಹೆಣ್ಣಿನ ಅಸ್ಮಿತೆಯನ್ನು ಕಂಡು ಕೊಳ್ಳುವ ಪ್ರಯತ್ನಗಳಿದ್ದರೆ ಇವರ ಕಾವ್ಯ ಪುರುಷ ಪ್ರಭುತ್ವ ವಿವಿಧ

ಹುನ್ನಾರಗಳ ಮೂಲಕ ಹೆಣ್ಣನ್ನು ಅಧೀನವಾಗಿಸಿಕೊಂಡಿರುವ ಬಗೆಯನ್ನು ಬಯಲಿಗೆಳೆಯಲು ಪ್ರಯತ್ನಿಸುತ್ತದೆ.

ಸರಸ್ವತಿಬಾಯಿ ರಾಜವಾಡೆ, ಕೊಡಗಿನ ಗೌರಮ್ಮ, ಹೆಚ್.ವಿ.ಸಾವಿತ್ರಮ್ಮ ಇವರ ಬರವಣಿಗೆಯಲ್ಲಿ ಪುರುಷಪ್ರಧಾನ ವ್ಯವಸ್ಥೆಯನ್ನು ವಿರೋಧಿಸುವುದರ ಮೂಲಕ ಹೆಣ್ಣಿನ ವ್ಯಕ್ತಿತ್ವವನ್ನು ಕಟ್ಟುವ ಪ್ರಯತ್ನ ಕಂಡುಬರುತ್ತದೆ. ಮೇಲ್ನೋಟಕ್ಕೆ ಇದು ಮೌಲ್ಯ ವ್ಯವಸ್ಥೆಯೊಂದಿಗಿನ ಸಂಧಾನವೆಂಬಂತೆ ಕಂಡುಬಂದರೂ ಇವರ ಸ್ತ್ರೀ ಪಾತ್ರಗಳು ತಮ್ಮ ಬದುಕಿನ ಸ್ವಾಯತ್ತ ನೆಲೆಗಳನ್ನು ಕಂಡುಕೊಳ್ಳುವಲ್ಲಿ ನಿರತವಾಗಿವೆ. ಈ ಲೇಖಕಿಯರ ಬರವಣಿಗೆಯಲ್ಲಿ ಪುರುಷ ಪ್ರಧಾನ ಲಿಂಗರಾಜಕಾರಣದ ಶೋಷಣೆಯ ನೆಲೆಗಳ ಬಗೆಗೆ ಅರಿವು, ಅದನ್ನು ಕುರಿತಾದ ಅಸಹನೆ, ಆಕ್ರೋಶ ವ್ಯಕ್ತವಾಗುತ್ತದೆ. ಅದನ್ನು ಮೀರುವ ಆಸಕ್ತಿಗಿಂತ ನಯವಾಗಿ ತಿದ್ದಿ ಬುದ್ಧಿ ಹೇಳುವ, ಹೆಣ್ಣಿನ ಶಕ್ತಿ ಸಾಮರ್ಥ್ಯಗಳನ್ನು ಮನವರಿಕೆ ಮಾಡಿಕೊಡುವ ವಿಧಾನ ಕಂಡುಬರುತ್ತದೆ. ಪುರುಷಪ್ರಧಾನ ವ್ಯವಸ್ಥೆಯ ಭಾಗವಾಗಿ ಅದನ್ನು ಒಪ್ಪಿಕೊಂಡಂತೆ ಕಂಡು ಬಂದರೂ ಆಂತರ್ಯದಲ್ಲಿ ತನ್ನ ವ್ಯಕ್ತಿತ್ವಕೊಂದು ಚಹರೆಯನ್ನು ಕಂಡು ಕೊಳ್ಳುವ ಪ್ರಯತ್ನದಲ್ಲಿ ನಿರಂತರವಾಗಿ ತೊಡಗಿರುವುದನ್ನು ಇವರ ಬದುಕು ಬರಹಗಳಲ್ಲಿ ಗುರುತಿಸಬಹುದು. ದಿಟ್ಟತನ, ಧೈರ್ಯ, ನಿರ್ಧಾರಗಳನ್ನು ತೆಗೆದುಕೊಳ್ಳುವ ಸಾಮರ್ಥ್ಯ ಇವರ ವ್ಯಕ್ತಿತ್ವದ ಭಾಗವೇ ಆಗಿದೆ. ಸರಸ್ವತಿ ಬಾಯಿ ರಾಜವಾಡೆಯವರು ಹೆಣ್ಣಿನ ಬಗೆಗಿನ ವ್ಯವಸ್ಥೆಯ ಧೋರಣೆಯನ್ನು ಕಟುವಾಗಿ ಟೀಕಿಸುತ್ತಾರೆ.

ಹೆಣ್ಣು ಹೆಣ್ಣು ಹೆಣ್ಣು ಎಂಬ
ಸಣ್ಣ ಮಾತು ಬರಿದೆ ಏಕೆ
ಹೆಣ್ಣಿನಿಂದ ಜಗದ ಇರವು
ಹೆಣ್ಣ ಹಳಯೆ ತರವು ಇರದು ;
ನಿನಗೆ ಜಗದಿ ಜನುಮವಿತ್ತ
ಹೆಣ್ಣ ನೀನು ಕನಸಿನಲ್ಲು
ಹಳಯಬೇಡ, ತುಳಯಬೇಡ
ಇರಲಿ ಎಚ್ಚರ [6]

ಎಂದು ಎಚ್ಚರಿಕೆಯನ್ನು ನೀಡುವುದರೊಂದಿಗೆ ಹೆಣ್ಣಿನ, ಹೆಣ್ತನದ ಮಹತ್ವವನ್ನು ಎತ್ತಿ ಹಿಡಿಯುತ್ತಾರೆ. ಮಹಿಳಾ ಕಾವ್ಯದಲ್ಲಿ ಕಂಡು ಬರುವ ಸ್ತ್ರೀ ವಿಶಿಷ್ಟತೆಗಳ ಅನಾವರಣ ಇವರ ಕಾವ್ಯದಲ್ಲಿ ಪುರುಷಪ್ರಧಾನ ವ್ಯವಸ್ಥೆ ಅರಿಯಲೆ ಬೇಕಾದ, ಅದನ್ನು ಅಧಿಕೃತವಾಗಿ ಒಪ್ಪಬೇಕಾದ ಅನಿವಾರ್ಯತೆಯ ಹಿನ್ನೆಲೆಯಲ್ಲಿ ಮೂಡಿಬಂದಿವೆ. ಸಮುದಾಯ ಹಾಗೂ ಸಾಮಾಜಿಕ ವ್ಯವಸ್ಥೆ ಮುಂದುವರಿಯಲು, ಯತಾಸ್ಥಿತಿಯನ್ನು ಕಾಯ್ದುಕೊಳ್ಳಲು ಹೆಣ್ಣೂ ಕೂಡ ಗಂಡಿನಂತೆ, ಅದಕ್ಕಿಂತ ಮಿಗಿಲಾಗಿ ಅವಶ್ಯಕ. ಇಂತಹ ಹೆಣ್ಣನ್ನು ಹೆಣ್ತನವನ್ನು ಅಲ್ಲಗಳೆಯುವುದು, ಅವಹೇಳನ ಮಾಡುವುದು ತರವಲ್ಲ ಎಂಬ ಎಚ್ಚರಿಕೆಯನ್ನು ನೀಡುತ್ತಾರೆ. ಮುಂದುವರಿದು

ಹೆಣ್ಣ ಹಳವ ದುರುಳರೆಲ್ಲ

ಹೆಣ್ಣ ಗರ್ಭದಿಂದೆ ಬಹರು;
ಹೆಣ್ಣ ರಕ್ತ ಉಂಡು ಬೆಳೆದು
ಹೆಣ್ಣ ಕಣ್ಣ ನೀರ ಹರಿಸೆ
ಏನು ಧರ್ಮ, ಯಾವ ನ್ಯಾಯ
ಹೆಣ್ಣು ಜೀವ, ನಿನ್ನ ಬಾಳ
ಕಲ್ಪವೃಕ್ಷ, ಕಾಮಧೇನು ನೋಡು ಯೋಚಿಸು![೧೦]

ಎಂದು ಪುರುಷ ಶಾಹಿಯ ಸ್ತ್ರೀ ವಿರೋಧೀ ನೀತಿಯನ್ನು ಕಟುವಾಗಿ ಟೀಕಿಸುತ್ತಾರೆ. ಹೆಣ್ಣ ರಕ್ತ ಉಂಡು ಬೆಳೆದು ಹೆಣ್ಣ ಕಣ್ಣ ನೀರ ಹರಿಸೆ ಏನು ಧರ್ಮ, ಯಾವ ನ್ಯಾಯ ಎನ್ನುವ ಮಾತು ಹೆಣ್ಣಿನ ಸ್ಥಿತಿಯ ಬಗೆಗಿನ ಅತೀವ ಮರುಕ ಹಾಗೂ ಪುರುಷ ಪ್ರಭುತ್ವದ ದರ್ಪ, ದಬ್ಬಾಳಿಕೆಯ ಬಗೆಗಿನ ಸಿಟ್ಟಿನಿಂದ ಮೂಡಿಬಂದಿದೆ. ಹೆಣ್ಣಿನಿಂದ ಎಲ್ಲಾ ಬಗೆಯ ಸಹಾಯ, ಸಹಕಾರ ಪಡೆದ ನಂತರದಲ್ಲೂ ಅವಳನ್ನು ಕಡೆಗಣಿಸುವ ವ್ಯವಸ್ಥೆಯನ್ನು ತಿದ್ದುವ ಪ್ರಯತ್ನ ಇವರದ್ದಾಗಿದೆ.

ಗಂಡು ಹೆಣ್ಣಿನ ಸಂಬಂಧದ ಸ್ವರೂಪ ಹಾಗೂ ಮಹತ್ವವನ್ನು ರಾಜವಾಡೆಯವರ ಈ ಕವನ ಅರ್ಥಪೂರ್ಣವಾಗಿ ಕಟ್ಟಿಕೊಡುತ್ತದೆ.

ಪ್ರಕೃತಿ ಪುರುಷರ ಹೃದಯ ಕೂಟವೆ
ಜಗದ ಸೃಷ್ಟಿಗೆ ಕಾರಣ
ಹೆಣ್ಣು ಗಂಡಿನ ಒಲುಮೆ ಬೆರೆತವೆ
ಜಗದ ಇರವಿಗೆ ಕಾರಣ

ಹೆಣ್ಣು ಎಂದೊಡನೆ ಖಿನ್ನಗೊಳುವುದು
ಸಣ್ಣ ಹೃದಯದ ಕಾರಣ
ಹೆಣ್ಣು ಮೂಲವು ವಂಶದಿರವಿಗೆ
ಹೆಣ್ಣು ಹುಟ್ಟೇ ಕಾರಣ

ಹೆಣ್ಣು ಇಲ್ಲದೆ ಸ್ಥಿತಿಯದೆಲ್ಲದೆ
ಎಲ್ಲ ಪ್ರಲಯಕೆ ಕಾರಣ
ಹೆಣ್ಣ ನೈಜದ ಶಕ್ತಿ ಹ್ರಾಸವೆ
ಪಶು ಪ್ರವೃತ್ತಿಗೆ ಕಾರಣ

ಹೆಣ್ಣು ಗಂಡಿನ ಒಡಲ ಹುಟ್ಟಿಗೆ
ದೇವನೊಲುಮೆಯೆ ಕಾರಣ
ದೇಹ ಘಟನೆಯ ಆತ್ಮ ಭೇದಕೆ
ಅರಿವು ಇರದುದೆ ಕಾರಣ

ಹೆಣ್ಣು ಗಂಡಿನ ಒಲುಮೆ ಸ್ರೋತವೆ
ಲೋಕ ಕ್ಷೇಮಕೆ ಕಾರಣ
ಹೆಣ್ಣು ಗಂಡಿನ ಸರಿಸಮಾನತೆ

ಜಗದ ಪ್ರಗತಿಗೆ ಕಾರಣ.[೧೧]

ಇಲ್ಲಿ ಜೀವಸೃಷ್ಟಿಗೆ, ಜಗದ ಇರುವಿಗೆ ವಂಶದ ಮುಂದುವರಿಕೆಗೆ ಹೆಣ್ಣೇ ಕಾರಣ. ಹೆಣ್ಣು ಇಲ್ಲದೆ ಜಗದ ಸೃಷ್ಟಿ ಸಾಧ್ಯವಿಲ್ಲ. ಅದನ್ನು ಅರಿಯದಿದ್ದರೆ ಎಲ್ಲಾ ಪ್ರಳಯಗಳಗೂ ನಡೆಯುತ್ತವೆ ಎಂದು ಹೆಣ್ಣಿನ ಹಿರಿಮೆಯನ್ನು ಸಾರುತ್ತಾರೆ. ಇಲ್ಲಿ 'ಎಲ್ಲ ಪ್ರಲಯಕೆ ಕಾರಣ' ಎನ್ನುವುದು ವೈಯಕ್ತಿಯತೆಯನ್ನು ಮೀರಿ ಸಾರ್ವತ್ರಿಕವಾಗಬಹುದಾದ ಕುಟುಂಬದ, ದಾಂಪತ್ಯದ, ಸಂಬಂಧಗಳ ನಡುವೆ ಏರ್ಪಡುವ ಬಿರುಕು, ಭಿನ್ನಾಭಿಪ್ರಾಯಗಳನ್ನು ಧ್ವನಿಸುತ್ತದೆ. ಪ್ರಳಯ ಪ್ರಕೃತಿ ಸಹಜವಾದರೂ ಗಂಡು ಹಣ್ಣಿನ ನಡುವೆ ಮಾತ್ರ ಅದು ಸಹಜತೆಯನ್ನು ಮೀರಿದುದರ ಪರಿಣಾಮ ಸಂಭವಿಸುವಂತದ್ದಾಗಿದೆ. ಆದುದರಿಂದಾಗಿಯೇ ಗಂಡು ಹೆಣ್ಣು ಎಂಬ ಬೇಧವಿಲ್ಲದೆ ಪ್ರೀತಿಯಿಂದ ಬಾಳನ್ನು ಅರ್ಥಪೂರ್ಣವಾಗಿಸಿಕೊಳ್ಳುವುದರ ಕಡೆಗೆ ಲೇಖಕಿಯ ಆಸಕ್ತಿ ಇದೆ. ಮುಂದುವರೆದು ದೇಹಮೂಲದಿಂದಲೇ ಹೆಣ್ಣು ಗಂಡಿನ ವ್ಯಕ್ತಿತ್ವ ನಿರ್ಧಾರವಾಗುತ್ತಿರುವುದನ್ನೂ, ಅದರಿಂದಾಗಿಯೇ ಗಂಡು ಹೆಣ್ಣಿನ ನಡುವೆ ಅಂತರ ಏರ್ಪಟ್ಟಿರುವುದನ್ನು ಗುರುತಿಸಿ ಅದಕ್ಕೆ 'ಅರಿವು' ಇಲ್ಲದಿರುವಿಕೆಯೇ ಕಾರಣ ಎನ್ನುತ್ತಾರೆ. ಇದೇ ಕಾಲಘಟ್ಟದಲ್ಲಿ ಬರೆದ ತಿರುಮಲಾಂಬ ಹೆಣ್ಣಿನ ದೇಹವನ್ನು ಅವಳ ಮಿತಿ ಎಂದೇ ಗುರುತಿಸಿದರೆ ರಾಜವಾಡೆಯವರು ಅದು ಸಹಜ, ವಾಸ್ತವ. ಪುರುಷ ವ್ಯವಸ್ಥೆ ಅದನ್ನು ಮಿತಿಯಾಗಿಸಿದೆ ಎಂಬ ಅಂಶಗಳ ಕಡೆಗೆ ಗಮನ ಹರಿಸುತ್ತಾರೆ. ಇದನ್ನು ಅರಿತು ಸಮಾನತೆಯಿಂದ ಕೂಡಿದ ದಾಂಪತ್ಯವನ್ನು ಗಂಡು ಹೆಣ್ಣು ಇಬ್ಬರೂ ಒಲುಮೆಯಿಂದ ರೂಪಿಸಿಕೊಳ್ಳಬೇಕು ಎಂಬುದು ಇವರ ಕವನಗಳ ಆಶಯ.

ಇದೇ ಕಾಲಘಟ್ಟದಲ್ಲಿ ಬರೆದ ಬೆಳಗೆರೆ ಜಾನಕಮ್ಮನವರ ಬರವಣಿಗೆ ಮೌಲ್ಯವ್ಯವಸ್ಥೆಯ ಬಗೆಗೆ ತೀವ್ರವಾದ ಪ್ರತಿರೋಧದ ನಡುವೆಯೂ ಸಂಧಾನಕ್ಕೆ ಪ್ರಾಮುಖ್ಯತೆಯನ್ನು ನೀಡುತ್ತದೆ. ಇವರ ಕವನಗಳು ಆಧ್ಯಾತ್ಮ ಸಂಬಂಧಿ ಭಾಂಧವ್ಯಗಳ ಹಿನ್ನೆಲೆಯಲ್ಲಿ ಹೆಚ್ಚಿನ ಬದಲಾವಣೆಗೆ ಅವಕಾಶವಿಲ್ಲದ ರೀತಿ ಮೌಲ್ಯ ವ್ಯವಸ್ಥೆಯನ್ನು ಒಪ್ಪಿನಡೆಯಬೇಕಾದ ಅನಿವಾರ್ಯತೆಯನ್ನು ಎತ್ತಿ ಹಿಡಿಯುತ್ತವೆ. ಹೆಣ್ಣಿನ ಸ್ಥಿತಿಗೆ ಪುರುಷ ರಾಜಕಾರಣವೇ ಕಾರಣ ಎಂಬ ಸ್ಪಷ್ಟವಾದ ಅರಿವು, ಇದು ಬದಲಾಗದ ಹೊರತು ಹೆಣ್ಣಿನ ಸ್ಥಿತಿಯಲ್ಲಿ ಸುಧಾರಣೆ ಸಾಧ್ಯವಿಲ್ಲ ಎಂಬ ಜಾಗೃತಿ ಇವರಿಗಿದೆ. ಆದರೆ ಪುರುಷ ಪ್ರಧಾನ ವ್ಯವಸ್ಥೆಯ ಹುನ್ನಾರ ಹಾಗೂ ಕಾರ್ಯತಂತ್ರಗಳು ಹೆಣ್ಣು ಮೌಲ್ಯವ್ಯವಸ್ಥೆಯ ಚೌಕಟ್ಟಿನೊಳಗೆ ಬಾಳಬೇಕಾದ ಅನಿವಾರ್ಯತೆಯನ್ನು ನಿರ್ಮಿಸಿವೆ ಎಂಬ ಅಂಶ ಇವರ ಕಾವ್ಯದಲ್ಲಿ ಸ್ಪಷ್ಟವಾಗಿದೆ. **ಹೆಣ್ಣಾಟ, ಗಂಡ, ಚಂಡಶಾಸನ** ಕವನಗಳು ಸ್ತ್ರೀ ಶೋಷಣೆಯ ನೆಲೆಗಳನ್ನು ಸಮರ್ಥವಾಗಿ ಕಟ್ಟಿಕೊಡುತ್ತವೆ. ಇವರ 'ಗಂಡ' ಕವನ ಲಿಂಗ ಶ್ರೇಣೀಕರಣದ ಶೋಷಣೆಯ ಸ್ವರೂಪವನ್ನೂ, ಪುರುಷ ರಾಜಕಾರಣದ ಹುನ್ನಾರಗಳನ್ನೂ, ಪುರುಷಾಹಂಕಾರ, ಕ್ರೌರ್ಯ ಹಿಂಸೆಯ ವಿವಿಧ ಮುಖಗಳನ್ನು ಸ್ಪಷ್ಟವಾಗಿ ಗುರುತಿಸಿ ಅದರಿಂದ ಹೆಣ್ಣು ಶೋಷಣೆಗೆ ಒಳಗಾಗಬಹುದಾದ ಅನೇಕ ಮಾದರಿಗಳನ್ನು ಬಿಚ್ಚಿಡುತ್ತದೆ. ಹೆಣ್ಣಿಗೆ ಗಂಡನೇ ಎಲ್ಲವೂ ಆಗಿರುವ ಸಂದರ್ಭದಲ್ಲಿ ಹೆಣ್ಣು

ಗಂಡನ್ನು ಆಶ್ರಯಿಸುವುದು **ಮಂಡೂಕ ಸರ್ಪದ ನೆಳಲಿಗೆ ಹೋದಂತೆ, ಬಂಡೀಗೆ ಬಸವನು ಶಿರಬಾಗಿಕೊಂಡಂತೆ** ಎನ್ನುವ ಉಪಮೆಗಳು ಗಂಡು ತನ್ನ ಅಧಿಕಾರದಿಂದ ಹೆಣ್ಣನ್ನು, ಅವಳ ಅಸ್ತಿತ್ವವನ್ನು ತನ್ನ ಅಧೀನವಾಗಿಸಿಕೊಳ್ಳುವ ವಿಧಾನವನ್ನು ಕುರಿತು ಚರ್ಚಿಸುತ್ತದೆ. ಪಿತೃಪ್ರಧಾನ ವ್ಯವಸ್ಥೆ ಹೆಣ್ಣನ್ನು ಅಧೀನವಾಗಿಸಿಕೊಳ್ಳಲು ನಡೆಸಿರುವ ಹುನ್ನಾರಗಳನ್ನು ಬಯಲಿಗೆಳೆಯುತ್ತದೆ.

ಗಂಡನ ಮನೆ ಸಗ್ಗ ನಿನಗೆ-ಮುನಿಯೆ ಗಂಡನೆ ಯಮರಾಯ ಕೊನೆಗೆ
ನಿನ್ನ ಮುಳುಗಿಪ ತೇಲಿಪ ಶಕ್ತಿಯುಂಟಾತಗೆ
ನೀನೊಂದು ವಿಕ್ರಯದೊಸ್ತುವು ಪುರುಷಗೆ!
ಅಧಿಕಾರಿ ನಿನಗವನೊಬ್ಬ ನಿರುತ ದುಡಿದರೆ ಅಶನದ ಹಬ್ಬ
ತಪ್ಪಿ ಬೇನೆ ಬೇಸರವಾಗಿ ಉಶ್ಶೆನ್ನಲಬ್ಬಬ್ಬ ಏನಾಯ್ತು ಎಂದು ಗಂಟ್ಹಾಕುವ ಹುಬ್ಬ!
ಯುಕ್ತಿಯಿಂದಲಿ ಬಾಳು ನೀನು-ಸರ್ವಶಕ್ತನು ಪುರುಷನು
ತಪ್ಪಿದೆಯೆಂದರೆ ಕತ್ತನೆ ಮುರಿಮೋನು.[೧೨]

ಇಲ್ಲಿ ಗಂಡನ ಪಾತ್ರದಲ್ಲಿನ ವೈರುಧ್ಯ ಹಾಗೂ ಸ್ವಾರ್ಥಪರತೆಯನ್ನು ತಿಳಿಸಲಾಗಿದೆ. ಗಂಡನ ಮನೆ ಸಗ್ಗವಾಗಿರುವ ಸಂದರ್ಭದಲ್ಲಿಯೂ ಗಂಡನೇ ಯಮನಾಗಿ, ಅವಳನ್ನು ಉದ್ಧರಿಸುವ, ಮುಳುಗಿಸುವ ಸರ್ವಶಕ್ತನಾಗಿದ್ದಾನೆ. ಆದುದರಿಂದಾಗಿ ತನ್ನೆಲ್ಲಾ ನೋವು, ಸಂಕಟಗಳ ನಡುವೆಯೂ ಗಂಡಿನ ಆಸೆ, ಆಕಾಂಕ್ಷೆ, ಅಪೇಕ್ಷೆಗೆ ಕುಂದುಂಟಾಗದ ರೀತಿಯಲ್ಲಿ ಬದುಕಬೇಕಾದ ಅನಿವಾರ್ಯತೆಯನ್ನು ಕವನ ಧ್ವನಿಸುತ್ತದೆ. ಇದರ ನಡುವೆಯೂ 'ಯುಕ್ತಿಯಿಂದಲಿ ಬಾಳು ನೀನು' ಎಂಬ ಕಿವಿಮಾತು ಇಷ್ಟೆಲ್ಲಾ ಸವಾಲುಗಳ ನಡುವೆಯೂ ತನ್ನತನವನ್ನು ಕಾಯ್ದುಕೊಳ್ಳುವ ಬಗೆ ಹೇಗೆ ಎಂದು ಕಂಡುಕೊಳ್ಳುವುದೇ ಆಗಿದೆ. ಮುಂದುವರೆದು

ಎಚ್ಚರದಿಂದಿರು ಹೆಣ್ಣೆ ಇಂತು ಬರೆದಿಹನು ಬ್ರಹ್ಮಣ್ಣ
ತಪ್ಪಸಲಳವುಂಟೆ ಸ್ತ್ರೀಪುರುಷರೊಡನಾಟ
ಲೀಲಾಮಾನುಷ ಭಕ್ತವತ್ಸಲನ ಆಟ
ನಿರ್ಮಲವಾಗಿರಲಿ ಮನಸು ಪತಿಯ ಚಿತ್ತವನೀನಮಸರಿಸು
ಕರ್ಮಾನುಸಾರದಿ ಫಲವುಂಟು ಈ ಜಗದಿ
ಧರ್ಮವ ಬಿಡದಿರು ಎಂಬಳು ಜನಕಜೆ![೧೩]

ಎಂದು ಗಂಡು ಹೆಣ್ಣಿನ ಸಂಬಂಧದ ಅನಿವಾರ್ಯತೆಯನ್ನ, ಅದರ ಶ್ರೇಣೀಕರಣವನ್ನು ಸೃಷ್ಟಿ ನಿಯಮದ ವೈಚಿತ್ರ್ಯವೆನ್ನುತ್ತಾರೆ. ಈ ಬಂಧನದಿಂದ ಹೊರಬರಬಹುದಾದ ದಾರಿಗಳನ್ನಾಗಲೀ, ಪರ್ಯಾಯಗಳನ್ನಾಗಲೀ ಕಟ್ಟಿಕೊಳ್ಳಲು ಸಾಧ್ಯವಾಗದೆ ಅದಕ್ಕೆ ಆಧ್ಯಾತ್ಮದ, ಬ್ರಹ್ಮಲಿಖಿತದ ಮೊರೆ ಹೊಗಿ, ಅನಿವಾರ್ಯಕಾರಣಗಳಿಂದಾಗಿ ಸಂಧಾನಕ್ಕೆ ಮೊರೆ ಹೋಗುತ್ತಾರೆ. ಜೊತೆಗೆ ಹೆಣ್ಣು ಈ ರೀತಿಯಲ್ಲಿ ಬದುಕುವುದರಿಂದ ನೆಮ್ಮದಿ ಪಡೆಯಲು ಸಾಧ್ಯ ಎಂಬ ತೀರ್ಮಾನಕ್ಕೆ ಬಂದು ಬಿಡುತ್ತಾರೆ. ಆದರೆ ಗಂಡಿನ ಈ ಬಗೆಯ ನಡವಳಿಕೆಯ ಬಗೆಗೆ ತೀವ್ರವಾದ ವ್ಯಂಗ್ಯ, ವಿಡಂಬನೆ ಜಾನಕಮ್ಮನವರ ಕಾವ್ಯದಲ್ಲಿ ಕಂಡುಬರುತ್ತದೆ.

ದಿಟವ ಸಟೆಯನರಿಯದಿರುವ
ಕಠಿಣ ಹೃದಯನೆ
ನೀನೆ ಪರಮ ಧನ್ಯನಯ್ಯ
ಮೂರ್ಖರಾಯನೆ
ಅಹಹ ದೇವ ನಿನ್ನ ನೆಂತು
ಸೃಷ್ಟಿಗೈದನೋ
ನೋವಿಗಳುಕದಿರುವ ಮನವ
ನೆಂತು ಕೊಟ್ಟನೋ[೧೪]

ಎನ್ನುವ ಮೂಲಕ ಪುರುಷನ ಶಕ್ತಿಪ್ರದರ್ಶನವನ್ನು, ಅವನ ವ್ಯಕ್ತಿತ್ವದ ಘನತೆಯನ್ನು ಗೇಲಿಗೆ ಒಳಪಡಿಸುತ್ತಾರೆ. ಆ ದೇವನಿಗಾದರೂ ಇಂತಹ ಕಠಿಣ ಹೃದಯಿಯನ್ನು ಸೃಷ್ಟಿಸಲು ಹೇಗೆ ಸಾಧ್ಯವಾಯಿತು? ಎಂಬ ಅಚ್ಚರಿ ಆತಂಕಗಳು ಒಟ್ಟಿಗೇ ಮೂಡಿಬಂದಿವೆ. ಸ್ತ್ರೀ ಸಹಜವಾದ ದಯೆ, ಕರುಣೆ, ಪ್ರೀತಿ, ಅಂತಕರಣದ ನೆಲೆಯಲ್ಲಿಯೇ ಗಂಡಿನ ವ್ಯಕ್ತಿತ್ವವನ್ನು ಗ್ರಹಿಸುವ ಪ್ರಯತ್ನ ಇವರದ್ದಾಗಿದೆ. ಅದುದರಿಂದಾಗಿಯೇ ಗಂಡಿನ ಅಹಂಕರ, ದರ್ಪ, ಕ್ರೌರ್ಯಗಳು ಸುಲಭವಾಗಿ ದಕ್ಕಿಸಿಕೊಳ್ಳಲಾಗದ, ಸಹಿಸಲಸಾಧ್ಯವಾದ ಗುಣಗಳಂತೆ ಭಾಸವಾಗುತ್ತಿವೆ. ಈ ಕಾರಣದಿಂದಾಗಿಯೇ ಇಲ್ಲಿನ ತೀವ್ರವಾದ ವಿರೋಧ ವ್ಯಂಗ್ಯವಾಗಿ ಮಾರ್ಪಟ್ಟಿದೆ.

ಜಾನಕಮ್ಮನವರ ಆರಂಭದ ಕವನಗಳು ಪುರುಷ ಪ್ರಭುತ್ವದಿಂದ ಬಿಡುಗಡೆ ಹೊಂದುವ, ಅದನ್ನು ಎದುರಿಸುವ ಶಕ್ತಿ ಸಾಮರ್ಥ್ಯ ತನ್ನಲ್ಲಿದೆ ಎಂಬ ಆತ್ಮವಿಶ್ವಾಸದಿಂದ ಕೂಡಿವೆ.

ಬಿದಿಯಾಗಿ ನೀನೆನ್ನ ಬೆದರಿಸಲು ಬಂದು
ಅದನೊಂದು ಲೆಕ್ಕಿಸದೆ ಸಾಗುವೆನು ಮುಂದು
ಹಾರುವೆನು ಹಕ್ಕಿಗಳ ಗುಂಪಿನೊಳು ಸೇರಿ
ವಾಯುವಗ್ನಿಯು ಸುಳಿವ ತಾಣದೊಳು ತೂರಿ.[೧೫]

ಎನ್ನುವ ಮೂಲಕ ಪ್ರಭುತ್ವ ಹೆಣ್ಣನ್ನು ಎಷ್ಟೇ ಪ್ರಭಲವಾಗಿ ತನ್ನ ಹಿಡಿತದಲ್ಲಿಟ್ಟುಕೊಳ್ಳಲು ಪ್ರಯತ್ನಿಸಿದರೂ ಕೂಡ ಅದನ್ನು ಮೀರುವ ಹಂಬಲ, ಅದನ್ನು ಸಾಧ್ಯವಾಗಿಸಿಕೊಳ್ಳಬೇಕೆಂಬ ಬಯಕೆ ಮತ್ತು ಎಲ್ಲಕಿಂತ ಮುಖ್ಯವಾಗಿ ತನ್ನ ಬಿಡುಗಡೆಯ ಹಾದಿಯನ್ನು ಯಾವ ರೀತಿಯಲ್ಲಾದರೂ ಕಂಡು ಕೊಳ್ಳಬೇಕೆಂಬ ಹಂಬಲ ಹಕ್ಕಿಯ ರೂಪಕದ ಮೂಲಕ ವ್ಯಕ್ತವಾಗುತ್ತದೆ. ಅಲ್ಲದೆ 'ಹೇಡಿಯೇ ಜನಕಜೆಯು ಹೆದರುವುದಕೆ?' ಎನ್ನುವ ಮೂಲಕ ಹೆಣ್ಣು ಗಂಡಿನ ಅಸಮಾನತೆಗೆ ಅವಳ ಶಕ್ತಿಯ ಕೊರತೆಗಿಂತ ಅದರ ಬಗೆಗಿನ ಅರಿವಿನ ಕೊರತೆ ಮತ್ತು ಹೆಣ್ಣಿನ ಶಕ್ತಿಯನ್ನು ಇಲ್ಲವಾಗಿಸುವ ಪುರುಷ ಪ್ರಭುತ್ವದ ಯಾಜಮಾನ್ಯ ಧೋರಣೆಯೇ ಕಾರಣ ಎಂಬ ಅರಿವಿನ ಕುರುಹುಗಳವೆ. ಮುಂದುವರಿದು .

ಹೆದರದಿರು ಕುದಿಯದಿರು ಹೇಡಿ ನೀನಾಗದಿರು
ಬಡಿಯುತಿಹ ಅಲೆಗಳಗೆ ಕಣ್ಮುಚ್ಚಿ ಸಿರಬಾಗು
ಕಡಲಿನಲಡಗಳು ನಿನ್ನ ನೆಲ್ಲಿಗೊಯ್ದರು ಸರಿಯೆ
ದೃಢವಾದ ಚಿತ್ತವನು ಬಿಡದೆ ಪಾಲಿಸು ನಿರುತ. [೧೬]

ಎನ್ನುವ ದೃಢವಾದ ಆತ್ಮವಿಶ್ವಾಸ, ಧೈರ್ಯ, ಎಲ್ಲವನ್ನೂ ಎದುರಿಸಬೇಕೆಂಬ ಛಲವಿದೆ. ಆದರೆ ಈ ಶಕ್ತಿ ಸಂಚಯನದ ಕೇಂದ್ರಗಳು ಯಾವುವು? ಮತ್ತು ಅದನ್ನು ನಿರ್ವಹಿಸುವ ಬಗೆ ಹೇಗೆ ಎಂಬ ಗೊಂದಲಗಳು ಕಾಡಿರುವುದನ್ನು ಕಾವ್ಯದ ಅಧ್ಯಯನದಿಂದ ಗುರುತಿಸಬಹುದು. ಶ್ರೇಣೀಕರಣ ಹಾಗೂ ಪುರುಷ ಹಿತಾಸಕ್ತಿಯಿಂದ ಕೂಡಿದ ಮೌಲ್ಯ ವ್ಯವಸ್ಥೆಯ ಬಗೆಗೆ ಸಂಪೂರ್ಣ ವಿರೋಧ, ಮೆಟ್ಟಿನಿಲ್ಲುವ ಹಂಬಲ ಇದ್ದಾಗ್ಯೂ ಅದನ್ನು ಸಾಧಿಸಲಾಗದ ಸ್ಥಿತಿ ಈ ಕಾಲಘಟ್ಟದ ಲೇಖಕಿಯರದ್ದಾಗಿದೆ.

ಈ ಘಟ್ಟದ ಲೇಖಕಿಯರ ಕವನಗಳಲ್ಲಿ ಗಂಡು ಹೆಣ್ಣಿನ ಶ್ರೇಣೀಕರಣಕ್ಕೆ ಕಾರಣಗಳನ್ನು ಕಂಡುಕೊಳ್ಳುವ ಪ್ರಯತ್ನ ದ್ವಂದ್ವ, ಗೊಂದಲಗಳಿಂದ ಕೂಡಿದ್ದು, ಮೌಲ್ಯ ವ್ಯವಸ್ಥೆಯನ್ನು ಮೀರಲಾರದ ಸಂದಿಗ್ಧತೆ ಇವರ ಬರವಣಿಗೆಯಲ್ಲಿ ಪ್ರಧಾನವಾಗಿ ಕಂಡುಬರುತ್ತದೆ. ಆದರೆ ತನ್ನ ವ್ಯಕ್ತಿತ್ವಕ್ಕೊಂದು ಅಧಿಕೃತತೆಯನ್ನು ಪಡೆದುಕೊಳ್ಳುವ ಹಂಬಲ ಬಹುದೊಡ್ಡ ಸವಾಲಾಗಿ ಪರಿಣಮಿಸಿದೆ. ಇವರ ಬರವಣಿಗೆಯಲ್ಲಿ 'ತನ್ನೊಳಗು' ಹಾಗೂ 'ಹೊರಗಿನೊಂದಿಗಿನ' ಸಂಘರ್ಷದ ಸ್ವರೂಪ ತೀವ್ರವಾಗಿದ್ದು ಹಲಸಂದರ್ಭಗಳಲ್ಲಿ ಮೌಲ್ಯವ್ಯವಸ್ಥೆಯ ಆಯ್ಕೆ ಮತ್ತು ವಿರೋಧದಲ್ಲಿ ಗೊಂದಲಗಳೇರ್ಪಡಲು ಕಾರಣವಾಗಿದೆ. ಕೌಟುಂಬಿಕ ಸಂದರ್ಭದಲ್ಲಿ ಗಂಡು ಹೆಣ್ಣನ್ನು ನಡೆಸಿಕೊಳ್ಳುವ ಬಗೆಗೆ, ಹೆಣ್ಣಿನ ಸ್ಥಿತಿಯ ಬಗೆಗೆ ಸಂಪೂರ್ಣ ಅರಿವಿದ್ದಾಗ್ಯೂ, ವ್ಯವಸ್ಥೆಯ ತಾರತಮ್ಯ ಧೋರಣೆಯನ್ನು ಕುರಿತಂತೆ ಪ್ರಭಲ ವಿರೋಧವಿದ್ದರೂ ಕೂಡ ಅವರ ಅಂತಿಮ ತೀರ್ಮಾನ

> 'ಕರ್ಮಾನುಸಾರದಿ ಫಲವುಂಟು ಈ ಜಗದಿ,
> ಧರ್ಮವ ಬಿಡದಿರು ಎಂಬಳು ಜನಕಜೆ'![೧೭]

ಎಂಬುದರ ಕಡೆಗೇ ಇದೆ. ಇದು ಹೆಣ್ಣಿನ ಅಸಹಾಯಕತೆಯೋ ಅಥವಾ ಗಂಡಿನ ಶಕ್ತಿಯೋ ಒಟ್ಟಿನಲ್ಲಿ ಹೆಣ್ಣು ಮೌಲ್ಯವ್ಯವಸ್ಥೆಯನ್ನು ಒಪ್ಪಿ ನಡೆದರೆ ಮಾತ್ರ ಅವಳ ಬಾಳು ಹಸನಾಗಲು ಸಾಧ್ಯ ಎಂಬ ನಂಬಿಕೆಯೇ ಅವಳು ಮೌಲ್ಯವ್ಯವಸ್ಥೆಯನ್ನು ಒಪ್ಪಿ ನಡೆಯುವಂತೆ ಪ್ರೇರೇಪಿಸುತ್ತದೆ. ಆರಂಭ ಘಟ್ಟದ ಲೇಖಕಿಯರು ಈ ರೀತಿಯಲ್ಲಿ ಅನಿವಾರ್ಯವಾಗಿ ಮೌಲ್ಯ ವ್ಯವಸ್ಥೆಯೊಂದಿಗೆ ತಮ್ಮೆಲ್ಲಾ ವಿರೋಧ, ಅಸಮಾಧಾನಗಳ ನಡುವೆಯೂ ಸಂಧಾನಕ್ಕೆ ಮುಂದಾಗುತ್ತಾರೆ.

**೪.೨ ಆಧುನಿಕತೆಯೊಂದಿಗಿನ ಮುಖಾಮುಖಿ : ಅಸ್ಮಿತೆಯ ವಿಭಿನ್ನ ವಿನ್ಯಾಸಗಳು** ೨೦-೮೦ರ ದಶಕದ ಮಹಿಳಾ ಕಾವ್ಯ ಪಿತೃಸಂಸ್ಕೃತಿಯ ಕಾರ್ಯಮಾದರಿಗಳಿಗೆ ಮುಖಾಮುಖಿಯಾಗುತ್ತಲೇ ಆಧುನಿಕತೆ ತಂದೊಡ್ಡಿದ ಹಲವು ಸವಾಲುಗಳನ್ನು ಎದುರುಗೊಳ್ಳುತ್ತದೆ. ಅಲ್ಲದೆ ಅದರ ಜೊತೆಗೊಂದು ಆರೋಗ್ಯಪೂರ್ಣವಾದ ಸಂವಾದವನ್ನು ನಡೆಸುತ್ತಾ ತನ್ನ ಮುಂದಿನ ಹಾದಿಯ ಹುಡುಕಾಟಕ್ಕೆ ತೊಡಗುತ್ತದೆ. ಈ ಹಂತದ ಆರಂಭದಲ್ಲಿ ಆಕ್ರೋಶ, ಸಿಟ್ಟು, ಹೋರಾಟದ ಮನೋಭಾವ ಪ್ರಧಾನವಾಗಿ ಕಂಡುಬಂದರೂ ಆಧುನಿಕತೆ ಮತ್ತು ಸಾಂಪ್ರದಾಯಿಕತೆಯ ನಡುವಿನ ಜಟಾಪಟಿ ಢಾಳಾಗಿ

ಕಂಡುಬರುತ್ತದೆ. ಆರಂಭಘಟ್ಟದ ಲೇಖಕಿಯರ ಬರವಣಿಗೆಯಲ್ಲಿಯೂ ಕೂಡ ಈ ಬಗೆಯ ಸಮಸ್ಯೆ ಕಂಡುಬಂದರೂ ಅದು ಅವರಲ್ಲಿ ಹೆಚ್ಚಿನ ಗೊಂದಲವನ್ನು ಉಂಟುಮಾಡಿಲ್ಲ. ಆದರೆ ಈ ಹಂತದಲ್ಲಿ ಬರೆದ ಲೇಖಕಿಯರಿಗೆ ಆಧುನಿಕತೆ ಮತ್ತು ಸಾಂಪ್ರದಾಯಿಕತೆಯ ನಡುವಿನ ದ್ವಂದ್ವವೇ ಮುಖ್ಯ ಸಮಸ್ಯೆಯಾಗಿ, ಅವರ ಬರವಣಿಗೆಗೆ ವಿಭಿನ್ನ ಆಯಾಮಗಳನ್ನೂ, ಜೊತೆಗೆ ಮಿತಿಗಳನ್ನೂ ತಂದೊಡ್ಡುತ್ತದೆ. ಆದುದರಿಂದಾಗಿ ಈ ಕಾಲಘಟ್ಟದ ಲೇಖಕಿಯರ ಬರವಣಿಗೆಯಲ್ಲಿ ಕಂಡುಬರುವ ಅನುಸಂಧಾನದ ಕ್ರಮವನ್ನು 'ಸಂಘರ್ಷದ ಮಾದರಿ' ಎನ್ನಬಹುದು.

ಹೆಣ್ಣಾಗಿ ಹುಟ್ಟಿದುದೇ ತನ್ನ ಅಧೀನತೆಗೆ ಕಾರಣ ಎಂದು ತಿಳಿದಿದ್ದ ಮಹಿಳೆಗೆ ಸುಧಾರಣಾವಾದ ಪ್ರಭಾವದಿಂದ ದೊರೆತ ಶಿಕ್ಷಣ ಹಾಗೂ ಉದ್ಯೋಗಾವಕಾಶಗಳು ಪುರುಷ ಪ್ರಧಾನ ಅಧಿಕಾರ ಕೇಂದ್ರಿತ ನೆಲೆಗಳ ಬಗೆಗೆ ಒಂದು ಒಳನೋಟವನ್ನು ಪಡೆಯಲು ಹಾಗೂ ರಾಜಕೀಯ, ಧರ್ಮ, ಸಾಮಾಜಿಕ ಚಲನೆಗಳ ಬಗೆಗೆ ಅರಿವನ್ನು ಪಡೆಯಲು ಸಹಾಯಕವಾದವು. ಇದರಿಂದಾಗಿ ಹೆಣ್ಣು ಮತ್ತು ಗಂಡಿನ ನಡುವಿನ ಜೈವಿಕ ಅಂತರಗಳು ಸಾಮಾಜಿಕ ಅಂತರಗಳಾಗಿ ಮಾರ್ಪಟ್ಟು, ಹೆಣ್ಣಿನ ಶೋಷಣೆಗೆ ಕಾರಣವಾಗಿರುವುದನ್ನು ಗುರುತಿಸಲು ಸಾಧ್ಯವಾಯಿತು. ಹೆಣ್ಣು ಪಡೆದ ಈ ಅರಿವು ತನ್ನ ಇದುವರೆಗಿನ ತಿಳುವಳಿಕೆ, ಹಾಗೂ ಆಧುನಿಕ ಜ್ಞಾನ ಈ ಎರಡರ ನಡುವಿನ ಭಿನ್ನತೆ ಹಲವು ಗೊಂದಲಗಳ ಸೃಷ್ಟಿಗೆ ಕಾರಣವಾಯಿತು. ಧರ್ಮ, ಸಮಾಜ, ಸಂಸ್ಕೃತಿಗಳು ಕಟ್ಟಿಕೊಡುತ್ತಿರುವ ಹೆಣ್ಣಿನ ಬದುಕಿನ ಮುಂದೆ ಹೊಸ ಜ್ಞಾನ ನೀಡುತ್ತಿರುವ ಹೆಣ್ಣಿನ ಬದುಕಿನ ಚಿತ್ರಣ ಹೆಚ್ಚು ಸತ್ಯವೂ, ವಾಸ್ತವಕ್ಕೆ ಹತ್ತಿರವೂ ಆಗಿದೆ ಎಂಬ ಅರಿವು ಹೆಣ್ಣಿನಲ್ಲಿ ಮೂಡತೊಡಗಿತು. ಇದರಿಂದಾಗಿ ಸಂದಿಗ್ಧತೆಗೆ ಒಳಗಾದ ಮಹಿಳೆ ತನ್ನ ಬದುಕಿನ ಆಗುಹೋಗುಗಳಿಗೆ ಎದುರಾಗುವ ಸಂದರ್ಭದಲ್ಲಿ ಮೌಲ್ಯ ವ್ಯವಸ್ಥೆಯನ್ನು ಸಂಪೂರ್ಣ ಒಪ್ಪಲೂ ಆಗದ, ಮೀರಲಾರದ, ಆಧುನಿಕತೆಯೊಂದಿಗೆ ಮುಕ್ತವಾಗಿ ವ್ಯವಹರಿಸಲಾರದ ಇಬ್ಬಂದಿ ತನಕ್ಕೆ ಒಳಗಾದಳು. ಇದರೊಂದಿಗೆ ನಿರಂತರವಾಗಿ ಕಾರ್ಯ ಪ್ರವೃತ್ತವಾಗಿರುವ ಮೌಲ್ಯ ವ್ಯವಸ್ಥೆಯ ಕಾರ್ಯಮಾದರಿಗಳು ಸಂದರ್ಭಕ್ಕೆ ತಕ್ಕಂತೆ ಹೊಸ ಹೊಸ ಹುನ್ನಾರಗಳನ್ನು ಹೆಣೆದು ಹೆಣ್ಣಿನ ದ್ವಂದ್ವವನ್ನು ಮತ್ತಷ್ಟು ಇಮ್ಮಡಿಗೊಳಿಸಿವೆ. ಈ ದ್ವಂದ್ವ ಗೊಂದಲುಗಳು, ಆಧುನಿಕತೆಯೊಂದಿಗೆ ಪ್ರವೇಶಿಸಿದ ಮೌಲ್ಯ ವ್ಯವಸ್ಥೆಯ ವಿಭಿನ್ನ ಮುಖಗಳು, ಮಹಿಳಾ ಅಭಿವ್ಯಕ್ತಿಯಲ್ಲಿ ಚರ್ಚಿಸಲ್ಪಟ್ಟವು. ಇದು "ಸ್ತ್ರೀಯ ಬಗೆಗಿನ ಅವಗಣನೆಯನ್ನು ಈ ಆಧುನಿಕತೆ ಪೋಷಿಸುತ್ತದೆ ಎಂಬ ಮಾತಿಗೆ ಬದುಕಿನ ಎಲ್ಲ ರಂಗಗಳಿಂದಲೂ ಪುರಾವೆಗಳನ್ನು ಒದಗಿಸಬಹುದು" [10]ಎಂಬ ಮಾತನ್ನು ಸಮರ್ಥಿಸುತ್ತದೆ. ಅದೇನೇ ಆದರು ಮಹಿಳೆ ಮಾತ್ರ ಇದುವರೆಗಿನ ಮೌಢ್ಯದಿಂದ ಹೊರಬಂದು ತನ್ನ ಅಸ್ತಿತ್ವವನ್ನು ಗುರುತಿಸಿಕೊಳ್ಳಲು ನಿರಂತರವಾಗಿ ಪ್ರಯತ್ನಿಸ ತೊಡಗಿದಳು. ಈ ಪ್ರಯತ್ನಗಳು ಆರಂಭದಲ್ಲಿ ತೀವ್ರ ವಿರೋಧ, ಆಕ್ರೋಶದಿಂದ ಪ್ರಾರಂಭವಾಗಿ ಕಡೆಗೆ ಒಂದು ಬಗೆಯ ಹತಾಶೆ, ನೋವು, ಶರಣಾಗತಿಯ ಹಂತಕ್ಕೆ ತಲುಪಿಬಿಟ್ಟಿತು.

ಇದು ಮಹಿಳಾ ಅಭಿವ್ಯಕ್ತಿಯ, ಅವಳ ಸೃಜನಶೀಲತೆಯ ಮಿತಿಯಾಗಿ, ದೋಷವಾಗಿ ಕಂಡುಬಂದರೂ ಕೂಡ ಆಧುನಿಕತೆ ತಂದೊಡ್ಡಿದ ಮುಖ್ಯ ಸವಾಲು ಇದು. ಭಕ್ತಿ ಪಂಥ ಹಾಗೂ ಆರಂಭದ ಲೇಖಕಿಯರು ತಮ್ಮ ಪ್ರೀತಿಯ ಹುಡುಕಾಟವನ್ನು ಆರಾಧನೆಯ ಹಂತಕ್ಕೆ ಕೊಂಡೊಯ್ದು, ದೈವದೊಂದಿಗೆ ನಿರ್ಭಿಡೆಯಿಂದ ತಮ್ಮ ಆಸೆ, ಆಕಾಂಕ್ಷೆಗಳನ್ನು ಹಂಚಿಕೊಳ್ಳುತ್ತಾರೆ. ಅಕ್ಕಳ ಚೆನ್ನಮಲ್ಲಿಕಾರ್ಜುನ, ಮೀರಾಳ ಕೃಷ್ಣ ವ್ಯವಸ್ಥೆಯ ಗಂಡಂದಿರಿಗೆ ಪರ್ಯಾಯವಾಗಿ ನಿಲ್ಲಬಲ್ಲ ವ್ಯಕ್ತಿತ್ವಗಳು. ಆದರೆ ಆಧುನಿಕ ಲೇಖಕಿಯರಿಗೆ ಈ ಬಗೆಯ ಅಭಿವ್ಯಕ್ತಿ ಕೂಡ ಸುಲಭವಲ್ಲ. ಆದುದರಿಂದಲೇ ಇವರ ಕಾವ್ಯದಲ್ಲಿ ಪ್ರೀತಿಯ ಅಪೇಕ್ಷೆ ಹುಡುಕಾಟಕ್ಕೆ ಸೀಮಿತಗೊಳ್ಳುತ್ತದೆ.

ಆಧುನಿಕ ಶಿಕ್ಷಣ, ಪಾಶ್ಚಾತ್ಯ ಸ್ತ್ರೀವಾದಿ ಚಿಂತನೆಗಳ ಪ್ರಭಾವದಿಂದ ಮೂಡಿದ ಹೊಸ ಜ್ಞಾನ ಮತ್ತು ಅರಿವು ಇವರನ್ನು ತನ್ನ ಅಸ್ತಿತ್ವವನ್ನು ಕುರಿತಂತೆ ಚಿಂತನೆಗೆ, ಆಲೋಚನೆಗೆ ಒಳಪಡಿಸಿತು. ನಾನು ಯಾರು ಎಂಬ ಕಸಿವಿಸಿ, ನೋವು, ವ್ಯವಸ್ಥೆಯನ್ನು ಕುರಿತಂತೆ ಚಿಂತಿಸಲು ಪ್ರೇರೇಪಣೆಯನ್ನು ನೀಡಿತು. ಇದರಿಂದಾಗಿ ಸಮಾಜದಲ್ಲಿ ಗಂಡು ಮತ್ತು ಹೆಣ್ಣಿನ ನಿರ್ವಚನೆ ಭಿನ್ನರೀತಿಯಿಂದ ಕೂಡಿರುವುದನ್ನು ಹೆಣ್ಣಿನ ನೋವು, ದುಃಖ, ಬಂಧನಗಳಗೆ 'ಗಂಡೇ'ಕಾರಣವಾಗಿರುವುದನ್ನು ಗುರುತಿಸಲು ಸಾಧ್ಯವಾಯಿತು. ಆದುದರಿಂದ ಇದನ್ನು 'ಶ್ರೇಣೀಕರಣದ ಅನಾವರಣದ' ಘಟ್ಟ ಎಂದು ಗುರುತಿಸಬಹುದು. ಕೈಗಾರಿಕೀಕರಣ ಹಾಗೂ ನಗರೀಕರಣದಿಂದ ದತ್ತವಾದ ಹೊಸ ಅವಕಾಶಗಳು ತಂದೊಡ್ಡಿದ ಸಂಧಿಗ್ಧತೆ ಕೂಡ ಇವರ ಬದುಕು ಮತ್ತು ಬರವಣಿಗೆಯ ಮೇಲೆ ಪ್ರಭಾವವನ್ನು ಬೀರಿವೆ. ಇದರಿಂದಾಗಿ ಈ ಕಾಲಘಟ್ಟದ ಲೇಖಕಿಯರು ಮೌಲ್ಯವ್ಯವಸ್ಥೆಯೊಂದಿಗೆ ಅನುಸಂಧಾನಕ್ಕೆ ಮುಂದಾಗುವ ಸಂದರ್ಭದಲ್ಲಿ ಆಧುನಿಕತೆಯಿಂದ ದತ್ತವಾದ ಎಲ್ಲಾ ಬಗೆಯ ಅವಕಾಶ, ಮಿತಿಗಳೊಂದಿಗೆ ಮುಖಾ ಮುಖಿಯಾಗುತ್ತಲೇ ತಮ್ಮ ಅಸ್ಮಿತೆಯನ್ನು ಕಂಡುಕೊಳ್ಳುವ ಪ್ರಯತ್ನಕ್ಕೆ ಮುಂದಾಗುತ್ತಾರೆ. ಜೊತೆಗೆ ಆಧುನಿಕ ಅವಕಾಶಗಳಂದ ದೊರೆತ 'ಅರಿವು' ತಂದೊಡ್ಡಿದ ಆತಂಕಗಳನ್ನೂ ತಮ್ಮ ಕಾವ್ಯದಲ್ಲಿ ಅಭಿವ್ಯಕ್ತಿಸುತ್ತಾರೆ.

> ಪಂಜರದ ಪ್ರಜ್ಞೆ ಇಲ್ಲದವರಿಗೆ ಬದುಕು ಬಂಗಾರ,
> ಬಂಧನದ ಅರಿವು ಇರುವವರಿಗೆ ಬದುಕು ಭಾರ, ನಿಸ್ಸಾರ, [೧೬]

ಎಂಬುದು ಈ ಹಿಂದಿನ ಮಹಿಳೆಯರಿಗಿಂತ ತಾವು ಭಿನ್ನವಾಗಿರುವ, ಭಿನ್ನವಾಗಿ ಅಭಿವ್ಯಕ್ತಿಸಬೇಕಾಗಿರುವ ಅನಿವಾರ್ಯತೆಯನ್ನು ಸುಕನ್ಯಾಮಾರುತಿಯವರ ಈ ಕವನ ತಿಳಿಸುತ್ತದೆ. ಮೊದಲ ತಲೆಮಾರಿನ ಲೇಖಕಿಯರು ತಾವು ಹೆಣ್ಣಾಗಿ ಹುಟ್ಟಿದುದೇ ತಮ್ಮೆಲ್ಲಾ ಬಂಧನಗಳಗೆ, ಸಕಂಷ್ಟಗಳಗೆ ಕಾರಣ ಎಂದು ಪುರುಷ ಪ್ರಧಾನ ಮೌಲ್ಯವ್ಯವಸ್ಥೆಯೊಂದಿಗೆ ಅನುಸಂಧಾನಕ್ಕೆ ಮುಂದಾದರೆ ಅನಂತರದ ಲೇಖಕಿಯರಿಗೆ ಪುರುಷ ಪ್ರಧಾನ ರಾಜಕಾರಣವೇ ತಮ್ಮ ಸ್ಥಿತಿಗೆ ಕಾರಣ ಎಂಬ ಸ್ಪಷ್ಟವಾದ ಅರಿವಿದೆ. ಈ ಅರಿವು ತಂದೊಡ್ಡಿರುವ ಸವಾಲು ಮೌಲ್ಯವ್ಯವಸ್ಥೆಯೊಂದಿಗೆ ಸಂಧಾನಕ್ಕೂ ಒಪ್ಪದ, ಸಂಘರ್ಷವನ್ನೂ

ಎದುರಿಸಲಾಗದ ಮನಸ್ಥಿತಿಯದು. ಏಕೆಂದರೆ ಬೆರೆಲ್ಲಾ ಬಗೆಯ ಸಂಘರ್ಷಗಳಗಿಂತ ಲಿಂಗ ತಾರತಮ್ಯದ ಸಂಘರ್ಷ ಅಸ್ಪಷ್ಟ ಹಾಗೂ ಅಗೋಚರವಾದದ್ದು ಆದುದರಿಂದಾಗಿಯೇ ಇಲ್ಲಿ ಗೆಲುವು ಸೋಲಾಗುವ, ಸೋಲೇ ಗೆಲುವಾಗುವ ಸಾಧ್ಯತೆಗಳವೆ. ಇಲ್ಲಿ ಹೆಣ್ಣು ತನ್ನ ವೈರಿಯನ್ನು, ಶೋಷಿತರನ್ನು, ಮೇಲಧಿಕಾರಿಯನ್ನು ಯಾರೆಂದು ಗುರುತಿಸುವುದೇ ಕಷ್ಟ ಎಂಬುದನ್ನು ಸುಕನ್ಯಾಮಾರುತಿಯವರ ಈ ಕವನ ಸ್ಪಷ್ಟವಾಗಿ ಹಿಡಿದಿಡುತ್ತದೆ.

> ಹಿಂದೆ ಜಯಿಸಿದ ಯುದ್ಧ ವೈರಿಗೆದುರಾಗಿತ್ತು.
> ಇಂದಿನದು ಪ್ರಿಯ ಶತ್ರುವಿನೊಡನೆ
> ಇಲ್ಲಿ ಗೆಲುವೇ ಸೋಲಾಗಬಹುದೆಂಬ ಭಯ ಕಾಡಿದೆ. [೩೦]

ಈ ಕಾಲಘಟ್ಟದಲ್ಲಿ ಹೆಣ್ಣು ತನ್ನೆಲ್ಲಾ ಸಂಕಷ್ಟಗಳಗೆ 'ಗಂಡ'ನ್ನು ನೇರ ಹೊಣೆಗಾರರನ್ನಾಗಿ ಮಾಡುವ, ತನ್ನ ನೋವು, ಹಿಂಸೆಗಳಗೆ ಕಾರಣರಾದವರನ್ನು ತೀವ್ರವಾಗಿ ವಿರೋಧಿಸುವ ಕ್ರಮ ಕಾವ್ಯದಲ್ಲಿ ಕಂಡುಬರುತ್ತದೆ. ಜೊತೆಗೆ ವೈಧವ್ಯ, ವರದಕ್ಷಿಣೆ, ಗೃಹಬಂಧನ, ಮೌಲ್ಯಗಳಗೆ ಬದ್ಧರಾಗಿ ಬದುಕುವ ಅನಿವಾರ್ಯತೆ, ಸಮಾಜದಲ್ಲಿ ಗಂಡು ಹೆಣ್ಣಿಗೆ ಸಂಬಂಧಿಸಿದ ತಾರತಮ್ಯ ಇವುಗಳ ಬಗೆಗಿನ ಸಿಟ್ಟು ಆಕ್ರೋಶ ಕಾವ್ಯದಲ್ಲಿ ಮನೆಮಾಡಿದೆ. ಇಲ್ಲಿ ವ್ಯವಸ್ಥೆಗೆ ಬದಲಾಗಿ ತನ್ನ ಈ ಸ್ಥಿತಿಗೆ ಕಾರಣವಾಗಿರುವ 'ಗಂಡಿನ'ವಿರುದ್ಧ, ಪುರುಷ ಸಮಾಜದ ವಿರುದ್ಧ ತೀವ್ರವಾದ ಪ್ರತಿಭಟನೆ ಹಾಗೂ ಪ್ರತಿರೋಧವಿದೆ. ಗಂಡನ್ನು ತನ್ನ ಶತ್ರುವಿನ ಸ್ಥಾನದಲ್ಲಿ ಕಾಣುವ ಮೂಲಕ ಅವನ ವಿರುದ್ಧದ ತನ್ನೆಲ್ಲಾ ಅಕ್ರೋಶ, ನೋವು, ಅಸಹನೆಗಳನ್ನು ಹೊರಹಾಕುವ ಸಾಧನವಾಗಿ ಕಾವ್ಯವನ್ನು ಬಳಸಿಕೊಳ್ಳಲಾಗಿದೆ.

> ಜರಡಿ ಹಿಡಿದಾಗ ಹೊರಡುವ ಸೀರುಗಾಳಲ್ಲ ನಾನು,
> ಆದರೂ ಮುಳ್ಳು ನಾಲಗೆಗೆ ಸಿಲುಕಿ ನರಳುಗ ಗತಿ,
> ಇಡೀ ರೂಮಿಗೆ ಬೆಳಕು ಕೊಡುವ
> ನೂರು ಕ್ಯಾಂಡಲ್ ಬಲ್ಬ ನ್ನು ಚಾದರದೊಳಗೆಳೆದುಕೋಂಡು
> ಮಲಗಿದ ಪರಿಸ್ಥಿತಿ ಸಾಗರದ ಗರ್ಭಕ್ಕಿಳದು
> ಅಷ್ಟೈಶ್ವರ್ಯ ದೋಚಿ ತರುವ ಛಾತಿ,
> ಕಣ್ಕಟ್ಟಿ ಕಾಡಿಗಟ್ಟಿದ ಸ್ಥಿತಿ.[೩೧]

ಶಿಕ್ಷಣ ಮತ್ತು ಉದ್ಯೋಗಾವಕಾಶಗಳಂದ ದೊರೆತ ಆರ್ಥಿಕ ಸ್ವಾವಲಂಬನೆಯಿಂದಾಗಿ ಇವರು ತಮ್ಮ ಮನದಾಳದ ನೋವನ್ನು ಮುಕ್ತವಾಗಿ ಅಭಿವ್ಯಕ್ತಿಸಲು ಸಾಧ್ಯವಾಯಿತು. ಆದರೆ ಪುರುಷ ಪ್ರಧಾನ ಮೌಲ್ಯ ವ್ಯವಸ್ಥೆಯ ನಿರ್ದೇಶನದಂತೆ ಆ ಚೌಕಟ್ಟಿನೊಳಗೆ ಬೆಳೆದ ಹೆಣ್ಣು ಸಹಜವಾಗಿಯೇ ಮೌಲ್ಯವ್ಯವಸ್ಥೆಯನ್ನು ಒಪ್ಪಿರುವುದರಿಂದಾಗಿ ಅದನ್ನು ಮೀರಿ ತನ್ನ ಬದುಕನ್ನು ರೂಪಿಸಿಕೊಳ್ಳುವುದು, ಪರ್ಯಾಯವನ್ನು ಕಂಡುಕೊಳ್ಳುವುದು ದೊಡ್ಡ ಸವಾಲಾಗಿ ಪರಿಣಮಿಸಿತು. ಇದರ ಫಲವಾಗಿ ತನ್ನ ಸ್ಥಿತಿಯನ್ನು ಕುರಿತಂತೆ, ಮುಂದಿನ ಆಯ್ಕೆಯನ್ನು ಕುರಿತಂತೆ ದ್ವಂದ್ವ, ಗೊಂದಲ, ತಳಮಳಗಳು ಹೆಚ್ಚಾಗಿ

ಕಂಡುಬರುತ್ತವೆ. ಆದರೆ ಈ ಮೌಲ್ಯ ವ್ಯವಸ್ಥೆ ಹೆಣ್ಣು ಗಂಡಿಗೆ ಭಿನ್ನ ರೀತಿಯಲ್ಲಿ ಅನ್ವಯಿಸಲ್ಪಡುವುದರ ಬಗೆಗೆ ಮಾತ್ರ ತೀವ್ರವಾದ ಆಕ್ಷೇಪ ವ್ಯಕ್ತವಾಗುತ್ತದೆ.

ಪುರುಷ ಪ್ರಭುತ್ವ ಸ್ವಹಿತಾಸಕ್ತಿಯಿಂದ ಕೂಡಿದ್ದು, ಅದು ಉದ್ಧೇಶ ಪೂರ್ವಕವಾಗಿಯೇ ಹೆಣ್ಣನ್ನು ಶೋಷಣೆಗೆ ಒಳಪಡಿಸುತ್ತಿದೆ ಎಂಬ ಅರಿವು ಹೆಣ್ಣಿನಲ್ಲಿ ಹಲವು ಬಗೆಯ ಆತಂಕಗಳನ್ನು ಮೂಡಿಸಿತು. ಇದುವರೆಗೂ ತಾನು, ತನ್ನವರು ಎಂದು ನಂಬಿದ್ದವರೇ ತನ್ನ ವಿರೋಧಿಗಳೆಂದು ತಿಳಿದಾಗ ಅದನ್ನು ಸ್ವೀಕರಿಸುವ ವಿಧಾನವಾಗಲೀ, ಅದನ್ನು ವಿರೋಧಿಸುವ ದಾರಿಗಳಾಗಲೀ ಹೆಣ್ಣಿಗೆ ಸ್ಪಷ್ಟವಾಗಿ ತಿಳಿಯದಾಯಿತು. ಇದರಿಂದಾಗಿ ಉಂಟಾದ ಹತಾಶೆ, ನೋವು, ಗೊಂದಲಗಳಿಂದಾಗಿ ಹೆಣ್ಣಿನ ವ್ಯಕ್ತಿತ್ವ ದ್ವಂದ್ವ, ವಿರೋಧಾಭಾಸಗಳಿಗೆ ಒಳಗಾಗುವಂತಾಯಿತು. ಪರಿಣಾಮವಾಗಿ ಹೆಣ್ಣು ತನ್ನ ಬದುಕಿನ ಬಗೆಗಿನ ಪ್ರೀತಿ, ವಿಶ್ವಾಸ, ನಂಬಿಕೆಗಳನ್ನು ಕಳೆದುಕೊಂಡು ಬದುಕಿಗೆ ವಿಮುಖವಾಗಿ ಆಲೋಚಿಸುವಂತಾಯಿತು. ಎಲ್ಲಕ್ಕಿಂತ ಮುಖ್ಯವಾಗಿ ತನ್ನ ಸಹಜೀವಿ, ಸಂಗಾತಿಯೇ ತನ್ನ ಅಧೀನ ಸ್ಥಿತಿಗೆ ಕಾರಣ ಎಂಬ ಅರಿವು ಅವಳಿಗೆ ಹೆಚ್ಚಿನ ನೋವನ್ನುಂಟುಮಾಡಿತು. ಈ ನೋವು ಅವಳ ಅಭಿವ್ಯಕ್ತಿಯಲ್ಲಿ ದ್ವೇಷ, ವಿರೋಧ, ಅಸೂಯೆ, ಆಕ್ರೋಶ, ಕೀಳರಿಮೆ, ಮುಂತಾದ ಭಿನ್ನ ಭಿನ್ನ ಮಾದರಿಗಳಲ್ಲಿ ಅಭಿವ್ಯಕ್ತಗೊಂಡಿದೆ. ಹೆಣ್ಣನ್ನು ಹಿಂದಿನಿಂದಲೂ ಒಂದಲ್ಲಾ ಒಂದು ರೀತಿಯಲ್ಲಿ ಶೋಷಣೆಗೆ ಒಳಪಡಿಸುತ್ತಾ ಬಂದಿರುವ ಪುರುಷ ಪ್ರಧಾನ ಮೌಲ್ಯವ್ಯವಸ್ಥೆ ಹಾಗೂ ಅದರ ಕಾರ್ಯಮಾದರಿಗಳೊಂದಿಗೆ ಮಹಿಳಾ ಕಾವ್ಯದ ಅನುಸಂಧಾನದ ಬಗೆಗಳು ಭಿನ್ನ ಭಿನ್ನ ಮಾದರಿಗಳಲ್ಲಿ ಅಭಿವ್ಯಕ್ತಗೊಂಡಿವೆ.

ಈ ಹದ್ದುಗಳು ಕ್ಷಣಕ್ಕೊಮ್ಮೆ
ನನ್ನನೊಯ್ದು ನಿರ್ದಯ
ಬಂಡೆಗಳ ಮೇಲಿಕ್ಕರಿಸಿ
ಅಲುಗಾಡದಂತೆ ಹಟದ
ಕಾಲಿನುಗುರುಚುಚ್ಚಿ
ಚೆನ್ನಾಗಿ ಹರವಿಕೊಂಡು
ಜೀವಂತ ಕುಕ್ಕಿ ಕುಕ್ಕಿದರೂ
ಎಲಾ ಬದುಕಿದ್ದೇನಲ್ಲಾ!
ಈ ಅಸ್ಥಿಪಂಜರ ಬಿದ್ದನೆಲ
ಸುತ್ತಿದ ಗಾಳಿ, ಬೆಳಕು
ಉಳಿದ ನೆನಪು,ಛಾಯೆ
ಎಲ್ಲಾ ಎಲ್ಲಾ
ಸುಟ್ಟು ಮಣ್ಣಾಗಿ
ಸುಣ್ಣಾಗಿ
ಕೈಗೆ ಸಿಕ್ಕದ ಉಗಿ
ಯಾಗಿ ಹಾರಿ ಹೋಗಬಾರದೇಕೇ? [33]

ಎಂಬಲ್ಲಿ ಪುರುಷ ಪ್ರಧಾನ ವ್ಯವಸ್ಥೆಯೇ ತನ್ನೆಲ್ಲಾ ಸಮಸ್ಯೆಗಳಿಗೆ ಕಾರಣ ಎಂಬ ಅರಿವು, ಅದರಿಂದಾಗಿ ಆ ವ್ಯವಸ್ಥೆಯ ವಿರುದ್ಧದ ಆಕ್ರೋಶ, ವ್ಯವಸ್ಥೆಯಿಂದ ಹೊರಬರುವ ಹಂಬಲ, ಅದನ್ನು ಸಾಧ್ಯವಾಗಿಸಿಕೊಳ್ಳುವ ಚಟಪಟಿಕೆ, ಸಾಧ್ಯವಾಗದಿದ್ದಾಗ ಉಂಟಾಗುವ ದುಃಖ ಎಲ್ಲವೂ ಮೇಲಿನ ಕವನದಲ್ಲಿ ಮೂಡಿಬಂದಿದೆ. ಜೊತೆಗೆ ಈ ಅಂಶಗಳು ಹೆಣ್ಣನ್ನು ಅಸಹಾಯಕ ಸ್ಥಿತಿಗೆ ತಳ್ಳುವುದರೊಂದಿಗೆ ಅವಳ ಮನೋಭಾವವನ್ನೇ ದ್ವಂದ್ವ, ಗೊಂದಲಕ್ಕೀಡುಮಾಡಿದೆ. ಹೆಣ್ಣಿನ ಆಯ್ಕೆ ಮತ್ತು ಅಭಿವ್ಯಕ್ತಿಯ ಸಂದರ್ಭಗಳಲ್ಲೂ ಕೂಡ ಈ ಬಗೆಯ ಸಂದಿಗ್ಧತೆ ಕಂಡುಬರುತ್ತದೆ. ಇದರಿಂದಾಗಿ ವ್ಯವಸ್ಥೆಯಿಂದ ಬಿಡುಗಡೆ ಪಡೆಯುಬೇಕೆಂಬ ಹಂಬಲ ಆರಂಭದಲ್ಲಿ ಆಕ್ರೋಶದ, ಪ್ರತಿರೋಧದ ನೆಲೆಯಲ್ಲಿ ತೀರ್ವವಾಗಿ ಕಂಡುಬರುತ್ತದೆ. ಕೆಲ ಸಂದರ್ಭದಲ್ಲಿ ಇದು ವ್ಯವಸ್ಥೆಯಿಂದ ಹೊರಬರಬೇಕೆಂಬ ಆವೇಶಕ್ಕೆ ಕಾರಣವಾದರೆ ಹೆಚ್ಚಿನ ಸಂದರ್ಭದಲ್ಲಿ ಅದು ತನ್ನ ಅಸ್ತಿತ್ವವನ್ನೇ ನಿರಾಕರಿಸುವ ಹಂತಕ್ಕೆ ತಲುಪಿಬಿಡುತ್ತದೆ.

ಏಕೆಂದರೆ ಸಮುದಾಯದ ರಚನೆಯೇ ಪುರಷ ವ್ಯವಸ್ಥೆಯ ಪರವಾಗಿ ಕೆಲಸ ಮಾಡುವುದರಿಂದ ಹೆಣ್ಣಿಗೆ ಅದರಿಂದ ಬಿಡುಗಡೆ ಹೇಗೆ? ಎಂಬುದೇ ದೊಡ್ಡ ಸವಾಲಾಗಿದೆ. ಜೊತೆಗೆ ಮೌಲ್ಯವ್ಯವಸ್ಥೆ ತನ್ನನ್ನು ಬಿಡುಗಡೆಗೊಳಿಸಲಾಗದ ಬಂಧನಕ್ಕೆ ಒಳಪಡಿಸಿದೆ ಎಂಬ ನೋವು, ಅದರ ಜೊತೆಗೆ ಅದನ್ನು ಮೀರುವ ಶಕ್ತಿ ತನ್ನಲ್ಲಿಲ್ಲವಲ್ಲಾ ಎಂಬ ಕೊರಗು ೨೦ರ ದಶಕದ ಮಹಿಳಾ ಕಾವ್ಯದಲ್ಲಿ ಧ್ವನಿತವಾಗುತ್ತದೆ. ಮೌಲ್ಯ ವ್ಯವಸ್ಥೆಯ ಬಗ್ಗೆ ಹೆಣ್ಣಿಗಿರುವ ಅಸಹನೆ, ಆಕ್ರೋಶಗಳು ಅವಳ ಬದುಕಿನ ಸುತ್ತಲೇ ಸುತ್ತುವರಿದಿರುತ್ತವೆ. ಮತ್ತು "ಸ್ತ್ರೀ ಪುರುಷ ಶ್ರೇಣೀಕರಣದ ನಡುವಿನ ಹೋರಾಟದಲ್ಲಿ ತಾನು ಎದುರಾಳಿ ಎಂದು ಭಾವಿಸಿದವರ ಸೋಲು, ನೋವು ಹಾಗೂ ಅವಮಾನಗಳು ತನ್ನ ಸೋಲು, ನೊವು ಅವಮಾನಗಳೇ ಆಗಿರುತ್ತವೆ".[೨೩] ಇದರಿಂದಾಗಿ ಹೆಣ್ಣು ಒಮ್ಮೆ ಮೌಲ್ಯವ್ಯವಸ್ಥೆಯನ್ನು ತೀವ್ರವಾಗಿ ವಿರೋಧಿಸಿದರೆ ಮತ್ತೊಂದು ಸಂದರ್ಭದಲ್ಲಿ ಅನಿವಾರ್ಯವಾಗಿ ಅದನ್ನು ಒಪ್ಪಿಕೊಂಡು ಮುನ್ನೆಡೆಸಲು ಸಿದ್ಧವಾಗಿಬಿಡುತ್ತಾಳೆ.

ಮುಂದುವರಿದ ಹಂತದಲ್ಲಿ ಮಹಿಳಾ ಕಾವ್ಯ ಪುರುಷ ಪ್ರಭುತ್ವದ ಸ್ತ್ರೀ ವಿರೋಧಿ ಹುನ್ನಾರಗಳನ್ನು ಬಯಲಿಗೆಳೆಯುವುದರ ಮೂಲಕ ಪಿತೃ ಸಂಸ್ಕೃತಿಗೆ ಮುಖಾಮುಖಿಯಾಗುವುದನ್ನು ಗುರುತಿಸಬಹುದು. ಪುರುಷ ಪ್ರಭುತ್ವದ ಲೋಪ ದೋಷಗಳನ್ನೂ, ಅದರ ಒಳರಾಜಕಾರಣವನ್ನೂ ಮುಖಕ್ಕೊಡೆಯುವಹಾಗೆ ವಿರೋಧಿಸುತ್ತಲೇ ಅದಕ್ಕೆ ಪರ್ಯಾಯವಾಗಿ ಹೆಣ್ಣಿನ ವ್ಯಕ್ತಿತ್ವವನ್ನು ಹೇಗೆ ರೂಪಿಸಿಕೊಳ್ಳಬಹುದು ಎಂಬುದರ ಕಡೆಗೆ ಗಮನ ಹರಿಸಿದೆ. ಶಶಿಕಲಾ ವೀರಯ್ಯಸ್ವಾಮಿ, ಮಾಲತಿ ಪಟ್ಟಣಶೆಟ್ಟಿ, ವಿಜಯಶ್ರೀ ಸಬರದ, ಮುಂತಾದವರ ಕಾವ್ಯದಲ್ಲಿ ಈ ಧ್ವನಿ ಪ್ರಧಾನವಾಗಿ ಕಂಡುಬರುತ್ತದೆ. ಶೈಲಜಾ ಉಡಚಣ ಹಾಗೂ ವಿಜಯಾದಬ್ಬೆಯವರ ಕಾವ್ಯದಲ್ಲಿಯೂ ವ್ಯವಸ್ಥೆ ಹೆಣ್ಣನ್ನು ನಡೆಸಿಕೊಳ್ಳುತ್ತಿರುವುದರ ಬಗೆಗೆ ನೋವಿದೆಯಾದರೂ ಅದು ಕೊರಗಿಗೆ ಕಾರಣವಾಗದೆ ತನ್ನಗೆ ಈ ವ್ಯವಸ್ಥೆಯನ್ನು ತಿದ್ದುವ, ಬದಲಾಯಿಸುವ ಶಕ್ತಿ ಇದೆ ಎಂಬ ಆತ್ಮವಿಶ್ವಾಸದಿಂದಲೇ ಮುಂದೆ ಸಾಗುತ್ತದೆ. ಇದೇ ಕಾಲಘಟ್ಟದಲ್ಲಿಯೇ

ಬರವಣಿಗೆಯನ್ನು ಆರಂಭಿಸಿದ ಪ್ರತಿಭಾನಂದಕುಮಾರ್ ಪಿತೃ ಪ್ರಭುತ್ವದ ಹಿಡಿತ ಹಿಂದಿನಿಂದ ಇಂದಿನವರೆಗೂ ತನ್ನ ಅಧಿಪತ್ಯವನ್ನು ಸ್ಥಿರವಾಗಿಸಿಕೊಂಡಿರುವುದರಲ್ಲಿ ತನ್ನ ಪಾಲೆಷ್ಟು ಪ್ರಭುತ್ವದ ಪಾಲೆಷ್ಟು ಎಂಬುದನ್ನು ಗುರುತಿಸಲು ಪ್ರಯತ್ನಿಸುತ್ತಾರೆ.

ಎಲ್ಲಾ ಹಂತದಲ್ಲೂ ಸದಾ ಪುರುಷ ಪ್ರಭುತ್ವದ ಅಧೀನತೆಗೆ ಒಳಪಡುವ ಹೆಣ್ಣು ತನ್ನ ಅಸ್ತಿತ್ವವನ್ನು ಕಂಡುಕೊಳ್ಳಲು ಪ್ರಯತ್ನಿಸುವುದು ಗಂಡ, ಮನೆ, ಮಕ್ಕಳ ಮೂಲಕ. ಮೌಲ್ಯ ವ್ಯವಸ್ಥೆಯೊಂದಿಗಿನ ಅನುಸಂಧಾನವೂ ಕೂಡ ಈ ಕಾರಣದಿಂದಾಗಿಯೇ ಹೆಣ್ಣಿಗೆ ಅನಿವಾರ್ಯವಾದುದ್ದಾಗಿದೆ. ಆದರೆ ಮೌಲ್ಯ ವ್ಯವಸ್ಥೆಯ ಹಿಡಿತದಿಂದಾಗಿ ಗಂಡ ಮನೆ ಎರಡೂ ಕೂಡ ತನ್ನ ಮಿತಿಗೆ ನಿಲುಕದವು ಎಂಬ ಅರಿವು ಹೆಣ್ಣು ತನ್ನ ಮಕ್ಕಳನ್ನು ತನ್ನ ಅಸ್ತಿತ್ವದ ಭಾಗವಾಗಿ ಗುರುತಿಸಿಕೊಳ್ಳಲು ಪ್ರಯತ್ನಿಸುವಂತಾಗಿದೆ. ಅದರಲ್ಲೂ ಗಂಡು ಮಕ್ಕಳು ಕುಟುಂಬದ ಕೀರ್ತಿ, ಮುಕ್ತಿಯ ಹಾದಿ, ಪ್ರತಿಷ್ಠೆಯ ಸಾಧನವಾಗಿ ಗುರುತಿಸಲ್ಪಡುವ ಸಂದರ್ಭದಲ್ಲಿ ಈ ಮಕ್ಕಳೂ ಕೂಡ ಪಿತೃ ಸಂಸ್ಕೃತಿಯ ವಕ್ತಾರರಂತೆ ವರ್ತಿಸುವುದು ಅವಳಿಗೆ ನೋವನ್ನುಂಟು ಮಾಡುತ್ತದೆ. ಅಲ್ಲದೆ ಪಿತೃ ಸಂಸ್ಕೃತಿ ಹೆಣ್ಣಿನ ತಾಯ್ತನವನ್ನೂ ಕೂಡ ಮೌಲ್ಯ ವ್ಯವಸ್ಥೆಯ ಪ್ರತಿಪಾದನೆಗೆ ಒಳಪಡಿಸಿ ತಾಯ್ತನದ ಸಹಜ ಅಭಿವ್ಯಕ್ತಿಯನ್ನೂ ಕೂಡ ನಿಯಂತ್ರಿಸಿದೆ. ತಾಯಿ ತನ್ನ ಮಗನ ನಡವಳಿಕೆಯನ್ನು ಕುರಿತು 'ನನ್ನ ಈ 'ಇವರ'ಹಂಗೆ ಇರುವುದಿಲ್ಲವೆಂದೂ ನಾನು ನಂಬೇಬಿಟ್ಟಿದ್ದೆನಲ್ಲೋ' ಎನ್ನುವ ಎಲ್.ಜಿ. ಸುಮಿತ್ರಾ ಅವರ ಕವನದ ಸಾಲು ಸಾಮಾಜೀಕರಣ ಪ್ರಕ್ರಿಯೆಯಲ್ಲಿ ಮಗು ಗಂಡಸಾಗಿ ರೂಪುಗೊಳ್ಳುವುದರಿಂದಾಗಿ, ಹೆಣ್ಣು ಅನುಭವಿಸುತ್ತಿರುವ ಒಂಟಿತನ ಮತ್ತು ಅಸಹಾಯಕತೆಯನ್ನು ಎತ್ತಿಹಿಡಿಯುತ್ತದೆ. ಜೊತೆಗೆ ಪಿತೃ ಪ್ರಭುತ್ವದಿಂದ ತರಬೇತಿ ಪಡೆದ ಮಗ ಕೂಡ ಮೌಲ್ಯ ವ್ಯವಸ್ಥೆಯ ವಕ್ತಾರನಾಗಿಯೇ ಕಾರ್ಯ ನಿರ್ವಹಿಸಿ, ತಾಯಿಯ ಆಸೆ ಕನಸುಗಳನ್ನು ಭಗ್ನ ಗೊಳಿಸಲು ಮುಂದಾಗಿರುವ ಬಗೆಗಿನ ವಿರೋಧವನ್ನೂ ಕೂಡ ಗಮನಿಸಬಹುದು. ಆಧುನಿಕತೆಯಿಂದ ರೂಪುಗೊಂಡ ಅವಿಭಕ್ತ ಕುಟುಂಬಗಳು ಹೆಣ್ಣನ್ನು ಮತ್ತಷ್ಟು ಒಂಟಿಯಾಗಿಸಿ ಅನಾಥ ಪ್ರಜ್ಞೆಗೆ ಒಳಗಾಗುವಂತೆ ಮಾಡಿದವು. ಆದರೆ ಇವೆಲ್ಲವುಗಳ ನಡುವೆ ತನ್ನ ಮಗ 'ಇವರ'ಂತಾಗಬಾರದು ಎಂಬ ಆಶಾವಾದ, ನಿರೀಕ್ಷೆ ಮಹಿಳಾ ಅನುರಕ್ತಿಯ ಅಂಶಗಳಲ್ಲೊಂದಾಗಿದೆ.

ವಿಜಯಾ ದಬ್ಬೆ ಹೆಣ್ಣಿನ ಅಸ್ತಿತ್ವವನ್ನು ಕುರಿತಂತೆ ಅವಳ ಬದುಕು ಪಿತೃ ಪ್ರಭುತ್ವದ ಹಿಡಿತಕ್ಕೆ ಒಳಪಟ್ಟಿರುವುದನ್ನು ಗುರುತಿಸುವುದರೊಂದಿಗೆ ಅದಷ್ಟೇ ಅವಳ ಬದುಕಿನ ಉದ್ದೇಶವಲ್ಲ ಎಂಬುದರ ಕಡೆಗೆ ಗಮನ ಹರಿಸುತ್ತಾರೆ. ಮೇಲ್ನೋಟಕ್ಕೆ ನಿರಾಶಾವಾದದ, ಅಸಹಾಯಕತೆಯ ಧ್ವನಿ ಕಂಡುಬಂದರೂ ಆಂತರ್ಯದಲ್ಲಿ ಹೆಣ್ಣಿನ ಹುಟ್ಟು, ಬದುಕು ಇಷ್ಟಕ್ಕೆ ಮಾತ್ರ ಸೀಮಿತವಲ್ಲ ಎಂಬುದರ ಕಡೆಗೆ ಗಮನ ಸೆಳೆಯುತ್ತದೆ.

ದ್ವೈತಾದ್ವೈತಕೆ ಹಾರುವ ಭೂಪರ
ಕಾಲೊತ್ತಲಿಕಷ್ಟೇ ಹುಟ್ಟಿದೆವೆ?
ಶೇಷಶಾಯಿಯ ಕಾಲಬುಡದಲ್ಲಿ
ಕೂರಲಿಕಷ್ಟೇ ಹುಟ್ಟಿದೆವೆ?.[೨೫]

ಎಂದು ಪ್ರಶ್ನಿಸುವುದರ ಹಿಂದೆ ಹೆಣ್ಣಿನ ಎಲ್ಲಾ ಕಾರ್ಯಚಟುವಟಿಕೆಗಳು ಹಾಗೂ ಅವಳ ಇರುವಿಕೆಯನ್ನು ಗಂಡಿನ ಅಸ್ತಿತ್ವಕ್ಕೆ ಅಧೀನ ಗೊಳಿಸಿ ಹೆಣ್ಣಿನ ಬದುಕಿಗೆ ಆಯ್ಕೆಯೇ ಇಲ್ಲದಂತೆ ಮಾಡಿರುವುದು ಅವಳ ನೋವಿಗೆ ಕಾರಣವಾದರೂ ಹೆಣ್ಣಿನ ಅಂತಶಕ್ತಿ ಅದನ್ನು ಮೀರಿ ಬೆಳೆಯುವ ಆಶಾವಾದವನ್ನೇ ಹೊಂದಿದೆ. ಇಲ್ಲಿ ಆಕ್ರೋಶದ ಜೊತೆಗೆ ತನ್ನ ಶಕ್ತಿಯ ಬಗೆಗಿನ ಆತ್ಮವಿಶ್ವಾಸವನ್ನೂ ಕೂಡ ಕಾಣಬಹುದಾಗಿದೆ. ಪುರುಷ ಪ್ರಭುತ್ವದ ಹಿಡಿತ, ಹೆಣ್ಣಿನ ವಾಸ್ತವ ಸ್ಥಿತಿ, ಅವಳ ಮಿತಿ, ಇವೆಲ್ಲವುಗಳ ನಡುವೆಯೂ ಅವಳ ಬದುಕು ಇಷ್ಟಕ್ಕೆ ಮಾತ್ರ ಸೀಮಿತವಲ್ಲ ಎಂಬ ದೃಢವಾದ ಧ್ವನಿಯೊಂದು ಇಲ್ಲಿ ವ್ಯಕ್ತವಾಗುವುದನ್ನು ಕಾಣಬಹುದು.

ಪಿತೃ ಪ್ರಧಾನ ವ್ಯವಸ್ಥೆ ಹೆಣ್ಣಿನ ಕೌಟುಂಬಿಕ ಬದುಕನ್ನಷ್ಟೇ ಅಲ್ಲದೆ ಅವಳ ಸಾಮಾಜಿಕ ಧಾರ್ಮಿಕ, ರಾಜಕೀಯ ಬದುಕನ್ನೂ ಕೂಡ ತನ್ನ ಅಧೀನತೆಗೆ ಒಳಪಡಿಸಿಕೊಂಡಿದ್ದು ಅವೆಲ್ಲವೂ ಕೂಡ ಪುರುಷ ಪ್ರಭುತ್ವದ ನಿರ್ದೇಶನದಂತೆಯೇ ಕಾರ್ಯ ನಿರ್ವಹಿಸುತ್ತವೆ. ಇದರಿಂದಾಗಿ ಹೆಣ್ಣಿನ ಒಟ್ಟಾರೆ ಬದುಕು, ಅವಳ ಆಸೆ, ಆಕಾಂಕ್ಷೆ, ಅಭಿವ್ಯಕ್ತಿ ಎಲ್ಲವೂ ಕೂಡ ಪುರುಷಾಪೇಕ್ಷಿತ ಕಾರ್ಯ ಮಾದರಿಗೆ ಒಳಪಟ್ಟಿವೆ. ಆದರೆ ಹೆಣ್ಣಿನ ಮಾನವ ಸಹಜ ಬಯಕೆಗಳು ತನ್ನದೇ ಸ್ವತಂತ್ರ ಆಯ್ಕೆಯ ಬದುಕಿನತ್ತ ಆಸಕ್ತಿ ಹೊಂದಿರುವುದನ್ನ ಹಿಂದಿನಿಂದಲೂ ಕಲೆ, ಸಾಹಿತ್ಯ ಇತ್ಯಾದಿಗಳ ಮೂಲಕ ಗುರುತಿಸಬಹುದು. ಹೆಣ್ಣಿಗೆ ದೊರೆತ ಆಧುನಿಕ ಅವಕಾಶಗಳು, ಆರ್ಥಿಕ ಗಳಿಕೆ, ಅವಳಲ್ಲಿ ಪ್ರಭುತ್ವವನ್ನು ಮೀರಿ ಬೆಳೆಯಬಹುದಾದ ಹೊಸ ಹೊಸ ಹೊರಳುದಾರಿಗಳನ್ನು ಹುಟ್ಟುಹಾಕಿತು. ಇದರಿಂದಾಗಿ ಮಹಿಳೆ ಪಿತೃ ಸಂಸ್ಕೃತಿಯ, ಮೌಲ್ಯ ವ್ಯವಸ್ಥೆಯ ಎದರು ತನ್ನ ಅಸ್ತಿತ್ವಕ್ಕೆ ಮಾನ್ಯತೆ ದೊರೆಯಬಹುದಾದ ಪರ್ಯಾಯ ಅವಕಾಶಗಳತ್ತ ಗಮನ ಹರಿಸತೊಡಗಿದಳು. ಈ ಬಗೆಯ ಬಯಕೆ ಮಹಿಳಾ ಕಾವ್ಯದಲ್ಲಿಯೂ ಕೂಡ ವ್ಯಕ್ತವಾಗಿದೆ. ೨೦ರ ದಶಕದ ಆರಂಭದ ಮಹಿಳಾ ಕಾವ್ಯ ಪರ್ಯಾಯಗಳ ಹುಡುಕಾಟಕ್ಕೆ ಮಾತ್ರ ಸೀಮಿತವಾಗಿ ಪರ್ಯಾಯವನ್ನು ಕಟ್ಟಿಕೊಳ್ಳುವಲ್ಲಿ ಯಶಸ್ವಿಯಾಗಲಿಲ್ಲ ಎಂಬುದು ಆ ಕಾಲದಲ್ಲಿ ಹೆಣ್ಣಿಗಿದ್ದ ಒತ್ತಡ ಹಾಗೂ ಅವಕಾಶಗಳ ಸೀಮಿತ ವ್ಯಾಪ್ತಿಯನ್ನು ಪ್ರತಿಬಿಂಬಿಸುತ್ತದೆ.

ಮಹಿಳಾ ಕಾವ್ಯದಲ್ಲಿ ಕಂಡುಬರುವಂತೆ ಪರ್ಯಾಯದ ಹುಡುಕಾಟಕ್ಕೆ ಪ್ರಮುಖ ಕಾರಣ ಹಿಂದಿನಿಂದಲೂ ಪುರುಷ ಪ್ರಭುತ್ವ ಹೆಣ್ಣಿನಲ್ಲಿ ಬಿತ್ತಿದ್ದ 'ತಾನು ಬಂಧನಕ್ಕೊಳಪಟ್ಟಿದ್ದೇನೆ, ತನಗೆ ಇದರಿಂದ ಬಿಡುಗಡೆ ಬೇಕು, ಅದು ಪುರುಷ ಪ್ರಭುತ್ವ ನೀಡಬೇಕಾದ ಕೊಡುಗೆ' ಎಂಬ ಮನೋಭಾವವೇ ಇದಕ್ಕೆ ಮುಖ್ಯ ಪ್ರೇರಣೆ. ಆರಂಭದ ಲೇಖಕಿಯರು ತಮಗೆ ದೊರೆತ ಶಿಕ್ಷಣ ಮತ್ತು ಸಾಮಾಜಿಕ ಭಾಗವಹಿಸುವಿಕೆ ಅವಕಾಶಗಳನ್ನು ತಮ್ಮ ಬಿಡುಗಡೆಯ ಹಾದಿ ಎಂದು ಭಾವಿಸಿದರು. ಇವರು ಪತ್ರಿಕೆಗಳನ್ನು

ಆರಂಭಿಸುವುದರ ಮೂಲಕ, ಸಾಹಿತ್ಯ ಚಟುವಟಿಕೆಗಳಲ್ಲಿ ಭಾಗವಹಿಸುವುದರ ಮೂಲಕ ತಮ್ಮ ಅಸ್ತಿತ್ವವನ್ನು ಕಂಡುಕೊಳ್ಳಲು ಮುಂದಾದರು. ಆದರೆ ಇವರ ಆಯ್ಕೆ, ಅಭಿವ್ಯಕ್ತಿ ಎಲ್ಲವೂ ಸಾಮಾನ್ಯವಾಗಿ ಪುರುಷ ಪ್ರಧಾನ ಮೌಲ್ಯ ವ್ಯವಸ್ಥೆಯ ಪರವಾಗೇ ಇದ್ದುದ್ದರಿಂದ ಇವರ ಅಭಿವ್ಯಕ್ತಿಯಲ್ಲಿ ಗೊಂದಲಗಳಾಗಲೀ, ತೊಡಕುಗಳಾಗಲೀ ಹೆಚ್ಚಿನ ಪ್ರಮಾಣದಲ್ಲಿ ಕಂಡು ಬರುವುದಿಲ್ಲ. ಬೆಳಗೆರೆ ಜಾನಕಮ್ಮ 'ಗಂಡ' ಕವನದಲ್ಲಿ ಪುರುಷ ಸಂಸ್ಕೃತಿಯ ಯಜಮಾನ್ಯ ಧೋರಣೆಯನ್ನು ಖಂಡಿಸುತ್ತಾರಾದರೂ ಕಡೆಯಲ್ಲಿ ಧರ್ಮದ ನಂಟನ್ನು ಬೆಸೆದು ಹೆಣ್ಣು ಮೌಲ್ಯವ್ಯವಸ್ಥೆಯನ್ನು ಒಪ್ಪಿ ಅದರಂತೆ ನಡೆಯುವುದೇ ಉತ್ತಮ ಎಂಬ ನಿರ್ಧಾರಕ್ಕೆ ಬಂದುಬಿಡುತ್ತಾರೆ. ಆದರೆ ಹೊಸ ಅರಿವನ್ನು ಪಡೆದ ಲೇಖಕಿಯರಿಗೆ ಎಲ್ಲಾ ಹಂತದಲ್ಲಿಯೂ ಇದನ್ನು ಒಪ್ಪಿ ಸಮ್ಮತಿಸುವುದು ಸಾಧ್ಯವಾಗಲಿಲ್ಲ. ಇದರಿಂದಾಗಿ ತನ್ನ ಶೋಷಣೆಗೆ ಕಾರಣವಾದ ಪುರುಷ ಪ್ರಭುತ್ವದ ಯಜಮಾನ್ಯಕ್ಕೆ ಸರಿಸಮವಾಗಿ ತಾನೂ ಬೆಳೆಯಬೇಕು, ಬೆಳೆಯಬಲ್ಲೆ ಎಂಬ ಹಠವೇ ಒಂದು ಹಂತದಲ್ಲಿ ಸಾಹಿತ್ಯಾಭಿವ್ಯಕ್ತಿಯಾಗಿ ಮೂಡಿಬಂದಿರುವುದನ್ನು ಗುರುತಿಸಬಹುದು.

ಗಂಡಿಗೆ ಕವಿತೆ ಬರೆಯುವುದು ಅವನ ಸೃಜನಾಭಿವ್ಯಕ್ತಿಯ, ಹೆಸರುಗಳಿಕೆಯ ಸಾಧನವಾದರೆ ಹೆಣ್ಣಿಗೆ ಮಾತ್ರ ತನ್ನೆಲ್ಲಾ ನೋವು ನಲಿವುಗಳನ್ನು ಹೊರಹಾಕುವ, ತನ್ನ ಕನಸುಗಳನ್ನು ಸಾಕಾರಗೊಳಿಸಿಕೊಳ್ಳುವ ವಿಧಾನದ್ದು. ಶೈಲಜಾ ಉಡಚಣ ಅವರ ನನ್ನ ಕವಿತೆ ಹೆಣ್ಣಿನ ಅಭಿವ್ಯಕ್ತಿಯ ಹಲವು ಮುಖಗಳನ್ನು ತೆರೆದಿಡುತ್ತದೆ.

'ಕವಿತೆ ಬರೆಯುವುದು
ಕೆಲವರಿಗೆ ಖುಷಿ, ಕೆಲವರಿಗೆ ಪ್ರತಿಷ್ಠೆ,
ಹಲವರಿಗೆ ಮೋಜಿ ನನಗೆ ? ? ?
ಕರುಳಿನ ಕೂಗು,
ಶತಮಾನಗಳ ಸ್ತಬ್ಧ, ದಗ್ಧ, ತಪ್ತ
ಅದುಮಿದ ಸ್ವರಗಳ
ಸಂಯೋಜನೆ, ಆ . . . .ಆ. . .
ಲಾಪಗಳ ರಾಗ, ರೂಪ ರಚನೆ
ನೋವು, ನಲಿವು,
ನಾನು ನನ್ನ ತನಗಳ ಎಳೆಎಳೆಗಳ ಬಳ್ಳನೇಯ್ಗೆ.'[31]

ಇಡೀ ಮಹಿಳಾ ಕಾವ್ಯವೇ ಪುರುಷ ಪ್ರಧಾನ ಮೌಲ್ಯ ವ್ಯವಸ್ಥೆಗೆ ಹೆಣ್ಣು ತೋರಿದ ಪ್ರತಿರೋಧ, ಪ್ರತಿಭಟನೆ, ಸಂಘರ್ಷದ ಮುಖಾಮುಖಿಯಾಗಿ ಕಂಡುಬರುತ್ತದೆ. "ಸ್ವಾತಂತ್ರ್ಯಪೂರ್ವದ ಲೇಖಕಿಯರಿಗೆ ಸಾಹಿತ್ಯಸೃಷ್ಟಿ ಒಂದು ಹವ್ಯಾಸಕ್ಕಿಂತ ಮುಖ್ಯವಾಗಿ ಬದಲಾವಣೆಯ ಅಸ್ತ್ರವಾಗಿತ್ತು. ಸ್ತ್ರೀಯರ ಶೋಷಣೆಗೆ ಕಾರಣವಾದ ಸಾಮಾಜಿಕ ಹಾಗೂ ಧಾರ್ಮಿಕ ಮೌಲ್ಯಗಳನ್ನು ಪ್ರಶ್ನಿಸುವ ಕೆಲಸವನ್ನು ಆ ಕಾಲದ ಲೇಖಕಿಯರು ಮಾಡಿದರು. ಬಾಲ್ಯವಿವಾಹ, ವಿಧವಾ ಸಮಸ್ಯೆ, ಸ್ತ್ರೀ ಶಿಕ್ಷಣ ಮುಂತಾದವು ಇವರ ಸಾಹಿತ್ಯದ ಪ್ರಧಾನ ವಸ್ತುಗಳಾಗಿದ್ದವು. ಅಲ್ಲದೆ ಮಧ್ಯಮ ವರ್ಗದ ಸ್ತ್ರೀಯರ ಸಮಸ್ಯೆಗಳೇ ಇವರ ಸಾಹಿತ್ಯದ ಕೇಂದ್ರ

ಕಾಳಜಿಗಳಾಗಿದ್ದವು. ಆರಂಭದ ಬಹುಪಾಲು ಕವಿತೆಗಳು ನಿಟ್ಟುಸಿರಿನ, ನೋವಿನ, ಅಸಹಾಯಕತೆ, ಬೇಗುದಿ, ತಲ್ಲಣಗಳ ಅಭಿವ್ಯಕ್ತಿಯಾಗಿದೆ. ಹೆಣ್ಣಿನ ನೇರವಾದ ಮುಕ್ತವಾದ ಅಭಿವ್ಯಕ್ತಿಗೆ ಅವಕಾಶವಿಲ್ಲದ ಸಮಾಜದಲ್ಲಿ ಕವಿತೆ ಅವರಿಗೆ ಒಂದು ಪಲಾಯನ ಮುಖವಾಡ ಮಾರ್ಗವಾಗಿ ಒದಗಿಬಂತು. ಆದರೆ ಇದಿಷ್ಟೇ ಸಾಕಾಗಿರಲಿಲ್ಲ. ಇಲ್ಲಿಯೂ ತಮ್ಮ ಅಭಿವ್ಯಕ್ತಿಗೆ ಇದ್ದ ಸಾಮಾಜಿಕ ವಿಮರ್ಶಾ ಚಿಕ್ಕಟ್ಟುಗಳನ್ನು ನಿವಾರಿಸಿಕೊಳ್ಳುವ ತಂತ್ರಗಳನ್ನು ಅವರು ಅನುಸರಿಸಬೇಕಾಯಿತು"[೨೬] ಎನ್ನುವ ಮಾತುಗಳು ಮಹಿಳಾ ಅಭಿವ್ಯಕ್ತಿ ಎದುರಿಸಿದ ಸವಾಲುಗಳನ್ನು ಗುರುತಿಸುತ್ತಲೇ, ಅದು ಕಂಡು ಕೊಂಡ ಹೊರಳು ದಾರಿಗಳ, ಅಭಿವ್ಯಕ್ತಿಯ ಹೊಸ ಹೊಸ ಅವಿಷ್ಕಾರಗಳ ಹುಡುಕಾಟದ ವಿಧಾನಗಳನ್ನೂ ಕೂಡ ಪರಿಚಯಿಸಿಕೊಡುತ್ತದೆ. ಮಹಿಳೆಗೆ ಒಂದೆಡೆ ತನ್ನ ಅಭಿವ್ಯಕ್ತಿಯ ಕ್ರಮಕ್ಕೆ ಸಂಬಂಧಿಸಿದ ತೊಡಕುಗಳಿದ್ದರೆ, ಮತ್ತೊಂದೆಡೆ ಅದನ್ನು ಮುಂದುವರಿಸುವ ಬಗೆಯನ್ನು ಕುರಿತಂತ ಸಮಸ್ಯೆಗಳು ಎದುರಾದವು. ಇದರ ನಡುವೆ ಹೆಣ್ಣು ತನ್ನ ಅಭಿವ್ಯಕ್ತಿ ತನಗೂ, ಪುರುಷ ಪ್ರಧಾನ ಮೌಲ್ಯವ್ಯವಸ್ಥೆಯ ಆಶಯಗಳಿಗೂ ದಕ್ಕೆಯಾಗದಂತೆ ಎಚ್ಚರ ವಹಿಸಬೇಕಾದದ್ದು ಮತ್ತೊಂದು ಮುಖ್ಯ ಸವಾಲಾಯಿತು. ಶೈಲಜಾ ಉಡಚಣರವರು ತಮ್ಮ ಅಭಿವ್ಯಕ್ತಿಗೆ ಸಂಬಂಧಿಸಿದಂತೆ ಸಂದರ್ಶನವೊಂದರಲ್ಲಿ ಹೇಳುವಂತೆ "ಕೆಲವೊಮ್ಮೆ ಅನುಭವಗಳನ್ನು ಕೆಲವರಿಂದ ಸ್ಪಷ್ಟವಾಗಿ ರೂಪ ಆಕೃತಿಯನ್ನು ಹೊಂದುವುದಿಲ್ಲ. ಹೆಣ್ಣಾಗಿ ನನ್ನ ಅನುಭವಗಳನ್ನು ನಾನು ಬಯಲಿಗಿಡಲು ಇಷ್ಟಪಡುವುದಿಲ್ಲ. ನಮ್ಮ ಸಂಸ್ಕೃತಿಯೂ ಹಾಗೆಯೇ ಬಂದಿದೆ ಅಲ್ಲವೆ?"[೨೭] ಎನ್ನುತ್ತಾರೆ. ಇದು ಪಿತೃ ಪ್ರಧಾನ ವ್ಯವಸ್ಥೆ ಹೆಣ್ಣಿನ ಅಭಿವ್ಯಕ್ತಿಯನ್ನು ನಿಯಂತ್ರಿಸುವ ಕ್ರಮ, ಹಾಗೂ ಮೌಲ್ಯ ವ್ಯವಸ್ಥೆಯ ಕಾರ್ಯಮಾದರಿಗಳನ್ನು ಸ್ಪಷ್ಟಪಡಿಸುತ್ತದೆ. ಇದರಿಂದಾಗಿ ಮಹಿಳಾ ಅಭಿವ್ಯಕ್ತಿ ಪುರುಷಾಪೇಕ್ಷೆಯ ನೆಲೆಯಲ್ಲಿಯೇ ಚಿಂತಿಸುವ, ಆಲೋಚಿಸುವ, ಅಭಿವ್ಯಕ್ತಿಸುವ ವಿಧಾನಗಳತ್ತ ಮುಖಮಾಡಿದರೂ ಕೂಡ ಅಂತರ್ಯದಲ್ಲಿ ಪರ್ಯಾಯಗಳನ್ನು ಕಂಡುಕೊಳ್ಳುವ, ಮೌಲ್ಯ ವ್ಯವಸ್ಥೆಯ ಪುನರ್ ರಚನಾ ಕ್ರಮವೇ ಆಗಿದೆ ಎಂಬುದನ್ನು ಗುರುತಿಸಬಹುದು.

ಮನೆ, ಕುಟುಂಬಗಳು ಎಲ್ಲಾ ಕಾಲದಲ್ಲಿಯೂ ಹೆಣ್ಣು ಗಂಡು ಇಬ್ಬರಿಗೂ ಕೂಡ ಆಶ್ರಯತಾಣವೇ. ಇದಕ್ಕೆ ಪರ್ಯಾಯವನ್ನು ಕಟ್ಟಿಕೊಳ್ಳುವುದಾಗಲೀ, ಅದರಿಂದ ಹೊರನಡೆಯುವುದಾಗಲೀ ಸುಲಭವಲ್ಲ. ಒಂದುವೇಳೆ ಹೊರಬಂದರೂ ಕುಟುಂಬ ನೀಡುವ ಸುರಕ್ಷತೆಯನ್ನಾಗಲೀ, ಸುಖವನ್ನಾಗಲೀ ಬೇರೊಂದರಿಂದ ಪಡೆಯಲು ಸಾಧ್ಯವಿಲ್ಲ. "ಗಂಡು ಹೆಣ್ಣುಗಳೆಂಬ ಸಮುದಾಯ ಪ್ರತ್ಯೇಕವಾದವು ಎಂಬುದು ಹೌದಾದರೂ ಅವೆರಡೂ ಪ್ರತ್ಯೇಕವಾಗಿ ಬಾಳದೆ ಒಂದೇ ಕಡೆ ಬಾಳಬೇಕಾದ ಸಂದರ್ಭ ಇದೆ".[೨೮] ಎಂಬ ಮಾತೂ ಕೂಡ ಪ್ರಕೃತಿಯಲ್ಲಿ ಸಮಾನ ಜೀವಿಗಳಾದ ಗಂಡು ಹೆಣ್ಣು ಇಬ್ಬರೂ ಕೂಡ ಕೂಡಿ ಬಾಳುವುದು ಸಂತತಿ ಮುಂದುವರಿಕೆ ಹಾಗೂ ಸಹಜ ಬಯಕೆಗಳ ಈಡೇರಿಕೆಯ ದೃಷ್ಟಿಯಿಂದ ಅನಿವಾರ್ಯ ಎಂಬುದನ್ನು ಸ್ಪಷ್ಟಪಡಿಸುತ್ತದೆ. ಆದುದರಿಂದಲೇ ಮಹಿಳಾ ಕಾವ್ಯ ಕುಟುಂಬ, ದಾಂಪತ್ಯದ ಹೊರಗೆ ತನ್ನ ಅಸ್ತಿತ್ವವನ್ನು ಗುರುತಿಸಿಕೊಳ್ಳುವುದಕ್ಕಿಂತ ಕೌಟುಂಬಿಕ ಚೌಕಟ್ಟಿನೊಳಗೇ ತನ್ನ ವ್ಯಕ್ತಿತ್ವವನ್ನು

ಹೇಗೆ ರೂಪಿಸಿಕೊಳ್ಳಬಹುದು ಎಂಬುದರ ಕಡೆಗೆ ಆಸಕ್ತವಾಗಿರುವುದನ್ನು ಗುರುತಿಸಬಹುದು. ಕುಟುಂಬದ ಹಿಂಸೆ, ನೋವು, ಅಸಮಾನತೆ, ಅವಮಾನಗಳ ನಡುವೆಯೂ ತನ್ನ ಬದುಕನ್ನು ಅರ್ಥಪೂರ್ಣವಾಗಿಸಿಕೊಳ್ಳುವ ವಿಧಾನದ ಹುಡುಕಾಟ ಮಹಿಳಾ ಅಭಿವ್ಯಕ್ತಿಯ ಪ್ರಮುಖ ಕಾಳಜಿಗಳಲ್ಲೊಂದಾಗಿದೆ.

ಪುರುಷ ಪ್ರಧಾನ ವ್ಯವಸ್ಥೆ ಗಂಡಿಗೆ ಅನೇಕ ರೀತಿಯ ಸವಲತ್ತುಗಳನ್ನು ನೀಡಿದೆಯಾದರೂ ಮೌಲ್ಯ ವ್ಯವಸ್ಥೆ ಗಂಡು ಹೆಣ್ಣು ಇಬ್ಬರಿಗೂ ಕೂಡ ಬಂಧನದ ಕ್ಷೇತ್ರವಾಗಿರುವುದನ್ನು ಕಾಣಬಹುದು. ಗಂಡಿರಲಿ ಹೆಣ್ಣಿರಲಿ ಅವರ ಸಹಜ ಬೆಳವಣಿಗೆಗೆ, ಅಭಿವ್ಯಕ್ತಿಗೆ ಮೌಲ್ಯ ವ್ಯವಸ್ಥೆ ನಿರ್ಭಂಧವನ್ನು ಹೇರುತ್ತದೆ. ಇದರಿಂದ ಬಿಡುಗಡೆ ಪಡೆಯದ ಹೊರತು ದಾಂಪತ್ಯ ಜೀವನದಲ್ಲಿ ನೆಮ್ಮದಿ ಸಾಧ್ಯವಿಲ್ಲ ಎಂಬ ಅರಿವು ಹೊಸ ಹೊರಳುದಾರಿಯತ್ತ ಪಯಣಿಸುವಂತೆ ಮಾಡಿದೆ. ಆದುದರಿಂದಾಗಿ ಆಧುನಿಕ ಮಹಿಳಾ ಕಾವ್ಯ ಗಂಡು ಹೆಣ್ಣು ಇಬ್ಬರೂ ಕೂಡಿ ವ್ಯವಸ್ಥೆಯಲ್ಲಿ ಬದಲಾವಣೆಯನ್ನು ತರುವ ಆಶಯವನ್ನು ಪ್ರಬಲವಾಗಿ ಪ್ರತಿಪಾದಿಸುತ್ತದೆ. ಜೊತೆಗೆ ಅದಕ್ಕಾಗಿ ಗಂಡು ಹೆಣ್ಣು ಇಬ್ಬರೂ ಒಟ್ಟಿಗೆ ಶ್ರಮಿಸಬೇಕೆಂಬ ಆಸೆ ಮತ್ತು ಆತ್ಮವಿಶ್ವಾಸ ಪ್ರಮುಖವಾಗಿ ಕಂಡುಬರುತ್ತದೆ.

ನೀನು ದೂರವಿದ್ದೂ ನನಗೆ ಸುಖವಿಲ್ಲ,
ಹತ್ತಿರವಿದ್ದಾಗಲೂ ಸಮಾಧಾನವಿಲ'[೨೯]

ಆದರೂ ನೀನು ದೂರ ಸರಿದಂತೆಲ್ಲ
ನಿನ್ನ ಪ್ರೀತಿ ನನ್ನಲ್ಲಿ ರಂಗೇರುತ್ತದೆ.
ನಾನು ಮೌನವಾದಂತೆಲ್ಲ
ನನ್ನ ಮಾತು ನಿನ್ನಲ್ಲಿ ಕೃತಿಯಾಗುತ್ತದೆ[೩೦]

ಎಂದು ಮಾನವ ಸಹಜ ಆಕ್ಷಾಂಕ್ಷೆಗಳು ವ್ಯಕ್ತವಾಗುತ್ತವೆ. ಇಡೀ ಮಹಿಳಾ ಕಾವ್ಯವೇ ಒಂದು ರೀತಿಯಲ್ಲಿ ಪ್ರೀತಿಯ ಹುಡುಕಾಟದ ಹಂಬಲವಾಗಿ ಕಂಡುಬರುತ್ತದೆ.

ಪ್ರಕೃತಿ ಸಹಜ ಬಯಕೆಗಳ ಪೂರೈಕೆಗೆ ಗಂಡು ಹೆಣ್ಣು ಇಬ್ಬರೂ ಮುಖ್ಯ. ಆದರೆ ಪರಸ್ಪರ ಪ್ರೀತಿ, ವಿಶ್ವಾಸಗಳ ಕೇಂದ್ರವಾಗಬೇಕಿದ್ದ, ನಮ್ಮದಿಯ ತಾಣವಾಗಬೇಕಿದ್ದ ಮನೆಯೇ ಹೆಣ್ಣಿಗೆ ಬಂಧನದ ಕೇಂದ್ರವಾಗಿದೆ. ಹಾಗೂ ಅಲ್ಲಿ ಹೆಣ್ಣಿಗೆ ದೊರೆಯಬೇಕಿದ್ದ ಪ್ರೀತಿ, ವಿಶ್ವಾಸ, ನಂಬಿಕೆಗಳೆಲ್ಲವೂ ಮರೀಚಿಕೆಯಾಗಿವೆ. ಈ ಎಲ್ಲಾ ಅಂಶಗಳು ಮಹಿಳಾ ಕಾವ್ಯದಲ್ಲಿ ಸ್ಥಾನ ಪಡೆದಿವೆ ಮತ್ತು ಕಾಡುವ ಏಕಾಂಗಿತನಗಳು ಮಹಿಳಾ ಕಾವ್ಯದಲ್ಲಿ ಮತ್ತೆ ಮತ್ತೆ ಚರ್ಚೆಗೆ ಒಳಪಟ್ಟಿವೆ.

ಎಷ್ಟು ಕೂಗಿದರೂ ಧ್ವನಿ ಮುಟ್ಟುವುದಿಲ್ಲ!
ಮಾರ್ದನಿ ಹುಟ್ಟುವುದಿಲ್ಲ
ದೃಷ್ಟಿ ಬೆಸೆಯುವುದಿಲ್ಲ!

ಹೃದಯ ಹೊಸೆಯುವುದಿಲ್ಲ!!
ಎಂಥ ಗೋಡೆಗಳವು ಸ್ಪಂದಿಸುವುದಿಲ್ಲ!![30]

ಎಂಬ ನಿರಾಶಾವಾದದ ನಡುವೆಯೇ ಪ್ರೀತಿಯ ನಿರೀಕ್ಷೆ, ಒಲವಿನ ಆಕಾಂಕ್ಷೆ ಎದ್ದು ಕಾಣುತ್ತದೆ. ಮಾರ್ಧನಿ ಹುಟ್ಟುವ, ದೃಷ್ಟಿ ಬೆಸೆಯುವ, ಹೃದಯ ಹೊಸೆಯುವ ಬದುಕಿನ ಕನಸನ್ನು ನನಸಾಗಿಸಿಕೊಳ್ಳುವ ಬಯಕೆ ಕಂಡುಬರುತ್ತದೆ. ಆದರೆ ಮೌಲ್ಯವ್ಯವಸ್ಥೆಯ ನಿರ್ದೇಶನದಂತೆ ಕಾರ್ಯ ನಿರ್ವಹಿಸುವ ಪುರುಷನಿಂದ ತನ್ನ ಬಯಕೆಗಳು ಸಂಪೂರ್ಣ ಈಡೇರಲಾರವು ಎಂಬ ಅರಿವಿನ ನಡುವೆಯೂ ಒಂದಲ್ಲಾ ಒಂದು ದಿನ ತನ್ನ ಕನಸುಗಳನ್ನು ಸಾಕಾರಗೊಳಿಸಿಕೊಳ್ಳುವ ಆಶಾವಾದವಂತೂ ಇದ್ದೇ ಇದೆ.

ಸ.ಉಷಾ ಅವರ ಕವನಗಳು ಗಂಡು ಹೆಣ್ಣಿನ ಸಹಬಾಳ್ವೆಯ ಆಶಯಕ್ಕೆ ಹೆಚ್ಚು ಒತ್ತು ಕೊಡುತ್ತವೆ. ಇಬ್ಬರೂ ಕೂಡಿ ಸಾಗಬೇಕಾದ ಹಾದಿಯೊಂದರ ಹುಡುಕಾಟ ಹೆಣ್ಣಿಗೆ ಮಾತ್ರವಲ್ಲ ಗಂಡಿಗೂ ಕೂಡ ಅವಶ್ಯಕ. ಅದರ ಬಗೆಗಿನ ಅರಿವು ಇಂದಿನ ಪುರುಷ ಸಮಾಜದಲ್ಲಿ ಕೇಳಬರುತ್ತಿದೆ ಎಂಬ ಧ್ವನಿ ಇವರ ಕವನಗಳಲ್ಲಿ ಕಂಡುಬರುತ್ತವೆ. 'ಪುಟ್ಟ ಹುಡುಗ ಮತ್ತು ಪಾಷಾಣ ಮೋಹಿನಿ' ಕವಿತೆ ಇದಕ್ಕೊಂದು ಉತ್ತಮ ನಿದರ್ಶನ. ಇಲ್ಲಿ ಹೆಣ್ಣನ್ನು ಕರಗಿಸುವ 'ರಾಗದ' ಹುಡುಕಾಟ ಗಂಡಿನಿಂದ ಆರಂಭವಾಗಿರುವುದನ್ನು ಉಷಾ ಗುರುತಿಸುತ್ತಾರೆ.

ಮೊದಲ ಕೋಳಿ ಕೂಗುವ ಮೊದಲೇ
ಅವನು ಏಳಬೇಕು, ಅವಳು ಕರಗುವ ರಾಗ
ನುಡಿಸಬೇಕು
ಅವನರಿಯ, ಅವಳು ಕರಗುವ ರಾಗ
--------------
ಮೊದಲ ಕೋಳಿ ಕೂಗುವ ಹೊತ್ತಿಗೆ
ಏಳುತ್ತಾನೇನೋ ಪುಟ್ಟ
ಹಾಡುತ್ತಾನೇನೋ ಆ ಪಾಷಾಣ ಮೋಹಿನಿ
ಕರಗಿ ಹೆಣ್ಣಾಗುವ ರಾಗ
ಏಳಬೇಕವನು ಭೋಗಸುಪ್ತ
ನುಡಿಸಬೇಕವನು ಅವಳು ಕರಗುವ ರಾಗ[31]

ಈ ಕವನ ಒಂದೆಡೆ ಗಂಡು ಹೆಣ್ಣಿನ ನಡುವೆ ಸಂವಹನದ ತೊಡಕಿರುವುದನ್ನು ಗುರುತಿಸಿದರೆ ಮುಂದುವರೆದು ಗಂಡು ಅದನ್ನು ಕಂಡುಕೊಳ್ಳುತ್ತಾನೋ? ಇಲ್ಲವೋ? ಎಂಬ ಅನುಮಾನ ಕಂಡುಬರುತ್ತದೆ. ಆದರೆ ಪ್ರಕೃತಿ ಸಹಜ ನಿಯಮಗಳಲ್ಲಿ, ಬದುಕನ್ನು ಕಟ್ಟಿಕೊಳ್ಳುವ ಅನಿವಾರ್ಯತೆಗಳಲ್ಲಿ 'ಪುಟ್ಟ' ಪಾಷಾಣ ಮೋಹಿನಿಯನ್ನು ಎಚ್ಚರಗೊಳಿಸಬೇಕಾದ ರಾಗವನ್ನು ಕಂಡು ಕೊಳ್ಳಬೇಕಾದ ಅನಿವಾರ್ಯತೆಯನ್ನು ಎತ್ತಿ ಹಿಡಿಯುತ್ತದೆ. ಆದುದರಿಂದಲೇ 'ಏಳಬೇಕವನು', 'ನುಡಿಸಬೇಕವನು', ' ಅವಳು ಕರಗುವ ರಾಗ' ಎನ್ನುವ ಅಂಶಗಳು ವ್ಯವಸ್ಥೆ ಬೇರೆದಾರಿಯಿಲ್ಲದೆ ಬದಲಾಗಲೇ ಬೇಕಾದ ಅನಿವಾರ್ಯತೆಯನ್ನು ತಿಳಿಸುತ್ತದೆ. ಇವರ ಹವಳ ಹಾರಿದ ಹೊತ್ತು ಕವನ ಈ ಬದಲಾವಣೆಯನ್ನು ಇನ್ನೊಂದು ಆಯಾಮದಿಂದ ಹಿಡಿದಿಡುತ್ತದೆ.

ಪರಂಪರೆಯಿಂದ ನಿರ್ದಿಷ್ಟ ಚೌಕಟ್ಟಿನಲ್ಲಿಯೇ ಬದುಕಿದ ಹೆಣ್ಣು ಅದನ್ನು ಮೀರಲು ತಯಾರಿಲ್ಲದ ಸಂದರ್ಭದಲ್ಲಿ ಈ ಬದಲಾವಣೆಗೆ ಗಂಡು ಮುಂದಾಗಿರುವುದನ್ನೂ, ಅದು ಯಾವುದೇ ಬಗೆಯ ಹಿರಿಮೆ, ಗರಿಮೆಗಳಲ್ಲದೆ ಸಹಜ ಚಲನೆ ಎಂಬುದನ್ನು ಹಿಡಿದಿಡುತ್ತದೆ.

ಹವಳ ಕನ್ನಿಕೆ ಉಲಿದಳು
ಇಲ್ಲಾ ಪ್ರಿಯಾ
ನನ್ನಮ್ಮ ಅವಳಮ್ಮ ಅವಳಮ್ಮ
ಹೇಳುತ್ತಾರೆ
ಯಾವ ಹವಳಮ್ಮನೂ ಸುತ್ತುವುದಿಲ್ಲ
ಅಮ್ಮಂದಿರೆಲ್ಲ ಬೇರು ಬಿಟ್ಟು
ಕನ್ನಿಕೆಯರ ಬೆಳೆಸುತ್ತಾರೆ
ಕಡಲಾಳದ ಹವಳ ಕೋಟೆಯ
ತಾಯ್ಮಳಲಲ್ಲಿ
ಸಲ್ಮಾನ್ ಕುವರ ಹೇಳಿದ
ಹುಡುಗೀ ಕಡಲ ಕಂತೆ ಪುರಾಣ ಕಟ್ಟಿಡು
ಕೇಳು ನನ್ನೆದೆಯ ಹಾಡು
ನೀನು ಬರೀ ಹವಳವಲ್ಲ
ನಾನು ಬರಿ ಸಲ್ಮಾನ್ ಅಲ್ಲ
ಹಾರು ನನ್ನೊಡನೆ
ಈ ಅನಂತ ದಿಗಂತದಲ್ಲಿ [೨೨]

ಎನ್ನುವ ಸಲ್ಮಾನ್‌ನ ಮಾತು ಇಡೀ ವ್ಯವಸ್ಥೆಯ ಬದಲಾದ ಮನಸ್ಥಿತಿಯನ್ನೂ, ಆ ಹಾದಿಗೆ ಸಾಗುತ್ತಿರುವ ವಿಧಾನವನ್ನೂ ಹಿಡಿದಿಡುತ್ತದೆ. ಅತ್ಯಂತ ಸಣ್ಣ ಪ್ರಮಾಣದ ಕಾವ್ಯದಲ್ಲಿ ಈ ಆಶಯವನ್ನು ಗುರುತಿಸಬಹುದು. ನಂತರದಲ್ಲಿ ಮೌಲ್ಯವ್ಯವಸ್ಥೆಯ ಬೇರುಗಳು ಸಮುದಾಯದ ಸಂರಚನೆಯೊಂದಿಗೆ ಬೆಸೆದು ಕೊಂಡಿರುವುದರಿಂದ ಅದನ್ನು ಬದಲಾಯಿಸುವುದು ಸುಲಭ ಸಾಧ್ಯವಿಲ್ಲ ಎಂಬ ಅರಿವು ಮತ್ತು ಕಾಲಾನಂತರದಲ್ಲಿ ಅದು ಬದಲಾವಣೆ ಹೊಂದುತ್ತದೆ ಎಂಬ ಆತ್ಮವಿಶ್ವಾಸ ಈ ಹಂತದಲ್ಲಿ ಪ್ರಧಾನವಾಗಿ ಕಂಡುಬರುತ್ತದೆ.

ತನ್ನ ಬಯಕೆಗಳನ್ನು ಈಡೇರಿಸಿಕೊಳ್ಳಲು ಗಂಡಿಗೆ ಕುಟುಂಬದ ಹೊರಗೂ ಕೂಡ ಅವಕಾಶಗಳಿವೆ. ಹೆಣ್ಣಿನ ಸಂತಾನ, ಲೈಂಗಿಕತೆ ಎಲ್ಲವೂ ಕುಟುಂಬದ ಒಳಗೇ ಪೂರೈಕೆಗೊಳ್ಳಬೇಕು. ಒಂದು ವೇಳೆ ಹೆಣ್ಣು ಕುಟುಂಬದ ಹೊರಗೆ ತನ್ನ ಬಯಕೆಗಳನ್ನು ಪೂರೈಸಿಕೊಂಡಿದ್ದಾದರೆ ನಿಂದನೆ, ಟೀಕೆಗೆ ಒಳಪಡುವುದು ಹಾಗೂ ಅಲ್ಲಿಯೂ ಕೂಡ ಪುರುಷ ಯಜಮಾನ್ಯ ಧೋರಣೆಯಿಂದಲೇ ಹೆಣ್ಣನ್ನು ನಡೆಸಿಕೊಳ್ಳುವುದು ಕಂಡುಬರುತ್ತದೆ. ಮತ್ತು ಕುಟುಂಬದ ಹೊರಗೆ ಹೆಣ್ಣು ಶಾಶ್ವತವಾದ ನೆಲೆಯನ್ನು ಕಂಡುಕೊಳ್ಳಲು ಸಾಧ್ಯವಾಗದಂತೆ ಕುಟುಂಬ ವ್ಯವಸ್ಥೆಯನ್ನು ರೂಪಿಸಲಾಗಿದೆ.

ಇತ್ತೀಚಿನ ದಿನಗಳವರೆಗೂ ಮಹಿಳಾ ಸಾಹಿತ್ಯವನ್ನು ಪ್ರಧಾನ ಸಾಹಿತ್ಯದಿಂದ ಹೊರಗಿಟ್ಟದ್ದು, ಅದನ್ನು ಕಟು ವಿಮರ್ಶೆಗೆ ಒಳಪಡಿಸಿದ್ದು ಪುರುಷ ಪ್ರಧಾನ ವ್ಯವಸ್ಥೆ ಹೆಣ್ಣು ಕಂಡುಕೊಳ್ಳಬಹುದಾದ ಹೊಸ ಸಾಧ್ಯತೆಗಳನ್ನೂ, ಅವಕಾಶಗಳನ್ನೂ ನಿಯಂತ್ರಿಸುವ ಒಂದು ವಿಧಾನವೇ ಆಗಿದೆ. ಹೆಣ್ಣು ತನ್ನ ಅಧೀನ ಸ್ಥಿತಿಗೆ ಕುಟುಂಬ ವಿವಾಹಗಳೇ ಮುಖ್ಯ ಕಾರಣ ಎಂದು ನಂಬಿದ್ದು ಅದರಿಂದ ಹೊರಬರುವ ಆಶಯವನ್ನು ಹೊಂದಿದ್ದಾಳೆ. ಆದರೆ ಪುರುಷಾಧಿಕಾರದ ಹಿಡಿತದಲ್ಲಿ ರೂಪುಗೊಂಡ ಸಮುದಾಯದ ರಚನೆ ಹೆಣ್ಣು ಕುಟುಂಬಕ್ಕೆ ಬದ್ಧಳಾಗಿಯೇ ಇರಬೇಕಾದ ಅನಿವಾರ್ಯತೆಯನ್ನು ಸೃಷ್ಟಿಸಿದೆ. ಆಧುನಿಕತೆ ಹೆಣ್ಣಿಗೆ ವಿದ್ಯೆ, ಉದ್ಯೋಗಗಳ ಅವಕಾಶಗಳನ್ನು ನೀಡಿದೆಯಾದರೂ ಅವೆಲ್ಲವೂ ಸಾಂಪ್ರಾದಾಯಿಕ ಮೌಲ್ಯವ್ಯವಸ್ಥೆಯ ಚೌಕಟ್ಟಿಗೆ ಒಳಪಡುತ್ತವೆ

ಮಗುವನ್ನು ಗಂಡು ಅಥವಾ ಹೆಣ್ಣಾಗಿಸುವುದೂ ಕೂಡ ಇದೇ ಪಿತೃ ಸಂಸ್ಕೃತಿಯೇ. ಎಲ್.ಜಿ.ಸುಮಿತ್ರಾರವರ ಹುಟ್ಟಿದಳು ಶಕುಂತಲೆ ಕವನ ಇದನ್ನು ಹಿಡಿದಿಡುತ್ತದೆ.

ವೇದದ ಶಕುಂತಲೆ ಮುಗ್ಧೆಯಲ್ಲ
ಎದೆಗೆಟ್ಟು ಬಳಲಿ ಬೆಂಡಾಗಲಿಲ್ಲ
ಆದರೆ ಕವಿಗೆ ಅದು ರುಚಿಸಲಿಲ್ಲ
ಆಗ ಹುಟ್ಟಿದಳು ಮುಗ್ಧ ಶಕುಂತಲೆ.[೩೮]

ಎಂಬುದು ಪುರುಷ ಪ್ರಭುತ್ವ ತನ್ನ ಒಪ್ಪಿತ ಮಾದರಿಯಲ್ಲಿ ಹೆಣ್ಣು ಗಂಡನ್ನು ರೂಪಿಸಿಲು ಮುಂದಾಗುತ್ತದೆ. ಹಾಗೂ ಅಂತಹ ಸಂದರ್ಭದಲ್ಲಿ ಹುಟ್ಟುವ ಪಾತ್ರಗಳು ನಮ್ಮ ಸಂಸ್ಕೃತಿ ಹಾಗು ಸಮಾಜದ ಮನೋಭಿತ್ತಿಯಲ್ಲಿ ಮಹಿಳೆಯ ಸಹಜ ಸ್ವಭಾವ ಗುಣಗಳನ್ನು ಕುರಿತಂತೆ ಇರುವ ರೂಢಿಗತ ಗ್ರಹಿಕೆಗಳನ್ನು ಸಮರ್ಥಿಸುವಂತಿರುತ್ತವೆ. "ಮಹಿಳೆ ಚಂಚಲೆ, ದುರ್ಬಲ ಹಾಗೂ ಅಸ್ಥಿರ ಮನಸ್ಕಳು, ಆತ್ಮ ವಿಶ್ವಾಸದ ಕೊರತೆಯಿಂದ ಬಳಲುವವಳು, ಅಶಕ್ತಳು. ಅವಳಲ್ಲಿ ಉತ್ಪಾದನಾ ಸಾಮರ್ಥ್ಯಕ್ಕಿಂತ ಪಾಲನಾ ಸಾಮರ್ಥ್ಯವೇ ಸಹಜ ಗುಣವಾಗಿದೆ. ಅವಳಲ್ಲಿ ಕಾಮನ್ ಸೆನ್ಸ್ ಮತ್ತು ಕಲ್ಪನಾ ಪ್ರತಿಭೆಗಳು ಚುರುಕಾಗಿರುತ್ತವೆಯೇ ಹೊರತು ಬುದ್ದಿಶಕ್ತಿ ಕಡಿಮೆಯೇ. ಅಷ್ಟಿಷ್ಟು ಓಡುವ ಬುದ್ಧಿಶಕ್ತಿ ಮನೆ, ಕುಟುಂಬ, ಮಕ್ಕಳು, ಎಂಬ ದಿಸೆಯಲ್ಲಷ್ಟೇ ಓಡುವಂಥದ್ದಾಗಿದೆ. . . . . ಹೀಗೆ ಅವಳ ಸಾಮರ್ಥ್ಯವನ್ನೆಲ್ಲಾ ಎರಡನೆಯ ದರ್ಜೆಯದೆಂದೇ ಪಟ್ಟಿ ಮಾಡಿ ಬಿಡಲಾಗಿದೆ. ಹಾಗಾಗಿಯೇ ಮನೆಯೇ ತಮ್ಮ ಸರ್ವಸ್ವ ಎಂದು ಒಪ್ಪಿ ಬಾಳುವ ಹೆಂಗಸರು ಅತ್ಯಂತ ಮುಗ್ಧರೂ, ಸಂತೋಷ ಚಿತ್ತರೂ, ಪ್ರೀತಿಪಾತ್ರರೂ ಎಂದು ಪರಿಗಣಿತರಾಗುತ್ತಾರೆ. ಇಂತಹ ಹೆಂಗಸರಿಗೆ ಸಮಾಜವು ಪ್ರೀತಿ, ಗೌರವ, ಮನ್ನಣೆಗಳನ್ನು ಸಲ್ಲಿಸುವ ನಾಟಕಗಳನ್ನು ಮಾಡುತ್ತದೆ. ಮಹಿಳೆಗೆ ನಮ್ಮ ಸಮಾಜದಲ್ಲಿ ಉನ್ನತ ಸ್ಥಾನವನ್ನು ನೀಡಲಾಗಿದೆ ಎಂದು ಹೇಳುವಾಗಲೆಲ್ಲಾ ಇವರನ್ನೇ ನಿದರ್ಶನವನ್ನಾಗಿ ತೋರಿಸಲಾಗುತ್ತದೆ. ಆದರೆ ವಾಸ್ತವದಲ್ಲಿ ಇದು ವಿಧೇಯ ಆಳಿಗೆ ನೀಡುವ ಪ್ರೋತ್ಸಾಹಕರ ಬಹುಮಾನದ ರೀತಿಯೇ ಹೊರತು ಖಂಡಿತವಾಗಿಯೂ ಮನ್ನಣೆಯಲ್ಲ".[೩೯]

ಈ ಅರಿವಿನಿಂದ ಕೂಡಿದ ಮಹಿಳಾ ಕಾವ್ಯ ಆ ಪಾತ್ರಗಳನ್ನು 'ಮಾದರಿ'ಯಾಗಿಸುವಲ್ಲಿ ಪಿತೃ ಪ್ರಭುತ್ವದ ಹುನ್ನಾರಗಳನ್ನು ವ್ಯಂಗ್ಯ ವಿಡಂಬನೆಗೆ ಒಳಪಡಿಸುತ್ತದೆ.

ಮಹಿಳಾ ಕಾವ್ಯ ಸಾಹಿತ್ಯಿಕ ಹಾಗೂ ಸಾಂಸ್ಕೃತಿಕ ದೃಷ್ಟಿಯಿಂದ ಅತ್ಯಂತ ಶಕ್ತಿಶಾಲಿಯಾಗಿ ಹಾಗು ಸತ್ವಯುತವಾಗಿ ರೂಪುಗೊಂಡಿದದ್ದು ೬೦ರ ದಶಕದಲ್ಲಿ. ಈ ಕಾಲಘಟ್ಟದಲ್ಲಿ ಹೆಣ್ಣಿಗೆ ದೊರೆತ ಅವಕಾಶಗಳು, ಸ್ತ್ರೀವಾದಿ ಚಿಂತನೆಯ ಪ್ರಭಾವ ಹಾಗೂ ಸಾಮಾಜಿಕ ಚಳುವಳಿಗಳ ಕಾರಣದಿಂದಾಗಿ ದೊರೆತ ಅರಿವು ಹೆಣ್ಣು ಹೊಸರೀತಿಯಲ್ಲಿ ಸಮಾಜಕ್ಕೆ ಮುಖಾಮುಖಿಯಾಗುವ ಅವಕಾಶಗಳನ್ನು ಕಲ್ಪಿಸಿತು. "ಸಮಾನ ಅವಕಾಶಕ್ಕಾಗಿ ಹಾತೊರೆಯುವ, ಅದನ್ನು 'ಗಳಿಸಿ' ಈಗಿನ ಬಂಧನ ದಿಂದ 'ವಿಮೋಚನೆ' ಪಡೆಯುವ ಹೋರಾಟದ ಹಾದಿಗಿಂತ, ನಮ್ಮ ಅಸ್ಮಿತೆಯನ್ನು ಗುರುತಿಸಿಕೊಳ್ಳುವ, ಈ ಅಸ್ಮಿತೆಯೇ ನಮ್ಮ ನಿಜವಾದ ಶಕ್ತಿ ಎಂದು ಸ್ಥಾಪಿಸುವ ಹಾದಿಯೇ ಹೆಚ್ಚು ಸುಸಂಗತವಾದದ್ದು"[೩೭] ಎಂಬ ಆಲೋಚನೆ ಮಹಿಳಾ ಸಾಹಿತ್ಯದಲ್ಲಿ ಪ್ರಾಮುಖ್ಯತೆಯನ್ನು ಪಡೆದುಕೊಂಡಿತು. ಇದರಿಂದಾಗಿ ಹೆಣ್ಣು ತನಗೆ ದೊರೆತ ಅವಕಾಶಗಳ ಪರಿಮಿತಿಯಲ್ಲಿ ಪುರುಷ ಪ್ರಭುತ್ವದ ಎದುರು ತನ್ನ ಅಸ್ಮಿತೆಯನ್ನು ಕಂಡುಕೊಳ್ಳುವ ಹಾಗೂ ಮೌಲ್ಯ ವ್ಯವಸ್ಥೆಗೆ ಮುಖಾ ಮುಖಿಯಾಗುವ ಬಗೆಗಳನ್ನು ಮಹಿಳಾ ಅಭಿವ್ಯಕ್ತಿ ತನ್ನ ಸೃಜನಶೀಲ ಚಟುವಟಿಕೆಗಳ ಮೂಲಕ ದಾಖಲಿಸಲು ಪ್ರಯತ್ನಿಸುತ್ತದೆ. ಈ ರೀತಿ ಆರಂಭವಾದ ಹೆಣ್ಣಿನ ಅಸ್ಮಿತೆಯ ಹುಡುಕಾಟದ ದಾಖಲೆಗಳು ಮಹಿಳಾ ಕಾವ್ಯದಲ್ಲಿ ಮೂಡಿಬಂದಿವೆ, ಹಾಗೂ ವಿವಿಧ ವಿನ್ಯಾಸಗಳಲ್ಲಿ ತನ್ನ ಅಸ್ತಿತ್ವವನ್ನು ಕಂಡುಕೊಳ್ಳುವ ಪ್ರಯತ್ನದಲ್ಲಿ ನಿರಂತರವಾಗಿ ತೊಡಗಿಕೊಂಡಿವೆ ಎನ್ನಬಹುದು.

ಇದುವರೆವಿಗೂ ಪಿತೃಪ್ರಧಾನ ವ್ಯವಸ್ಥೆ ಯಾವುದನ್ನು 'ಮೌಲ್ಯ'ಗಳ ಹೆಸರಿನಲ್ಲಿ ಹೆಣ್ಣಿನ ಮೇಲೆ ಒತ್ತಾಯ ಪೂರ್ವಕವಾಗಿ ಹೇರಿದ್ದವೋ ಅವು ಮೌಲ್ಯಗಳಲ್ಲ. 'ಕರಾರು' ಅಥವಾ 'ಒಪ್ಪಂದ'ಗಳು ಎಂಬುದನ್ನು ಮಹಿಳಾ ಕಾವ್ಯ ಅತ್ಯಂತ ಸಮರ್ಥವಾಗಿ ಬಿಚ್ಚಿಡಲು ಪ್ರಯತ್ನಸುತ್ತದೆ. ಅವು ಮೌಲ್ಯಗಳೇ ಆಗಿದ್ದಲ್ಲಿ ಮಾನವರೆಲ್ಲರಿಗೂ ಒಂದೇ ರೀತಿಯಲ್ಲಿ ಅನ್ವಯಿಸಲ್ಪಡಬೇಕು ಹಾಗು ಅವು ಜೀವಪರವಾದ ದೃಷ್ಟಿಕೋನವನ್ನು ಹೊಂದಿರಬೇಕು. ಆದರೆ ಸ್ಥಾಪಿತ ಮೌಲ್ಯಗಳು ಎಂದು ಕರೆಯಲ್ಪಡುವ ಅಂಶಗಳು ಗಂಡು ಹೆಣ್ಣಿಗೆ ಸಂಬಂಧಿಸಿದಂತೆ ಭಿನ್ನ ಭಿನ್ನ ಆಶಯಗಳನ್ನು ಹೊಂದಿದ್ದು ಗಂಡಿಗೆ ಜೀವಪರವಾಗಿಯೂ, ಹೆಣ್ಣಿಗೆ ಜೀವವಿರೋಧಿಯಾಗಿಯೂ ಮಾರ್ಪಟ್ಟಿವೆ. ಅಲ್ಲದೆ ಇವು ಮೀರಬಹುದಾದ ಅಂಶಗಳಾದರೂ ಕೂಡ ಅವುಗಳನ್ನು ಮೀರಲಾರದ, ಮೀರಬಾರದ ಸ್ಥಾಪಿತ ಹಿತಾಸಕ್ತಿಗಳಾಗಿ ಕಾಯ್ದುಕೊಂಡು ಬರಲಾಗುತ್ತಿದೆ. ಮಹಿಳಾ ಕಾವ್ಯ 'ಮೌಲ್ಯ'ಗಳು ಎಂದು ಕರೆಯಿಸಿಕೊಳ್ಳುವ ಅಂಶಗಳು ನಿಜವಾಗಿಯೂ ಮೌಲ್ಯಗಳೇ? ಎಂಬುದನ್ನು ಚರ್ಚಿಸುವುದರೊಂದಿಗೆ ಅವು ಮೀರಬಹುದಾದ ಅಂಶಗಳು ಎಂಬುದರ ಕಡೆಗೆ ಒತ್ತು ನೀಡುತ್ತವೆ. ಹಾಗಾಗಿ ಮೌಲ್ಯ ವ್ಯವಸ್ಥೆಯನ್ನು ಮೀರ ಬಯಸುವ ಮಹಿಳಾ ಕಾವ್ಯ ಜೀವಪರವಾದ ಆಲೋಚನಾ ಕ್ರಮವೊಂದನ್ನು ನಿರಂತರವಾಗಿ ಉಳಿಸಿಕೊಂಡು ಬಂದಿದೆ.

ಆದರೆ ಹಿಂದಿನಿಂದಲೂ ಗಟ್ಟಿಯಾಗಿ ಬೇರೂರಿರುವ ಮೌಲ್ಯ ವ್ಯವಸ್ಥೆಯನ್ನು ಮೀರುವುದು ಹಾಗೂ ಅದಕ್ಕೆ ಪರ್ಯಾಯವನ್ನು ಕಟ್ಟಿಕೊಳ್ಳುವುದು ಸುಲಭದ ಕೆಲಸವಲ್ಲ. ಇದು ಹಂತ ಹಂತವಾಗಿ ನಡೆಯಬೇಕಾಗಿರುವ ಕೆಲಸ. ಮಹಿಳಾ ಕಾವ್ಯ ಇದನ್ನು ವಿಶೇಷವಾಗಿ ಚರ್ಚಿಸುತ್ತದೆ. ಮೌಲ್ಯವ್ಯವಸ್ಥೆಯ ಹೆಸರಿನಲ್ಲಿ ಹೆಣ್ಣಿನ ಮೇಲೆ ನಡೆಯುತ್ತಿರುವ ಶೋಷಣೆ ನಿಲ್ಲಬೇಕಾದರೆ ಕೇವಲ ಹೆಣ್ಣಿನ ಹೋರಾಟದಿಂದ ಮಾತ್ರ ಸಾಧ್ಯವಿಲ್ಲ. ಇದು ಗಂಡು ಹೆಣ್ಣು ಇಬ್ಬರೂ ಕೂಡಿ ಸಹಮತದಿಂದ ಕಂಡುಕೊಳ್ಳಬಹುದಾದ ಬದಲಾವಣೆ. ಈ ಮೌಲ್ಯವ್ಯವಸ್ಥೆಯನ್ನು ಮೀರಿ ಹೆಣ್ಣು ತನ್ನ ಅಸ್ಮಿತೆಯನ್ನು ಕಂಡುಕೊಳ್ಳಬೇಕಾದರೆ ಪಿತೃ ಪ್ರಧಾನ ವ್ಯವಸ್ಥೆಯ ಹುನ್ನಾರಗಳನ್ನು ಬಯಲಿಗೆಳೆಯುವುದು ಹಾಗೂ ಆ ಮೂಲಕ ಮೌಲ್ಯ ವ್ಯವಸ್ಥೆಯು ಪುರುಷ ಪರವಾಗಿ ಕಾರ್ಯ ನಿರ್ವಹಿಸುವ ವಿಧಾನಗಳನ್ನು ಕಂಡು ಕೊಂಡು ಜಾಗೃತಿಯಿಂದ ತನ್ನ ಅಸ್ತಿತ್ವವನ್ನು ರೂಪಿಸಿಕೊಳ್ಳುವುದು ಹೆಣ್ಣಿನ ಮುಂದಿರುವ ಬಹುದೊಡ್ಡ ಸವಾಲು. ಇದು ಮೊದಲ ಹಂತದಲ್ಲಾದರೆ ಎರಡನೆ ಹಂತದಲ್ಲಿ ಹೆಣ್ಣು ತನ್ನ ಅಸ್ಮಿತೆಯನ್ನು ಗುರುತಿಸಿಕೊಳ್ಳುವ ಮೂಲಕ, ಸಾಮಾಜಿಕ ವ್ಯವಸ್ಥೆಯುಲ್ಲಿ ಸಮಾನ ಜೀವನ ಹಾಗೂ ಸಮಾನ ಅವಕಾಶಗಳನನ್ನು ಪಡೆಯುವ ಹಾದಿಯಲ್ಲಿ ಮುನ್ನೆಡೆಯಬಹುದು. "ಹೆಣ್ಣಿನ ಭಿನ್ನತೆ ಹಾಗೂ ವಿಶಿಷ್ಟತೆಗಳನ್ನು ಒಪ್ಪಿ, ಅಸ್ಮಿತೆಯನ್ನೂ ಕಾಯ್ದುಕೊಳ್ಳುವುದು ಹೆಚ್ಚು ಕ್ಷೇಮಕರ ಹಾದಿ ಎನಿಸುತ್ತದೆ".[೩೭] ಎಂಬ ಮಾತುಗಳು ಹೆಣ್ಣಿನ ಅಸ್ಮಿತೆ ಅವಳ ಬದುಕಿನೊಂದಿಗೆ ಸಂಬಂಧ ಹೊಂದಿರುವುದರಿಂದ ಗಂಡು ಹೆಣ್ಣು ಇಬ್ಬರೂ ಒಂದಾಗಿ ಹೊಸ ಬದುಕನ್ನು ರೂಪಿಸಿಕೊಳ್ಳಬಹುದೆಂಬ ಆಶಯ ಮಹಿಳಾ ಕಾವ್ಯದಲ್ಲಿ ಪ್ರಧಾನವಾಗಿ ಕಂಡುಬರುತ್ತದೆ ಎಂಬುದಕ್ಕೆ ಪುಷ್ಟಿ ನೀಡುತ್ತದೆ. ಮೌಲ್ಯ ವ್ಯವಸ್ಥೆಯೊಂದಿಗಿನ ಅನುಸಂಧಾನ ಹಾಗೂ ಪುನರ್‌ರಚನೆಯ ಸಂದರ್ಭದಲ್ಲಿ ತನ್ನ ಅಸ್ಮಿತೆಯನ್ನು ಕಂಡುಕೊಳ್ಳುವ ಹಾಗೂ ಅದನ್ನು ವಿಭಿನ್ನ ಮಾದರಿಗಳಲ್ಲಿ ಪ್ರಕಟಗೊಳಸುವ ವಿಧಾನ ಮಹಿಳಾ ಕಾವ್ಯದ ಸ್ತ್ರೀವಾದಿ ಅಧ್ಯಯನದಿಂದ ತಿಳಿದು ಬರುತ್ತದೆ.

೬೦ ದಶಕದ ಮಹಿಳಾ ಕಾವ್ಯದಲ್ಲಿ ಹೆಣ್ಣಿನ ಆಸ್ಮಿತೆಯ ಹುಡುಕಾಟ ಆತ್ಮವಿಮರ್ಶೆ ಅಥವಾ ಸ್ವ ಕೇಂದ್ರಿತ ವಿಮರ್ಶೆಯ ಮೂಲಕ ಆರಂಭವಾಗುತ್ತದೆ. ಮೌಲ್ಯ ವ್ಯವಸ್ಥೆ ಸ್ಥಿರಗೊಳ್ಳುವಲ್ಲಿ ನನ್ನ ಪಾಲೆಷ್ಟು ವ್ಯವಸ್ಥೆಯ ಪಾಲೆಷ್ಟು ಎಂಬುದನ್ನು ವಿಮರ್ಶೆಗೆ ಒಳಪಡಿಸುವ ಮೂಲಕವೆ ಹೆಣ್ಣು ಮುನ್ನೆಡೆಯಬೇಕಾದ ಹಾದಿಯ ಬಗೆಗೆ ಸ್ಪಷ್ಟವಾದ ಸೂಚನೆಗಳನ್ನು ನೀಡುತ್ತದೆ. ಇಲ್ಲಿ 'ನಾನು' ಎಂಬುದು ಹಲವು ರೀತಿಯ ವಿಚಾರಣೆಗಳಿಗೆ ಒಳಗಾಗುತ್ತದೆ. ನಾನು ಎನ್ನುವ ಆತ್ಮಾತ್ಮಕ ಪ್ರತ್ಯಯದಿಂದಲೇ ಆರಂಭವಾಗುವ ಪ್ರತಿಭಾನಂದಕುಮಾರ್, ವೈದೇಹಿ, ವಿಜಯಾದಬ್ಬೆ, ಶೈಲಜಾ ಉಡಚಣರವರ ಕವನಗಳು ನಾವೇ ಹಲವು ಭ್ರಮೆಗಳಲ್ಲಿ ಸಿಲುಕಿ ಅದರಲ್ಲಿಯೇ ಬದುಕುತ್ತೇವೆ. ಅದರಿಂದ ಹೊರಬಂದು ಸ್ವತಂತ್ರ ಬದುಕನ್ನು ರೂಪಿಸಿಕೊಳ್ಳುವ ಬಯಕೆ ಮೂಡಿದಾಗ ಮಾತ್ರ ಗಂಡು ಹೆಣ್ಣು ಸಮಾನವಾಗಿ ಜೀವನ ನಿರ್ವಹಿಸಲು ಸಾಧ್ಯ ಎಂಬುದನ್ನು ತಿಳಿಯಪಡಿಸುತ್ತವೆ. ಗಂಡಿನಂತೆ ಹೆಣ್ಣೂ ಕೂಡ ತನ್ನ ಸಹಜ ಬಯಕೆಗಳನ್ನು ತನ್ನ

ಇಚ್ಛಾನುಸಾರವಾಗಿ ಪೂರೈಸಿಕೊಳ್ಳಬೇಕೇ ವಿನಃ ಅದಕ್ಕೆ ಪಿತೃಸಂಸ್ಕೃತಿಯ ಸಹಾಯ, ಅನುಕಂಪವನ್ನು ಬಯಸುತ್ತಾ ಕೂರುವುದರಲ್ಲಿ ಪ್ರಯೋಜನವಿಲ್ಲ ಎಂಬ ಆತ್ಮವಿಶ್ವಾಸದೊಂದಿಗೆ ತನ್ನ ಅಸ್ಮಿತೆಯನ್ನು ಗುರುತಿಸಿಕೊಳ್ಳಲು ಪ್ರಯತ್ನಿಸುತ್ತವೆ.

ಪುರುಷ ಪ್ರಧಾನ ವ್ಯವಸ್ಥೆ ಹಿಂದಿನಿಂದಲೂ ಹೆಣ್ಣನ್ನು ತಾಯಿ, ಪತ್ನಿ, ಮಗಳು, ಅತ್ತೆ, ಸೊಸೆ, ಮುಂತಾದ ನಿರ್ದಿಷ್ಟ ಪಾತ್ರಮಾದರಿಗಳಲ್ಲಿ ಗುರುತಿಸುವುದರ ಮೂಲಕ ಅವಳಿಗೆ ಸ್ವಂತ ವ್ಯಕ್ತಿತ್ವವೇ ಇಲ್ಲದಂತೆ ಅವಳ ಬದುಕನ್ನು ನಿಯಂತ್ರಿಸುತ್ತಾ ಬಂದಿದೆ. ಮಹಿಳಾ ಕಾವ್ಯ ಇದನ್ನು ಪ್ರಶ್ನಿಸುವುದರ ಮೂಲಕವೇ ತನ್ನ ಅಸ್ಮಿತೆಯನ್ನು ಕಂಡು ಕೊಳ್ಳಲು ಮುಂದಾಗುವುದನ್ನು ಕಾಣಬಹುದು.

ನಾನೊಬ್ಬನ ಪತ್ನಿ
ಮೂರು ಮಕ್ಕಳ ತಾಯಿ,
ಇನ್ನೂ ಸೀರೆ ಕುಪ್ಪಸ
ಬಟ್ಟು, ಬೈತಲೇ ಎಲ್ಲ
ನನ್ನ ಅತ್ತೆ ಮಾವಂದಿರ ಮರ್ಜಿ,
ನನದೇ ಮಕ್ಕಳ ಚಪ್ಪಲಿ
ಚಾಕಲೇಟು ಸ್ಲಟುಗಳೂ
ನನ್ನ ಪರಿಧಿ ಮೀರಿದ ವಿಷಯಗಳು [೩೮]

ಹೆಣ್ಣಿನ ಅಸ್ತಿತ್ವ ಮತ್ತು ಬದುಕನ್ನು ಸಂಪೂರ್ಣ ಕುಟುಂಬ ಹಾಗೂ ಗಂಡನ ಒಡೆತನಕ್ಕೆ ಒಪ್ಪಿಸಿರುವುದರ ಬಗೆಗೆ ಬೇಸರವೂ, ನಿರಾಶಾಭಾವೂ ಇದೆಯಾದರೂ ತನ್ನ ಅಸ್ಮಿತೆಯನ್ನು ಕಂಡುಕೊಳ್ಳುವ ಪ್ರಯತ್ನ ಮಾತ್ರ ಜೊತೆಜೊತೆಯುಲ್ಲಿಯೇ ನಡೆಯುತ್ತಿರುತ್ತದೆ. ನಾನೊಬ್ಬನ ಪತ್ನಿ, ತಾಯಿ, ಮಗಳು ಎಂದು ಗುರುತಿಸಕೊಳ್ಳುತ್ತಲೇ ಆ ಅರಿವಿನ ಅಂತರಾಳದಲ್ಲಿಯೂ ಅವೆಲ್ಲವನ್ನೂ ಮೀರಿ ತಾನು ತಾನಾಗಿ ಬದುಕುವ ಬಯಕೆ ವ್ಯಕ್ತವಾಗುವುದನ್ನು ಕಾಣಬಹುದು. ಪುರುಷ ಪ್ರಧಾನ ವ್ಯವಸ್ಥೆ ಹೆಣ್ಣನ್ನು ಗೃಹಕೆಲಸ, ಗಂಡ ಮನೆ, ಮಕ್ಕಳ ನಿರ್ವಹಣೆಗಷ್ಟೇ ಸೀಮಿತಗೊಳಿಸಿ ಗಂಡಿನ ಅಧೀನದಲ್ಲಿಯೇ ಬದುಕಬೇಕು ಎಂಬುದಕ್ಕೆ ಪ್ರಾಧಾನ್ಯತೆಯನ್ನು ನೀಡುತ್ತದೆ. ಮಕ್ಕಳನ್ನು ಸಾಕುವ, ಸಲಹುವ, ಅವರನ್ನು ಉತ್ತಮ ಪ್ರಜೆಗಳನ್ನಾಗಿ ರೂಪಿಸಿ ಸಮುದಾಯಕ್ಕೆ ಕೊಡುಗೆ ನೀಡುವ ಜವಾಬ್ದಾರಿ ಮಾತ್ರ ಹೆಣ್ಣಿನದು ಅವರ ಮೇಲೆ ಯಾವುದೇ ರೀತಿಯ ಅಧೀಕಾರವಾಗಲೀ, ತನ್ನ ಅಸ್ತಿತ್ವದ ಮೂಲಕ ಅವರನ್ನು ಗುರುತಿಸಿಕೊಳ್ಳುವುದಕ್ಕಾಗಲೀ ಹೆಣ್ಣಿಗೆ ಅವಕಾಶವಿಲ್ಲ. ಆದರೆ ಮಹಿಳಾ ಕಾವ್ಯ ಇದನ್ನು ಪ್ರಶ್ನಿಸುವುದರೊಂದಿಗೆ ಇಷ್ಟಕೆ ಮಾತ್ರ ತನ್ನ ಕಾರ್ಯ ಸೀಮಿತವಲ್ಲ ಎಂಬುದನ್ನು ತಿಳಸುವುದಲ್ಲದೆ ತನಗೂ ಸ್ವತಂತ್ರ ಅಸ್ತಿತ್ವವಿದೆ ಎಂಬುದರ ಕಡೆಗೆ ಗಮನ ಹರಿಸುತ್ತದೆ. ತನ್ನ ಮಿತಿ ಹಾಗೂ ತನ್ನೆಲ್ಲಾ ಕಾರ್ಯ ಚಟುವಟಿಕೆಗಳ ನಡುವೆಯೇ ಅದರಿಂದಾಚೆಗೂ ಬೆಳೆಯುವ ಶಕ್ತಿ ತನಗಿದೆ ಎಂಬುದನ್ನು ಮಹಿಳಾ ಕಾವ್ಯ ತಿಳಿಯಪಡಿಸುತ್ತದೆ. ಪಿತೃ ಸಂಸ್ಕೃತಿಯ ಕಾರ್ಯ ಮಾದರಿಗಳನ್ನು ಪ್ರಶ್ನಿಸುವ ಮೂಲಕ ತನಗೊಂದು ಸ್ವತಂತ್ರ ಅಸ್ತಿತ್ವವಿದೆ ಎಂಬುದನ್ನು ತಿಳಸುವ ವಿಧಾನ

ಒಂದು ಬಗೆಯದ್ದಾದರೆ ಗಂಡಿನ ಅಸ್ತಿತ್ವವನ್ನು ಲೇವಡಿ ಮಾಡುವ, ಅವರ ತೋರಿಕೆಯ ಮುಖವಾಡವನ್ನು ಅಪಹಾಸ್ಯ ಮಾಡುವ, ಅವರ ಸ್ವಾರ್ಥ, ದ್ವಂದ್ವ ನೀತಿಗಳನ್ನು ಬಯಲಿಗೆಳೆಯುವುದರ ಮೂಲಕ ತನ್ನ ಅಸ್ಮಿತೆಯನ್ನು ಗುರುತಿಸಿಕೊಳ್ಳುವ ಪ್ರಯತ್ನ ಮತ್ತೊಂದು ಬಗೆಯದು.

ನಾವು ಗಂಡಸರಲ್ಲ,
ಎಲ್ಲಿ ಹೋದರೂ ಹುಡುಗಿಯರನ್ನು ಕಂಡಾಗ
ಕಣ್ಣು ಮಿಟುಕಿಸಿ ವಕ್ರನಗೆ ಬೀರುವವರಲ್ಲ. . . .
ಒಳಗೊಳಗೇ ಗಡಗಡನೇ ನಡುಗುತ್ತಿದ್ದರೂ
ಮೇಲೆ ಪೌರುಶತ್ವದ ಶಾಲು ಹೊದೆದು ಬೀಗುವವರಲ್ಲ. . . . .
ಹೆಂಡತಿಯನ್ನು ಮೂಲೆ ಕಸವಾಗಿಸುವ ಇಲ್ಲವೇ,
ವಾಕರಿಕೆ ಬರುವಷ್ಟು ವ್ಯರ್ಥಾಲಾಪ ಮಾಡುತ್ತಾ
ಹೆಂಡತಿಯ ಸೆರಗಿನ ಮರೆಯಲ್ಲಿ ಜೀವಿಸುವರಲ್ಲ.
ಆದರೂ,
ನಮ್ಮಲ್ಲಿ ಇವರಿಗಿರುವ ಬೆಲೆಯನ್ನು ಕಂಡು
' ಅಯ್ಯೋ ನಾನು ಗಂಡಾಗಲಿಲ್ಲವಲ್ಲಾ'
ಎಂದು ಮಿಡುಕುವ ನಾವು
ಹೆಂಗಸರು[84]

ಇಲ್ಲಿ ಗಂಡಿನ ವೈಶಾಲ್ಯ ವ್ಯಕ್ತಿತ್ವದ ಹಿಂದಿನ ಕಠೋರತೆಯನ್ನೂ ಹೆಣ್ಣಿನ ವ್ಯಕ್ತಿತ್ವದ ಮಿತಿಗಳನ್ನೂ ಮುಖಾಮುಖಿಯಾಗಿಸುತ್ತಲೇ ಮೌಲ್ಯ ವ್ಯವಸ್ಥೆಯನ್ನು ಮುರಿದು ಕಟ್ಟುವ ಬಗೆಯನ್ನು ಕಾಣಬಹುದು. 'ಅಯ್ಯೋ ನಾನು ಗಂಡಾಗಲಿಲ್ಲವಲ್ಲ' ಎನ್ನುವಲ್ಲಿ ಕಂಡುಬರುವ ಬೇಸರ, ನೋವು, ಹತಾಶೆಯ ಜೊತೆ ಜೊತೆಗೆ ನಿಟ್ಟುಸಿರು, ಸಮಾಧಾನ, ನೆಮ್ಮದಿಯ ಭಾವ ಕೂಡ ವ್ಯಕ್ತವಾಗುತ್ತದೆ. ಆ ಮಿಡಿತದ ಆಂತರ್ಯವೇ ಸ್ತ್ರೀತ್ವದ ಮೂಲಕ ತನ್ನ ಬದುಕನ್ನು ಕಟ್ಟಿಕೊಳ್ಳಲು ಪ್ರೇರೇಪಣೆಯನ್ನು ನೀಡುತ್ತದೆ. ಜೊತೆಗೆ ನಾವು ಗಂಡಸರಲ್ಲ ಎಂಬ ಸಮಾಧಾನದ ಧ್ವನಿಯೇ ತಾನು ಹೆಣ್ಣಾದುದರ ಬಗೆಗೆ ಇರುವ ಹೆಮ್ಮೆ, ಆತ್ಮ ವಿಶ್ವಾಸವನ್ನು ವ್ಯಕ್ತಪಡಿಸುತ್ತದೆ. ನಾನು ಗಂಡಾಗಲಿಲ್ಲವಲ್ಲಾ ಎಂಬುದು ಮರುಕವಾಗಿರದೆ ಗಂಡಿನ ಮಿತಿಗಳನ್ನು ಗುರುತಿಸಿ ಅವರೂ ಕೂಡ ನಮ್ಮಂತೆ ಅಥವಾ ನಮಗಿಂತ ದುರ್ಬಲರು. ಆದರೆ ವ್ಯವಸ್ಥೆಯಲ್ಲಿ ಯಜಮಾನ್ಯ ಸ್ಥಾನ ಅವರಿಗೆ ದೊರಕಿರುವ ಕಾರಣದಿಂದಾಗಿ ಹಾಗೂ ಅವರ ಗುಣಗಳು ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ಮಾನ್ಯವಾಗಿರುವುದರಿಂದ ಅವನ ಅಸ್ತಿತ್ವಕ್ಕೆ ಯಾವುದೇ ರೀತಿಯ ದಕ್ಕೆ ಬಂದಿಲ್ಲ. ಹೆಣ್ಣು ಇದನ್ನು ಅರಿತು ಯಾವುದೇ ರೀತಿಯ ಕೀಳರಿಮೆಗೆ ಒಳಗಾಗದೆ ತನ್ನ ಅಸ್ಮಿತೆಯನ್ನು ಕಂಡುಕೊಳ್ಳಲು ಮುಂದಾಗಬೇಕಿದೆ ಎಂಬುದರ ಕಡೆಗೆ ಪ್ರತಿಭಾ ರವರ ಈ ಕವನ ಗಮನ ಹರಿಸುತ್ತದೆ.

ಮಹಿಳಾ ಕಾವ್ಯ ಮೌಲ್ಯ ವ್ಯವಸ್ಥೆಯನ್ನು ಪ್ರಶ್ನಿಸುವುದರ ಜೊತೆಗೆ ಪುರುಷ ಪ್ರಭುತ್ವವನ್ನು ಆತ್ಮ ವಿಮರ್ಶೆಗೆ ಒಳಪಡುವಂತೆ ಮಾಡುತ್ತದೆ. ಇದರಿಂದ ಉಂಟಾಗುವ ಅಂತಿಮ ಫಲಿತವೆಂದರೆ ಗಂಡು ಹೆಣ್ಣು ಎಂಬ ಜೀವಿಗಳು ಪರಸ್ಪರ ಪೂರಕ ಹಾಗು ಪೋಷಕ. ಒಂದಕ್ಕೊಂದು ಸಮಾನ ನೆಲೆಯಲ್ಲಿ

ಪಾಲ್ಗೊಂಡಾಗ ಮಾತ್ರ ಇಬ್ಬರಿಗೂ ನೆಮ್ಮದಿ, ಶಾಂತಿ ದೊರೆಯಲು ಸಾಧ್ಯ. ಪಿತೃ ಪ್ರಧಾನ ಮೌಲ್ಯ ವ್ಯವಸ್ಥೆಯಿಂದ ನಿರ್ಮಾಣವಾಗಿರುವ ಪ್ರಧಾನ, ಅಧೀನ ಎಂಬ ಶ್ರೇಣೀಕರಣ ಇಬ್ಬರಿಗೂ ಕೂಡ ಬಂಧನವೇ. ಯಜಮಾನ್ಯ ಅಧಿಕಾರವನ್ನು ಹೊಂದಿರುವವರೂ ಕೂಡ ಇದರಿಂದಾಗಿ ನೊವು, ಹಿಂಸೆ , ತೊಳಲಾಟಗಳಿಗೆ ಒಳಗಾಗುತ್ತಾರೆ. ಇದರಿಂದಾಗಿ ಹಂಡು ಹೆಣ್ಣು ಇಬ್ಬರೂ ಪ್ರಯತ್ನ ಪೂರ್ವಕವಾಗಿ ಸಮಾನ ನೆಲೆಯ ಸಂಬಂಧವನ್ನು ರೂಪಿಸಿಕೊಳ್ಳಬೇಕೆಂಬ ಅಂಶಗಳ ಕಡೆಗೆ ಮಹಿಳಾ ಕಾವ್ಯ ಗಮನಸೆಳೆಯುತ್ತದೆ.

> ಈ ಸಂಸಾರ ವೃಕ್ಷದಡಿ ಕೂತು
> ಹಿಡಿದ ಜಡದ ಧೂಳನ್ನು
> ಜಾಡಿಸುವರಾರೋ ನಿನ್ನ ಹೊರತು?
> ಈ ಸಂಸಾರನಾವೆಯಲಿ
> ನುಗ್ಗಿರುವೀ ನೋವಿನ ನೀರನ್ನು
> ಹೊರದೂಡುವರಾರೋ ನಿನ್ನ ಬಿಟ್ಟು? [೮೦]

ಎನ್ನುವಲ್ಲಿ ಕುಟುಂಬದಲ್ಲಿ ಎದುರಾಗುವ ನೋವು, ನಲಿವು, ಸುಖ, ದುಖಗಳನ್ನು ಗಂಡು ಹೆಣ್ಣು ಇಬ್ಬರೂ ಸಮಾನವಾಗಿ ಹಂಚಿಕೊಂಡು ಸಹಬಾಳ್ವೆಯನ್ನು ನಡೆಸಬೇಕೆಂಬ ಬಯಕೆ ವ್ಯಕ್ತವಾಗುವುದನ್ನು ಕಾಣಬಹುದು. ತನ್ನೆಲ್ಲಾ ಬಂಧನಗಳಂದ ಬಿಡುಗಡೆ ಹಾಗೂ ಕನಸಿನ ಜೀವನ ನಿನ್ನಿಂದ ಮಾತ್ರ ಸಾಧ್ಯ ಎಂಬ ಆಶಾವಾದವೂ ಇಲ್ಲಿ ವ್ಯಕ್ತವಾಗುತ್ತದೆ. ಆದರೆ ಸಮುದಾಯದ ರಚನೆಯಲ್ಲಿಯೇ ಗಂಡು ಹೆಣ್ಣಿನ ಶ್ರೇಣೀಕರಣದ ಅಂಶಗಳು ಅಂತರ್ಗತವಾಗಿರುವುದರಿಂದಾಗಿ ಸಹಬಾಳ್ವೆಯ ಆಶಯದ ಮೂಲಕ ಹೊರಡುವ ಹೆಣ್ಣಿನ ಅಸ್ಮಿತೆಯ ಶೋಧ ಒಂದು ಹಂತದಲ್ಲಿಯೇ ನಿಂತುಬಿಡುತ್ತದೆ ಎನ್ನಬಹುದು. ಆದರೆ ಆಧುನಿಕತೆ ತಂದೊಡ್ಡಿರುವ ಹೊಸ ಹೊಸ ಅವಕಾಶಗಳು ಹಿಂದಿನ ಅಧೀನ ಸ್ಥಿತಿಯಿಂದ ಬಿಡುಗಡೆ ಪಡೆಯಲು ಸಹಾಯಕವಾಗುತ್ತವೆ ಎಂಬ ಆಶಾವಾದ ಮಾತ್ರ ಮಹಿಳಾ ಕಾವ್ಯದಲ್ಲಿ ಆರಂಭದಿಂದ ಕಡೆಯವರೆಗೂ ವ್ಯಕ್ತವಾಗುತ್ತದೆ.

ಬದಲಾದ ಕಾಲ, ಸನ್ನಿವೇಶ, ಸಂದರ್ಭದಲ್ಲಿಯೂ ಕೂಡ ಹೆಣ್ಣು ಪುರುಷ ಪ್ರಭುತ್ವದ ಅಪೇಕ್ಷೆಗೆ ತಕ್ಕಂತೆ ಕಾರ್ಯ ನಿರ್ವಹಿಸುತ್ತಿರುವುದಕ್ಕೆ ಪುರುಷ ಶಾಹಿ ಎಷ್ಟು ಕಾರಣವೋ ಹೆಣ್ಣೂ ಕೂಡ ಅಷ್ಟೇ ಕಾರಣ ಎಂಬುದನ್ನು ಪ್ರತಿಭಾ ನಂದಕುಮಾರ್, ಬಿ.ಟಿ.ಲಲಿತಾನಾಯಕ್, ಮುಂತಾದವರ ಕಾವ್ಯ ಚರ್ಚಿಸುವುದರೊಂದಿಗೆ ಅದರಿಂದ ಹೊರಬರಬಹುದಾದ ದಾರಿಗಳ ಅನ್ವೇಷಣೆಗೆ ಮುಂದಾಗುತ್ತದೆ. ಈ ಅಧೀನತೆಗೆ ಅವಳ ಅಭಿವ್ಯಕ್ತಿಯ ಕೊರತೆ, ಹಿಂಜರಿಕೆ, ಸಮಾಜದ ಬಗೆಗಿನ ಆತಂಕಗಳು ಕಾರಣವಾದರೂ ಅವೆಲ್ಲವನ್ನೂ ಮೀರಿ ತನ್ನ ಅಸ್ಮಿತೆಯನ್ನು ಕಂಡು ಕೊಳ್ಳುವ ಕಡೆಗೆ ಗಮನಹರಿಸಬೇಕಿದೆ ಎಂಬುದನ್ನು ತಿಳಿಸುತ್ತದೆ. ಜೊತೆಗೆ ಇದು ಕೇವಲ ಒಂದು ಹೆಣ್ಣಿನ ಸಮಸ್ಯೆಯಲ್ಲ ಇಡೀ ಮಹಿಳಾ ಸಮುದಾಯ ಎದುರಿಸುತ್ತಿರುವ ಸಮಸ್ಯೆ ಎಂಬುದನ್ನು ತಿಳಿಸುತ್ತಲೇ, ಅದರ ಸಾರ್ವತ್ರಿಕ ರೂಪವನ್ನು ಬಯಲಿಗೆಳೆಯಲು ಪ್ರಯತ್ನಿಸುತ್ತಾರೆ. ಬಿ.ಟಿ.ಲಲಿತಾನಾಯಕ್ ಇದುವರೆಗೂ ಹೆಣ್ಣಿನ ಬಗೆಗೆ ಕಟ್ಟಿಕೊಂಡು ಬರಲಾಗುತ್ತಿರುವ

ಸ್ಥಾಪಿತ ಮೌಲ್ಯಗಳ ಒಳ ಹುನ್ನಾರಗಳನ್ನು ಬಯಲಿಗೆಳೆಯುತ್ತಲೇ ಹೆಣ್ಣು ಅದನ್ನು ಮೀರಬೇಕಾದ ಹಾದಿಗಳ ಅನ್ವೇಷಣೆಗೆ ಮುಂದಾಗುತ್ತಾರೆ. ಮಹಿಳೆ ಕಂಡುಕೊಳ್ಳಬಹುದಾದ ಹೊಸ ಹಾದಿಯ ಕಡೆಗೆ ಗಮನ ಹರಿಸುತ್ತಲೇ ಆ ಎಲ್ಲಾ ಶಕ್ತಿ, ವಿಶ್ವಾಸ ಹೆಣ್ಣಿನಲ್ಲಿದೆ ಎಂಬುದನ್ನು ತಮ್ಮ ಕವನಗಳ ಮೂಲಕ ತಿಳಿಸುತ್ತಾರೆ. ಅದೇ ರೀತಿ ನಾವು ಹುಡುಗಿಯರೇ ಹೀಗೆ ಎನ್ನುವ ಆತ್ಮಾತ್ಮಕ ಪ್ರತ್ಯಯದ ಮೂಲಕವೇ ಆರಂಭವಾಗುವ ಪ್ರತಿಭಾ ಕಾವ್ಯ, ವ್ಯಂಗ, ವಿಶಾದ, ನೋವುಗಳ ನಡುವೆಯೂ ಹೆಣ್ಣಿನ ಮಿತಿಯನ್ನೂ, ಹೆಣ್ಣು ಅದನ್ನು ಮೀರಬೇಕಾದ ಅನಿವಾರ್ಯತೆಯನ್ನೂ ಎತ್ತಿಹಿಡಿಯುತ್ತದೆ.

ಹೌದು ಕಣೆ ಉಷಾ
ನಾವು ಹುಡುಗಿಯರೇ ಹೀಗೆ. . .
ಏನೇನೋ ವಟಗುಟ್ಟಿದರೂ
ಹೇಳಬೇಕಾದದ್ದನ್ನು ಹೇಳದೆ
ಏನೇನೆಲ್ಲಾ ಅನುಭವಿಸಿ ಸಾಯುತ್ತೇವೆ. . . .
ಕೊನೆಗೆ ಬೇರೆ ಯಾರನ್ನೋ ಮದುವೆಯಾಗಬೇಕಾದಾಗ
ನಾವೇ ದುರಂತ ನಾಯಕಿಯರೆಂದು
ಭ್ರಮಿಸಿ ಎಲ್ಲರ ಅನುಕಂಪ ಬಯಸುತ್ತೇವೆ.
ಗಂಡನಲ್ಲಿ 'ಅವನನ್ನು' ಹುಡುಕುತ್ತೇವೆ.
ಗಂಡನಿಗೆ ಮಾತ್ರ ಅದರ ಸುಳಿವೂ ಸಿಗದಂತೆ ನಟಿಸುತ್ತೇವೆ.[೮೧]

ಇದು ಹೆಣ್ಣಿನ ಅಭಿವ್ಯಕ್ತಿ ಕೊರತೆಯ ಜೊತೆಗೆ ಅವಳ ಮಿತಿಗಳನ್ನೂ ಕೂಡ ಪರಿಚಯಿಸುಕೊಡುತ್ತದೆ. ಎಲ್ಲಕ್ಕಿಂತ ಮುಖ್ಯ ತನ್ನ ಮಿತಿ, ಪುರುಷ ಪ್ರಭುತ್ವದ ಹಿಡಿತ ಎಲ್ಲದರ ನಡುವೆ ತನ್ನ ಆಸೆಯನ್ನು ಪೂರೈಸಿಕೊಳ್ಳುವ ಹಂಬಲ ಭ್ರಮೆ ಹಾಗು ವಾಸ್ತವದ ನಡುವೆ ಬಿಚ್ಚಿಕೊಳ್ಳುತ್ತದೆ. ಆದರೆ ಹೆಣ್ಣನ್ನು ಸಂಪೂರ್ಣವಾಗಿ ನಿಯಂತ್ರಿಸ ಬಯಸುವ ಪ್ರಭುತ್ವದ ಹಿಡಿತಕ್ಕೆ ಸಿಗದಂತೆ ತನ್ನ ಅಸ್ತಿತ್ವದ ಚಹರೆಯನ್ನು ಕಂಡು ಕೊಳ್ಳುವ ಪ್ರಯತ್ನವನ್ನು ಮಾಡಲಾಗುತ್ತದೆ.

ಈ ಹಿಂದೆಯೇ ಚರ್ಚಿಸಿರುವಂತೆ ಸಮುದಾಯದ ರಚನೆಯಲ್ಲಿಯೇ ಹೆಣ್ಣಿನ ಅಧೀನತೆಯ ನೆಲೆಗಳು ಅಂತರ್ಗತ ಗೊಂಡಿರುವುದರಿಂದ ಮೌಲ್ಯ ವ್ಯವಸ್ಥೆಯಿಂದ ಹೊರಬರುವುದು, ಪರ್ಯಾಯವನ್ನು ಕಟ್ಟಿಕೊಳ್ಳುವುದು ಸುಲಭದ ಕೆಲಸವಲ್ಲ. ಇದಕ್ಕೆ ನಿರಂತರ ಶ್ರಮ, ಹೋರಾಟ, ಹಾಗೂ ಅದರಿಂದಾಗಿ ಎದುರಾಗುವ ನೋವು ಹಿಂಸೆ ಎಲ್ಲವನ್ನೂ ಸಹಿಸಿ ಬಾಳುವುದು ಅನಿವಾರ್ಯ. ಆದರೆ ದಾಂಪತ್ಯದಲ್ಲಿ ಹೆಣ್ಣು ತನ್ನ ಅಸ್ಮಿತೆಯನ್ನು ಕಟ್ಟಿಕೊಳ್ಳುವ ಸಂದರ್ಭದಲ್ಲಿ ಅವಳ ಮನಸ್ಥಿತಿ ಹೇಗಿರಬೇಕು ಎಂಬುದನ್ನು ವಿಜಯಾದಬ್ಬೆಯವರ ಕವನ ಅತ್ಯಂತ ಸಮರ್ಥವಾಗಿ ಕಟ್ಟಿಕೊಡುತ್ತದೆ. ಹಿಂದಿನದನ್ನು ಮರೆತು , ವಾಸ್ತವಕ್ಕೆ ಅಗತ್ಯವಾದದನ್ನು ಆರಿಸಿಕೊಳ್ಳುವುದರ ಮೂಲಕ, ಅವುಗಳನ್ನು ಪಡೆಯುವುದರ ಮೂಲಕ ತನ್ನ ಅಸ್ಥಿತ್ವವನ್ನು ಕಟ್ಟಿಕೊಳ್ಳಬೇಕೇ ವಿನಃ ಕಳೆದು ಕೊಂಡದಕ್ಕೆ, ಪಿತೃ ಪ್ರಭುತ್ವದ ಧೋರಣೆಯ ಬಗೆಗೆ ಮರುಗುವುದರಿಂದ ಪ್ರಯೋಜನವಿಲ್ಲ ಎನ್ನುತ್ತಾರೆ. ಅವರ ಸಾತತ್ಯದ ಭ್ರಮೆ ಎನ್ನುವ ಕವನ ಹೆಣ್ಣಿನ ಮುಂದಿನ ಹಾದಿಯನ್ನು ಕುರಿತಂತೆ ಈ ರೀತಿಯ ಸೂಚನೆಗಳನ್ನು ನೀಡುತ್ತದೆ.

ಅಲ್ಲಲ್ಲಿಗೇ ಮರೆತು ನಗುವುದು ಕ್ಷೇಮ
ಜನ್ಮ ಜನ್ಮಾಂತರದ ತೊಡಕು ತಲೆಗೆ ಶೂಲೆ
ಮರೆಯಲಾಗದ ರೋಗವಿದ್ದರೆ
ಅದು ಅವರವರ ಅನಿಷ್ಟ.[3]

ಪುರುಷ ಪ್ರಧಾನ ವ್ಯವಸ್ಥೆ ಹೆಣ್ಣನ್ನು ತನ್ನ ನಿಯಂತ್ರಣದಲ್ಲಿಡಲು ನಿರಂತರವಾಗಿ ಶ್ರಮಿಸುತ್ತಿದ್ದರೂ ಕೂಡ ಅದು ಸಾಧ್ಯವಾಗಿಲ್ಲ ಎಂಬುದು ಹೆಣ್ಣಿನ ಶಕ್ತಿಯ ಸಂಕೇತವಾಗಿದೆ. ಪ್ರಕೃತಿ ಸಹಜ ನಿಯಮಗಳಲ್ಲಿ ಯಾರೂ ಮೇಲೂ ಅಲ್ಲ ಯಾರು ಕೀಳೂ ಅಲ್ಲ. ನಿರಂತರವಾದ ಬೆಳವಣಿಗೆ ಅದರ ಗುಣಗಳಲ್ಲಿ ಒಂದು. ಮಹಿಳಾ ಕಾವ್ಯ ಹೆಣ್ಣಿನಲ್ಲಿ ಅಡಕವಾಗಿರುವ ಈ ಗುಣಗಳನ್ನು ಕುರಿತಂತೆ ಚರ್ಚಿಸುತ್ತಲೇ ಅದರ ಮೂಲಕ ತನ್ನ ಅಸ್ಮಿತೆಯನ್ನು ಕಂಡು ಕೊಳ್ಳಲು ಪ್ರಯತ್ನಿಸುತ್ತದೆ. ಶೈಲಜಾ ಉಡಚಣರವರ 'ನನ್ನಲೀಲೆ' ಪುರುಷ ಪ್ರಧಾನ ವ್ಯವಸ್ಥೆಯ ದಿವ್ಯ ನಿರ್ಲಕ್ಷ್ಯ, ಅಸಡ್ಡೆ, ಅವಮಾನಗಳೆಲ್ಲವನ್ನೂ ಮೀರಿ ಬೆಳೆಯುವ ಶಕ್ತಿ ತನ್ನಲ್ಲಿದೆ ಎನ್ನುವ ಮೂಲಕವೇ ಹೆಣ್ಣಿನ ಅಸ್ಮಿತೆಯನ್ನು ಗುರುತಿಸಲು ಪ್ರಯತ್ನಿಸುತ್ತದೆ.

ನೀ ನನ್ನ ಇರಿಯಬಯಸಿದೆ
ನಿನ್ನ ದರ್ಪದಿಂದ ತಿರಸ್ಕಾರದಿಂದ
ನಾನಾದರೋ
ಮತ್ತೆ ಮತ್ತೆ ಬದುಕಿದೆ
ನೀ ಸವಿದು ಬಿಟ್ಟ ಅಮೃತ ಹನಿಯಿಂದ'
ನೀ ತುಳಿದು ತಣಿದೆ
ನಿನ್ನ ಅವಜ್ಞೆಯ ಕಾಲುಗಳಿಂದ.
ನಾ ಬೆಳೆದು ನಿಂತೆ
ಹಾಲು ಚೀಪಿ ನಿನ್ನ ಅಕ್ಷಯುಂಗುಟದಿಂದ . . . .
ಆಗಲಿ ಆಗಲಿ ಮಿಲನದ ಸವಿ
ಬೆಳೆಸುವುದೆ ನನ್ನ ಸಹಜ ಲೀಲೆ.[4]

ಎನ್ನುವಲ್ಲಿ ಪುರುಷ ಪ್ರಧಾನ ವ್ಯವಸ್ಥೆ ಗಂಡು ಹೆಣ್ಣಿನ ಮೇಲೆ ನಿರ್ಬಂಧಗಳನ್ನು ಹೇರಿ ಅವರ ಸಹಜ ವ್ಯಕ್ತಿತ್ವ ರೂಪುಗೊಳ್ಳಲು ಅಡ್ಡಿಯನ್ನುಂಟುಮಾಡಿದೆ. ಆದರೆ ಪ್ರಕೃತಿ ಸಹಜ ನಿಯಮಗಳನ್ನು ಮೀರುವುದು ಯಾರಿಂದಲೂ ಸಾಧ್ಯವಿಲ್ಲ. ಪುರುಷ ಪ್ರಧಾನ ವ್ಯವಸ್ಥೆ ಹೆಣ್ಣನ್ನು ನಿಯಂತ್ರಿಸಲು ಎಷ್ಟೆಲ್ಲಾ ಹುನ್ನಾರಗಳನ್ನು ರೂಪಿಸಿದರೂ ಕೂಡ ತನ್ನ ಬೆಳವಣಿಗೆಯನ್ನು ಮಾತ್ರ ತಡೆ ಹಿಡಿಯಲು ಸಾಧ್ಯವಾಗುತ್ತಿಲ್ಲ ಎಂಬ ಆತ್ಮವಿಶ್ವಾಸವನ್ನು ಇಲ್ಲಿ ಕಾಣಬಹುದಾಗಿದೆ. ಪುರುಷ ಪ್ರಭುತ್ವ ತನ್ನ ಅಧಿಕಾರ ಬಲದಿಂದ ಹಿಂಸೆ ನೋವು, ದಮನ, ಪ್ರತಿಕಾರ ಮನೋಭಾವದ ಮೂಲಕ ಹೆಣ್ಣನ್ನು ನಿಯಂತ್ರಿಸಲು ಪ್ರಯತ್ನಿಸುತ್ತಿದೆ. ಆದರೆ ಹೆಣ್ಣು ತನಗೆ ದೊರೆತ ಅಲ್ಪ ಅವಕಾಶಗಳನ್ನೇ ಬಳಸಿಕೊಂಡು ತನ್ನ ಅಸ್ತಿತ್ವವನ್ನು ರೂಪಿಸಿಕೊಳ್ಳಲು ಪ್ರಯತ್ನಿಸುತ್ತಿದ್ದಾಳೆ. ಈ ಮೂಲಕ ಆಧುನಿಕ ಸಂದರ್ಭದಲ್ಲಿ ಹೆಣ್ಣು ತನ್ನ ಅಸ್ಮಿತೆಯನ್ನು ಕಟ್ಟಿಕೊಳ್ಳಲು ತೊಡಗಿರುವುದನ್ನು ಮಹಿಳಾ ಕಾವ್ಯ ಅತ್ಯಂತ ಸಮರ್ಥವಾಗಿ ಕಟ್ಟಿಕೊಡುತ್ತದೆ.

ಗಮನಿಸಬೇಕಾದ ಮತ್ತೊಂದು ಮುಖ್ಯ ಅಂಶ ಹೆಣ್ಣು ತನ್ನ ವೈಯಕ್ತಿಕ ಬದುಕಿನ ಮಿತಿಯಲ್ಲಿಯೇ ತನ್ನೆಲ್ಲಾ ಆಸೆ ಕನಸುಗಳನ್ನು ಸಾಕಾರಗೊಳಿಸಿಕೊಳ್ಳುವ ಬಗೆಯನ್ನು ಕೂಡ ಮಹಿಳಾ ಕಾವ್ಯ ಚರ್ಚೆಗೆ ಒಳಪಡಿಸುತ್ತದೆ. ವೈದೇಹಿಯವರ 'ನೋಡಬಾರದು ಚೀಲದೊಳಗನು' 'ಅಡುಗೆ ಮನೆ ಹುಡುಗಿ', 'ತಿಳಿದವರೇ ಕೇಳ', ಪ್ರತಿಭಾ ನಂದಕುಮಾರ್‌ರವರ 'ನಾವು ಹುಡುಗಿಯರೇ ಹೀಗೆ' ಮುಂತಾದ ಕವನಗಳ ಮೂಲಕ ಪುರುಷ ಪ್ರಧಾನ ವ್ಯವಸ್ಥೆಯ ಮಿತಿ ಹಾಗೂ ಬಂಧನಗಳ ನಡುವೆಯೇ ತನ್ನ ಬಯಕೆಗಳನ್ನು ಹಿಟ್ಟು ಒತ್ತಿದಂತೆ ಒತ್ತಿ ಬಚ್ಚಿಟ್ಟುಕೊಳ್ಳುವ ವಿಧಾನ ಹಾಗೂ ಹೊಸ ಹೊಸ ಕನಸುಗಳನ್ನು ಕಟ್ಟಿಕೊಳ್ಳುವ ಬಗೆಗಳನ್ನು ಗುರುತಿಸುತ್ತಾರೆ.

> ಬೆಪ್ಪು ಕಾಪುರುಷರೇ ವ್ಯರ್ಥ ಕೈ ನೋವೇಕೆ?
> ತೂಗಲಾರಿರಿ ತಪ್ಪು ಸಮೀಕರಣವನು.
> ಮನಸಿನೊಳಗಡೆ ಎಂದೂ ಇಣುಕಲಾರಿರಿ ನೀವು.
> ಹುಡುಕಿ ತೆಗೆಯಲಾರಿರಿ ಏನನೂ
> ಇಣುಕಲಾದರೂ ಹಾಗೆ ಮಾಡಲಾಗದು ನೀವು
> ಚೀಲದೊಳಗಿನ ತಿರುಳನು ಹುಡುಕಿ ತೆಗೆಯಲಾದರೂ
> ಹಾಗೆ ಮಾಡಲಾಗದು ನೀವು
> ನೋಡಬಾರದು ಚೀಲದೊಳಗನು[೬೬]

ಇಲ್ಲಿ 'ಚೀಲ' ಹೆಣ್ಣಿನ ಮನಸ್ಸಿನ, ಅವಳ ಅಸ್ಮಿತೆ ಪ್ರಕಟಗೊಳ್ಳುವ ವಿನ್ಯಾಸದ ಸಂಕೇತವಾಗಿ ರೂಪುಗೊಂಡಿರುವುದನ್ನು ಗಮನಿಸಬಹುದು. ಪ್ರಭುತ್ವದ ನಿಶಿದ್ಧ ಲೋಕದ ಹಲವು ಪರಿಕರಗಳೂ, ಅವಳ ಆಯ್ಕೆ, ಆಸಕ್ತಿಯ ಸಾಧನಗಳೂ ಈ ಚೀಲದೊಳಗೆ ಯಾರಿಗೂ ತಿಳಿಯದಂತೆ, ತಿಳಿದರೂ ಗುರಿತಿಸಲಾಗದಂತೆ ಸ್ಥಾನ ಪಡೆದಿವೆ. ಅದನ್ನು ಗುರುತಿಸುವುದಾಗಲೀ, ಅರ್ಥೈಸುವುದಾಗಲೀ ಪುರುಷ ಪ್ರಭುತ್ವದಿಂದ ಸಾಧ್ಯವೇ ಇಲ್ಲ ಎಂಬ ಆಶಾವಾದದ ಜೊತೆಗೆ ಹೆಣ್ಣಿನ ಈ ಬಗೆಯ ಒಳ ಹುನ್ನಾರಗಳ ಮುಂದೆ ಗಂಡಿನ ಅಸಹಾಯಕತೆಯನ್ನೂ, ಹೆಣ್ಣಿನ ಒಳಲೋಕದೊಳಗೆ ಗಂಡು ಪ್ರವೇಶಿಸಬಾರದು ಎಂಬ ಎಚ್ಚರಿಕೆಯನ್ನೂ ನೀಡಲಾಗುತ್ತಿದೆ. ಇದೆಲ್ಲದರ ನಡುವೆ ಗಂಡಿನ ಆಸಕ್ತಿ ಮತ್ತು ಅಸಹಾಯಕತೆಯ ಬಗೆಗೆ ವ್ಯಂಗ್ಯ, ಹಾಸ್ಯ ಮೂಡಿಬಂದಿರುವುದನ್ನು ಕಾಣಬಹುದು. ಅದೇ ರೀತಿ ವೈದೇಹಿಯವರ ತಿಳಿದವರೇ ಕೇಳ ಕವನ 'ಕಾವ್ಯ ಬರೆಯುವುದು ಗೊತ್ತಿಲ್ಲ ನನಗೆ' ಎನ್ನುತ್ತಲೇ ಮಹಿಳಾ ಕಾವ್ಯದ ಅನನ್ಯತೆಯನ್ನೂ, ಅದರ ಹರಹು, ವಿಸ್ತಾರಗಳನ್ನು, ಪುರುಷ ಪ್ರಭುತ್ವದ ಎದುರು ಅದರ ಮಹತ್ವವನ್ನೂ ಎತ್ತಿಹಿಡಿಯುತ್ತಾರೆ.

ಹಿಂದಿನಿಂದಲೂ ಪ್ರಧಾನ ಧಾರೆ ನಿರ್ದಿಷ್ಟ ಪಾತ್ರ ಮಾದರಿಗಳು ಹಾಗೂ ಮಾದರಿ ಪಾತ್ರಗಳ ಮೂಲಕ ಹೆಣ್ಣಿನ ವ್ಯಕ್ತಿತ್ವವನ್ನು ಗುರುತಿಸುವ, ಅದರ ಮೂಲಕ ಮೌಲ್ಯ ವ್ಯವಸ್ಥೆಯನ್ನು ಬಿತ್ತುವ ಕಾರ್ಯವನ್ನು ಮಾಡುತ್ತಾ ಬಂದಿದೆ. ಆದರೆ ಮಹಿಳಾ ಸೃಜನಶೀಲತೆ ಆ ಪಾತ್ರಗಳ ಮೂಲಕವೇ ತನ್ನ ಅಸ್ಮಿತೆಯನ್ನು ಕಂಡು ಕೊಳ್ಳಲು ಪ್ರಯತ್ನಿಸುತ್ತಿದೆ. ಹೆಣ್ತನ, ತಾಯ್ತನದ ಮಿತಿಗಳನ್ನು ಶಕ್ತಿಸಂಕೇತಗಳಾಗಿ ಗುರುತಿಸುವುದರೊಂದಿಗೆ, ಸೀತೆ, ಸಾವಿತ್ರಿ, ದ್ರೌಪದಿ, ಅಹಲ್ಯೆಯಂತಹ ಪುರುಷ ಅಪೇಕ್ಷಿತ ಪಾತ್ರ

ಮಾದರಿಗಳನ್ನು ಪುರುಷ ನಿರ್ಮಿತ ಕಥಾನಕಗಳಿಗೆ ಮುಖಾಮುಖಿಯಾಗುಸುವುದರ ಮೂಲಕವೇ ಅವು ಹೊಂದಿರಬಹುದಾದ ಸ್ತ್ರೀ ಮನಸ್ಸಿನ ಅಭಿವ್ಯಕ್ತಿಯನ್ನೂ, ಅಂತಃಶಕ್ತಿಯನ್ನೂ, ಪುರುಷ ಪ್ರಧಾನ ವ್ಯವಸ್ಥೆಯ ಬಗೆಗೆ ಅವರು ತೋರಿದ ಪ್ರತಿರೋಧವನ್ನೂ ಗುರುತಿಸಿ ಆ ಮೂಲಕ ಹೆಣ್ಣಿನ ಅಸ್ಮಿತೆಯನ್ನು, ಅವಳ ವ್ಯಕ್ತಿತ್ವದ ಬಹುಮುಖೀ ಆಯಾಮಗಳನ್ನು ಹೊರಗೆಳೆಯಲು ಪ್ರಯತ್ನಿಸುತ್ತಾರೆ. ಇದು ಮಹಿಳಾ ಕಾವ್ಯ ಪುರುಷ ಪ್ರಭುತ್ವದ ಎದುರು ತನ್ನನ್ನು ಗುರುತಿಸಿಕೊಂಡ, ತನ್ನ ವ್ಯಕ್ತಿತ್ವವನ್ನು ಕಂಡುಕೊಂಡ ಅತ್ಯಂತ ಮಹತ್ವದ ವಿಧಾನಗಳಲ್ಲೊಂದು.

ಇದರೊಂದಿಗೆ ಪುರುಷ ಪ್ರಭುತ್ವ ಹಿಂದಿನಿಂದ ನಿರ್ವಚಿಸುತ್ತಾ ಬಂದಿರುವ ಸೀತೆ, ಸಾವಿತ್ರಿ ಮುಂತಾದ ಮಾದರೀ ಪಾತ್ರಗಳ ಪುರುಷಾಪೇಕ್ಷಿತ ಗುಣಗಳ ವೈಭವೀಕರಣದ ಹಿಂದಿನ ರಾಜಕಾರಣವನ್ನು ಮಹಿಳಾ ಕಾವ್ಯ ಬಯಲಿಗೆಳೆಯುತ್ತದೆ. ಚಾಮುಂಡಿ, ಗೌರಿ, ದುರ್ಗೆ ಕಾಳಿಯರು ಪುರುಷ ಪ್ರಧಾನ ಹುನ್ನಾರಗಳಿಗೆ ಬಲಿಯಾದ ಬಗೆಯನ್ನು ಮನದಟ್ಟುಮಾಡಿಕೊಡುತ್ತಲೇ ಅವರ ಶಕ್ತಿಯನ್ನು ಮಹಿಳಾ ಕಾವ್ಯ ಗುರುತಿಸುತ್ತದೆ. ಈ ಪಾತ್ರಗಳು ಹೊಂದಿರಬಹುದಾದ ಸ್ತ್ರೀಯಾತ್ಮಕ ಮೌಲ್ಯಗಳನ್ನೂ, ಶಕ್ತ ವ್ಯಕ್ತಿತ್ವವನ್ನೂ ಕಾವ್ಯದ ಕಟ್ಟಲು ಪ್ರಯತ್ನಿಸಲಾಗಿದೆ. ಜೊತೆಗೆ ಈ ಪಾತ್ರಗಳ ಮೂಲಕ ಆಧುನಿಕ ಹೆಣ್ಣಿನ ಅಸ್ಮಿತೆಯನ್ನು ಕಟ್ಟುವ ವಿಧಾನ ಕೂಡ ಸಮರ್ಥವಾಗಿ ಮೂಡಿಬಂದಿದೆ. ಸುಕನ್ಯಾ ಮಾರುತಿ ಯವರ ಅಹಲ್ಯೆ, ಎಲ್.ಜಿ.ಸುಮಿತ್ರಾರವರ ಹುಟ್ಟಿದಳು ಶಕುಂತಲೆ.

ಹೆಣ್ಣು ಎದುರಿಸಬೇಕಾದ ತಾಯ್ತನದ ಹೊಣೆಗಾರಿಕೆ ಅವಳ ಸಮಾಜೋಸಾಂಸ್ಕೃತಿಕ ಮಿತಿ ಎಂದು ಪುರುಷ ಪ್ರಭುತ್ವ ಪರಿಗಣಿಸುತ್ತದೆ. ಆದರೆ ಮಹಿಳಾ ಕಾವ್ಯ ಆ ತಾಯ್ತನವನ್ನೇ ಹೆಣ್ಣಿನ ಶಕ್ತಿಕೇಂದ್ರವೆಂದೂ, ಹೆಣ್ಣಿನಿಂದ ಮಾತ್ರ ನಿರ್ವಹಿಸಬಹುದಾದ ಕೆಲಸವೆಂದೂ, ಪ್ರಕೃತಿ ತನಗೆ ನೀಡಿರುವ ಅತ್ಯಂತ ಮಹತ್ವದ ಕೊಡುಗೆಯೆಂದೂ ಗುರುತಿಸುವ ಮೂಲಕ ಹೆಣ್ಣಿನ ಅಸ್ಮಿತೆಯನ್ನು ಗುರುತಿಸುವ ವಿಧಾನವನ್ನು ಕಾಣಬಹುದು.

ಈಗಾಗಲೇ ಗುರುತಿಸಿರುವಂತೆ ಆಧುನಿಕ ಮಹಿಳಾ ಕಾವ್ಯದ ಮತ್ತೊಂದು ವಿಶೇಷತೆ ಯಾವುದನ್ನು ಪುರುಷ ಪ್ರಧಾನ ವ್ಯವಸ್ಥೆ ಅವಳ ಮಿತಿ ಎಂದು ಗುರುತಿಸಿತ್ತೊ ಅದನ್ನು ಮಹಿಳಾ ಕಾವ್ಯ ಹೆಣ್ಣಿನ ಶಕ್ತಿ ಕೇಂದ್ರಗಳೆಂದು ಗುರುತಿಸುವ ಮೂಲಕ ಅದರಲ್ಲಿರುವ ಹೆಣ್ಣಿನ ಅಸ್ಮಿತೆಯ ಚಹರೆಗಳನ್ನು ತಿಳಿಯಪಡಿಸುತ್ತದೆ. ಹೆಣ್ಣಿನ ಗೃಹನಿರ್ವಹಣೆ, ಅವಳ ದಿನ ನಿತ್ಯದ ಕೆಲಸ ಕಾರ್ಯಗಳು ಪುರುಷ ಪ್ರಭುತ್ವಕ್ಕೆ ವ್ಯರ್ಥ ಕಾಲಾಹರಣದಂತೆ ಕಂಡು ಬಂದರೂ ಅದನ್ನು ಹೆಣ್ಣಿನ ಶಕ್ತಿ ಕೇಂದ್ರ ಎಂದು ಮಹಿಳಾ ಕಾವ್ಯ ಗುರುತಿಸುತ್ತದೆ. ಉದಾ:

ಕೆಡದಂತೆ ಉಪ್ಪಿನಕಾಯನ್ನೂ

ಬಾಡದಂತೆ ಸೊಪ್ಪನ್ನು
ಕುಟ್ಟೆ ಹಿಡಿಯದಂತೆ ಕಾಳನ್ನೂ
ಅವಳು ಜೋಪಾನ ಮಾಡುತ್ತಾಳೆ.
ಮಡಿಕೆ ಕುಡಿಕೆ ಪಿಂಗಾಣಿಗಳ
ಒಡೆಯದಂತೆ ಒಪ್ಪ ಮಾಡುತ್ತಾಳೆ.
ಅವಳನ್ನೇನು ಒಪ್ಪಮಾಡಬಹುದು?
ಮನದ ಕನ್ನಡಿಯಲ್ಲಿ
ಯಾರೂ ಬಿಂಬಿಸದೆ ಬದುಕು ಒರಸಿಟ್ಟು ಹೋದಾಗ
ನೆಲವ ಕನ್ನಡಿ ಮಾಡಿ ತನ್ನ ತಾನೇ ನೋಡಿಕೊಳ್ಳುತ್ತಾಳೆ.[೬೫]

ಪ್ರತಿಭಾ ನಂದಕುಮಾರ್ ಅವರ ಕೇರ್ ಫ್ರೀ ಮಹಿಳೆಯರು ಕವನ ಆಧುನಿಕತೆಯ ಭರಾಟೆಯಲ್ಲಿ ಸಿಕ್ಕ ಹೆಣ್ಣು ಆಧುನಿಕ ಜೀವನ ಕ್ರಮಕ್ಕೂ, ಪುರುಷ ಪ್ರಧಾನ ಮೌಲ್ಯವ್ಯವಸ್ಥೆಗೂ ಎದುರಾಗುತ್ತಲೇ ತನ್ನ ಅಸ್ಮಿತೆಯನ್ನು ಕಂಡು ಕೊಳ್ಳುವ ವಿಧಾನವನ್ನು ಕುರಿತಂತೆ ಚರ್ಚಿಸುತ್ತದೆ.

ಹಾಗೆಯೇ ಅಡುಗೆ ಮನೆ ಹೆಣ್ಣಿನ ಬಂಧನದ ಕೇಂದ್ರವೂ ಹೌದು, ಅವಳ ಶಕ್ತಿ ಸಾಧ್ಯತೆಗಳ ಸಾಧನೆಯ ಕ್ಷೇತ್ರವೂ ಹೌದು ಎಂಬುದನ್ನು ಮಹಿಳಾ ಕಾವ್ಯ ಮತ್ತೆ ಮತ್ತೆ ಚರ್ಚೆಗೆ ಒಳಪಡಿಸುತ್ತದೆ. ಅಡುಗೆ ಮನೆಯ ಪರಿಕರಗಳ ಮೂಲಕವೇ ತನ್ನೆಲ್ಲಾ ಬಯಕೆಗಳನ್ನು ಸಾಕಾರಗೊಳಿಸಿಕೊಳ್ಳುವ ವಿಧಾನವನ್ನು ಮಹಿಳಾ ಕಾವ್ಯ ಬಿಚ್ಚಿಡುತ್ತದೆ. ಲತಾಗುತ್ತಿ ಅಡುಗೆ ಮನೆಯನ್ನು ಹೆಣ್ಣಿನ ಬಂಧನದ ಕ್ಷೇತ್ರವೆಂದು ಗುರುತಿಸಿದರೆ ವೈದೇಹಿಯವರು ಇದು ಬಂಧನವಾದರೂ ಹೆಣ್ಣಿಗೆ ಕನಸುಕಾಣುವ, ಕನಸನ್ನು ಸಾಕಾರಗೊಳಿಸಿಕೊಳ್ಳುವ ಅವಕಾಶಗಳನ್ನು ಕಲ್ಪಿಸುವ ಏಕೈಕ ನೆಲೆ ಅಡುಗೆ ಮನೆ ಎನ್ನುತ್ತಾರೆ. ಇವರಿಗಂತ ಭಿನ್ನವಾಗಿ ಪ್ರತಿಭಾ ತನ್ನೆಲ್ಲಾ ಸಿಟ್ಟು, ಆಕ್ರೋಶ, ಸಮಾಧಾನಗಳಿಗೆ ಅಡುಗೆ ಮನೆ ಕಾರಣವಾಗಿರುವುದನ್ನೂ, ಅದರ ಮೂಲಕವೇ ವ್ಯವಸ್ಥೆಯ ವಿರುದ್ಧದ ತನ್ನೆಲ್ಲಾ ಪ್ರತಿಭಟನೆಯನ್ನು ವ್ಯಕ್ತಪಡಿಸುತ್ತಿರುವುದನ್ನೂ ತಿಳಿಸುತ್ತಾರೆ.

ಆದರೂ ಸಮುದಾಯದ ಸಂದರ್ಭದಲ್ಲಿ ಗಂಡು ಹೆಣ್ಣು ಶ್ರೇಣೀಕರಣಕ್ಕೆ ಒಳಗಾಗಿದ್ದು ಪರಸ್ಪರ ವಿರೋಧಿಗಳಂತೆ ಕಂಡುಬಂದರೂ ಕೂಡ ಜೀವನ ನಿರ್ವಹಣೆಯ ಸಂದರ್ಭದಲ್ಲಿ ಪರಸ್ಪರ ಪ್ರೀತಿ ವಿಶ್ವಾಸದ ಅನಿವಾರ್ಯತೆ ಹಾಗೂ ಅಗತ್ಯತೆಗಳನ್ನು ಮಹಿಳಾ ಕಾವ್ಯ ಚರ್ಚೆಗೆ ಒಳಪಡಿಸುತ್ತದೆ. ಎಷ್ಟೇ ಭಿನ್ನತೆ, ವೈರುಧ್ಯಗಳಿದ್ದರೂ ಕೂಡ ಸಾಮಾಜಿಕ ಸ್ವಾಸ್ಥ್ಯದ ಆಶಯವನ್ನು ಮೀರಿ ವೈಯಕ್ತಿಕ ನೆಲೆಯಲ್ಲಿಯೇ ಗಂಡಿಗೆ ಹೆಣ್ಣು, ಹೆಣ್ಣಿಗೆ ಗಂಡಿನ ಅವಶ್ಯಕತೆಯ ನೆಲೆಗಳನ್ನು ಮಹಿಳಾಕಾವ್ಯ ಕಟ್ಟಿಕೊಕಡಲು ಪ್ರಯತ್ನಿಸುತ್ತದೆ. ಮೇಲ್ನೋಟಕ್ಕೆ ಗಂಡು ಹೆಣ್ಣಿಗೆ ಆಸರೆಯಾಗಿ ಹೆಣ್ಣು ಗಂಡನ್ನು ಅವಲಂಬಿಸಿ ಬದುಕುತ್ತಿರುವಂತೆ ಕಂಡುಬಂದರೂ ವಾಸ್ತವದಲ್ಲಿ ಇಬ್ಬರದೂ ಪರಸ್ಪರ ಪೂರಕವಾದ ಪಾತ್ರ. ಒಬ್ಬರನ್ನು ಬಿಟ್ಟು ಮತ್ತೊಬ್ಬರು ಪರಿಪೂರ್ಣ ಜೀವನವನ್ನು ಕಟ್ಟಿಕೊಳ್ಳಲಾರದ ಅಸಹಾಯಕತೆ ದಾಂಪತ್ಯದ ಒಂದು ಹಂತದಲ್ಲಿ ಕಂಡುಬಂದರೆ ಮತ್ತೊಂದು ಹಂತದಲ್ಲಿ ಪರಸ್ಪರ ಅವಲಂಬನೆ ಅನಿವಾರ್ಯ ಎನಿಸಿಬಿಡುತ್ತದೆ. ಪುರುಷ

ಅಹಂ ಇದನ್ನು ನಿರಾಕರಿಸಿದರೂ ಕೂಡ ವಾಸ್ತವದ ಸ್ಥಿತಿ ಇದೇ ಎಂಬುದನ್ನು ಮಹಿಳಾ ಕಾವ್ಯ ಬಯಲಿಗೆಳೆಯುತ್ತದೆ. ಪುರುಷ ಪ್ರಭುತ್ವದ ಪ್ರಧಾನ, ಅಧೀನ ನೆಲೆಗಳನ್ನು ಮೀರಿ ಮಹಿಳಾ ಕಾವ್ಯ ಸಾಮಾಜಿಕ ವಾಸ್ತವದ ಅರಿವಿನಲ್ಲಿಯೇ ಗಂಡು ಹೆಣ್ಣಿನ ಸಂಬಂಧವನ್ನು ನಿರ್ವಚಿಸುವುದರೊಂದಿಗೆ ತನ್ನ ಅಸ್ಮಿತೆಯನ್ನು ಕಟ್ಟಿಕೊಳ್ಳಲು ಪ್ರಯತ್ನಿಸುತ್ತದೆ. ಗಂಡು ತನ್ನ ಅಧಿಕಾರ ಹಾಗು ಧರ್ಪದ ಮೂಲಕ ಹೆಣ್ಣನ್ನು ನಿಯಂತ್ರಿಸಲು ಪ್ರಯತ್ನಿಸುವಷ್ಟೇ ನಿಷ್ಟೆಯಿಂದ ಹೆಣ್ಣಿನ ಪ್ರೀತಿಗೂ ಕೂಡ ಹಾತೊರೆಯುತ್ತಾನೆ ಎನ್ನುವುದೂ ಕೂಡ ಅಷ್ಟೇ ವಾಸ್ತವ. ಅದೇ ರೀತಿ ಹೆಣ್ಣಿಗೂ ಕೂಡ ಗಂಡಿನ ಪೀತಿಯ ಅಗತ್ಯವಿದೆ ಎಂಬುದನ್ನು ಮಹಿಳಾ ಕಾವ್ಯ ಪ್ರತಿಪಾದಿಸುತ್ತದೆ. ಹಾಗಾಗಿ ಹೆಣ್ಣಿನ ಬದುಕು ಹಾಗೂ ಅಭಿವ್ಯಕ್ತಿಯಲ್ಲಿ ವ್ಯವಸ್ಥೆಯೊಂದಿಗಿನ ಅನುಸಂಧಾನ ಹಾಗೂ ಪುನರ್ರಚನೆ ಒಂದರೊಡನೊಂದು ಬೆಸೆದುಕೊಂಡು ನಿರಂತರವಾಗಿ ಸಾಗಿಬಂದಿದೆ. ಆದರೆ ಇದರ ತೀವ್ರತೆ, ಆಯ್ಕೆ, ಅಭಿವ್ಯಕ್ತಿ ಕ್ರಮ ಹಾಗೂ ಎದುರುಗೊಳ್ಳುವ ವಿಧಾನದಲ್ಲಿ ಮಾತ್ರ ಭಿನ್ನತೆ ಇದೆ ಎಂಬುದು ಪ್ರಸ್ತುತ ಅಧ್ಯಯನದಿಂದ ಕಂಡುಬರುತ್ತದೆ.

**ಕೊನೆ ಟಿಪ್ಪಣಿ**

೧. ಶ್ರೀಮತಿ ನಂಜನಗೂಡು ತಿರುಮಲಾಂಬಾ ಜೀವನ ಮತ್ತು ಸಾಹಿತ್ಯ. ಪ್ರ. ಸಂ. : ಪ್ರೊ.ಎಲ್.ಎಸ್.ಶೇಷಗಿರಿರಾವ್. ಪು.ಸಂ ೧೧೫
೨. ಕಲ್ಯಾಣ ಸರಸ್ವತಿ, ಡಾ॥ಬಿ.ಎನ್.ಸುಮಿತ್ರಾಬಾಯಿ ಪು.ಸಂ. ೫
೩. ಆಧುನಿಕ ಮಹಿಳಾ ಅಭಿವ್ಯಕ್ತಿ, ಗೀತಾ ಪ್ರಸಾದ್ ಪು.ಸಂ.೫೭
೪. ಕಲ್ಯಾಣ ಸರಸ್ವತಿ. ಡಾ.ಬಿ.ಎನ್.ಸುಮಿತ್ರಾಬಾಯಿ, ಪು.ಸಂ.೬೪
೫. ಅದೇ, ಪು.ಸಂ.೫೫
೬. ಶ್ರೀಮತಿ ನಂಜನಗೂಡು ತಿರುಮಲಾಂಬಾ ಜೀವನ ಮತ್ತು ಸಾಹಿತ್ಯ. ಪ್ರ. ಸಂ. : ಪ್ರೊ.ಎಲ್.ಎಸ್.ಶೇಷಗಿರಿರಾವ್ ಪು.ಸಂ.೩೮
೭. ಸಮಗ್ರ ದಾಸ ಸಾಹಿತ್ಯ ಸಂಪುಟ: ೧೮ – ಭಾಗ ೪, ಪು.ಸಂ.೪೦೮,
೮. ಅದೇ, ದಶಾವತಾರದ ನಿಂದ್ಯಾಸ್ತುತಿಗಳು ಪು.ಸಂ.೪೧೩,
೯. ಮುಂತಾದ ಕೆಲ ಪುಟಗಳು, (ಸರಸ್ವತಿಬಾಯಿ ರಾಜವಾಡೆ ಅವರ ಬದುಕು ಮತ್ತು ಬರಹ) ವೈದೇಹಿ (ನಿರೂಪಣೆ ಮತ್ತು ಸಂಪಾದನೆ) ಪು.ಸಂ.೭೬
೧೦. ಅದೇ, ಪು.ಸಂ.೭೬

೧೧. ಅದೇ, ಪು.ಸಂ. ೫೪
೧೨. ಬೆಳಗೆರೆ ಜಾನಕಮ್ಮ ಬದುಕು – ಬರಹ, ಸಂ. ನೇಮಿಚಂದ್ರ, ಗಂಡ ಪು.ಸಂ. ೭೭
೧೩. ಅದೇ, ಪು.ಸಂ. ೭೭
೧೪. ಅದೇ, ಪು.ಸಂ. ೧೨೧
೧೫. ಅದೇ, ಪು.ಸಂ. ೬೯
೧೬. ಅದೇ, ಪು.ಸಂ. ೯೪
೧೭. ಅದೇ, ಪು.ಸಂ. ೭೭
೧೮. ಚಹರೆ – ಡಾ. ಹೆಚ್.ಎಸ್. ಶ್ರೀಮತಿ ಪು.ಸಂ. ೭೨
೧೯. ನಾನೆಂಬ ಮಾಯೆ, ಸುಕನ್ಯಾ ಮಾರುತಿ, ಪು.ಸಂ. ೧೨೯
೨೦. ಅದೇ, ಪು.ಸಂ. ೨೬೩
೨೧. ಅದೇ, ಪು.ಸಂ.೮
೨೨. ಬಾ ಪರೀಕ್ಷೆಗೆ, ಮಾಲತಿ ಪಟ್ಟಣಶೆಟ್ಟಿ, ಪು.ಸಂ.೪೨
೨೩. ಚಹರೆ – ಡಾ. ಹೆಚ್.ಎಸ್. ಶ್ರೀಮತಿ ಪು.ಸಂ. ೩೦
೨೪. ಇತಿಗೀತಿಕೆ, ವಿಜಯಾದಬ್ಬೆ, ಪು.ಸಂ.೧೮
೨೫. ಸ್ವಗತ, ಶೈಲಜಾ ಉಡಚಣ ಪು.ಸಂ. ೨೦
೨೬. ಕನ್ನಡ ಮಹಿಳಾ ಸಾಹಿತ್ಯ ಚರಿತ್ರೆ, ಡಾ. ಸಂಧ್ಯಾರೆಡ್ಡಿ ಪು.ಸಂ. ೩೭೦
೨೭. ಶೈಲಜಾ ಸಮಗ್ರ ಕಾವ್ಯ, ಶೈಲಜಾ ಉಡಚಣ, ಮುನ್ನುಡಿಯಿಂದ
೨೮. ಚಹರೆ – ಡಾ. ಹೆಚ್.ಎಸ್. ಶ್ರೀಮತಿ ಪು.ಸಂ. ೫೧
೨೯. ಜೀವಸಾವುಗಳ ನಡುವೆ, ಶಶಿಕಲಾ ವಸ್ತ್ರದ, ಪು.ಸಂ.೩೨
೩೦. ಲಕ್ಷ್ಮಣ ರೇಖೆ ದಾಟಿದವರು, ವಿಜಯಶ್ರೀ ಸಬರದ, ಪು.ಸಂ.೨೪
೩೧. ಗರಿಗೆದರಿ, ಮಾಲತಿ ಪಟ್ಟಣ ಶೆಟ್ಟಿ, ಪು.ಸಂ.೧೦
೩೨. ಹವಳ ಹಾರಿದ ಹೊತ್ತು, ಸ.ಉಷಾ, ಪು.ಸಂ.೧೬
೩೩. ಅದೇ, ಪು.ಸಂ.೧೮
೩೪. ಸ್ಪರ್ಶರೇಖೆಗಳು, ಎಲ್.ಜಿ.ಸುಮಿತ್ರಾ, ಪು.ಸಂ.೧೭
೩೫. ಚಹರೆ – ಡಾ. ಹೆಚ್.ಎಸ್. ಶ್ರೀಮತಿ ಪು.ಸಂ. ೮೩
೩೬. ಅದೇ, ಪು.ಸಂ.೧೧೭
೩೭. ಅದೇ, ಪು.ಸಂ.೧೧೮
೩೮. ಮುನ್ನುಡಿ ಬೆನ್ನುಡಿಗಳ ನಡುವೆ, ಪ್ರತಿಭಾನಂದಕುಮಾರ್ ಪು.ಸಂ.೯
೩೯. ಅದೇ, ಪು.ಸಂ.೧೩
೪೦. ಇತಿಗೀತಿಕೆ, ವಿಜಯಾದಬ್ಬೆ, ಪು.ಸಂ.೪೮
೪೧. ಮುನ್ನುಡಿ ಬೆನ್ನುಡಿಗಳ ನಡುವೆ, ಪ್ರತಿಭಾನಂದಕುಮಾರ್ ಪು.ಸಂ.೯
೪೨. ಇತಿಗೀತಿಕೆ, ವಿಜಯಾದಬ್ಬೆ, ಪು.ಸಂ ೩೩
೪೩. ಶೈಲಜಾ ಸಮಗ್ರ ಕಾವ್ಯ, ಶೈಲಜಾ ಉಡಚಣ, ಪು.ಸಂ.೧೮
೪೪. ಬಿಂದು ಬಿಂದಿಗೆ, ವೈದೇಹಿ, ಪು.ಸಂ. ೩೯
೪೫. ಮುನ್ನುಡಿ ಬೆನ್ನುಡಿಗಳ ನಡುವೆ, ಪ್ರತಿಭಾನಂದಕುಮಾರ್ ಪು.ಸಂ ೫೨

# ಅಧ್ಯಾಯ ೫

## ಸ್ಥಾಪಿತ ಮೌಲ್ಯಗಳ ಕಾರ್ಯಮಾದರಿಗಳು ಮತ್ತು ಪಿತೃಸಂಸ್ಕೃತಿ

## ಅಧ್ಯಾಯ ೫

## ಸ್ಥಾಪಿತ ಮೌಲ್ಯಗಳ ಕಾರ್ಯಮಾದರಿಗಳು ಮತ್ತು ಪಿತೃಸಂಸ್ಕೃತಿ

ಸಮುದಾಯ, ಕುಟುಂಬ ಮುಂತಾದ ಎಲ್ಲ ಸಾಂಸ್ಥಿಕ ವಲಯಗಳೂ ಮೂಲದಲ್ಲಿ ಜೀವಿಗಳೆಲ್ಲರ ಸಮಾನ ಸಹಭಾಗಿತ್ವವನ್ನು ಅಪೇಕ್ಷಿಸಿ ರೂಪುಗೊಂಡಿವೆ. ಆದರೆ ಸಮಾಜವು ಹಲವು ರೀತಿಯ ಶ್ರೇಣೀಕರಣಕ್ಕೆ ಒಳಪಟ್ಟಿದ್ದು, ಇದು ಹಲಬಗೆಯ ತಾರತಮ್ಯವನ್ನು ಸೃಷ್ಟಿಸಲು ಸಹಕಾರಿಯಾಗಿರುವುದರಿಂದಾಗಿ ಸಮುದಾಯದಲ್ಲಿ ಗಂಡು ಹೆಣ್ಣಿನ ಸಮಾನ ಸಹಭಾಗಿತ್ವಕ್ಕೆ ಬದಲಾಗಿ ಪುರುಷ ಸ್ವಾಮ್ಯವೆ ಪ್ರಧಾನವಾಗಿದೆ. ಈ ಶ್ರೇಣೀಕರಣವು ಪ್ರಬಲ ವರ್ಗಗಳು ಅಧಿಕೃತವಾಗಿ ಮಾನ್ಯತೆಯನ್ನೂ, ಅಧಿಕಾರವನ್ನು ತನ್ನ ಹಿಡಿತಕ್ಕೆ ತೆಗೆದುಕೊಳ್ಳಲು ಅವಕಾಶಗಳನ್ನು ಕಲ್ಪಿಸಿದೆ. ಇದರಿಂದಾಗಿ ಸಮಾಜದಲ್ಲಿರುವ ಒಂದು ವರ್ಗ ಇನ್ನೊಂದು ವರ್ಗದ ಮೇಲೆ ಹಿಡಿತವನ್ನು ಸಾಧಿಸಲು, ಅದನ್ನು ಅಧೀನವಾಗಿಸಿಕೊಳ್ಳಲು ಪ್ರೇರೇಪಿಸುವುದು ಮಾತ್ರವಲ್ಲದೆ, ಮಾನವ ಸಹಜ ಗುಣಗಳನ್ನು ಇಲ್ಲವಾಗಿಸಿ ಭಯ, ಆತಂಕದಲ್ಲಿ ಜೀವಿಸಬೇಕಾದ ಅನಿವಾರ್ಯತೆಯನ್ನು ಸೃಷ್ಟಿಸಿದೆ. ಕಾಲಾನಂತರದಲ್ಲಿ ಭಯ, ಆತಂಕಗಳು ದೂರವಾದರೂ ಕೂಡ ಹೇರಲ್ಪಟ್ಟ ಜೀವನ ವಿಧಾನವೇ 'ನೈಜ' ಎಂಬ ಭ್ರಮೆ ಮೂಡುತ್ತದೆ. ಈ ರೀತಿಯ ಭ್ರಮೆಗೆ ಒಳಗಾದವರು ತಮ್ಮ ಅಸ್ತಿತ್ವವನ್ನು ಗುರುತಿಸಿಕೊಳ್ಳುವ ಪ್ರಯತ್ನಕ್ಕೆ ಮುಂದಾಗುವ ಸಂದರ್ಭದಲ್ಲಿ ಹಲವು ಸವಾಲು, ಸಮಸ್ಯೆಗಳನ್ನು ಎದುರಿಸಬೇಕಾಗುತ್ತದೆ. ಇದು ಶೋಷಿತರು, ದಮನಿತರು ಹಾಗೂ ಅದರಲ್ಲೂ ಸ್ತ್ರೀ ಸಮುದಾಯಕ್ಕೆ ಹೆಚ್ಚಿನ ಪ್ರಮಾಣದಲ್ಲಿ ಅನ್ವಯಿಸುತ್ತದೆ. ಆದರೆ ಆಧುನಿಕತೆ ಈ ಸಮುದಾಯಗಳಿಗೆ ತನ್ನ ಅಸ್ತಿತ್ವವನ್ನು ಗುರುತಿಸಿಕೊಳ್ಳಲು ಅವಕಾಶಗಳನ್ನು ಕಲ್ಪಿಸಿಕೊಡುತ್ತದೆಯಾದರೂ ಪ್ರಭುತ್ವ ಕೇಂದ್ರಿತ ನೆಲೆಗಳು ಇದು ಯಶಸ್ವಿಯಾಗದಂತೆ ನಿರಂತರ ಹುನ್ನಾರಗಳನ್ನು ರೂಪಿಸುತ್ತಾ, ಅಧೀನ ನೆಲೆಗಳನ್ನು ಅಧಿಕೃತಗೊಳಿಸುವ ಪ್ರಯತ್ನದಲ್ಲಿ ನಿರತವಾಗಿವೆ ಎಂಬುದು ಸಾಹಿತ್ಯಾಧ್ಯಯನದಿಂದ ಸ್ಪಷ್ಟವಾಗುತ್ತದೆ. ಅದರಲ್ಲೂ ಲಿಂಗ ಶ್ರೇಣೀಕರಣದ ಚಹರೆಗಳು ಮಹಿಳಾ ಕಾವ್ಯದಲ್ಲಿ ಯತೇಚ್ಛವಾಗಿ ದಾಖಲಾಗಿರುವುದರಿಂದ ಈ ಅಧ್ಯಯನವು ಮತ್ತಷ್ಟು ಮಹತ್ವವನ್ನು ಪಡೆದಿದೆ.

ಸಮಾಜದಲ್ಲಿ ಲಿಂಗ ಶ್ರೇಣೀಕರಣ ವ್ಯವಸ್ಥೆ ರೂಪುಗೊಳ್ಳುವಲ್ಲಿ ಪಿತೃಸಂಸ್ಕೃತಿಯ ಪಾತ್ರ ಪ್ರಧಾನವಾದದ್ದು. ಪಿತೃಸಂಸ್ಕೃತಿಯ ಅಧಿಕಾರ ಕೇಂದ್ರವಾಗಿ ಮೌಲ್ಯವ್ಯವಸ್ಥೆ ಕಾರ್ಯ ನಿರ್ವಹಿಸುತ್ತಿದೆ. ಆದುದರಿಂದಾಗಿ 'ಸ್ಥಾಪಿತ ಮೌಲ್ಯಗಳ ಕಾರ್ಯಮಾದರಿಗಳು ಮತ್ತು ಪಿತೃ ಸಂಸ್ಕೃತಿ' ಒಂದರೊಡನೊಂದು ಅವಿನಾಭಾವ ಸಂಬಂಧವನ್ನು ಹೊಂದಿದ್ದು, ಇವು ಪರಸ್ಪರ ಪೂರಕ ಹಾಗೂ

ಪೋಷಕವಾಗಿ ಕಾರ್ಯ ನಿರ್ವಹಿಸುತ್ತಿರುತ್ತವೆ. ಪಿತೃ ಪ್ರಭುತ್ವ ಈ ಶ್ರೇಣೀಕರಣವನ್ನು ಸಾಮಾಜಿಕ, ರಾಜಕೀಯ, ಆರ್ಥಿಕ ಕ್ಷೇತ್ರಗಳಲ್ಲಿ ನೆಲೆಗೊಳಿಸುವುದು ಮಾತ್ರವಲ್ಲದೆ ಅದಕ್ಕೆ ಆಧ್ಯಾತ್ಮದ ನಂಟನ್ನು ಬೆಸೆಯುವುದರ ಮೂಲಕ ತನ್ನ ಪ್ರಾಧಾನ್ಯತೆಯನ್ನು ನಿರಂತರವಾಗಿ ಕಾಯ್ದುಕೊಂಡು, ಉಳಿದ ಜೀವಿಗಳನ್ನು ಅಧೀನಕ್ಕೆ ಒಳಪಡಿಸಿಕೊಂಡಿದೆ. ಶ್ರೇಣೀಕರಣದಿಂದ ಸೃಷ್ಟಿಯಾಗಿರುವ ಎಲ್ಲಾ ಮಾನವ ಸಮುದಾಯಗಳಲ್ಲೂ ಹೆಣ್ಣು ಶೋಷಣೆಗೆ ಒಳಪಟ್ಟವಳಾಗಿದ್ದು ಪುರುಷ ಪ್ರಭುತ್ವದ ಹಿಡಿತದಲ್ಲೇ ತನ್ನೆಲ್ಲಾ ಚಟುವಟಿಕೆಗಳನ್ನು ನಡೆಸುವಂತಾಗಿದೆ. ಈ ಹಿಂದೆಯೇ ಚರ್ಚಿಸಿರುವಂತೆ ಅಧೀನತೆಗೆ ಒಳಗಾದ ಸಮುದಾಯ ತನ್ನ ಸ್ವಂತಿಕೆಯನ್ನು ಕಳೆದುಕೊಂಡಿದ್ದು, ತನ್ನ ಸಹಜ ಬಯಕೆ ಹಾಗೂ ಹೇರಲ್ಪಟ್ಟ ಬಯಕೆಗಳ ನಡುವೆ ವ್ಯತ್ಯಾಸವನ್ನು ಗುರುತಿಸಲಾರದಂತಹ ಸ್ಥಿತಿ ನಿರ್ಮಾಣವಾಗಿದೆ. ಹೆಣ್ಣಿನ ಈ ಸ್ಥಿತಿಗೆ ಪಿತೃ ಪ್ರಧಾನ ಸಂಸ್ಕೃತಿಯ ತಾರತಮ್ಯ ಧೋರಣೆಯೇ ಮುಖ್ಯ ಕಾರಣ ಎಂಬುದು ಸ್ತ್ರೀವಾದಿ ಸಾಹಿತ್ಯಾಧ್ಯಯನದಿಂದ ಸ್ಪಷ್ಟವಾಗುತ್ತದೆ.

ಅಲೆಮಾರಿ ಜನಾಂಗದಿಂದ ಆರಂಭವಾದ ಪ್ರಧಾನ–ಅಧೀನ, ಯಜಮಾನ–ಆಳು, ಶೋಷಕ–ಶೋಷಿತ ಚಿಂತನೆಗಳು ಹೆಣ್ಣಿನ ಜೀವನ ಕ್ರಮದಲ್ಲಿ ಇಂದಿಗೂ ಕೂಡ ಬೇರೆ ಬೇರೆ ರೂಪಗಳಲ್ಲಿ, ಕಾರ್ಯಮಾದರಿಗಳಲ್ಲಿ ಪ್ರಕಟಗೊಳ್ಳುತ್ತಿವೆ. ಮಕ್ಕಳ ಪಾಲನೆ–ಪೋಷಣೆ, ಆಹಾರ ಸಂಗ್ರಹಣೆ, ಸಂಪತ್ತಿನ ಕ್ರೋಢೀಕರಣ ಮುಂತಾದ ಕಾರಣಗಳಿಂದಾಗಿ ರೂಪುಗೊಂಡ ಶ್ರಮ ವಿಭಜನೆ ಅವರು ಪಾಲಿಸಲೇಬೇಕಾದ ಕರ್ತವ್ಯಗಳಾಗಿ, ಜವಾಬ್ದಾರಿಗಳಾಗಿ ರೂಪುಗೊಂಡಿವೆ. ಮಾತ್ರವಲ್ಲದೆ ಶ್ರಮದ ಹಂಚಿಕೆ ಕೂಡ ಮೌಲ್ಯವ್ಯವಸ್ಥೆಯ ಭಾಗವಾಗಿದ್ದು, ಅದನ್ನೇ ಸ್ಥಿರೀಕರಿಸುವ ಹುನ್ನಾರಗಳು ನಡೆಯುತ್ತಲೇ ಇವೆ. ವರ್ಗ ಶ್ರೇಣೀಕರಣಕ್ಕೆ ಸಂಬಂಧಿಸಿದ ಶ್ರಮ ವಿಭಜನೆಯನ್ನು ಕುರಿತಂತೆ ಅನೇಕ ರೀತಿಯ ಸುಧಾರಣೆಗಳು, ಹೊಸ ಅವಕಾಶಗಳು ತೆರೆದುಕೊಂಡಿವೆ. ಆದರೆ ಲಿಂಗ ಶ್ರೇಣೀಕರಣದ ಶ್ರಮ ವಿಭಜನೆಯಲ್ಲಿ ಮಾತ್ರ ಎಂತಹ ಸುಧಾರಣೆಗಳಾದರೂ ಹೆಚ್ಚಿನ ಮಟ್ಟದ ವ್ಯತ್ಯಾಸವೇನು ಆಗಿಲ್ಲ ಎಂಬುದೇ ವಿಶೇಷ.! ಮಕ್ಕಳ ಲಾಲನೆ, ಪಾಲನೆ, ಗೃಹಕೃತ್ಯಗಳು, ಮಾತೃತ್ವ, ಗೃಹಿಣಿತ್ವ, ಸೇವೆ ಎಂದೆಲ್ಲಾ ವೈಭವೀಕರಣಗೊಂಡು ಮೌಲ್ಯಗಳಾಗಿ ಹೆಣ್ಣಿನ ಬಂಧನದ ಕೇಂದ್ರಗಳಾಗಿಯೇ ಇಂದಿಗೂ ಕೂಡ ಮುಂದುವರಿಯುತ್ತಿವೆ.

ಹೆಣ್ಣು ಮತ್ತು ಗಂಡಿನ ಜೈವಿಕತೆಯನ್ನು ಕುರಿತಂತೆ ಆರಂಭದಲ್ಲಿ ಹುಟ್ಟಿಕೊಂಡ ಭಯ, ವಿಸ್ಮಯ, ಕುತೂಹಲ, ಆತಂಕಗಳು ಗಂಡು–ಹೆಣ್ಣಿನ ದೈಹಿಕ ಭಿನ್ನತೆಯನ್ನು ಗುರುತಿಸಲು ಕಾರಣವಾದವು. ಹೆಣ್ಣಿನ ಜೈವಿಕ ಚಲನೆಗಳು ಗಂಡಿನದಕ್ಕಿಂತ ಬೇರೆಯಾದ ಕಾರಣ ಅದರ ಬಗೆಗಿನ ಭಯ ಹಾಗೂ ಅದು ತನ್ನ ಅಧಿಕಾರ ವ್ಯಾಪ್ತಿಯನ್ನು ಮೀರಿದ್ದು ಎಂಬ ಆಲೋಚನೆ, ಹೊರಗಿನ ಶಕ್ತಿಸಂಚಲನದಲ್ಲಿ ಭಾಗವಹಿಸುವ ಅವಕಾಶವಿದ್ದ ಗಂಡಿಗೆ ಆತಂಕವನ್ನು ಸೃಷ್ಟಿಸಿತು. ಇದರಿಂದಾಗಿ ಅವಳ ಜೈವಿಕ ವಿನ್ಯಾಸಗಳನ್ನೇ ಅವಳ ಮಿತಿಗಳಾಗಿ, ಅವಳ ವ್ಯಕ್ತಿತ್ವದ ಚಹರೆಗಳಾಗಿ ಬಿಂಬಿಸುವುದರ ಮೂಲಕ ಹೆಣ್ಣಿನ ದೇಹ ಗಂಡಿನ ದೇಹಕ್ಕಿಂತ ಕೆಳಮಟ್ಟದೆಂದೂ, ಅದು ಯಾವಾಗಲೂ ಇನ್ನೊಬ್ಬರ ಆಶ್ರಯದಲ್ಲಿಯೇ ಬದುಕಬೇಕಾದ ಅಧೀನ ನೆಲೆಯದೆಂದೂ ಬಿಂಬಿಸಲಾಯಿತು.

ಈ ರೀತಿ ಹೆಣ್ಣಿನ ದೇಹ ಪುರುಷನ ಅಧೀನಕ್ಕೆ ಒಳಪಡಬೇಕಾದ ಸರಕಾಗಿ, ಅದು ನಿರಂತರವಾಗಿ ಗಂಡಿನ ಹಿಡಿತದಲ್ಲಿಯೇ ಇರಬೇಕಾದ ವಸ್ತುವನ್ನಾಗಿ ಮಾರ್ಪಡಿಸಲಾಯಿತು. ಇದನ್ನು ನಿರಂತರವಾಗಿ ಕಾಯ್ದುಕೊಂಡ ಪಿತೃಪ್ರಭುತ್ವ ಅವಳ ದೇಹದ ಮೇಲೆ ಒಡೆತನವನ್ನು ಸಾಧಿಸಿ ಅವಳನ್ನು ತನ್ನ ಅಧೀನವಾಗಿಸಿಕೊಳ್ಳುವ ಸಲುವಾಗಿ ವಿವಾಹ, ದಾಂಪತ್ಯ, ಕುಟುಂಬ ಮುಂತಾದ ಸಾಂಸ್ಥಿಕ ರಚನೆಗಳನ್ನು ರೂಪಿಸಿತು. ಇದನ್ನು ಸ್ಥಿರವಾಗಿರಿಸಿ, ಕಾಯ್ದುಕೊಳ್ಳುವ ಸಲುವಾಗಿ ಸತೀತ್ವ, ಪಾತಿವ್ರತ್ಯ, ವೈಧವ್ಯಪಾಲನೆಯಂತಹ ಆಚರಣೆಗಳು ಜಾರಿಗೆ ಬಂದವು.

ಮನೆಯ ಒಳಗಿನ ಮತ್ತು ಹೊರಗಿನ ಕಾರ್ಯ ಹಂಚಿಕೆಯ ಕಾರಣದಿಂದಾಗಿ ಹೆಣ್ಣಿಗೆ ದತ್ತವಾದ ಗೃಹಕೃತ್ಯ ಅವಳ ದೈಹಿಕ, ಮಾನಸಿಕ ಚಟುವಟಿಕೆಗಳನ್ನು ಸೀಮಿತಗೊಳಸಿತು. ಇದರಿಂದಾಗಿ ಅವಳ ಸಾಮರ್ಥ್ಯ, ಶಕ್ತಿ, ಸೃಜನಶೀಲತೆ, ಅಭಿವ್ಯಕ್ತಿ ಎಲ್ಲವೂ ಗೃಹ ಕೇಂದ್ರಿತ ನೆಲೆಯಿಂದಲೇ ರೂಪುಗೊಳ್ಳುವಂತಾಯಿತು. ಜೊತೆಗೆ ಅವಳ ಸಾಮಾಜಿಕ ಭಾಗವಹಿಸುವಿಕೆಯ ಅವಕಾಶಗಳನ್ನು ನಿರ್ಬಂಧಕ್ಕೆ ಒಳಪಡಿಸಿ ಹೆಣ್ಣು ಒಂದು ನಿರ್ದಿಷ್ಟ ಚೌಕಟ್ಟಿನಲ್ಲಿ ಬದುಕುವ ಅನಿವಾರ್ಯತೆಯನ್ನು ಸೃಷ್ಟಿಸಲಾಯಿತು. ಆದರೆ ಇದನ್ನು ಹೆಣ್ಣಿನ ಅಸಾಮರ್ಥ್ಯವೆಂತಲೇ ಗುರುತಿಸಿದ ಪ್ರಧಾನ ವ್ಯವಸ್ಥೆ ಹೊಸ ಅವಕಾಶಗಳು ದತ್ತವಾದ ಆಧುನಿಕ ಸಂದರ್ಭದಲ್ಲಿಯೂ ಕೂಡ ಅವಳನ್ನು ಅಧೀನದಲ್ಲಿರಿಸಿಕೊಳ್ಳುವ ಹುನ್ನಾರಗಳನ್ನು ಹೆಣೆಯುತ್ತಲೇ ತನ್ನ ಯಜಮಾನ್ಯವನ್ನು ನಿರಂತರವಾಗಿಸಿಕೊಳ್ಳಲು ಪ್ರಯತ್ನಿಸುತ್ತಿದೆ. ಇಂದಿಗೂ ಕೂಡ ಹೆಣ್ಣಿನ ಶಕ್ತಿಯನ್ನು, ಅವಳ ವಿಶಿಷ್ಟತೆಗಳನ್ನು ದೌರ್ಬಲ್ಯ ಎಂದು ವಿವರಿಸುವ ಪುರುಷ ಪ್ರಧಾನ ವ್ಯವಸ್ಥೆ, ಈ ಬಗೆಯ ತರತಮವನ್ನು 'ಮೌಲ್ಯವ್ಯವಸ್ಥೆಯ ಕ್ರಮ', 'ಸಾಮಾಜಿಕ ಜೀವನ ವಿಧಾನ' ಎಂದು ಬಿಂಬಿಸುತ್ತದೆ.

ಈ ಅಂಶಗಳನ್ನು ಆಧರಿಸಿ ರೂಪುಗೊಂಡ ಲಿಂಗ ಶ್ರೇಣೀಕರಣ ಕಾಲದಿಂದ ಕಾಲಕ್ಕೆ ಹೆಣ್ಣಿನ ಮಿತಿ, ಅವಳ ಅಸಾಮರ್ಥ್ಯದ ಸೂಚಕ ಎಂಬಂತೆ ವ್ಯಾಖ್ಯಾನಗೊಂಡವು. ಇದರಿಂದಾಗಿ ಹೆಣ್ಣು ನಿರಂತರವಾಗಿ ನಿರ್ಬಂಧಕ್ಕೊಳಪಡಬೇಕಾದ ಸನ್ನಿವೇಶ ಸೃಷ್ಟಿಯಾಯಿತು. ಇದೆಲ್ಲಕ್ಕೂ ಕಾರಣ ಹೆಣ್ಣಿನ ಸಹ ಜೀವಿಯಾದ ಪುರುಷ ಎಂಬುದೇ ವಿಷಾದದ ಸಂಗತಿ. ಇದರ ಜೊತೆಗೆ ಹೆಣ್ಣಿನ ಶ್ರಮದ 'ಅಪಮೌಲ್ಯೀಕರಣ' ಪಿತೃ ಸಂಸ್ಕೃತಿ ಹೆಣ್ಣನ್ನು ತನ್ನ ಅಧೀನತೆಗೆ ಒಳಪಡಿಸಿಕೊಳ್ಳಲು ಹುಟ್ಟುಹಾಕಿದ ಪ್ರಧಾನ ತಂತ್ರಗಳಲ್ಲಿ ಒಂದು. ಹೆಣ್ಣಿನ ಶ್ರಮದ ಅಪಮೌಲ್ಯೀಕರಣದ ಮೂಲಕ ಮನೆಯ ಒಳಗಿನ ಹಾಗೂ ಹೊರಗಿನ ಎರಡೂ ಕ್ಷೇತ್ರಗಳಲ್ಲಿ ಅವಳ ಶಕ್ತಿ ಸಂಚಯದ ಕೇಂದ್ರವಾದ ಶ್ರಮವನ್ನು ನಿರಾಕರಿಸಿ ಅದನ್ನು ಸೇವಾವಲಯಕ್ಕೆ ಸೇರಿಸಲಾಯಿತು. ಈ ಸೇವಾವಲಯವು ಪ್ರತಿಫಲಾಪೇಕ್ಷೆ ಇಲ್ಲದೆ ಕಡ್ಡಾಯವಾಗಿ ಮಾಡಲೇಬೇಕಾದ ಜವಾಬ್ದಾರಿ, ಹೊಣೆಗಾರಿಕೆಯಾಗಿ ಮಾರ್ಪಟ್ಟು ಅವಳ ದುಡಿಮೆ ಅಲಕ್ಷ್ಯಕ್ಕೆ ಒಳಗಾಯಿತು. ಇದು ಗಂಡನ್ನು 'ಉತ್ಪಾದಕನನ್ನಾಗಿಯೂ' ಹೆಣ್ಣನ್ನು 'ಅನುತ್ಪಾದಕ'ಳನ್ನಾಗಿಯೂ ಬಿಂಬಿಸಿ, ಅನುತ್ಪಾದಕ ವಲಯಕ್ಕೆ ಸೇರಿದ ಹೆಣ್ಣು ತನ್ನ ಜೀವನ ನಿರ್ವಹಣೆಗೆ ಗಂಡನ್ನು ಆಶ್ರಯಿಸಬೇಕಾದ ಅನಿವಾರ್ಯತೆಯನ್ನು ನಿರ್ಮಿಸಿತು. ಅರ್ಥಗಳಿಕೆಯ

ಸಂದರ್ಭದಲ್ಲಿಯೂ ಕೂಡ ಅದನ್ನು ಕಾಯ್ದುಕೊಂಡು ಆರ್ಥಿಕವಾಗಿ ಅವಲಂಬಿತಳನ್ನಾಗಿ ಮಾಡಲಾಯಿತು. ಈ ಆರ್ಥಿಕ ಅವಲಂಬನೆ ಹೆಣ್ಣನ್ನು ಅಸಹಾಯಕಳನ್ನಾಗಿಸಿತು.

ಒಟ್ಟಾರೆ ಹೆಣ್ಣು ಗಂಡಿಗೆ ಸಂಬಂಧಿಸಿದ ಅಸಮಾನತೆಯ ನೆಲೆಗಳು ರೂಪುಗೊಳ್ಳಲು ಅವರ ಜೈವಿಕ ಭಿನ್ನತೆಯಾಗಲಿ, ಸಾಮಾಜಿಕ ಭಾಗವಹಿಸುವಿಕೆಯಾಗಲಿ, ಅವರ ಶ್ರಮದ ಹಂಚಿಕೆಯ ವಿಧಾನವಾಗಲಿ, ದೈಹಿಕ ಸಾಮರ್ಥ್ಯದ ಪ್ರಭಾವವಾಗಲಿ ಕಾರಣವಲ್ಲ. ಬದಲಾಗಿ ಒಂದು ವರ್ಗ ಇನ್ನೊಂದು ವರ್ಗದ ಮೇಲೆ ಅಧಿಕಾರ ಸ್ಥಾಪಿಸಿ ಅದನ್ನು ತನ್ನ ಹಿಡಿತದಲ್ಲಿ ಇರಿಸಿಕೊಳ್ಳುವ ಸಲುವಾಗಿ ನಡೆಸಿದ ಲಿಂಗ ರಾಜಕಾರಣದ ಮಾದರಿಗಳಾಗಿವೆ ಎನ್ನುವುದು ಸ್ತ್ರೀವಾದಿ ಸಾಹಿತ್ಯಾಧ್ಯಯನದಿಂದ ಸ್ಪಷ್ಟವಾಗುತ್ತದೆ. ಪುರುಷ ಪ್ರಧಾನ ವ್ಯವಸ್ಥೆಗೆ ಆಕಸ್ಮಿಕವಾಗಿ ದೊರೆತ ಸಾಮಾಜಿಕ ನಾಯಕತ್ವದ ಅಧಿಕಾರಗಳು, ಮತ್ತು ಅವಕಾಶಗಳು ತನ್ನ ಮೇಲ್ಮೆಯನ್ನು ತೋರ್ಪಡಿಸಲು ಸಹಾಯಕವಾಯಿತು. ಈ ಅವಕಾಶಗಳನ್ನು ತನ್ನ ಸ್ವಾರ್ಥಕ್ಕಾಗಿ ಬಳಸಿಕೊಂಡ ಪುರುಷ ಪ್ರಭುತ್ವ ತನ್ನ ಅಧಿಕಾರವನ್ನು ನಿರಂತರವಾಗಿ ಉಳಿಸಿಕೊಳ್ಳಲು ಜೀವ ವಿರೋಧಿ ಕಾರ್ಯಚಟುವಟಿಕೆಗಳನ್ನು ರೂಪಿಸತೊಡಗಿತು. ಇದರ ಫಲವಾಗಿ ಕಾಲ, ಸಮಾಜ, ಸನ್ನಿವೇಶಕ್ಕೆ ತಕ್ಕಂತೆ ಬದಲಾವಣೆ ಹೊಂದಿ ಜೀವ ವಿಕಾಸಕ್ಕೆ ಕಾರಣವಾಗಬೇಕಿದ್ದ 'ಮಾತೃ ಮೌಲ್ಯವ್ಯವಸ್ಥೆ', ಸ್ಥಗಿತಗೊಂಡು ಬದಲಾದ, ಹೊಸ ರೂಪಪಡೆದ, ಸಂದರ್ಭದಲ್ಲಿಯೂ ಕೂಡ ಹೆಣ್ಣಿನ ಮಟ್ಟಿಗೆ ಬಂಧನದ, ಅಧೀನತೆಯ ನೆಲೆಗಳನ್ನು ಗಟ್ಟಿಗೊಳಿಸುವ ಕೇಂದ್ರಗಳಾಗಿಯೇ ಉಳಿದುಕೊಂಡವು. ಈ ಹಿನ್ನೆಲೆಯಲ್ಲಿ ಹೆಣ್ಣಿಗೆ ಸಂಬಂಧಿಸಿದ ಮೌಲ್ಯಗಳು ಸ್ಥಾಪಿತಮೌಲ್ಯಗಳಾಗಿ, ಹೆಣ್ಣನ್ನು ಪುರುಷ ಪ್ರಭುತ್ವದ ಅಧೀನತೆಗೆ ಒಳಪಡಿಸುವಲ್ಲಿ ನಿರಂತರವಾಗಿ ತೊಡಗಿಕೊಂಡಿವೆ.

ಪಿತೃ ಸಂಸ್ಕೃತಿಯು ಹೆಣ್ಣಿನ ಜೀವನ ವಿಧಾನವನ್ನು ಮೌಲ್ಯವ್ಯವಸ್ಥೆಯ ಚೌಕಟ್ಟಿಗೆ ಒಳಪಡಿಸುವ ಸಲುವಾಗಿ ಹಲವು ರೀತಿಯ ಕಾರ್ಯತಂತ್ರಗಳನ್ನು ರೂಪಿಸುತ್ತಲೇ ಇರುತ್ತದೆ. ಅದರಲ್ಲಿ ಸಾಮಾಜಿಕ ಸ್ವಾಸ್ಥ್ಯ, ಕುಟುಂಬದ ಹಿತ, ಮನೆಯ ಗೌರವ ಕಾಪಾಡುವುದು, ಮಕ್ಕಳ ಭವಿಷ್ಯ, ಸ್ತ್ರೀತ್ವದ ಪರಿಪಾಲನೆ, ಆದರ್ಶ ಜೀವನ ವಿಧಾನದಂತಹ ಭಾವನಾತ್ಮಕ ಎಳೆಗಳೊಂದಿಗೆ, ಹೆಣ್ಣು ಪಾಲಿಸಲೇಬೇಕಾದ ಗೃಹಿಣಿತ್ವ, ಸತೀತ್ವ, ಪಾತಿವ್ರತ್ಯದಂತಹ ಒತ್ತಾಯ ಪೂರ್ವಕ ಹೇರಿಕೆಗಳೂ ಕೂಡ ಸೇರಿಕೊಂಡಿರುತ್ತವೆ. ಇವು ಬದಲಾದ ಸನ್ನಿವೇಶಕ್ಕೆ ತಕ್ಕಂತೆ ಹೊಸ ಹೊಸ ಕಾರ್ಯಮಾದರಿಗಳಲ್ಲಿ ಹೇಗೆ ಚಿತ್ತರಿಸಲ್ಪಡುತ್ತವೆ ಎಂಬುದು ಸ್ತ್ರೀವಾದಿ ಸಾಹಿತ್ಯ ಅಧ್ಯಯನದಿಂದ ತಿಳಿದುಬರುತ್ತದೆ. ಆದರೆ ಹೆಣ್ಣು ಇದಕ್ಕೆ ಪ್ರತಿತಂತ್ರಗಳನ್ನು ಹೂಡಿ ತನ್ನ ಅಸ್ತಿತ್ವವನ್ನು ಉಳಿಸಿಕೊಳ್ಳಲು ನಿರಂತರವಾಗಿ ಪ್ರಯತ್ನಿಸುತ್ತಿದ್ದಾಳೆ ಎಂಬುದು ಸಾಮಾಜಿಕ ವಾಸ್ತವ. ಅದನ್ನು ಮುಂದಿನ ಅಧ್ಯಾಯದಲ್ಲಿ ಚರ್ಚಿಸಲಾಗುವುದು.

ಹೆಣ್ಣಿನ ಬದುಕು ಮತ್ತು ಸಾಹಿತ್ಯ ಅವಿನಾಭಾವ ಸಂಬಂಧವನ್ನು ಹೊಂದಿರುವ ಸಲುವಾಗಿ ಸಾಮಾಜಿಕ ಚಲನೆಗಳು ಮಹಿಳಾ ಸಾಹಿತ್ಯದಲ್ಲಿ ಪ್ರಮುಖ ಪಾತ್ರವಹಿಸುತ್ತವೆ. ಅದೇ ರೀತಿ

ಮೌಲ್ಯವ್ಯವಸ್ಥೆಯ ಕಾರ್ಯಮಾದರಿಗಳು ಹೆಣ್ಣಿನ ಬದುಕನ್ನು ಪಿತೃ ಸಂಸ್ಕೃತಿಯ ಅಧೀನಕ್ಕೆ ಒಳಪಡಿಸಲು ನಡೆಸುವ ಹುನ್ನಾರಗಳು, ಅದರ ವಿಧಾನಗಳು ಮಹಿಳಾ ಸಾಹಿತ್ಯದಲ್ಲಿ ದಾಖಲೆಗೊಂಡಿವೆ. ಅದರಲ್ಲೂ ಮಹಿಳಾ ಕಾವ್ಯಕ್ಕೆ ಮುಚ್ಚಿ ಹೇಳುವ ಅವಕಾಶಗಳು ಹೇರಳವಾಗಿರುವುದರಿಂದ ಪುರುಷ ರಾಜಕಾರಣದ ಹುನ್ನಾರಗಳನ್ನು ಬಯಲಿಗೆಳೆಯಲು, ಪಿತೃಪ್ರಭುತ್ವದ ಹಿಡಿತದಿಂದ ಹೊರಬರಲು ಹೆಣ್ಣು ನಡೆಸಿದ ಪ್ರಯತ್ನಗಳು ಅತ್ಯಂತ ಸಮರ್ಥವಾಗಿ ದಾಖಲುಗೊಂಡಿವೆ. ಈ ಅಂಶಗಳು ಪುರುಷ ಪ್ರಧಾನ ಮೌಲ್ಯವ್ಯವಸ್ಥೆಯ ಕಾರ್ಯಮಾದರಿಗಳನ್ನೂ, ಅದನ್ನು ಸ್ಥಿರವಾಗಿರಿಸಲು ಪ್ರಭುತ್ವ ಕೈಗೊಳ್ಳುವ ಕಾರ್ಯತಂತ್ರಗಳನ್ನೂ ತಿಳಿಯಲು ಸಹಾಯಕವಾಗುತ್ತದೆ. ಅದಕ್ಕಿಂತ ಮುಖ್ಯವಾದ ಸಂಗತಿ ಎಂದರೆ ಪಿತೃ ಸಂಸ್ಕೃತಿ ಹೆಣ್ಣನ್ನು 'ವಿಸ್ಮೃತಿ'ಗೆ ಒಳಪಡಿಸಿ ತನ್ನ ಪ್ರಭುತ್ವವನ್ನು ಹೇರುವ ಭಿನ್ನ ಭಿನ್ನ ವಿನ್ಯಾಸ ಕ್ರಮಗಳನ್ನು ಮಹಿಳಾ ಕಾವ್ಯದ ಅಧ್ಯಯನದಿಂದ ತಿಳಿಯಬಹುದಾಗಿದೆ. ಮಹಿಳಾ ಕಾವ್ಯ ಈ ಎಲ್ಲಾ ಅಂಶಗಳನ್ನೂ ವಿಸ್ತೃತವಾಗಿ ಚರ್ಚೆಗೆ ಒಳಪಡಿಸುತ್ತದೆ. ಅದನ್ನು ಸ್ಥಾಪಿತ ಮೌಲ್ಯಗಳ ಕಾರ್ಯಮಾದರಿಗಳು ಮತ್ತು ಪಿತೃಸಂಸ್ಕೃತಿ ಎಂಬ ಪ್ರಸ್ತುತ ಅಧ್ಯಾಯದ ಅಡಿಯಲ್ಲಿ ವಿಸ್ತೃತವಾಗಿ ಚರ್ಚಿಸಲಾಗುವುದು.

ಪಿತೃ ಸಂಸ್ಕೃತಿಯು ಹೆಣ್ಣಿನ ಮೇಲೆ ಮೌಲ್ಯವ್ಯವಸ್ಥೆಯನ್ನು ಭಿನ್ನ ಭಿನ್ನ ತಂತ್ರಗಾರಿಕೆಯ ಮೂಲಕ ಹೇರುತ್ತದೆ ಎಂಬುದನ್ನು ಆಯಾ ಕಾಲ, ಸಂದರ್ಭ ಸನ್ನಿವೇಶಕ್ಕನುಗುಣವಾಗಿ ಅರ್ಥೈಸಲು ಸಾಧ್ಯ. ಆದರೆ ಮೌಲ್ಯಗಳನ್ನು ಹೇರುವ ವಿಧಾನ ಮಾತ್ರ ನಿರಂತರವಾಗಿ ಹೆಣ್ಣನ್ನು ಅಧೀನವಾಗಿಸಿಕೊಳ್ಳುವ ಹುನ್ನಾರದ ಭಾಗವಾಗಿಯೇ ಕೂಡಿರುತ್ತವೆ. ಸಾಮಾಜಿಕ ಹಿತವನ್ನು ಕಾಯುವ ಹಾಗೂ ಹೆಣ್ಣಿನ ಜೀವನವನ್ನು ಉದ್ಧಾರ ಮಾಡುವ ಅಧಿಕೃತ ವಕ್ತಾರನಾಗಿ ಸ್ವಯಂ ಅಧಿಕಾರವನ್ನು ಪಡೆದಿರುವ ಪುರುಷ ಪ್ರಧಾನ ವ್ಯವಸ್ಥೆ, ಕಾಲಕ್ಕೆ ತಕ್ಕಂತೆ ಸೂಕ್ತ ನಿಯಮಗಳನ್ನು ರೂಪಿಸಿ, ಆ ಮೂಲಕ ಜನತೆಗೆ 'ಮಾರ್ಗದರ್ಶನ' ನೀಡುವುದು ತನ್ನ ಜವಾಬ್ದಾರಿ ಎಂದು ಭಾವಿಸಿದೆ. ಅದಕ್ಕಾಗಿ ಧರ್ಮ, ಕಾನೂನು, ನ್ಯಾಯ, ತರ್ಕ, ತತ್ವಜ್ಞಾನಗಳ ನೆರವನ್ನು ಪಡೆದಿದ್ದು ಅದರ ಮೂಲಕ ಹೆಣ್ಣಿನ ಅಧೀನತೆಯನ್ನು ಉಳಿಸಿಕೊಳ್ಳುವ ಪ್ರಯತ್ನವನ್ನು ನಿರಂತರವಾಗಿ ನಡೆಸುತ್ತಿದೆ. ಇಲ್ಲಿ ಹೆಣ್ಣಿನ ಜೀವನಕ್ಕೆ 'ಮಾರ್ಗದರ್ಶನ' ಅಥವಾ 'ನಿರ್ದೇಶನ'ಗಳನ್ನು ಕೊಡುವ ಮೂಲಕ ಮೌಲ್ಯವ್ಯವಸ್ಥೆಯನ್ನು ಬಿತ್ತಲಾಗುತ್ತದೆ. ಆದರೆ ಮಾನವ ಜೀವಿಗಳಲ್ಲಿ ತನ್ನಷ್ಟೇ ಸಮಾನ ಸಾಮರ್ಥ್ಯವನ್ನು ಹೊಂದಿರುವ ಹೆಣ್ಣನ್ನು ಸಂಪೂರ್ಣವಾಗಿ ಅಧೀನಪಡಿಸಿಕೊಳ್ಳುವುದು ಸಾಧ್ಯವಿಲ್ಲ ಎಂಬ ಅರಿವು ಪಿತೃಸಂಸ್ಕೃತಿಯನ್ನು ಅಂದಿನಿಂದ ಇಂದಿನವರೆಗೂ ಗೊಂದಲಕ್ಕೀಡು ಮಾಡಿರುವುದಂತೂ ಸತ್ಯ. ಇದರಿಂದಾಗಿ ಪ್ರಭುತ್ವ ತನ್ನ ಹಿಡಿತವನ್ನು ಕಾಯ್ದುಕೊಳ್ಳಲು ಮೊದಲ ಹಂತವಾಗಿ ಹೆಣ್ಣಿನ 'ಒಳಿತಿನ', 'ಉದ್ಧಾರದ' ಮುಖವಾಡವನ್ನು ಹೊತ್ತು ಅವಳ ಓಲೈಕೆಗೆ ಆದ್ಯತೆಯನ್ನು ನೀಡಿತು. ಇದು ಅನುನಯನ, ರಮಿಸುವಿಕೆ, ಕೋರಿಕೆ, ಬೇಡಿಕೆ, ಓಲೈಕೆ, ಹೊಗಳಿಕೆಗಳ ಮೂಲಕ ಒಪ್ಪಿತವೂ, ಜನಪ್ರಿಯವೂ ಆದ ಮಾದರಿಯಾಗಿ ಕಾರ್ಯ ನಿರ್ವಹಿಸುತ್ತದೆ. ಇದನ್ನು ಅಧ್ಯಯನದ ಅನುಕೂಲಕ್ಕಾಗಿ ಸ್ಥಾಪಿತ ಮೌಲ್ಯಗಳ ನಿರ್ದೇಶನಾತ್ಮಕ ಕಾರ್ಯಮಾದರಿಗಳು ಎಂದು ಗುರುತಿಸಬಹುದು.

ಮುಂದುವರೆದ ಹಂತದಲ್ಲಿ ಪುರುಷ ಪ್ರಭುತ್ವದ ಈ ತಂತ್ರಗಾರಿಕೆಯನ್ನು ಅರಿತ ಹೆಣ್ಣು ಅದಕ್ಕೆ ವಿರೋಧವನ್ನು ವ್ಯಕ್ತಪಡಿಸಿದಾಗ ಸರಿ-ತಪ್ಪು, ಒಳಿತು-ಕೆಡುಕಿನ ಆಯ್ಕೆಗಳನ್ನು ನೀಡುವುದರ ಮೂಲಕ ಹೆಣ್ಣಿನ ಮೇಲೆ ತನ್ನ ಹಿಡಿತವನ್ನು ಸಾಧಿಸಲು ಪ್ರಯತ್ನಿಸಲಾಯಿತು. ಆದರೆ ಇದರ ಬಗೆಗೆ ವಿರೋಧವಿದ್ದಾಗ್ಯೂ ಒಳಿತಿನ ಆಯ್ಕೆಗೆ ಹೆಚ್ಚು ಪರ್ಯಾಯಗಳಿಲ್ಲದ ಕಾರಣ ಹೆಣ್ಣೂ ಕೂಡ ಪುರುಷ ಪ್ರಭುತ್ವದಿಂದ ಹೇರಲ್ಪಟ್ಟ ಜೀವನ ವಿಧಾನವನ್ನೇ ಒಪ್ಪಿ ಮುನ್ನೆಡೆಯಬೇಕಾಯಿತು. ಈ ಮೂಲಕ ಪ್ರಭುತ್ವ ಮೌಲ್ಯಗಳ ಹೆಸರಿನಲ್ಲಿ ಹೆಣ್ಣಿನ ಮೇಲೆ ನಿಯಂತ್ರಣವನ್ನು ಸಾಧಿಸಲು ಸಾಧ್ಯವಾಯಿತು. ಈ ಅಂಶಗಳನ್ನು ನಿಯಂತ್ರಿತ ಕಾರ್ಯಮಾದರಿಗಳು ಎಂದು ಗುರುತಿಸಲಾಗಿದೆ.

ಈ ಎರಡೂ ಸನ್ನಿವೇಶಗಳನ್ನು ಮೀರಿ ಹೆಣ್ಣು ತನ್ನ ಸ್ವಂತ ಆಯ್ಕೆಯ ಬದುಕನ್ನು ರೂಪಿಸಿಕೊಳ್ಳಲು ಮುಂದಾದ ಸಂದರ್ಭದಲ್ಲಿ ಪಿತೃಸಂಸ್ಕೃತಿಯು ಒತ್ತಾಯ ಪೂರ್ವಕವಾಗಿ ತನ್ನ ಅಪೇಕ್ಷಿತ ಜೀವನ ವಿಧಾನವನ್ನು ಹೆಣ್ಣಿನ ಮೇಲೆ ಹೇರಲು ಮುಂದಾಯಿತು. ಇದರ ಫಲವಾಗಿ ಸತೀಪದ್ಧತಿ, ಬಾಲ್ಯವಿವಾಹ, ವೈಧವ್ಯದ ಆಚರಣೆ, ವೇಶ್ಯಾಪದ್ಧತಿ, ಮುಂತಾದ ಸ್ತ್ರೀ ವಿರೋಧಿ ಆಚರಣೆಗಳು ರೂಢಿಗೆ ಬಂದವು. ಇಲ್ಲಿ ಕರುಣೆ ಅನುಕಂಪಗಳಿಗೆ ಅವಕಾಶಗಳಿಲ್ಲದಂತೆ ಹೆಣ್ಣಿಗೆ ಶಿಕ್ಷೆ, ದಂಡನೆ, ನಿಂದನೆ, ಸಮಾಜದಿಂದ ಹೊರಹಾಕುವುದು, ಮುಂತಾದ ಕಠಿಣ ಕ್ರಮಗಳನ್ನು ಕೈಗೊಳ್ಳುವುದರ ಮೂಲಕ ಪ್ರಭುತ್ವ ಹೆಣ್ಣಿನ ಮೇಲೆ ಹಿಡಿತವನ್ನು ಸಾಧಿಸಿತು. ಇದನ್ನು ಸ್ಥಾಪಿತ ಮೌಲ್ಯಗಳ ನಿರ್ಬಂಧಿತ ಕಾರ್ಯಮಾದರಿಗಳು ಎಂದು ಗುರುತಿಸಬಹುದು. ಒಟ್ಟಾರೆ ಪುರುಷ ಪ್ರಧಾನ ವ್ಯವಸ್ಥೆ ತನ್ನ ಅಧಿಕಾರವನ್ನು, ಪ್ರಾಬಲ್ಯವನ್ನು ನಿರಂತರವಾಗಿ ಕಾಯ್ದುಕೊಳ್ಳುವ ಸಲುವಾಗಿ ಎಲ್ಲಾ ಕಾಲದಲ್ಲಿಯೂ ಕೂಡ ಮೌಲ್ಯವ್ಯವಸ್ಥೆಯ ಹೆಸರಿನಲ್ಲಿ ನಿರ್ದೇಶನ, ನಿಯಂತ್ರಣ, ನಿರ್ಬಂಧಗಳ ಮೂಲಕ ಹೆಣ್ಣನ್ನು ತನ್ನ ಅಧೀನ ನೆಲೆಯಲ್ಲಿಯೇ ಉಳಿಸಿಕೊಳ್ಳಲು ಪ್ರಯತ್ನಿಸುತ್ತಿರುವುದು ಸ್ಪಷ್ಟವಾಗುತ್ತದೆ. ಜೊತೆಗೆ ಶಿಕ್ಷಣ, ಧರ್ಮ, ಕಾನೂನು, ಸಾಮಾಜಿಕತೆ ಎಲ್ಲವನ್ನೂ ಕೂಡ ಮೌಲ್ಯವ್ಯವಸ್ಥೆಯನ್ನು ಬಿತ್ತಲು ಪೂರಕವಾಗಿ ಬಳಸಿಕೊಳ್ಳಲಾಗಿದೆ. ಈ ಎಲ್ಲಾ ಅಂಶಗಳನ್ನು ಮಹಿಳಾ ಕಾವ್ಯ ನಿರ್ವಹಿಸುವ ವಿಧಾನವನ್ನು ಸ್ಥಾಪಿತ ಮೌಲ್ಯಗಳ ಕಾರ್ಯಮಾದರಿಗಳು ಮತ್ತು ಪಿತೃ ಸಂಸ್ಕೃತಿ ಎಂಬ ಪ್ರಸ್ತುತ ಅಧ್ಯಾಯದಲ್ಲಿ ಚರ್ಚಿಸಲಾಗುವುದು.

**೫.೧ ನಿರ್ದೇಶನಾತ್ಮಕ ಕಾರ್ಯಮಾದರಿಗಳು** : ನಿರ್ದೇಶನಾತ್ಮಕ ಕಾರ್ಯ ಮಾದರಿಗಳು ಎಲ್ಲಾ ಸಂದರ್ಭದಲ್ಲೂ ಹೆಣ್ಣಿನ 'ಒಳಿತಿನ' ಉದ್ದೇಶದ ಅಂಶಗಳನ್ನು ಮುಂದೊಡ್ಡಿ ಕಾರ್ಯ ನಿರ್ವಹಿಸುತ್ತಿರುತ್ತವೆ. ಇಲ್ಲಿ ಪಿತೃ ಸಂಸ್ಕೃತಿ ಹೆಣ್ಣಿನ ಸಂಪೂರ್ಣ ಜವಾಬ್ದಾರಿ ತನ್ನ ಹೊಣೆ, ಅವಳ ಬೇಕು ಬೇಡ ಎಲ್ಲವನ್ನೂ ನಿರ್ಣಯಿಸುವ ಸ್ವಾತಂತ್ರ್ಯ ತನ್ನದೆ ಎಂಬ ದೃಢ ವಿಶ್ವಾಸವನ್ನು ಹೊಂದಿದ್ದು ಅದಕ್ಕೆ ತಕ್ಕ ನಿರ್ಧಾರಗಳನ್ನೂ ತೆಗೆದುಕೊಳ್ಳುತ್ತದೆ. ನಿರ್ದೇಶನಾತ್ಮಕ ಕಾರ್ಯಮಾದರಿಗಳು ಎಲ್ಲಾ ಕಾಲದಲ್ಲಿಯೂ ಪಿತೃಪ್ರಭುತ್ವದ ಸ್ವಯಂ ಮುಂದಾಳತ್ವದಲ್ಲಿ ಹೆಣ್ಣಿನ ಬದುಕಿಗೆ ಸಂಬಂಧಿಸಿದ ನಿರ್ಧಾರಗಳನ್ನು ತೆಗೆದುಕೊಳ್ಳಲು ಪ್ರೇರೇಪಿಸುತ್ತದೆ. ಇವು ಪ್ರೀತಿ, ಕಾಳಜಿ, ಕರುಣೆ, ಪ್ರೋತ್ಸಾಹ, ಉತ್ತೇಜನದ ಆಶಯಗಳನ್ನು ಒಳಗೊಂಡಿರುತ್ತವೆ. ಅಲ್ಲದೆ ಹೆಣ್ಣು ತನ್ನ ಸಂಕಷ್ಟಗಳಿಗೆ ಧ್ವನಿ ಎತ್ತುವ ಮೊದಲೇ

ಅಥವಾ ಅವಳು ತನ್ನ ಅಗತ್ಯತೆಗಳನ್ನು ಆಯ್ಕೆ ಮಾಡಿಕೊಳ್ಳುವ ಮೊದಲೇ ಅವಳ ಪರವಾಗಿ ನಿರ್ಣಯಗಳನ್ನು ಕೈಗೊಂಡು ಆ ಹಾದಿಯಲ್ಲಿ ಮುನ್ನಡೆಯಲ್ಲಷ್ಟೇ ಹೆಣ್ಣಿಗೆ ಅವಕಾಶಗಳನ್ನು ನೀಡಲಾಗುತ್ತದೆ. ಹೆಣ್ಣಿನ ಶಿಕ್ಷಣ, ಸಾಮಾಜಿಕ ಭಾಗವಹಿಸುವಿಕೆ, ಲೈಂಗಿಕತೆ, ಹಾಗೂ ಅಭಿವ್ಯಕ್ತಿ ಎಲ್ಲವೂ ಕೂಡ ಪಿತೃ ಯಜಮಾನ್ಯದ ನಿರ್ದೇಶನದಂತೆಯೇ ಇಂದಿಗೂ ಕೂಡ ಕಾರ್ಯ ನಿರ್ವಹಿಸುತ್ತಿರುವುದನ್ನು ಮಹಿಳಾ ಕಾವ್ಯದ ಮೂಲಕ ಗುರುತಿಸಬಹುದು.

ಮೌಲ್ಯ ವ್ಯವಸ್ಥೆಯ ನಿರ್ದೇಶನಾತ್ಮಕ ಕಾರ್ಯಮಾದರಿಗಳು ಹೆಣ್ಣಿನ ಸ್ವಾತಂತ್ರ್ಯಕ್ಕೆ, ಆಯ್ಕೆಗೆ ಅವಕಾಶವೇ ಇಲ್ಲದಂತೆ ತುಂಬಾ ನಯವಾದ ರೀತಿಯಲ್ಲಿ ಹೆಣ್ಣಿನ ಆಂತರ್ಯದಲ್ಲಿಯೇ ಸಹನೆ, ತಾಳ್ಮೆ, ಕರುಣೆ, ಅನುಕಂಪ ಮುಂತಾದ ಗುಣಗಳವೆ ಎಂಬುದನ್ನು ಒಂದೆಡೆ ಬಿಂಬಿಸಿದರೆ ಮತ್ತೊಂದೆಡೆ, ಇದರಿಂದಾಗಿಯೇ ಹೆಣ್ಣು ಪೂಜನೀಯಳು ಎಂಬ ಭ್ರಮೆಯನ್ನು ಹುಟ್ಟಿಸುತ್ತದೆ. ಯಾವ ಕಾಲಘಟ್ಟದಲ್ಲಿಯೂ ಕೂಡ ಇದನ್ನು ಪಿತೃ ಸಂಸ್ಕೃತಿಯ ಹುನ್ನಾರ ಎಂದಾಗಲೀ, ಹೆಣ್ಣಿನ ಅಸ್ತಿತ್ವವನ್ನು ತನ್ನ ಅಧೀನತೆಗೆ ಒಳಪಡಿಸಿಕೊಳ್ಳುವ ತಂತ್ರಗಾರಿಕೆ ಎಂದಾಗಲೀ ಗುರುತಿಸಲು ಸಾಧ್ಯವೇ ಇಲ್ಲ. ಪ್ರಧಾನ ವ್ಯವಸ್ಥೆಯು ತನ್ನ ಅಧೀನ ನೆಲೆಗಳನ್ನು ನಡೆಸಿಕೊಳ್ಳುವ ವಿಧಾನವನ್ನು ಎಂ. ಉಷಾರವರು ಚರ್ಚಿಸುವಂತೆ "ಯಜಮಾನ್ಯ ಸ್ಥಾನದಲ್ಲಿ ನಿಂತ ಪ್ರಧಾನಧಾರೆಯು ತೋರುವ ಪ್ರೋತ್ಸಾಹವೆಂಬುದು ಆಂತರ್ಯದಲ್ಲಿ ನಿರ್ದೇಶನಗಳನ್ನು ನೀಡುವುದೇ ಆಗಿದೆ."[1] ಎಂಬ ಮಾತು ಹೆಣ್ಣಿಗೆ ನೀಡಿದೆ ಎನ್ನಲಾಗುವ ಶಿಕ್ಷಣ, ಉದ್ಯೋಗ, ಸ್ವಾತಂತ್ರ್ಯದ ಅವಕಾಶಗಳು ಪಿತೃ ಪ್ರಭುತ್ವ ತನ್ನ ಯಜಮಾನ್ಯವನ್ನು ಉಳಿಸಿಕೊಳ್ಳುವ ಸಲುವಾಗಿ ರೂಪಿಸಿರುವ ಕಾರ್ಯ ಮಾದರಿಗಳೇ ಆಗಿವೆ ಎಂಬುದನ್ನು ಸ್ಪಷ್ಟಪಡಿಸುತ್ತದೆ.

ಮೊದಲ ಘಟ್ಟದಲ್ಲಿ ಸುಧಾರಣಾವಾದಿ ಧೋರಣೆಯ ಹಿನ್ನೆಲೆಯಲ್ಲಿ ಹೆಣ್ಣಿಗೆ ಕೊಡಮಾಡಿದ ಶಿಕ್ಷಣ, ಸಾಮಾಜಿಕ ಅವಕಾಶಗಳು ಹಾಗೂ ಸ್ತ್ರೀ ಸುಧಾರಣೆಗೆ ಸಂಬಂಧಿಸಿದ ನಿಯಮಗಳು ಪುರುಷ ಪ್ರಧಾನ ಮೌಲ್ಯವ್ಯವಸ್ಥೆಯ ನಿರ್ದೇಶನಾತ್ಮಕ ಕಾರ್ಯಮಾದರಿಯನ್ನು ಎತ್ತಿಹಿಡಿಯುತ್ತದೆ. ವಸಾಹತುಶಾಹಿ ಸಂದರ್ಭದಲ್ಲಿ ದೊರೆತ ಪಾಶ್ಚಾತ್ಯ ವೈಚಾರಿಕ ಶಿಕ್ಷಣದ ಪ್ರಭಾವದಿಂದ ಪ್ರೇರಿತರಾದ ಭಾರತೀಯ ಸುಧಾರಣಾವಾದಿಗಳು ಮಹಿಳಾ ಶಿಕ್ಷಣಕ್ಕೆ ಪ್ರೋತ್ಸಾಹವನ್ನು ನೀಡಿದರು. ಇದರ ಜೊತೆಗೆ ಯಾವುದೇ ರೀತಿಯ ಸಾಮಾಜಿಕ ಜ್ಞಾನವಿಲ್ಲದೆ ಬದುಕುತ್ತಿದ್ದ ಮಹಿಳೆಯರಿಗೆ ಶಿಕ್ಷಣವನ್ನು ನೀಡುವುದರ ಮೂಲಕ ಅವರನ್ನು 'ಉತ್ತಮ ಮಹಿಳೆಯರನ್ನಾಗಿ' ರೂಪಿಸುವುದು ಇವರ ಪ್ರಮುಖ ಉದ್ದೇಶವಾಗಿತ್ತು. ಇದರಿಂದಾಗಿ ಈ ಘಟ್ಟದಲ್ಲಿ ಹೆಣ್ಣಿಗೆ ಕೊಡಮಾಡಿದ ಶಿಕ್ಷಣ ಗಂಡ, ತಂದೆ ಅಥವಾ ಮತ್ತಾರೋ ಪುರುಷನ ಪ್ರೋತ್ಸಾಹ, ಸಹಕಾರದಿಂದ ಮಾತ್ರ ಪಡೆಯಲು ಸಾಧ್ಯ ಎಂಬ ಮನೋಭಾವವನ್ನು ಅತ್ಯಂತ ಪ್ರಭಲವಾಗಿ ಬಿತ್ತಲಾಯಿತು. ಇದರ ಫಲವಾಗಿ ಆ ಕಾಲಘಟ್ಟದ ಶಿಕ್ಷಿತ ಮಹಿಳೆಯರು ಪುರುಷ ಪ್ರಭುತ್ವದ ಹಾಗೂ ಮೌಲ್ಯವ್ಯವಸ್ಥೆಯ ಪ್ರತಿಪಾದಕರಾಗಿಯೇ ಮುಂದುವರಿದಿರುವುದನ್ನು ಗುರುತಿಸಬಹುದು. ಮೊದಲ ಘಟ್ಟದ ಪ್ರಮುಖ ಲೇಖಕಿಯರಲ್ಲಿ ಒಬ್ಬರಾದ ತಿರುಮಲಾಂಬರವರಿಗೆ ದೊರೆತ ಶಿಕ್ಷಣವನ್ನು ಕುರಿತಂತೆ "ನಿಷ್ಠಾವಂತ ಕುಟುಂಬದಲ್ಲಿ ಬೆಳೆದ ಈ ಹುಡುಗಿ ಪ್ರಾಥಮಿಕ ಶಿಕ್ಷಣ ಪಡೆಯಲು ಸಾಧ್ಯವಾದದ್ದು ತಂದೆಗಿದ್ದ ವಿದ್ಯಾಭಿಮಾನದಿಂದ".[2] ಎಂಬ ಅಭಿಪ್ರಾಯ ಪಿತೃ

ಪ್ರಧಾನ್ಯತೆಯ ಉದಾರವಾದಿ ದೃಷ್ಟಿಕೋನವನ್ನೇ ಎತ್ತಿ ಹಿಡಿಯುತ್ತದೆ. ಹಾಗೂ ಮಹಿಳೆ ಕೂಡ ಶಿಕ್ಷಣ ತನಗೆ 'ದಕ್ಕಬೇಕಾದ' ಮೂಲಭೂತ ಅಗತ್ಯ ಎಂದಾಗಲೀ, ಅದು ತನ್ನ 'ಹಕ್ಕು' ಎಂದಾಗಲೀ ಭಾವಿಸದೆ ಅದನ್ನು ಪುರುಷ ಪ್ರಭುತ್ವ ತನ್ನ ಬಗೆಗೆ ಇರಿಸಿಕೊಂಡ ಉದಾರವಾದಿ ಮನೋಭಾವ ಎಂದೇ ಗ್ರಹಿಸಬೇಕಾಯಿತು. ಇದರಿಂದಾಗಿ ಶಿಕ್ಷಿತ ಮಹಿಳೆ ಕೂಡ ಪಿತೃ ಸಂಸ್ಕೃತಿಗೆ ಅನುಕೂಲಕರವಾದ ರೀತಿಯಲ್ಲಿ ತನ್ನ ಬದುಕನ್ನು ರೂಪಿಸಿಕೊಳ್ಳಲು ಪ್ರಯತ್ನಿಸಿದಳೇ ವಿನಃ ತನ್ನ ಸ್ವಂತ ಅಸ್ತಿತ್ವವನ್ನು ಸ್ಥಾಪಿಸಿಕೊಳ್ಳಲು ಮುಂದಾಗಲಿಲ್ಲ. ಮೊದಲ ಘಟ್ಟದ ಬರಹಗಾರ್ತಿಯರು ತಮಗೆ ದತ್ತವಾದ ಶಿಕ್ಷಣಾವಕಾಶಗಳ ಬಗೆಗೆ ಇದೇ ಬಗೆಯ ದೃಷ್ಟಿಕೋನವನ್ನು ಹೊಂದಿದ್ದವರಾಗಿದ್ದರು. ಇದರಿಂದಾಗಿ ಅವರ ಬರಹಗಳಲ್ಲಿ ಒಂದು ಬಗೆಯ 'ಋಣಭಾರ'ದ ಹೊರೆ ಕಂಡುಬರುತ್ತದೆಯೇ ಹೊರತು ತಮ್ಮ ಅಂತಶಕ್ತಿಯ ಬಗೆಗಿನ ಆತ್ಮಸ್ಥೈರ್ಯ ವ್ಯಕ್ತವಾಗುವುದಿಲ್ಲ.

ಪಿತೃಪ್ರಭುತ್ವ ಹೆಣ್ಣಿಗೆ ನೀಡಿದ ಶಿಕ್ಷಣಾವಕಾಶಗಳು ಬಾಲ್ಯದಲ್ಲಿಯೇ ಬಂದೊದಗಿದ ವೈಧವ್ಯವನ್ನು ಕಳೆಯುವ ಸಲುವಾಗಿ ತಮ್ಮ "ಮಗಳು ತನ್ನ ಜೀವನದಲ್ಲೆದುರಾದ ದುಃಖದಿಂದ ಕೊರಗಿ-ಸೊರಗಿ ಕೂಡದೇ ಸಮಯ ದೊರೆತಾಗ ಸದ್ಗ್ರಂಥಗಳನ್ನು ಪಠಿಸಿ ನೋವು ಮರೆಯುವಂತಾದರೆ ಸಾಕೆಂಬ ಉದ್ದೇಶ ಅವರಿಗಿತ್ತೇ ಹೊರತು ಮುಂದೆ ಅವಳು ತನ್ನದೇ ಆದ ಬರವಣಿಗೆ ಬರೆದು ಖ್ಯಾತ ಬರಹಗಾರ್ತಿ ಆಗುವಳೆಂಬ ಕಲ್ಪನೆ ಕೂಡ ಅವರಿಗಾಗ ಇರಲಿಲ್ಲ"[೩]. ಎಂದು ತಿರುಮಲಾಂಬರವರಿಗೆ ದೊರೆತ ಶಿಕ್ಷಣವನ್ನು ಕುರಿತಂತೆ ವ್ಯಕ್ತವಾಗುವ ಅಭಿಪ್ರಾಯಗಳು ಬಹುತೇಕ ಆ ಕಾಲಘಟ್ಟದ ಎಲ್ಲಾ ಲೇಖಕಿಯರಿಗೂ ಕೂಡ ಸಮಾನವಾಗಿ ಅನ್ವಯಿಸಲ್ಪಡುತ್ತದೆ. ಆದುದರಿಂದಾಗಿ ಪಿತೃ ಸಂಸ್ಕೃತಿ ಆರಂಭದಲ್ಲಿ ನೀಡಿದ ಶಿಕ್ಷಣದ ಉದ್ದೇಶ ಭಗವಂತನ ನಾಮ ಸ್ಮರಣೆಯ ಮೂಲಕ ಬಾಲವಿಧವೆಯರು ತಮ್ಮ ಜೀವನದಲ್ಲಿ ಎದುರಾಗಬಹುದಾದ ನೋವು ಹಿಂಸೆಯನ್ನು ಮರೆತು ಕುಟುಂಬದ ಚಟುವಟಿಕೆಗಳಲ್ಲಿ ತಮ್ಮನ್ನು ತೊಡಗಿಸಿಕೊಳ್ಳಬೇಕು ಎಂಬುದಾಗಿತ್ತೇ ವಿನಃ ಅವರು ಸ್ವತಂತ್ರವಾಗಿ ತಮ್ಮ ಬದುಕನ್ನು ರೂಪಿಸಿಕೊಳ್ಳಲಿ ಎಂಬ ಆಶಯವೇನೂ ಇರಲಿಲ್ಲ . ಇದನ್ನು ಬಿ.ಟಿ. ಲಲಿತಾ ನಾಯಕ್‌ರವರ ಕವನ ಮತ್ತೊಂದು ರೀತಿಯಲ್ಲಿ ಹಿಡಿದಿಡಲು ಪ್ರಯತ್ನಿಸುತ್ತದೆ.

ಆ ಕಾಲದಿಂದ ಈ ಕ್ಷಣದವರೆಗೂ
ಅವರೇ ನಿನ್ನ ಪಾಲಕರು, ಪೋಷಕರು
ಬೇಕಾದಾಗ ರಕ್ಷಿಸುವ
ಬೇಡವಾದಾಗ ಭಕ್ಷಿಸುವ
ಹಕ್ಕುಳ್ಳ ಮಹಾನುಭಾವರು [೪]

ಎನ್ನುವ ಮೂಲಕ ಈ ಕವನ ಸುಧಾರಣಾವಾದದ ಹೆಸರಿನಲ್ಲಿ ಹೆಣ್ಣಿಗೆ ಕೊಡಮಾಡುತ್ತಿರುವ ಅವಕಾಶಗಳ ಹಿಂದಿನ ಪುರುಷ ಪ್ರಧಾನ ಸ್ವಹಿತಾಸಕ್ತಿಯನ್ನು ಬಯಲಿಗೆಳೆಯಲು ಪ್ರಯತ್ನಿಸುತ್ತದೆ. ಜೊತೆಗೆ ಪುರಷಶಾಹಿ ಹೆಣ್ಣಿಗೆ ಕೊಡಮಾಡಿದ ಶಿಕ್ಷಣ ಕೂಡ ಇದುವರೆಗೂ ರೂಢಿಯಲ್ಲಿದ್ದ ಪುರುಷ ಪ್ರಧಾನ ಯಜಮಾನ್ಯ ನೆಲೆಗಳಿಗೆ ದಕ್ಕೆಯಾಗದಂತೆ ಹಾಗೂ ಪುರುಷ ಪ್ರಧಾನ ಚೌಕಟ್ಟಿನೊಳಗೆ ಹೆಣ್ಣನ್ನು ಅಧೀನತೆಗೆ ಒಳಪಡಿಸಿಕೊಳ್ಳುವ ಮಾದರಿಯ ಶಿಕ್ಷಣವನ್ನು ನೀಡಲು ಪ್ರೋತ್ಸಾಹಿಸಲಾಯಿತು.

ಇದರಿಂದಾಗಿ ಪಿತೃ ಸಂಸ್ಕೃತಿ ತನ್ನ ಅಪೇಕ್ಷಿತ ಮೌಲ್ಯವ್ಯವಸ್ಥೆಯ ಚೌಕಟ್ಟಿನೊಳಗೆ ಹೆಣ್ಣಿನ ಅಸ್ತಿತ್ವವನ್ನು ನಿರ್ದಿಷ್ಟಗೊಳಿಸುವ ಕಾರ್ಯ ತಂತ್ರಗಳನ್ನು ಶಿಕ್ಷಣದ ಮೂಲಕ ಪ್ರಚುರಪಡಿಸಿತು ಎಂಬುದನ್ನು ಸ್ಪಷ್ಟಪಡಿಸುತ್ತದೆ.

ಆಧುನಿಕ ಮಹಿಳಾ ಕಾವ್ಯದಲ್ಲಿ ದಾಖಲಾಗಿರುವಂತೆ ಸುಧಾರಣಾವಾದಿ ಮನೋಭಾವದಿಂದ ಆರಂಭವಾದ ಪಿತೃ ಸಂಸ್ಕೃತಿಯ ಕಾರ್ಯಮಾದರಿಗಳು ಹೆಣ್ಣಿನ 'ಉದ್ಧಾರ'ದ ಉದ್ದೇಶವನ್ನು ಮುಖ್ಯ ಆಶಯವೆಂದು ಬಿಂಬಿಸುತ್ತಲೇ ಅವಳನ್ನು ಸಾಂಪ್ರದಾಯಿಕ ಮೌಲ್ಯ ವ್ಯವಸ್ಥೆಯ ಚೌಕಟ್ಟಿನೊಳಗೆ ಬಂಧಿಯಾಗಿಸುವಲ್ಲಿ ಯಶಸ್ವಿಯಾದವು. ಸುಧಾರಣಾವಾದಿಗಳಿಂದ ದತ್ತವಾದ ಅವಕಾಶಗಳು ಮೇಲ್ನೋಟಕ್ಕೆ ಹೆಣ್ಣಿನ ಬಿಡುಗಡೆಯ ಆಶಯವನ್ನು ಹೊಂದಿದ್ದರೂ ಕೂಡ ಅವು ಆಂತರ್ಯದಲ್ಲಿ ಮೌಲ್ಯ ವ್ಯವಸ್ಥೆಯನ್ನು ಬಲಗೊಳಿಸಲು ಸಹಾಯಕವಾದವು ಎಂಬುದು ವಿಶೇಷ.

ಹೆಣ್ಣು ಎಲ್ಲಿ, ಎಷ್ಟು ಓದಬೇಕು? ಯಾರನ್ನು ವಿವಾಹವಾಗಬೇಕು? ಅವಳ ಸಾಮಾಜಿಕ ಪಾಲ್ಗೊಳ್ಳುವಿಕೆಯ ಸ್ವರೂಪ ಹೇಗಿರಬೇಕು? ಅಭಿವ್ಯಕ್ತಿ ಮಾಧ್ಯಮ ಯಾವುದಾಗಬೇಕು? ಅವಳು ತೆಗೆದುಕೊಳ್ಳುವ ನಿರ್ಧಾರಗಳು ಹೇಗಿರಬೇಕು? ಹೆಣ್ಣು ತನ್ನ ವ್ಯಕ್ತಿತ್ವವನ್ನು ಹೇಗೆ ರೂಪಿಸಿಕೊಳ್ಳಬೇಕು? ನಡೆ,ನುಡಿ,ಹಾವ,ಭಾವ, ಉಡುಗೆ ತೊಡುಗೆ ಹೇಗಿರಬೇಕು? ಎಲ್ಲವೂ ಕೂಡ ಮೌಲ್ಯ ವ್ಯವಸ್ಥೆಯ ನಿರ್ದೇಶನದ ಮೂಲಕವೇ ಚಿತ್ತಲ್ಪಡುತ್ತದೆ. ಇದಕ್ಕೆ ಪೂರಕವೆಂಬಂತೆ ಮಹಿಳಾ ಅಭಿವ್ಯಕ್ತಿ ಕೂಡ ಅದಕ್ಕೆ ಬದ್ಧವಾಗಿಯೇ ಕಾರ್ಯ ನಿರ್ವಹಿಸುತ್ತದೆ. "ಆರಂಭಿಕ ಕಾಲಘಟ್ಟದಲ್ಲಿ ಪ್ರಧಾನ ಧಾರೆಯು ಮಹಿಳೆಯನ್ನು ಬರಹಗಾರಳನ್ನಾಗಿ ರೂಪಿಸಲು ತೋರಿಸಿದ ಆಸಕ್ತಿಯು ಇನ್ನೊಂದು ದಿಕ್ಕಿನಿಂದ ನೋಡಿದರೆ ಅದರ ನಿರ್ದೇಶನಗಳನ್ನು ಗುರುತಿಸಿಕೊಡುತ್ತದೆ. ಮಹಿಳೆಯರು ಏನನ್ನು ಕುರಿತು ಬರೆಯಬೇಕು? ಹೇಗೆ ಬರೆಯಬೇಕು ಇತ್ಯಾದಿ ಹಲವು ವಿಚಾರಗಳಲ್ಲಿ ಅವರಿಗೆ ಸ್ಪಷ್ಟ ನಿರ್ದೇಶನಗಳನ್ನು ಪ್ರೋತ್ಸಾಹದ ಮಾತುಗಳ ಮೂಲಕ ನೀಡುತ್ತಿವೆ".[8] ಕೆಲ ಸಂದರ್ಭದಲ್ಲಿ ಇವು ಹೆಣ್ಣಿನ ಆಯ್ಕೆ ಎಂಬಂತೆ ಕಂಡುಬಂದರೂ ಕೂಡ ಅವು ಪಿತೃ ಸಂಸ್ಕೃತಿಯಿಂದ ದತ್ತವಾದ ಅವಕಾಶಗಳ ಅಧೀನಕ್ಕೇ ಒಳಪಟ್ಟಿರುವಂತವಾಗಿರುತ್ತವೆ. ಇದರಿಂದಾಗಿ ಹೆಣ್ಣು ತನ್ನದೇ ಆದ ಸ್ವತಂತ್ರ ಅಸ್ತಿತ್ವವನ್ನು ಸಾಮಾಜಿಕ ಹಾಗೂ ಸಾಹಿತ್ಯಿಕ ಸಂದರ್ಭಗಳೆರಡರಲ್ಲಿಯೂ ಕೂಡ ರೂಪಿಸಿಕೊಳ್ಳಲು ಸಾಧ್ಯವಾಗುವುದೇ ಇಲ್ಲ. ಪುರುಷ ಪ್ರಧಾನ ಯಜಮಾನ್ಯದ ನಿರ್ದೇಶನದಂತೆಯೇ ಹೆಣ್ಣು ಕಾರ್ಯ ನಿರ್ವಹಿಸಬೇಕಾದ ಅನಿವಾರ್ಯತೆಯನ್ನು ಸೃಷ್ಟಿಸಲಾಗುತ್ತದೆ.

ಹಿಂದಿನಿಂದಲೂ ಹೆಣ್ಣಿನ ಬದುಕು ಈ ಬಗೆಯ ಮೌಲ್ಯ ವ್ಯವಸ್ಥೆಗೆ ಒಳಗಾಗಿದ್ದು ಹೆಣ್ಣು ಸ್ವತಂತ್ರವಾಗಿ ನಿರ್ಧಾರಗಳನ್ನು ತೆಗೆದುಕೊಳ್ಳಬಹುದಾದ ಸಾಧ್ಯತೆಗಳೆಲ್ಲವನ್ನೂ ಪಿತೃಸಂಸ್ಕೃತಿ ಇಲ್ಲವಾಗಿಸಿದೆ. ಮಾತ್ರವಲ್ಲದೆ ಹೆಣ್ಣು ತನ್ನ ಸಾಮರ್ಥ್ಯದ ಬಗೆಗೆ ಆತ್ಮವಿಶ್ವಾಸವನ್ನೇ ಬೆಳಸಿಕೊಳ್ಳದಂತೆ ಎಚ್ಚರವಹಿಸಲಾಗುತ್ತಿದೆ. ಈ ಮೂಲಕ ಹೆಣ್ಣಿನ ಪ್ರತಿರೋಧದ ನೆಲೆಗಳನ್ನು ಇಲ್ಲವಾಗಿಸುವ ಪ್ರಯತ್ನ ನಿರಂತರವಾಗಿ ನಡೆಯುತ್ತಿದೆ. ಮೊದಲಘಟ್ಟದ ಮುಖ್ಯ ಲೇಖಕಿ ತಿರುಮಲಾಂಬ ಸುಶೀಲೆಯ ಮುನ್ನುಡಿಯಲ್ಲಿ "ನಾನು ವಿದ್ಯಾಗಂಧವನ್ನೇ ತಿಳಿಯದ ಅಲ್ಪಮತಿಯಾದ ಸಾಮಾನ್ಯ ಸ್ತ್ರೀ. ನವ

ನಾಗರೀಕತೆಯ ಸುಳಿವಾಗಲೀ, ತಿಳಿವಳಿಕೆಯ ತಿರುಳಾಗಲೀ ತಿಳಿಯದ ಬಾಲಿಕೆ"[1]. ಎಂದು ಹೇಳುವ ಮಾತುಗಳು ತಾನೂ ಕೂಡ ಪುರುಷನಿಗೆ ಸಮಾನವಾದ ಜ್ಞಾನ, ತಿಳುವಳಿಕೆಯನ್ನು ಪಡೆಯಬಹುದೆಂಬ ಸ್ವಪ್ರಜ್ಞೆಯ ನಡುವೆಯೂ ಪುರುಷ ಪ್ರಧಾನ ವ್ಯವಸ್ಥೆಯ ಅಪೇಕ್ಷೆಗೆ ತಕ್ಕಂತೆ ಹೆಣ್ಣು ಬದುಕನ್ನು ರೂಪಿಸಿಕೊಳ್ಳಬೇಕೆಂಬ ನಿರ್ದೇಶನಾತ್ಮಕ ಕಾರ್ಯಮಾದರಿಯಿಂದ ಪ್ರೇರಿತವಾಗಿರುವ ಮನೋಭಾವವೇ ಪ್ರಧಾನವಾಗಿರುವುದನ್ನು ಗುರುತಿಸಬಹುದು.

ಪುರುಷ ಪ್ರಧಾನ ವ್ಯವಸ್ಥೆ ಹೆಣ್ಣನ್ನು ತನ್ನ ಅನುಕೂಲಕ್ಕೆ ತಕ್ಕಂತೆ ರೂಪಿಸಿಕೊಳ್ಳುವಲ್ಲಿ ಧರ್ಮ, ದೈವ, ಆಧ್ಯಾತ್ಮದ ನೆರವನ್ನೂ ಕೂಡ ಅತ್ಯಂತ ಸಮರ್ಥವಾಗಿ ಬಳಸಿಕೊಂಡಿದೆ. ಸಾಮಾಜಿಕ ಮತ್ತು ಸಾಂಸ್ಕೃತಿಕ ಘಟಕಗಳಾದ ಕುಟುಂಬ, ವಿವಾಹ, ದಾಂಪತ್ಯ, ಸತೀತ್ವ, ತಾಯ್ತನ, ಎಲ್ಲಕ್ಕೂ ಧರ್ಮದ ನಂಟನ್ನು ಬೆಸೆಯುವ ಮೂಲಕ ಹೆಣ್ಣು ಗಂಡಿನ ಸಂಬಂಧವನ್ನು ದೈವಿಕ ನೆಲೆಗೆ ಕೊಂಡೊಯ್ಯುತ್ತದೆ. ಇದರಿಂದಾಗಿ ವಿವಾಹ ಸ್ವರ್ಗದಲ್ಲಿ ನಿಶ್ಚಯವಾಗುತ್ತದೆ, ವಿಧಿಲಿಖಿತ, ದೈವಪ್ರೇರಣೆ, ಗಂಡ ಹೆಂಡತಿಯರ ಸಂಬಂಧ ಅತ್ಯಂತ ಪವಿತ್ರವಾದದ್ದು. ಎಂಬ ನಂಬಿಕೆಗಳು ಬಲವಾಗಿ ಬೇರೂರಲು ಕಾರಣವಾಗಿದೆ. ಇದನ್ನು ಮುಗ್ಧವಾಗಿ ಒಪ್ಪಿಕೊಂಡ ಮೊದಲಘಟ್ಟದ ಲೇಖಕಿಯರು ಪಾತಿವ್ರತ್ಯ, ಶೀಲ, ಕುಟುಂಬದ ಹಿತ, ಲೈಂಗಿಕ ಬದ್ಧತೆ, ಪತಿಸೇವೆ ಮುಂತಾದವು ಹೆಣ್ಣಿನ ಮುಖ್ಯ ಕರ್ತವ್ಯಗಳೆಂದು ತಮ್ಮ ಸಾಹಿತ್ಯಿಕ ಮತ್ತು ಸಾಮಾಜಿಕ ಚಟುವಟಿಕೆಗಳ ಮೂಲಕ ಬಿಂಬಿಸಿದರು. ಅಷ್ಟೇ ಅಲ್ಲದೆ ನಂಜನಗೂಡು ತಿರುಮಲಾಂಬ ವಿಧವಾ ತತ್ವವನ್ನು ಪ್ರತಿಪಾದಿಸುವ ಸಂದರ್ಭದಲ್ಲಿ ವೈಧವ್ಯವನ್ನು ಕಳೆಯುವುದರ ಬಗೆಗೆ ದಿಟ್ಟ ಮನೋಭಾವವನ್ನು ಪ್ರದರ್ಶಿಸುತ್ತಾದರೂ ವೈಧವ್ಯವನ್ನು ಕುರಿತಂತೆ "ಇದರಲ್ಲಿ ಭಗವಂತನ ನಿಗೂಢವಾದ ಬಲವದುದ್ದೇಶವೊಂದಾವುದೋ ಇರುವುದೆಂದೂ, ಅದನ್ನು ತಿಳಿದು ಅದರಂತೆ ನಡೆದು ಕೃತಾರ್ಥತೆ ಹೊಂದಬೇಕೆಂದೂ ನನ್ನ ಹಿಂದಿನ ೧೨ ವರ್ಷಗಳ ಬಹು ದೀರ್ಘಕಾಲವನ್ನು ವಿಚಾರ ವಿಮರ್ಶೆ ಮತ್ತು ಅಭ್ಯಾಸಗಳಲ್ಲಿ ಕಳೆದು ಈಗಲೀಗ ಭಗವದನುಗ್ರಹ ಲಬ್ಧವಾಗಿರುವ ಆ ಪರಮಾರ್ಥಿಕ ಸಂಬಂಧವಾದ ಆತ್ಮಾನಂದದಲ್ಲಿ ನಲಿದಾಡುವಂತಾಗಿರುವೆನು. ಅದರಿಂದಲೇ ನಾನಿದನ್ನು ನಿಸ್ಸಾರವೆಂದಾಗಲೀ, ತುಚ್ಚವಾದುದೆಂದಾಗಲೀ ಹೇಳಲೊಲ್ಲದವಳಾಗಿರುವೆನು"[2]. ಎಂದು ವೈಧವ್ಯದ ಆಚರಣೆಯನ್ನು ಸಮರ್ಥಿಸುತ್ತಾರೆ. ದೈವಪ್ರೇರಣೆಯಿಂದ ನೆರವೇರಲ್ಪಟ್ಟ ವಿವಾಹ ಹಾಗೂ ಗಂಡು ಹೆಣ್ಣಿನ ಸಂಬಂಧ ತನ್ನ ಪಾವಿತ್ರ್ಯವನ್ನು ಉಳಿಸಿಕೊಳ್ಳಬೇಕು ಎಂಬುದೇ ಇದರ ಹಿಂದಿನ ಉದ್ದೇಶವಾಗಿದೆ.

ಗಂಡು ಹೆಣ್ಣಿನ ಸ್ಥಾನ ಮಾನಗಳನ್ನು ಕುರಿತಂತೆ, ಅವರ ಕಾರ್ಯ ನಿರ್ವಹಣೆಯನ್ನು ಕುರಿತಂತೆ ಜಗತ್ತಿನ ಎಲ್ಲಾ ಧರ್ಮಗಳೂ ಗಂಡಿಗೆ ಮೊದಲ ಸ್ಥಾನವನ್ನು ನೀಡಿವೆ. ಗಂಡುಮಕ್ಕಳ ಮೂಲಕ ಮುಕ್ತಿ ಸಾಧ್ಯ, ಗಂಡುಮಕ್ಕಳು ವಂಶೋದ್ಧಾರಕರು ಎಂಬೆಲ್ಲಾ ನಂಬಿಕೆಗಳನ್ನು ಬಿತ್ತುವುದರ ಮೂಲಕ ಸಮುದಾಯದಲ್ಲಿ ಗಂಡಿನ ಸ್ಥಾನವನ್ನು ಮುನ್ನೆಲೆಗೆ ತರುವ ಪ್ರಯತ್ನವನ್ನು ಗುರುತಿಸಬಹುದು. ಜೊತೆಗೆ ವಿವಾಹದ ನಿಯಮಗಳು ಹಾಗೂ ಅದರ ಕಾರ್ಯವಿಧಾನಗಳು ಪುರುಷ ಪ್ರಾಧಾನ್ಯತೆಯನ್ನು ಅಧಿಕೃತ ಗೊಳಸುವ ಪಿತೃ ಪ್ರಭುತ್ವದ ಕಾರ್ಯ ಮಾದರಿಗಳೇ ಆಗಿವೆ. ವಿವಾಹ ಮತ್ತು ದಾಂಪತ್ಯವನ್ನು

ದೈವತ್ವದ ಪ್ರೇರಣೆ ಎಂದು ಪರಿಗಣಿಸುವ ಪ್ರಭುತ್ವ ಆ ಮೂಲಕ ಹೆಣ್ಣಿನ ಅಧೀನತೆಗೆ ಮತ್ತಷ್ಟು ಪುಷ್ಟಿ ನೀಡುತ್ತದೆ. ವಿವಾಹ ಮತ್ತು ದಾಂಪತ್ಯದ ಮಹತ್ವವನ್ನು ಆಧ್ಯಾತ್ಮದ ನೆಲೆಗಟ್ಟಿನಲ್ಲಿ ಗ್ರಹಿಸುವ ಬೆಳಗೆರೆ ಜಾನಕಮ್ಮನವರು ತಮ್ಮ 'ಕಲ್ಯಾಣ' ಕವನದಲ್ಲಿ ಅದರ ಮಹತ್ವವನ್ನು ಈ ರೀತಿ ವರ್ಣಿಸಿದ್ದಾರೆ.

'ನೀತಿಮಾರ್ಗದಿ ವಿಜಯ ಹೊಂದುವ
ನ್ಯಾಸವೇ ಕಲ್ಯಾಣವು
ತತ್ವವೆಲ್ಲವು ಅಡಗಿಕೊಂಡಿದೆ
ಮಾನವರ ದಾಂಪತ್ಯದಿ
ಎರಡನೊಂದಾಗಿಸುವ ಸಂಗಮ
ಕ್ಷೇತ್ರವೀ ಸಂಸಾರವು
ದ್ವೈತದೊಳಗದ್ವೈತ ಮಹಿಮೆಯ
ತಿಳಿವುದೇ ಕಲ್ಯಾಣವು'. [೮]

ಎಂಬುದು ವಿವಾಹಕ್ಕೆ ಆಧ್ಯಾತ್ಮದ ನಂಟನ್ನು ನೀಡುವ ಮೂಲಕ ಬದುಕನ್ನು ಅರಿಯುವ, ಸುಖವನ್ನು ಪಡೆಯುವ ಹಾದಿ ಎಂದು ತಿಳಸಲು ಪ್ರಯತ್ನಿಸುತ್ತಾರೆ. ಈ ಮೂಲಕ ದಾಂಪತ್ಯದ ಪವಿತ್ರತೆಯನ್ನು ಕಾಯ್ದುಕೊಳ್ಳುವುದೂ ಕೂಡ ಮುಖ್ಯ ಎಂಬ ಅಂಶ ಕಂಡುಬರುತ್ತದೆ. ಆರಂಭದಲ್ಲಿಯೇ ಬರುವ ಸೂತ್ರಧಾರಿಯು ನಟಿಯು ಪ್ರಥಮದಿ ಬರುವುದೇ ಕಲ್ಯಾಣವು ಎಂಬ ಮಾತು 'ಹೆಣ್ಣಿನ ಬದುಕಿನ ಸೂತ್ರದಾರ ಗಂಡ' ಎಂಬುದನ್ನೂ, ಅದನ್ನು ಮಾನ್ಯ ಮಾಡುವ ಸಂಸ್ಥೆ ವಿವಾಹ ಎಂಬುದನ್ನು ಸ್ಪಷ್ಟಪಡಿಸುತ್ತದೆ. ಇದು ಇಂದಿಗೂ ಕೂಡ ವಿವಾಹದ ಬಗೆಗೆ ಇರುವ ಸಾಮಾಜಿಕ ನಂಬಿಕೆಯನ್ನು ಎತ್ತಿ ಹಿಡಿಯುತ್ತದೆ. ಈ ಬಗೆಯ ನಂಬಿಕೆಗಳಿಂದಾಗಿ ಗಂಡನ ಅಸ್ತಿತ್ವವನ್ನಾಗಲೀ, ವಿವಾಹದ ಬಂಧನವನ್ನಾಗಲೀ ಹೆಣ್ಣು ಪ್ರತಿರೋಧಿಸಲು, ಪ್ರಶ್ನಿಸಲು ಅವಕಾಶವೇ ಇಲ್ಲದಂತಾಗಿ ಪಿತೃ ಪ್ರಭುತ್ವದ ನಿರ್ದೇಶನದಂತೆ ಹೆಣ್ಣು ಬದುಕುವ ಅನಿವಾರ್ಯತೆಯನ್ನು ಸೃಷ್ಟಿಸಲಾಗಿದೆ. ಬದಲಾದ ಕಾಲ, ಸನ್ನಿವೇಶದ ಸಂದರ್ಭದಲ್ಲಿಯ ವಿವಾಹದ ಸ್ವರೂಪದಲ್ಲಿ ಹೆಚ್ಚು ಬದಲಾವಣೆಗಳಾಗದಿರುವುದನ್ನು ವೈದೇಹಿ ಅವರ 'ಸ್ವಯಂವರಗೀತೆ' ,ಲಲಿತಾ ಸಿದ್ಧಬಸವಯ್ಯರವರ 'ನಾಗವಲಿಯ್ಲು ಸ್ವಯಂವರವೆಂಬೋ ನಾಟ್ಯಗೀತೆ' ಕವನಗಳು ಎತ್ತಿಹಿಡಿಯುತ್ತದೆ. ಮೇಲ್ನೋಟಕ್ಕೆ ಹೆಣ್ಣಿನ ಆಯ್ಕೆ, ಅಭಿಪ್ರಾಯ, ಅಭಿರುಚಿಗಳಿಗೆ ಅವಕಾಶಗಳಿರುವಂತೆ ಕಂಡುಬಂದರೂ ಕೂಡ ಮೂಲ ಆಶಯ ಮಾತ್ರ ಪಿತೃ ಪ್ರಭುತ್ವದ ಪರವಾಗಿ ಇರುವುದನ್ನು ಈ ಕವನಗಳು ಸ್ಪಷ್ಟಪಡಿಸುತ್ತವೆ.

ತಡೆಯಲಾರೆನು ಇನ್ನು
ಇವರೆಲ್ಲ ಬೇಟೆಯವರು – ನನ್ನ
ಚಿಗರೆ ಮಾಡುವರು
ಇವರೆಲ್ಲ ಕೋಟೆಯವರು – ನನ್ನ
ಪಹರೆ ಮಾಡುವರು
ಸ್ವಯಂವರಿಸುವ ಸ್ವಾತಂತ್ರ್ಯ
ನಾಟಕವೆ ಸಾಕಿನ್ನು [೯]

ಇಲ್ಲಿ ಹೆಣ್ಣಿಗೆ ಕೊಡಲ್ಪಟ್ಟಿದೆ ಎನ್ನಲಾಗುತ್ತಿರುವ ಅವಕಾಶಗಳೂ ಕೂಡ ಪಿತೃ ಪ್ರಭುತ್ವದ ಹಿಡಿತದಲ್ಲಿಯೇ, ಅವರ ಅಭಿಲಾಶೆ, ಅಭಿರುಚಿ, ಆಸಕ್ತಿಗೆ ತಕ್ಕಂತೆ ಕಾರ್ಯ ನಿರ್ವಹಿಸುತ್ತಿರುವುದನ್ನು ಕಾಣಬಹುದು.

ಈ ಬಗೆಯ ಕಾರ್ಯಮಾದರಿಗಳಲ್ಲಿ ಹೆಣ್ಣಿನ ಮೇಲೆ ಹೇರಲ್ಪಡುವ ಮೌಲ್ಯಗಳು ಪಿತೃ ಪ್ರಭುತ್ವದ ಒತ್ತಾಯವಾಗಿರದೆ 'ಹೆಣ್ಣಿನ ಒಪ್ಪಿತ ಸ್ಥಿತಿ' ಎಂದೇ ಬಿಂಬಿತವಾಗುತ್ತವೆ. ಇವು ಮನೆತನದ ಮರ್ಯಾದೆ, ಗೌರವ, ಹೆಣ್ಣಿಗಿರಬೇಕಾದ ಸಹಜ ಗುಣಗಳು ಎಂಬ ಹೆಸರಿನಲ್ಲಿ ಹೆಣ್ಣಿನ ಮೇಲೆ ಹೇರಲ್ಪಡುತ್ತವೆ. ಇದರಿಂದಾಗಿ ಹೆಣ್ಣು ಈ ಬಗೆಯ ಮೌಲ್ಯಗಳನ್ನು ಗುರುತಿಸಲು ಮತ್ತು ಅವುಗಳಿಂದ ಬಿಡುಗಡೆ ಪಡೆಯಲು, ನಿರ್ದಿಷ್ಟ ಕಾರ್ಯತಂತ್ರಗಳನ್ನು ರೂಪಿಸಿಕೊಳ್ಳಲು ಸಾಧ್ಯವಿಲ್ಲ. ಒಂದೆಡೆ ಹೆಣ್ಣಿಗೆ ತಾಯಿ, ಗೃಹಿಣಿ, ಹೆಂಡತಿ, ಮಗಳು ಮುಂತಾದ ನಿರ್ದಿಷ್ಟ ಪಾತ್ರ ನಿರ್ವಹಣೆಯನ್ನು ನೀಡುವುದರ ಮೂಲಕ ಆ ರೀತಿ ವರ್ತಿಸುವಂತೆ ನಿರ್ದೇಶನಗಳನ್ನು ನೀಡುತ್ತಿದ್ದರೆ ಮತ್ತೊಂದೆಡೆ ಹೆಣ್ಣನ್ನು ಸಂಪೂರ್ಣವಾಗಿ 'ವಿಸ್ಮೃತಿ'ಗೆ ತಳ್ಳಿ ಅವಳ ಇರುವಿಕೆಯೆ ಗಂಡಿನ ಅಧೀನ ನೆಲೆಯದ್ದು ಎಂಬುದನ್ನು ಒಪ್ಪಿಸುವ ಪ್ರಯತ್ನಕ್ಕೆ ಆಧ್ಯತೆಯನ್ನು ನೀಡಲಾಗಿದೆ. ಹಾಗಾಗಿ ಈ ಬಗೆಯ ಮೌಲ್ಯಗಳನ್ನು ನಿರ್ಣಯಿಸಿ ಅದಕ್ಕೆ ಚಾಲನೆ ಕೊಡುವವನು ಗಂಡಸೇ ಆದರೂ ಈ ಮೌಲ್ಯಗಳು ಹೆಣ್ಣಿನ ಮೂಲಕವೇ ಸಾಮಾಜಿಕ ವ್ಯವಸ್ಥೆಯಲ್ಲಿ ಮಾನ್ಯತೆಯನ್ನು ಪಡೆಯುತ್ತವೆ ಹಾಗೂ ಇತರರ ಮೇಲೆ ಹೇರಲ್ಪಡುತ್ತವೆ. ಇವು ಹೆಚ್ಚಿನ ಸಂದರ್ಭದಲ್ಲಿ ತಾಯಿ, ಅಜ್ಜಿ, ಮುಂತಾದ ಹಿರಿಯ ಹೆಣ್ಣಿನ ರೂಪಕದ ಮೂಲಕ ಮಹಿಳಾ ಕಾವ್ಯದಲ್ಲಿ ಚರ್ಚಿತವಾಗುವುದನ್ನು ಕಾಣಬಹುದು. ತಾಯಿಯ ಮೂಲಕ ಹೇರಲ್ಪಡುವ ಮೌಲ್ಯ ವ್ಯವಸ್ಥೆಯ ಕಾರ್ಯ ಮಾದರಿಗಳನ್ನು ಶಶಿಕಲಾ ವೀರಯ್ಯಸ್ವಾಮಿಯವರ 'ಅರ್ಥಾಂತರ' ಕವನ ಅತ್ಯಂತ ಸಮರ್ಥವಾಗಿ ಹಿಡಿದಿಡಲು ಪ್ರಯತ್ನಿಸುತ್ತದೆ.

ನೋಡು ಮಗಳೇ ನೀನು ಈಗ ದೊಡ್ಡವಳು
ಅಲ್ಲಿ ಮದುವೆ ಮನೆಯಲ್ಲಿ ನೂರೆಂಟು ಕಣ್ಣುಗಳು
ಎತ್ತದಿರು ರೆಪ್ಪೆಗಳ ಕೆಂಡವಾಗಿ ಸುಡುವುವು
ಕಂಡ ಕಂಡವರೊಡನೆ ಸುಮ್ಮನೇ ನಗದಿರು . . . .
ಮಾತು ಕತ್ತರಿಸುತ್ತ ಬೇಸತ್ತ ಮಗಳು
"ನಕ್ಕರೇನಾದೀತು?" ಎಂದು ಪ್ರಶ್ನೆ ಒಗೆದಳು
ಅನಿರೀಕ್ಷಿತ ದಾಳಿಗೆ ಭುಗಿಲೆದ್ದಳು ತಾಯಿ!
"ನಕ್ಕು ನೋಡು ತಿಳಿಯುತ್ತದೆ. ಬಸಿರು
ಮುಂದೆ ಬಂದಾಗ ಜಗವು ನೋಡಿ ನಗುತ್ತದೆ
ಹೇಳಿದಷ್ಟು ಕೇಳೇ . . . . . ? [೧೦]

ಇಲ್ಲಿ ತಾಯಿ ತನ್ನ ಮಗಳನ್ನು ಹಿಡಿತದಲ್ಲಿಡಲು ಪ್ರಯತ್ನಿಸುತ್ತಿರುವಂತೆ ಕಂಡುಬಂದರೂ ಕೂಡ, ತಾಯಿಯ ಆತಂಕ ಪುರುಷ ಪ್ರಧಾನ ಮೌಲ್ಯ ವ್ಯವಸ್ಥೆಯನ್ನು ಮೀರಿದ ಸಂದರ್ಭದಲ್ಲಿ ಹೆಣ್ಣು ಅನುಭವಿಸಬೇಕಾದ ಸಮಸ್ಯೆ, ಸವಾಲುಗಳನ್ನು ಕುರಿತಂತೆ ಇರುವ ಆತಂಕವೇ ಆಗಿದೆ ಎಂಬುದನ್ನು ಧ್ವನಿಸುತ್ತದೆ.

ಒಟ್ಟಾರೆಯಾಗಿ ಶಿಕ್ಷಣ, ಉದ್ಯೋಗ, ಸಾಮಾಜಿಕ ಪಾಲ್ಗೊಳ್ಳುವಿಕೆ, ಸ್ವಾತಂತ್ರ್ಯಗಳು ಹೆಣ್ಣಿನ ಜೀವನದಲ್ಲಿ ಪುರುಷ ಪ್ರಧಾನ ವ್ಯವಸ್ಥೆಯ ನಿರ್ದೇಶನದಂತೆಯೇ ಕಾರ್ಯ ನಿರ್ವಹಿಸುತ್ತಿರುವುದನ್ನು ಇಂದಿಗೂ ಕೂಡ ಗಮನಿಸಬಹುದಾಗಿದೆ. ಹೆಣ್ಣು ಶಿಕ್ಷಣ ಪಡೆದ ಕಾರಣದಿಂದಾಗಿ ಅವಳ ಜೀವನ ಸುಧಾರಿಸಿತು ಎಂಬ ಅಂಶ ನಿಜವಾದರೂ ಪಿತೃ ಸಂಸ್ಕೃತಿ ಹೆಣ್ಣಿಗೆ ನೀಡಿದ ಶಿಕ್ಷಣದ ಉದ್ದೇಶ ಅವಳು

ಸ್ವತಂತ್ರ ಬದುಕನ್ನು ರೂಪಿಸಿಕೊಳ್ಳುವ ಆಶಯದ್ದಾಗಿರಲಿಲ್ಲ ಎಂಬುದು ಗಮನಿಸಬೇಕಾದ ಸಂಗತಿ. ಸುಧಾರಣಾವಾದದ ಫಲದಿಂದ ದತ್ತವಾದ ಸ್ತ್ರೀ ಶಿಕ್ಷಣ ಅವಳೊಂದು ಸ್ವತಂತ್ರ ಬದುಕನ್ನು ರೂಪಿಸಿಕೊಳ್ಳಲಿ ಎಂಬ ಆಶಯಕ್ಕಿಂತ ಗೃಹಿಣಿತ್ವ, ಮಾತೃತ್ವ, ಸತೀತ್ವಗಳನ್ನು ಬೋಧಿಸುವ, ಕುಟುಂಬ ನಿರ್ವಹಣೆಗೆ ಬೇಕಾದ ತರಬೇತಿ ನೀಡುವ ಕೇಂದ್ರಗಳಾದವೇ ಹೊರತು ಹೆಣ್ಣಿನ ಸ್ವತಂತ್ರ ಅಸ್ತಿತ್ವಕ್ಕೆ ಅವಕಾಶವನ್ನೇ ನೀಡಲಿಲ್ಲ ಎಂಬುದು ಹೆಣ್ಣಿಗೆ ದತ್ತವಾದ ಅವಕಾಶಗಳು ಪಿತೃ ಪ್ರಧಾನ ವ್ಯವಸ್ಥೆಯ ನಿರ್ದೇಶನದ ಮಾದರಿಯಲ್ಲಿಯೇ ಕಾರ್ಯನಿರ್ವಹಿಸುತ್ತವೆ ಎಂಬುದನ್ನು ಸ್ಪಷ್ಟಪಡಿಸುತ್ತದೆ. ಮತ್ತು ಈ ನಿರ್ದೇಶನಗಳು ಯಾವಾಗಲೂ ಪಿತೃ ಪ್ರಭುತ್ವಕ್ಕೆ ದಕ್ಕೆ ಬಾರದಂತೆ ಹಾಗೂ ಹೆಣ್ಣು ತನಗೆ ನಿಗದಿಪಡಿಸಿದ ಚೌಕಟ್ಟಿನಿಂದ ಹೊರ ಹೋಗದಂತೆ ಕಾರ್ಯತಂತ್ರಗಳನ್ನು ರೂಪಿಸುತ್ತಿರುತ್ತದೆ.

ಹೆಣ್ಣನ್ನು ಮಹಾಮಾಯಿಯಾಗಿ ಹಾಗೂ ಮಹಾಕಾಳಿಯಾಗಿ ಎರಡು ವಿರುದ್ಧ ನೆಲೆಗಳಲ್ಲಿ ಗುರುತಿಸುವ ಪಿತೃ ಪ್ರಭುತ್ವ ಈ ಎರಡೂ ಮಾದರಿಗಳನ್ನು ತನ್ನ ಅನುಕೂಲಕ್ಕೆ ತಕ್ಕಂತೆ ಬಳಸಿಕೊಂಡಿರುವುದನ್ನು ಮಹಿಳಾ ಕಾವ್ಯ ಭಿನ್ನ ಭಿನ್ನ ಆಯಾಮಗಳಲ್ಲಿ ಚರ್ಚೆಗೆ ಒಳಪಡಿಸುತ್ತದೆ. ಚಾಮುಂಡಿ, ಕಾಳಿಯ ರೂಪಕಗಳ ಮೂಲಕ ಪುರುಷ ಪ್ರಭುತ್ವದ ಕಾರ್ಯಮಾದರಿಯನ್ನು ಬಿ.ಟಿ. ಲಲಿತಾನಾಯಕ್ ಅವರ ಜೋಕೆ ಕಾಣವ್ವ ಚಾಮುಂಡಿ ಕವನ ಬಿಚ್ಚಿಡುವ ಬಗೆ ವಿಶಿಷ್ಟವಾದದ್ದು.

ಚಾಮುಂಡಿ ನೀ ಯಾಮಾರಿ ಬಿಟ್ಟೆಯಮ್ಮಾ
ಸಕಲ ಧನ ಸಂಪತ್ತು ದೇವಲೋಕದ ದೌಲತ್ತು
ರಂಭೆ ಗೊಂಬೆಯರ ಸಂಗ ಪಡೆಯಲಿಕ್ಕಾಗಿ
ಹಲವು ಹವಾಲಾಗಳ ಮೇಲೆ ಪರದೆ ಎಳೆವುದಕ್ಕಾಗಿ
ಹೊಗಳ್ಹೊಗಳಿ ನಿನ್ನ ಅಟ್ಟಕ್ಕೇರಿಸಿದರು ಅಕ್ಕ
ಪಾಲು ಕೇಳಿದ ಪಾಪಿಯ ತಲೆ ತೆಗೆಸಿದರಲ್ಲೆ
ಪಾತಕರು ವಂಚಕರು ಪಾರಾದರಲ್ಲೆ.[೧೧]

ಉಡಿತುಂಬ ನಿಗಿ ನಿಗಿ ಕೆಂಡ
ಗೊತ್ತು ಗೊತ್ತೇ ಅವ್ವ
ಉಸಿರೆತ್ತಬಾರದು ಗೊತ್ತು.
ಉಡಿಯ ತುಂಬಿದ್ದು ಆಲಿಕಲ್ಲೆಂಬಂತೆ
ನಡೆಯಬೇಕು, ಗೊತ್ತು.[೧೨]

ಹೂವಲ್ಲದೆ ಹುಲ್ಲತರನೆಂದು
ಸತ್ತರೂ ಮತ್ತೆ ಬಾರೆನೆಂದು
ಹೆತ್ತವರಿಗೆ ಮಾತಿತ್ತು ಬಂದಿದ್ದೇನೆ.[೧೩]

**೫.೨ ನಿಯಂತ್ರಿತ ಕಾರ್ಯ ಮಾದರಿಗಳು** : ಪಿತೃ ಸಂಸ್ಕೃತಿಯ ನಿರ್ದೇಶನದಂತೆ ಕಾರ್ಯ ನಿರ್ವಹಿಸುವ ಹೆಣ್ಣು ಸಮಾಜದಲ್ಲಿ ಗಣ್ಯ ಸ್ಥಾನವನ್ನು ಪಡೆದು ಎಲ್ಲರಿಂದ ಗೌರವಿಸಲ್ಪಡುತ್ತಾಳೆ. ಆದರೂ ಹೇರಲ್ಪಟ್ಟ ಜೀವನ ವಿಧಾನ ಹೆಚ್ಚು ದಿನ ತನ್ನ ಮೂಲಸ್ವರೂಪವನ್ನು ಉಳಿಸಿಕೊಳ್ಳಲು ಸಾಧ್ಯವಿಲ್ಲ. ಅದ್ದರಿಂದಾಗಿ ಹೆಣ್ಣು ಪುರುಷ ನಿರ್ದೇಶಿತ ನಿಯಮಗಳಾಚೆಗೂ ತನ್ನ ಆಸಕ್ತಿಯನ್ನು ಸಹಜವಾಗಿಯೇ ವ್ಯಕ್ತಪಡಿಸುತ್ತಾಳೆ. ಈ ಸಹಜ ಬಯಕೆಗಳನ್ನು ಪಿತೃ ಪ್ರಭುತ್ವ ಒತ್ತಾಯ ಪೂರ್ವಕವಾಗಿ ಹೆಚ್ಚು ದಿನ

ತಡೆಹಿಡಿಯಲು ಸಾಧ್ಯವಾಗುವುದಿಲ್ಲ ಕೂಡ. ಅದುದರಿಂದಾಗಿ ಪಿತೃ ಪ್ರಧಾನ ವ್ಯವಸ್ಥೆ ಮೌಲ್ಯ ವ್ಯವಸ್ಥೆಗೆ ದಕ್ಕೆ ಬಾರದ ರೀತಿಯಲ್ಲಿ ಒಳದಾರಿಗಳನ್ನು ಅಥವಾ ಪರ್ಯಾಯಗಳನ್ನು ಸೂಚಿಸಿ, ಆ ನಿರ್ದಿಷ್ಟ ಚೌಕಟ್ಟಿನೊಳಗೆ ಹೆಣ್ಣು ಕಾರ್ಯ ನಿರ್ವಹಿಸುವಂತೆ ಕಾರ್ಯತಂತ್ರಗಳನ್ನು ರೂಪಿಸಿ ಆ ಮೂಲಕ ಅವಳ ಬಯಕೆಗಳನ್ನು ನಿಯಂತ್ರಿಸಲು ಪ್ರಯತ್ನಿಸುತ್ತದೆ. ಈ ಬಗೆಯ ಕಾರ್ಯಮಾದರಿಗಳನ್ನು ಎರಡು ರೀತಿಗಳಲ್ಲಿ ವಿಂಗಡಿಸಬಹುದು.

ಹೆಣ್ಣಿನ ಕಾರ್ಯ ಚಟುವಟಿಕೆಗಳ ವಿಸ್ತರಣೆಗೆ ಸಂಬಂಧಿಸಿದಂತೆ ಕೆಲ ಅವಕಾಶಗಳನ್ನು ನೀಡಿ, ಆ ಅವಕಾಶ ಮತ್ತು ಆಯ್ಕೆಗಳೆಲ್ಲವೂ ಕೂಡ ಪುರುಷ ಅಪೇಕ್ಷಿತ ಮೌಲ್ಯವ್ಯವಸ್ಥೆಯನ್ನು ಬಲಪಡಿಸುವ ಮತ್ತು ಹೆಣ್ಣನ್ನು ನಿರ್ದಿಷ್ಟ ಚೌಕಟ್ಟಿಗೆ ಸೀಮಿತಗೊಳಿಸುವ ಸ್ವರೂಪದ್ದು. ಉದಾಃ ಹೆಣ್ಣಿಗೆ ಶಿಕ್ಷಣ, ಉದ್ಯೋಗ ಮುಂತಾದ ಅವಕಾಶಗಳನ್ನು ಕಲ್ಪಿಸಿ, ಶಿಕ್ಷಿತ ಮಹಿಳೆ ಕುಟುಂಬದ ಹೊಣೆಗಾರಿಕೆಯಿಂದ ಹೊರನೆಡೆಯದ ಹಾಗೆ, ಪುರುಷನ ಕಾರ್ಯ ಚಟುವಟಿಕೆಗಳಿಗೆ ಕುಂದುಂಟಾಗದ ಹಾಗೆ, ನಡೆದುಕೊಳ್ಳುವಂತೆ ಎಚ್ಚರಿಕೆಯಿಂದ ಕಾರ್ಯತಂತ್ರಗಳನ್ನು ರೂಪುಗೊಳಸುವ ವಿಧಾನ ಒಂದು ಬಗೆಯದು.

ಎರಡನೆಯದು ಒಳಿತು – ಕೆಡುಕು, ಪಾಪ – ಪುಣ್ಯ, ಸ್ವರ್ಗ – ನರಕ, ಮೇಲು – ಕೀಳು ಎಂಬ ಆಯ್ಕೆಗಳನ್ನು ನೀಡಿ, ಅವಳಲ್ಲಿ ಭಯ, ಆತಂಕಗಳನ್ನು ಸೃಷ್ಟಿಸುವುದು. ಈ ಮೂಲಕ 'ಒಳಿತಿನ', 'ಪುಣ್ಯ'ದ ಆಯ್ಕೆಗಳಿಗೆ ಹೆಚ್ಚು ಮಾನ್ಯತೆಯನ್ನೂ, ಹಾಗೆಯೇ ನಡೆದುಕೊಳ್ಳುವಂತೆ ಪರೋಕ್ಷವಾಗಿ ಪ್ರೇರೇಪಣೆಯನ್ನು ನೀಡುವುದು. ಇದರಿಂದಾಗಿ ಹೆಣ್ಣು ತನ್ನ ಸಹಜ ಬಯಕೆಗಳನ್ನು ಗುರುತಿಸುವ ಹಾಗೂ ಅದನ್ನು ವ್ಯಕ್ತಪಡಿಸುವ ಸಾಮರ್ಥ್ಯವನ್ನು ಕಳೆದುಕೊಂಡು ಪುರುಷನ ಅಪೇಕ್ಷೆಗೆ ತಕ್ಕಂತೆ ತನ್ನ ಜೀವನ ವಿಧಾನವನ್ನು ಮಾರ್ಪಡಿಸಿಕೊಳ್ಳುವ ಅನಿವಾರ್ಯತೆಗೆ ಒಳಗಾಗುವುದನ್ನು ಗುರುತಿಸಬಹುದು. ಈ ಮೂಲಕ ಹೆಣ್ಣಿನ ಆಯ್ಕೆ ಮತ್ತು ಬಯಕೆಗಳನ್ನು ಪುರುಷ ಪ್ರಭುತ್ವ ಪಿತೃ ಪ್ರಧಾನ್ಯತೆಯ ಮೂಲಕ ನಿಯಂತ್ರಸುತ್ತಿರುತ್ತದೆ.

ಆಧುನಿಕತೆಯ ಪ್ರವೇಶದ ಆರಂಭದಲ್ಲಿ ಹೆಣ್ಣು ಸಮಾಜದ ಎಲ್ಲಾ ಬಗೆಯ ಚಟುವಟಿಕೆಗಳಿಂದ ಬಾಹಿರವಾಗಿರುವ ಸಂದರ್ಭದಲ್ಲಿ ಕೌಟುಂಬಿಕ ವಿರೋಧದ ನಡುವೆಯೂ ಅವಳ ಓದಿಗೆ ಅವಕಾಶ ಹಾಗು ಉತ್ತೇಜನ ದೊರೆತದ್ದು ಪಿತೃ ಸಂಸ್ಕೃತಿಯ ವಕ್ತಾರರ ಮೂಲಕವೇ. ಆದುದರಿಂದಾಗಿಯೇ ಮೊದಲ ತಲೆಮಾರಿನ ಬಹುತೇಕ ಲೇಖಕಿಯರು ಸಾಮಾನ್ಯವಾಗಿ ಪಿತೃ ಪ್ರಭುತ್ವದ ಪರವಾಗಿಯೇ ಕಾರ್ಯ ನಿರ್ವಹಿಸುವುದನ್ನು ಗಮನಿಸಬಹುದಾಗಿದೆ. ಆರ್. ಕಲ್ಯಾಣಮ್ಮನವರು ಶಿಕ್ಷಿತ ಸ್ತ್ರೀಯರ ಸ್ಥಾನಮಾನಗಳನ್ನು ಕುರಿತಂತೆ "ಒಂದು ಕುಟುಂಬಕ್ಕೆ ಇಬ್ಬರು ಯಜಮಾನರಿದ್ದರೆ ಸರಿಬಾರದು. ಅದುದರಿಂದ ಭಗವಂತನು ಪತಿಯನ್ನು ಯಜಮಾನನನ್ನಾಗಿಯೂ, ಪತ್ನಿಯನ್ನು ಅವನಾಜ್ಞೆಗೆ ಅಧೀನಳಾಗಿರುವಂತೆಯೂ, ಸೃಷ್ಟಿಸಿರುವನು ... ಪತ್ನಿಯೂ ಒಂದುವೇಳೆ ಬುದ್ಧಿವಂತಳಾಗಿಯೂ, ರೂಪವಂತಳಾಗಿಯೂ, ವಿದ್ಯಾಸಂಪನ್ನೆಯಾಗಿಯೂ ಇದ್ದರೂ ಕೂಡ ಪತಿಗೆ ಅಧೀನಳಾಗಿಯೇ

ನಡೆದುಕೊಳ್ಳಬೇಕು” ಎಂದು ಪುರುಷಾಧಿಕಾರವನ್ನು ಒಪ್ಪುವುದರೊಂದಿಗೆ ಹೆಣ್ಣಿನ ಅಧೀನತೆಯನ್ನೂ ಕೂಡ ಸಮರ್ಥಿಸುತ್ತಾರೆ. ಜೊತೆಗೆ ಈ ಕಾಲಘಟ್ಟದ ಲೇಖಕಿಯರು ಸ್ತ್ರೀ ಶಿಕ್ಷಣವನ್ನು ಸಾಮಾಜಿಕ ಉಪಯುಕ್ತತೆಯ ಹಿನ್ನೆಲೆಯಲ್ಲಿಯೇ ಸಮರ್ಥಿಸಿದರು. ಕಲ್ಯಾಣಮ್ಮನವರು ಸರಸ್ವತಿಯ ಸಂಪಾದಕೀಯದಲ್ಲಿ ಶಿಕ್ಷಣವು ಎಂಥದ್ದಿರಬೇಕು ಎಂಬುದನ್ನು ಕುರಿತು ಬರೆಯುತ್ತಾ “ಭರತಖಂಡದ ಬಾಲಕ ಬಾಲಕಿಯರ ಶಿಕ್ಷಣದ ಗುರಿಯು ಜ್ಞಾನ ಸಂಪಾದನೆ ಮಾತ್ರವಲ್ಲದೆ ಜನತೆಯ ಸೇವೆಯೂ ಆಗಿರಬೇಕು. . . . ನಿಜವಾದ ವಿದ್ಯಾಭ್ಯಾಸವು ಬಾಲಕ ಬಾಲಕಿಯರನ್ನು ಮುಂದಿನ ಸಮಾಜ ಜೀವನಕ್ಕೆ ಸರ್ವವಿಧದಲ್ಲಿಯೂ ಸಮರ್ಥರನ್ನಾಗಿ ಮಾಡಲು ಸಹಾಯ ಮಾಡಬೇಕು”[೧೪] ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾರೆ. ಎಲ್ಲಾ ರೀತಿಯಿಂದಲೂ ಸ್ತ್ರೀ ವಿದ್ಯಾಭ್ಯಾಸಕ್ಕೆ ಅನುಮೋದನೆ ಹಾಗೂ ಉತ್ತೇಜನವನ್ನು ನೀಡುವ ತಿರುಮಲಾಂಬರವರು ಮಹಿಳೆಯರಿಗೆ ಕೊಡಮಾಡುವ ಶಿಕ್ಷಣ "ಗೃಹಕೃತ್ಯಕ್ಕೆ ಲೋಪಬಾರದಂತೆ, ಪತಿಯನ್ನು ಅನುಸರಿಸಿಕೊಂಡು ಅಕಸ್ಮಾತ್ ಅವನು ತಪ್ಪು ಹಾದಿಯಲ್ಲಿದ್ದರೂ ತಿದ್ದಿಕೊಳ್ಳುವ ಸಾಮರ್ಥ್ಯವನ್ನೊದಗಿಸುವಂತಿರಬೇಕು”.[೧೫] ಎನ್ನುತ್ತಾರೆ. ಇಲ್ಲಿ ಹೆಣ್ಣಿಗೆ ಶಿಕ್ಷಣ ಬೇಕೆಂಬುದರ ಸಮರ್ಥನೆ ಅವಳ ವ್ಯಕ್ತಿತ್ವ ವಿಕಾಸಕ್ಕೆ ಅವಕಾಶವನ್ನು ನೀಡಬೇಕು ಎಂಬುದರ ಬದಲಾಗಿ ಕುಟುಂಬದ ಒಳಗೆ ಹಾಗೂ ಹೊರಗೆ ಸಾಂಪ್ರದಾಯಿಕ ಮೌಲ್ಯ ವ್ಯವಸ್ಥೆಗೆ ಹೊಂದಿಕೆಯಾಗುವ ರೀತಿಯಲ್ಲಿ ಹೆಣ್ಣನ್ನು ಹೇಗೆ ತರಬೇತು ಗೊಳಿಸುವುದು ಎಂಬುದೇ ಆಗಿತ್ತು. ಇದರ ನಡುವೆಯೂ ಹೆಣ್ಣು ತನ್ನ ವೈಯಕ್ತಿಕ ಬದುಕಿನ ಸಂಕಷ್ಟಗಳಿಂದ ಬಿಡುಗಡೆ ಪಡೆಯಲು ಪ್ರಯತ್ನಿಸಿದ್ದು ಮುಖ್ಯ ಸಂಗತಿಯಾಗಿ ಕಂಡುಬರುತ್ತದೆ. ಆದರೆ ಶಿಕ್ಷಣದ ಕಾರ್ಯ ವಿಧಾನ ಮಾತ್ರ ಹೆಣ್ಣನ್ನು ಪುರುಷ ಅಪೇಕ್ಷಿತ ಮೌಲ್ಯ ವ್ಯವಸ್ಥೆಯ ಚೌಕಟ್ಟಿನಿಂದ ಹೊರತರುವ ಬದಲಾಗಿ ಈ ಮೌಲ್ಯವ್ಯವಸ್ಥೆಯನ್ನು ಮತ್ತಷ್ಟು ‘ಸುಂದರ’ವಾಗಿಸುವಲ್ಲಿ ‘ಸಾರ್ವತ್ರಿಕ’ ಹಾಗೂ ‘ಸಾರ್ವಕಾಲಿಕ’ ವಾಗಿಸುವಲ್ಲಿ ಯಶಸ್ವಿಯಾದವು. ಇದರ ಜೊತೆಗೆ ಹೆಣ್ಣಿನ ಬದುಕನ್ನು ಪ್ರವೇಶಿಸಿದ ಆದರ್ಶ ಸ್ತ್ರೀಯರ ಪ್ರತಿಮೆಗಳು ಹೆಣ್ಣು ಸ್ವಯಂ ಬಂಧನಕ್ಕೆ ಒಳಪಡಲು ಮತ್ತಷ್ಟು ಸಹಾಯಕವಾದವು.

ರಾಷ್ಟ್ರೀಯ ಮುಖಂಡರು ಸ್ವಾತಂತ್ರ್ಯ ಆಂದೋಲನದಲ್ಲಿ ಹೆಂಗಸರ ಭಾಗವಹಿಸುವಿಕೆಗೆ ಉತ್ತೇಜನ ನೀಡುವುದರ ಮೂಲಕ ಅವರ ಸಾಮಾಜಿಕ ಸಹಭಾಗಿತ್ವಕ್ಕೆ ಪ್ರೋತ್ಸಾಹ ನೀಡಿದರು. ಈ ಸಾಮಾಜಿಕ ಸಹಭಾಗಿತ್ವ ಪುರುಷನ ಅಪೇಕ್ಷಿತ, ಪುರುಷ ನಿರ್ದೇಶಿತ ವಲಯಕ್ಕೆ ಮಾತ್ರ ಸೀಮಿತವಾಗಿತ್ತೇ ವಿನಃ ಹೆಚ್ಚಿನ ಆಯ್ಕೆಯ ಪ್ರಶ್ನೆಯೇ ಇರಲಿಲ್ಲ. ಹಿಂದಿನಿಂದ ರೂಢಿಯಲ್ಲಿದ್ದ ಭೂಮಿ ಮತ್ತು ಹೆಣ್ಣಿನ ಸಮೀಕರಣ ಇಲ್ಲಿ ವಿಭಿನ್ನ ವಿನ್ಯಾಸಗಳಲ್ಲಿ ಮಾನ್ಯತೆಯನ್ನು ಪಡೆದುಕೊಂಡಿತು. ಈ ಸಂದರ್ಭದಲ್ಲಿ ಹೆಣ್ಣಿನ ಪಾತ್ರ ಕನ್ನಡಾಂಬೆ, ಭಾರತಾಂಬೆ, ವಿಶ್ವಮಾತೆ, ಜಗಜ್ಜನನಿ, ಮಹಾಮಾಯಿ, ಮುಂತಾದ ಮಾದರಿಗಳಲ್ಲಿ ಪ್ರಕಟಗೊಳ್ಳತೊಡಗಿದವು. ಭೂಮಿತಾಯಿಯಾಗಿ ‘ಸಹನೆಯ’ ಭಾರವನ್ನು ಹೊತ್ತಿದ್ದವಳು ಪ್ರಾಣತ್ಯಾಗ, ಬಲಿದಾನ, ಕೋಮುಹಿಂಸೆಗಳನ್ನು ಮೂಕವಾಗಿ ಒಪ್ಪಿಕೊಳ್ಳುವ ‘ಆದರ್ಶ ಭಾರತೀಯ ನಾರಿ’ಯಾಗಿ ಮಾರ್ಪಾಡಾಗುವ ಅನಿವಾರ್ಯತೆಯನ್ನು ಸೃಷ್ಟಿಸಲಾಯಿತು. ಭಾರತಾಂಬೆಯಂತೆ ಇವಳೂ ಕೂಡ ಪರಕೀಯರಿಂದ ರಕ್ಷಣೆಗೆ ಒಳಗಾಗಬೇಕಾದ, ಅದರಲ್ಲೂ

ಪುರುಷನಿಂದ ಮಾತ್ರ ರಕ್ಷಣೆ ಮತ್ತು ಬಿಡುಗಡೆ ಸಾಧ್ಯ ಎಂಬ ನಿಲುವಿನೊಂದಿಗೆ, ದೇಶಹಿತದ ಮುಂದೆ ಕುಟುಂಬದ, ವೈಯಕ್ತಿಕ ಹಿಂಸೆ, ನೋವು ಎಲ್ಲವೂ ಕೂಡ ಅಲ್ಪ ಎಂಬ ಮನೋಭಾವನೆ ಮೂಡಿಬಂದಿತು. ತಿರುಮಲೆ ರಾಜಮ್ಮನವರ ರಾಷ್ಟ್ರ ಶಕ್ತಿ, ರಾಷ್ಟ್ರಭಕ್ತಿ ಕವನ ಸಂಕಲನಗಳು ರಾಷ್ಟ್ರೀಯ ಚಳುವಳಿಗಳ ಪ್ರಭಾವದಿಂದ ಮೂಡಿದವುಗಳಾಗಿವೆ. ಬೆಳಗೆರೆ ಜಾನಕಮ್ಮನವರ ಜಯಭಾರತ ಜನನಿ, ಭಾರತ ಮಾತೆಯ ವಾಕ್ಯ ಮುಂತಾದ ಕವಿತೆಗಳು ಪರಕೀಯರ ಆಕ್ರಮಣಗಳಿಂದ ಭಾರತ ಎದುರಿಸುತ್ತಿರುವ ಹಿಂಸೆ ಹಾಗೂ ಹೆಣ್ಣಿನ ಹಿಂಸೆಗಳನ್ನು ಒಂದೇ ಎಂದು ಚಿತ್ರಿಸುವುದರ ಮೂಲಕ ಪುರುಷಾಪೇಕ್ಷಿತ 'ಆದರ್ಶನಾರಿ' ಪರಿಕಲ್ಪನೆಯನ್ನು ಸನಾತನ ಪರಂಪರೆಯ ವೈಭವದ ಹಿನ್ನೆಲೆಯಲ್ಲಿ ಕಟ್ಟಿಕೊಡಲು ಪ್ರಯತ್ನಿಸುತ್ತಾರೆ.

ತಿರುಮಲಾಂಬರವರ **ಮಾತೃನಂದಿನಿ** ಕಾದಂಬರಿ ಅನೇಕ ಸುಧಾರಣೆಗಳನ್ನು ಪ್ರತಿಪಾದಿಸುತ್ತದೆ. ಆದರೆ ಈ ಎಲ್ಲ ಸುಧಾರಣೆಗಳೂ ಸನಾತನ ಧರ್ಮದ ಸತ್ವವನ್ನು ಆಧರಿಸಿವೆ. ಎಲ್ಲಕ್ಕಿಂತ ಮುಖ್ಯವಾಗಿ ಇವರು ಹೇಳಲು ಹೊರಟಿರುವುದು ಆರ್ಯಸ್ತ್ರೀ ನಡವಳಿಕೆಗಳನ್ನು ಕುರಿತು. ಕೆಳವರ್ಗದವರಲ್ಲಿ ಕೂಡಿಕೆ ಪದ್ಧತಿಯ ಮೂಲಕ ಮತ್ತೊಂದು ಗಂಡಿನೊಂದಿಗೆ ದೈಹಿಕ ಸಂಪರ್ಕವನ್ನು ಹೊಂದುವ ಪದ್ಧತಿ ಇದೆ ಎಂಬುದನ್ನು ಒಪ್ಪುತ್ತಾರೆ ಕೂಡ. ಇಲ್ಲಿ ಗಮನಿಸಬಹುದಾದ ಅಂಶವೆಂದರೆ ಹೆಣ್ಣಾದವಳು ಆರ್ಯಧರ್ಮದ ನಿಯಮಗಳನ್ನು ಕಾಪಾಡುವುದು , ಅದನ್ನು ಪಾಲಿಸುವುದು ಅವರ ಹೊಣೆ ಎಂಬ ಆದರ್ಶವಾದಿ ಚಿಂತನೆ ಮನೆಮಾಡಿದ್ದರ ಪರಿಣಾಮ ವಿಧವಾ ವಿವಾಹವನ್ನು ತಿರುಮಲಾಂಬ ಪ್ರೋತ್ಸಾಹಿಸಲು ಸಾಧ್ಯವಾಗಲಿಲ್ಲ ಎಂದೆನಿಸುತ್ತದೆ.

ಹೆಣ್ಣು ಆಧ್ಯಾತ್ಮ ಜೀವನದೊಂದಿಗೆ ತನ್ನ ಅಸ್ಥಿತ್ವವನ್ನು ಗುರುತಿಸಿಕೊಳ್ಳಲು ಪ್ರಯತ್ನಿಸುವುದು ಹಾಗೂ ಅದರ ಮೂಲಕ ತನ್ನ ಅಸ್ತಿತ್ವಕೊಂದು ಅಧಿಕೃತತೆಯನ್ನು ಪಡೆದುಕೊಳ್ಳಲು ಪ್ರಯತ್ನಿಸಿರುವುದು ಹಿಂದಿನಿಂದಲೂ ನಡೆದುಬಂದಿದೆ. ಅಕ್ಕ, ಮೀರಾ, ಆಂಡಾಳ್, ಕೀರ್ತನಾಕಾರ್ತಿಯರು ಆಧ್ಯಾತ್ಮಿಕ ಹಂಬಲದ ಮೂಲಕ ತಮ್ಮ ಲೌಕಿಕ ಬದುಕಿನ ಜಂಜಡಗಳಿಂದ ಬಿಡುಗಡೆಗೆ ಪ್ರಯತ್ನಿಸಿದರು. ಆದರೆ ಇದು ತಂದೊಡ್ಡಿದ ಮುಖ್ಯ ಸವಾಲೆಂದರೆ ವಿಭಿನ್ನ ಆಯಾಮಗಳಲ್ಲಿ ತೆರೆದುಕೊಳ್ಳಬಹುದಾಗಿದ್ದ ಅವರ ಅಭಿವ್ಯಕ್ತಿಮಾಧ್ಯಮ ಕೇವಲ ಭಕ್ತಿ ಪ್ರಧಾನವಾಗಿ, ಧರ್ಮ ನಿಷ್ಟವಾಗಿ ಉಳಿದು ಬಿಟ್ಟಿತು. ವೈದೇಹಿ, ಸರಸ್ವತಿಬಾಯಿ ರಾಜವಾಡೆಯವರ ಅಭಿವ್ಯಕ್ತಿ ಸಾಮಾಜಿಕತೆಯಿಂದ ಆಧ್ಯಾತ್ಮದ ಕಡೆಗೆ ಹೊರಳಿದ್ದನ್ನು ಕುರಿತಂತೆ "ಲೇಖಕಿ 'ಗಿರಿಬಾಲೆ'ಯನ್ನು ನಿಧಾನವಾಗಿ ಮರೆಮಾಡಿ ಕೀರ್ತನಕಾರ್ತಿಯನ್ನು ಆವಾಹನೆ ಮಾಡಿಕೊಂಡರು. ಅಂದಿನಿಂದ ಆಕೆಯ ಜೀವನ ವಿಧಾನವೇ ಬದಲಾಯಿತು. ಇವೆಲ್ಲ ಬದುಕಿಗೆ ಮೇಲಿಂದ ಮೇಲೆ ಒದಗಿಬಂದ ಅನೇಕ ಘಟನಾವಳಿಂದಾಗಿ ಎಂದುಕೊಂಡರೂ ಆ ಘಟನಾವಳಿಗಳ ಪೂರ್ತಿ ವಿವರಗಳನ್ನೂ ಸ್ವತಃ ತಾನೆ ಸಮಾಧಿಮಾಡಿದರು. ವಿಶಿಷ್ಟ ಮಾದರಿಯಾಗಿ ಮುಂಚೂಣಿಯಲ್ಲಿ ನಿಲ್ಲಬಹುದಾಗಿದ್ದ ಕನ್ನಡದ ಲೇಖಕಿಯೊಬ್ಬಳು ತನ್ನೊಳಗೆ ಹೀಗೆ ಕರಗಿಹೋದಳು".[16] ಎನ್ನುತ್ತಾರೆ. ಮುಂದುವರಿದು "ಇಂಡಿಯಾ ಹುಡುಕಿದರೂ ನಮ್ಮ ರಾಜವಾಡೆಯವರಂತೆ ವಿಶಿಷ್ಟ ಅನುಭವಗಳನ್ನು ಸೂರೆಗೊಂಡ ಲೇಖಕಿ

ಸಿಗಲಿಕ್ಕಿಲ್ಲ. ಆಕೆ ಬದುಕಿನಲ್ಲಿ ಕಂಡುಂಡದನ್ನು ಸುಮ್ಮನೆ ಯಥಾವತ್ ದಾಖಲೆ ಮಾಡಿದರೂ ಸಾಕಿತ್ತು. ಭಾರತೀಯ ಸಾಹಿತ್ಯಕ್ಕೆ ಕನ್ನಡದ ಒಂದು ಉನ್ನತ ಕೊಡುಗೆಯಾಗುತ್ತಿತ್ತು".[೧೭] ಎನ್ನುವ ಅಂಶಗಳು ಹೆಣ್ಣಿನ ಬದುಕನ್ನು ಆವರಿಸಿರುವ ಪಿತೃ ಪ್ರಧಾನ ಮೌಲ್ಯ ವ್ಯವಸ್ಥೆಯ ಕಾರ್ಯ ಮಾದರಿಗಳನ್ನು ಪರಿಚಯಿಸುತ್ತದೆ. ಆಧ್ಯಾತ್ಮದ ನಂಟಿನ ಮೂಲಕ ಹೆಣ್ಣಿನ ಅಭಿವ್ಯಕ್ತಿ,ಆಲೋಚನೆಗಳನ್ನು ತನ್ನ ಕಣ್ಣಳತೆಗೆ ತಕ್ಕಂತೆ ಸೀಮಿತಗೊಳಸುವುದು ಒಂದೆಡೆಯಾದರೆ , ಹೆಣ್ಣಿನ ವ್ಯಕ್ತಿತ್ವವನ್ನು ಒಂದು ನಿರ್ದಿಷ್ಟ ಚೌಕಟ್ಟಿಗೆ ಒಳಪಡಿಸಿ ಬಿಡುಗಡೆಯ ಹೊರದಾರಿಗಳನ್ನು ತನ್ನ ಅಪೇಕ್ಷೆಗೆ ತಕ್ಕಂತೆ ಅರ್ಥೈಸುವ ವಿಧಾನ ಮತ್ತೊಂದು ಬಗೆಯದಾಗಿದೆ. ಆದರೆ ಮಹಿಳಾ ಅಭಿವ್ಯಕ್ತಿ ಅದನ್ನು ಮೀರಿ ತನ್ನ ಅಸ್ತಿತ್ವವನ್ನು ಉಳಸಿಕೊಂಡಿದೆ ಎಂಬುದು ಬೇರೆ ಸಂಗತಿ.

ಆಧುನಿಕತೆ ಹೆಣ್ಣಿಗೆ ಹೊಸ ಹೊಸ ಆಯ್ಕೆ ಮತ್ತು ಅವಕಾಶಗಳನ್ನು ನೀಡಿದೆಯಾದರೂ ಅವೆಲ್ಲವೂ ಕೂಡ ಪಿತೃ ಪ್ರಭುತ್ವದ ಯಜಮಾನ್ಯದ ಅಡಿಯಲ್ಲಿಯೇ ಕಾರ್ಯ ನಿರ್ವಹಿಸುತ್ತಿರುತ್ತವೆ. ಹೆಣ್ಣು ಶಿಕ್ಷಣ, ಉದ್ಯೋಗದ ಅವಕಾಶಗಳನ್ನು ಪಡೆದರೂ ಕೂಡ ಸ್ತ್ರೀತ್ವ, ಮಾತೃತ್ವ, ಸತೀತ್ವ, ಗೃಹಿಣಿತ್ವಕ್ಕೆ ಲೋಪಬಾರದ ರೀತಿಯಲ್ಲಿ ಕಾರ್ಯನಿರ್ವಹಿಸುವಂತೆ ನಿಯಂತ್ರಿಸಲಾಗುತ್ತಿದೆ. ಆದರೆ ಇಲ್ಲಿಯಾದರೂ ಅವಳ ವ್ಯಕ್ತಿತ್ವಕ್ಕೊಂದು ಮಾನ್ಯತೆ ಇದೆಯೇ? ಎಂಬುದನ್ನು ಕುರಿತು ಚರ್ಚಿಸುವುದಾದರೆ ಅದೂ ಕೂಡ ಶೂನ್ಯ. ಪುರುಷ ಪ್ರಭುತ್ವದ ಈ ಬಗೆಯ ನಿಯಂತ್ರಣವನ್ನು ಹೇಮಾ ಪಟ್ಟಣಶೆಟ್ಟಿಯವರ ಕಾವ್ಯ ವಿವರಿಸುವ ಬಗೆ ವಿಶಿಷ್ಟವಾದದ್ದು.

ಅಳಯುತ್ತ ಹೆಣ್ಣಾದೆ
ಮಗಳಾದೆ ಹೆಂಡತಿ ತಾಯಿ
ಮತ್ತೆ ಏನಾದೆ ಎಂದು
ಹಿಂತಿರುಗಿ ನೋಡಿದೆ
ನಿಂತಿದ್ದೆ ಹೊರಟ ಬಿಂದುವಿನಲ್ಲಿ ಬಂದು [೧೮]

ಎನ್ನುವ ಮೂಲಕ ಪಿತೃ ಪ್ರಭುತ್ವದ ಕಾರ್ಯ ತಂತ್ರಗಳು ಹೆಣ್ಣನ್ನು ಬೆಳೆಯಗೊಡದಂತೆ ನಿಯಂತ್ರಿಸುವ ಬಗೆಗಳನ್ನು ಹಿಡಿದಿಡಲು ಪ್ರಯತ್ನಿಸುತ್ತದೆ. ಅದೇ ರೀತಿ ಹೆಣ್ಣಿಗೆ ದೊರೆತ ಈ ಅವಕಾಶಗಳು ಮೇಲ್ನೋಟಕ್ಕೆ 'ಅನುಕೂಲಕರ'ವಾದಂತೆ ಕಂಡು ಬಂದರೂ ಆಂತರ್ಯದಲ್ಲಿ ಇವು ಹೆಣ್ಣನ್ನು ಹೆಚ್ಚು ಸಂಧಿಗ್ಧತೆಗೆ ಒಳಪಡಿಸಿ, ಇಕ್ಕಟ್ಟಿನ ಪರಿಸ್ಥಿತಿಯನ್ನು ನಿರ್ಮಾಣ ಮಾಡುವ ಸ್ವರೂಪದ್ದಾಗಿರುತ್ತವೆ. ಅಲ್ಲದೆ ಈ ಎಲ್ಲಾ ಅವಕಾಶಗಳೂ ಪಿತೃ ಸಂಸ್ಕೃತಿಯ 'ಅಪೇಕ್ಷಿತ' ಗುಣಗಳನ್ನು ಹೊಂದಿದ್ದ ಸಂದರ್ಭದಲ್ಲಿ ಹೆಣ್ಣಿಗೆ ದೊರೆಯುತ್ತವೆಯೇ ವಿನಃ ಅವಳ ಸ್ವತಂತ್ರ ಆಯ್ಕೆಯಾಗಿದ್ದ ಪಕ್ಷದಲ್ಲಿ ಅದಕ್ಕೆ ಅವಕಾಶವೇ ಇರುವುದಿಲ್ಲ. ಇಂದಿಗೂ ಕೂಡ ಪುರುಷ ಅಪೇಕ್ಷಿಸಿದಲ್ಲಿ ಮಾತ್ರ ಹೆಣ್ಣು ವಿದ್ಯೆ ಉದ್ಯೋಗಗಳನ್ನು ಪಡೆಯಬಹುದೇ ವಿನಃ ತಂದೆ ಅಥವಾ ಗಂಡನ ವಿರೋಧವಿದ್ದಲ್ಲಿ ಅವಳ ಎಲ್ಲಾ ಅವಕಾಶಗಳ ಬಾಗಿಲು ಮುಚ್ಚಿದಂತೆಯೆ. ಅಲ್ಲದೆ ಆಧುನಿಕ ಹೆಣ್ಣು ತನಗೆ ಸಿಕ್ಕ ಅವಕಾಶಗಳಿಂದಾಗಿ ಏನೆಲ್ಲಾ ಸಾಧನೆ ಮಾಡಿದ್ದಾಳೆ. ಸಮಾನತೆಯ ಹಾದಿಯಲ್ಲಿ ಮುನ್ನಡೆಯುತ್ತಿದ್ದಾಳೆ ಎಂಬುದು ಮೇಲ್ನೋಟಕ್ಕೆ ಕಂಡು

ಬಂದರೂ ಕೂಡ ಆಂತರ್ಯದಲ್ಲಿ ಹೆಣ್ಣಿನ ವ್ಯಕ್ತಿತ್ವದ ಮೇಲಿನ ಸಂಪೂರ್ಣ ನಿಯಂತ್ರಣ ಪಿತೃ ಪ್ರಭುತ್ವದ ಹಿಡಿತದಲ್ಲಿರುವುದನ್ನು ಬಿ.ಟಿ.ಲಲಿತಾ ನಾಯಕ್ ರವರ ಕವನ ಅತ್ಯಂತ ಸಮರ್ಥವಾಗಿ ಧ್ವನಿಸುತ್ತದೆ.

ಕಲಾವಿದೆಯಾದರೇನು ನೀನು?
ಪ್ರತಿಭಾವಂತಳಾದರೇನು?
ನಿನ್ನ ಭೂತವ ಕೆದಕಿ
ಭವಿಷ್ಯತ್ತನ್ನು ನಿರ್ಧರಿಸುವವರ್ಯಾರು ಹೇಳು
ಇಂದ್ರಾಗ್ನಿ ವರುಣರಂತಹ ದೇವಾನುದೇವರು
ರಾಮ ರಾವಣಾದಿ ಮಹಾ ಮಹಿಮರು ತಾನೆ [೧೯]

ಇಲ್ಲಿ ರಾಮ, ರಾವಣ, ಇಂದ್ರ, ವರುಣರು ಪಿತೃ ಪ್ರಭುತ್ವದ ಪ್ರತಿನಿಧಿಗಳಾಗಿ ಕಂಡುಬರುತ್ತಾರೆ. ಇಂತಹ ಪರಿಸ್ಥಿತಿಯನ್ನು ಬದಲಾಯಿಸಲು ಸಾಧ್ಯವಿಲ್ಲ. ಇದು ಕಾಲ, ದೇಶ, ಸಮಯ, ಸಂದರ್ಭಗಳನ್ನು ಮೀರಿ ಮತ್ತೆ ಮತ್ತೆ ಪುನರಾವರ್ತಿತಗೊಳ್ಳುವುದನ್ನು ಲೇಖಕಿಯರು ಗುರುತಿಸುತ್ತಾರೆ. ಬಿ.ಟಿ. ಲಲಿತಾನಾಯಕ್‌ರವರ 'ಇದೇ ಕೂಗು ಮತ್ತೆ ಮತ್ತೆ' ಕವನ ಸೀತೆಯ ನೋವು, ಆಕ್ರದಂನ, ತೊಳಲಾಟಗಳು ಆಧುನಿಕ ಸಂದರ್ಭಗಳಲ್ಲಿಯೂ ಕೂಡ ಪುನರಾವರ್ತನೆಗೊಳ್ಳುತ್ತಿರುವುದನ್ನು ಧ್ವನಿಸುವುದರೊಂದಿಗೆ, ಗುರುತಿಸಿದರೂ ಗುರುತಿಸಲಾಗದಂತಹ ಕೂದಲೆಳೆಯ ವ್ಯತ್ಯಾಸವನ್ನು 'ಸೀ' ಮತ್ತು ಗೀ ಅಕ್ಷರಗಳ ಮೂಲಕ ಹಿಡಿದಿಡುತ್ತಾರೆ. ಇಡೀ ವ್ಯವಸ್ಥೆಯನ್ನು ಪುರುಷ ಪ್ರಭುತ್ವ ನಡೆಸಿಕೊಳ್ಳುತ್ತಿರುವ ಬಗೆಯನ್ನು, ಅದಕ್ಕೆ ಹೆಣ್ಣು ಬಲಿಯಾಗುತ್ತಿರುವುದನ್ನೂ ತಿಳಿಸುತ್ತಾರೆ. ಅದೇ ರೀತಿ ಉಷಾ ಪಿ.ರೈ. ಕೂಡ ಆಧುನಿಕ ಸನ್ನಿವೇಶಗಳ ನಡುವೆಯೂ ಹೆಣ್ಣಿನ ಪರಿಸ್ಥಿತಿಯಲ್ಲಿ ಬದಲಾವಣೆಗಳಾಗದಿರುವುದನ್ನು 'ಕಾಲ ಬದಲಾದರೂ, ದೃಷ್ಟಿ ಬದಲಾಗಿಲ್ಲ' ಎಂದು ಖೇದ ವ್ಯಕ್ತಪಡಿಸುತ್ತಾರೆ.

ಈಗಲೂ ಇಲ್ಲಿ ಅದೇ ಕಥೆ
ನಡೆದಿದೆ ಸೀತೆ.
ಬದಲೇನಾದರೂ ಆಗಿದ್ದರೆ
'ಸೀ' ಬದಲು 'ಗೀ' ಎಂಬುದಷ್ಟೆ. [೨೦]

ಎಂಬುದು ಪಿತೃ ಪ್ರಭುತ್ವದ ಸಾಂಪ್ರದಾಯಿಕ ಮನಸ್ಥಿತಿಯನ್ನು ಎತ್ತಿ ಹಿಡಿಯುತ್ತದೆ. ಅದೇ ರೀತಿ ಮೌಲ್ಯವ್ಯವಸ್ಥೆಯ ಹೆಸರಿನಲ್ಲಿ ಹೆಣ್ಣನ್ನು ಹಿಡಿದಿಟ್ಟಿರುವ ಬಗೆಯನ್ನು ವಿಜಯಾದಬ್ಬೆಯವರು ಮೌಲ್ಯವ್ಯವಸ್ಥೆಯ ಕಾರ್ಯ ಮಾದರಿಗಳು ಮೇಲ್ನೋಟಕ್ಕೆ ಒಂದು ರೀತಿಯಲ್ಲಿ ಬಿಂಬಿತವಾದರೆ ಆಂತರ್ಯದಲ್ಲಿ ಹೆಣ್ಣನ್ನು ನಿಯಂತ್ರಿಸುವ ವಿಧಾನವನ್ನು ತೆರೆದಿಡುತ್ತದೆ.

ಈ ಲಕ್ಷ್ಮಿಗೂ ಸ್ವಾತಂತ್ರ್ಯವಿತ್ತು:
ಅವಳಜ್ಜಿಯಂತೆ ಇವಳೇನು
ಕೂದಲತುದಿಗೆ ನಾರು ಬಿಗಿಯಲಿಲ್ಲ
ಲಂಗವಿಲ್ಲದ ಸೀರೆಯುಡಲಿಲ್ಲ
ಆದರೂ ಅವಳ ಒಳಿತು
ಹೆತ್ತವರಿಗಲ್ಲದೆ ಮತ್ತಾರಿಗೆ ತಿಳಿದೀತು? . . . . .
ಶೇಷಶಾಯಿಯ ಕಾಲಬುಡದ
ಆ ಲಕ್ಷ್ಮಿಯೇ ಅವಳಾಗಿದ್ದಾಳೆ. [೨೧]

ಹೆಣ್ಣಿಗೆ ಸ್ವಾತಂತ್ರ ಎಂಬುದು ನಿಜವಾಗಿಯೂ ಮರೀಚಿಕೆ ಎಂಬ ಅಂಶ ಈ ಕವನದಿಂದ ತಿಳಿದು ಬರುತ್ತದೆ. ಗಂಡು ಎಷ್ಟೇ ಆಧುನಿಕ, ಉದಾರವಾದಿ ಮನಸ್ಥಿತಿಯನ್ನುಳ್ಳವನು ಎನಿಸಿದರೂ ಹೆಣ್ಣನ್ನು, ವಿವಾಹವನ್ನು ಲೈಂಗಿಕತೆಯನ್ನು, ಕುರಿತಾದ ಅವನ ನಿಲುವು ಬದಲಾಗಲು ಸಾಧ್ಯವೇ ಇಲ್ಲ ಹಾಗೂ ಮೌಲ್ಯ ವ್ಯವಸ್ಥೆಯ ಆಂತರ್ಯಕ್ಕೆ ಧಕ್ಕೆಯಾಗದ ರೀತಿಯಲ್ಲಿ ಕಾರ್ಯತಂತ್ರಗಳನ್ನು ರೂಪಿಸಿ ಹೆಣ್ಣನ್ನು ನಿರಂತರವಾಗಿ ತನ್ನ ನಿಯಂತ್ರಣದಲ್ಲಿಡಲು ಪ್ರಯತ್ನಿಸುತ್ತಿರುವ ಬಗೆಯನ್ನು ಈ ಕವನ ಚರ್ಚಿಸುತ್ತದೆ. ತನ್ನಜ್ಜಿಗಿಂತ ತಾನು ಭಿನ್ನವಾದರೂ ಕೂಡ ಅವಳ ಸ್ಥಿತಿ ಮಾತ್ರ ಅವಳಿಗಿಂತ ಹೆಚ್ಚು ಭಿನ್ನವಾಗಿಲ್ಲ ಎಂಬುದೇ ಪಿತೃ ಪ್ರಭುತ್ವದ ಹುನ್ನಾರ ಹಾಗೂ ತಂತ್ರ ಎಂಬ ಅಂಶವೇ ಈ ಕವನದಲ್ಲಿ ಪ್ರಧಾನವಾಗಿ ಕಂಡುಬರುತ್ತದೆ.

**೫.೩ ನಿರ್ಬಂಧಿತ ಕಾರ್ಯ ಮಾದರಿಗಳು** : ಅಧಿಕಾರಶಾಹಿ ಮತ್ತು ಪ್ರಭುತ್ವ ತನ್ನ ಯಾಜಮಾನ್ಯಕ್ಕೆ ಅಡ್ಡಿಯುಂಟಾಗಬಹುದಾದ ಸಂದರ್ಭದಲ್ಲೆಲ್ಲಾ ಅದಕ್ಕೆ ಕಾರಣರಾದವರನ್ನು ನಿರ್ದಾಕ್ಷಿಣ್ಯವಾಗಿ ದಂಡನೆಗೆ ಒಳಪಡಿಸುವುದರ ಮೂಲಕ ತನ್ನ ಅಧಿಕಾರವನ್ನು ಹಿಡಿತದಲ್ಲಿ ಉಳಿಸಿಕೊಳ್ಳಲು ಪ್ರಯತ್ನಿಸುತ್ತಿರುತ್ತದೆ. ಅದೇ ರೀತಿ ಹೆಣ್ಣನ್ನು ಕೂಡ ತನ್ನ ಅಪೇಕ್ಷಿತ ಚೌಕಟ್ಟಿನೊಳಗೆ ಬಂಧಿಸಿಡುವುದು ವ್ಯವಸ್ಥೆಗೆ ಕಷ್ಟ ಎನಿಸಿದಾಗ ಪುರುಷ ಪ್ರಭುತ್ವ ನಿರ್ದಾಕ್ಷಿಣ್ಯವಾಗಿ ಕಠಿಣ ಕ್ರಮಗಳನ್ನು ಕೈಗೊಂಡು ಹೆಣ್ಣನ್ನು ತನ್ನ ಅಧೀನತೆಗೆ ಒಳಪಡಿಸಿಕೊಂಡಿದೆ. ಕೆಲ ಸಂದರ್ಭದಲ್ಲಿ ಹೆಣ್ಣು ಮೌಲ್ಯವ್ಯವಸ್ಥೆಯ ವ್ಯಾಪ್ತಿಯನ್ನು ಮೀರಬಹುದಾದ ಸುಳಿವುಗಳು ದೊರೆತರೂ ಕೂಡ ಹೆಣ್ಣಿನ ಮೇಲಿನ ಹಿಡಿತವನ್ನು ಬಿಗಿಗೊಳಿಸಿ ನಿರ್ಬಂಧಕ್ಕೆ ಒಳಪಡಿಸಲಾಗುತ್ತದೆ. ಇಲ್ಲಿ ಹೆಣ್ಣಿಗೆ ಯಾವುದೇ ರೀತಿಯ ಆಯ್ಕೆಗೆ ಅವಕಾಶವೇ ಇಲ್ಲದ ಹಾಗೆ ಅನಿವಾರ್ಯವಾಗಿ ಮೌಲ್ಯ ವ್ಯವಸ್ಥೆಯನ್ನು ಒಪ್ಪಬೇಕಾದ ಸ್ಥಿತಿಯನ್ನು ನಿರ್ಮಾಣ ಮಾಡಲಾಗುತ್ತದೆ. ಸತೀ ಪದ್ಧತಿಯ ಆಚರಣೆ, ವಿಧವೆಯರನ್ನು ವಿರೂಪ ಗೊಳಿಸುವುದು. ಪರಪುರುಷ ನೊಂದಿಗೆ ಲೈಂಗಿಕ ಸಂಬಂಧ ಹೊಂದಿದವರನ್ನು ಸಮಾಜದಿಂದ ಹೊರಹಾಕುವುದು. ದೈಹಿಕ ಹಿಂಸೆಯ ಮೂಲಕ ತನ್ನ ಅಧೀನದಲ್ಲಿರಿಸಿಕೊಳ್ಳಲು ಪ್ರಯತ್ನಿಸುವುದು. ದೋಷಾರೋಪಣೆ, ನಿಂದನೆ, ಅತ್ಯಾಚಾರದಂತಹ ಕೃತ್ಯಗಳ ಮೂಲಕ ಹೆಣ್ಣನ್ನು ತನ್ನ ಅಧೀನಕ್ಕೊಳಪಡಿಸಿಕೊಂಡು ಹೆಣ್ಣಿನ ಸ್ವಾಯತ್ತ ಬದುಕಿನತ್ತ ಚಲನೆಯನ್ನು ನಿರ್ಬಂಧಿಸಲಾಗುತ್ತದೆ.

ಆಧುನಿಕತೆಯ ಎಲ್ಲಾ ಅವಕಾಶಗಳನ್ನು ಹೆಣ್ಣಿಗೆ ತೆರೆದಿಡುತ್ತಲೇ ಸ್ಥಾಪಿತ ಮೌಲ್ಯಗಳನ್ನು ಮೀರಲಾಗದಂತೆ ಎಚ್ಚರವಹಿಸುವ ಪಿತೃ ಸಂಸ್ಕೃತಿ ವಿವಾಹ, ಕುಟುಂಬ, ದಾಂಪತ್ಯದ ಚೌಕಟ್ಟಿಗೆ ಒಳಪಟ್ಟ ಅವಕಾಶಗಳನ್ನು ಪಡೆಯಲು ಆದ್ಯತೆ ನೀಡುತ್ತದೆಯೇ ವಿನಃ ಅವುಗಳಿಂದ ಹೊರಗೆ ಹೆಣ್ಣು ಬದುಕನ್ನು ರೂಪಿಸಿಕೊಳ್ಳುವ ಅವಕಾಶಗಳನ್ನೇ ಇಲ್ಲವಾಗಿಸಿದೆ. ಅಪರೂಪದ ಸಂದರ್ಭದಲ್ಲಿ ಹೆಣ್ಣಿಗೆ ಆಯ್ಕೆಯ ಸ್ವಾತಂತ್ರ್ಯವನ್ನು ನೀಡಿದೆಯಾದರೂ ಪಿತೃ ಪ್ರಭುತ್ವವನ್ನು ಧಿಕ್ಕರಿಸಿ ಬದುಕುವುದು ಸಾಧ್ಯವಿಲ್ಲ ಎನ್ನುವಷ್ಟರ ಮಟ್ಟಿಗೆ ಶೋಷಣೆಗೆ ಒಳಪಡಿಸಲಾಗುತ್ತದೆ. ಸರಸ್ವತಿಬಾಯಿ ರಾಜವಾಡೆಯವರು ತಮ್ಮ ಪತಿ ತನ್ನನ್ನು ನಡೆಸಿಕೊಳ್ಳುತ್ತಿದ್ದ ಬಗೆಯನ್ನು ಕುರಿತಂತೆ "ನನ್ನ ಗಂಡ ದೊಡ್ಡ ಸ್ಕಾಲರು.

ಪುಸ್ತಕಗಳೆಂದರೆ ಅವರಿಗೆ ಪರಮ ಪ್ರೀತಿ. ಆದರೆ ಅಂಥವರು, ವಿಚಿತ್ರ, ಮನೆಯಿಂದ ಹೊರಗೆ ಹೋಗುವಾಗ ಬೀಗ ಹಾಕಿ ಹೋಗುತ್ತಿದ್ದರು!. . . . . . ನಾನೋ, ಸಣ್ಣ ಹುಡುಗಿ. ಯಾರಾದರೂ ನನನ್ನು ಹಾರಿಸಿಕೊಂಡು ಹೋದರೆ? ಚಂದ ಬೇರೆ ಇದ್ದೇನಲ್ಲ. ಹೆದರಿಕೆ ಅವರಿಗೆ. ಬೀಗ ಹಾಕುವುದಷ್ಟೇ ಅಲ್ಲ ನಾಟ್ ಎಟ್ ಹೋಮ್ ಬೋರ್ಡು ಹಾಕುತ್ತಿದ್ದರು!"[೨೨] ಎಂದು ಹೇಳುವ ಮಾತುಗಳು ಪಿತೃ ಪ್ರಭುತ್ವ ಹೆಣ್ಣನ್ನು ನಿರ್ಬಂಧಿಸುವ ಸಲುವಾಗಿ ಎಂತಹ ಕಠಿಣ ಕ್ರಮಗಳನ್ನಾದರೂ ಜರುಗಿಸುತ್ತದೆ ಎಂಬುದನ್ನು ಸೂಚಿಸುತ್ತದೆ. ಮುಂದುವರಿದು "'ಕುಲಪತ್ನಿ'ಯಾದವಳು ಸೂರ್ಯನನ್ನು ನೋಡಬಾರದು. ಪಾತಿವ್ರತ್ಯ ಕೆಡುತ್ತದೆ ಎನ್ನುತ್ತಿದ್ದರು. ಕಿಟಕಿ ಹತ್ತಿರ ರಸ್ತೆ ನೋಡುತ್ತ ನಿಂತರೂ ಅವರಿಗಾಗದು. ಬಹಳ ಅಪರೂಪಕ್ಕೊಮ್ಮೆ ಕಾರಲ್ಲಿ ತಿರುಗಾಡಿಸಿಕೊಂಡು ಬರುತ್ತಿದ್ದರು. ಅಷ್ಟೇ".[೨೩] ಇಲ್ಲಿ ಕಾರಿನಲ್ಲಿ ತಿರುಗಾಡುವ ಅವಕಾಶವಿದೆಯಾದರೂ ಅದು ಪುರುಷ ನಿಯಂತ್ರಣಕ್ಕೊಳಪಟ್ಟದ್ದಾಗಿರುತ್ತದೆ, ಹಾಗೂ ಆ ಮೂಲಕ ಹೆಣ್ಣಿನ ಎಲ್ಲಾ ಬಗೆಯ ಚಟುವಟಿಕೆಗಳನ್ನೂ ತುಂಬಾ ಎಚ್ಚರಿಕೆಯಿಂದ ನಿರ್ವಹಿಸಲಾಗುತ್ತದೆ ಎಂಬ ಅಂಶ ಸ್ಪಷ್ಟವಾಗುತ್ತದೆ. ಇದು ಕೇವಲ ಸರಸ್ವತಿಬಾಯಿಯವರಿಗಷ್ಟೇ ಅಲ್ಲ ಪ್ರಸ್ತುತ ಸಂದರ್ಭದಲ್ಲಿ ಆಧುನಿಕ ಅವಕಾಶಗಳನ್ನು ಪಡೆದಿರುವ ಮಹಿಳೆ ಕೂಡ ಪುರುಷನ ಕಣ್ಗಾವಲಿನಲ್ಲಿಯೇ ಕಾರ್ಯ ನಿರ್ವಹಿಸುತ್ತಿರುವುದನ್ನು ಗಮನಿಸಬಹುದಾಗಿದೆ. ಉದ್ಯೋಗದ ಅವಕಾಶಗಳಿದ್ದರೂ ಹೆಣ್ಣಿನ ಮಟ್ಟಿಗೆ ರಾತ್ರಿ ಪಾಳೆಯ ನಿಷೇಧ. ರಾತ್ರಿ ಪಾಳೆಯವನ್ನು ಆಯ್ಕೆ ಮಾಡಿಕೊಂಡರೂ ಕೂಡ ಅದಕ್ಕೆ ಪುರಷನ ರಕ್ಷಣೆ ಮತ್ತು ಸಹಕಾರ ಅತ್ಯಂತ ಅವಶ್ಯಕ ಎಂದು ಭಾವಿಸುವ ವ್ಯವಸ್ಥೆಯ ಚಿಂತನೆ ಮತ್ತು ಆಲೋಚನೆಗಳು ಹೆಣ್ಣು ಪುರುಷನಿಗೆ ಸರಿಸಮನಾಗಿ ತನ್ನ ಬದುಕನ್ನು ರೂಪಿಸಿಕೊಳ್ಳಲು ಸಾಧ್ಯ ಎಂಬುದನ್ನು ನಿಯಂತ್ರಿಸುವುದೇ ಆಗಿದೆ.

ಹೆಣ್ಣಿನ ಲೈಂಗಿಕತೆ ಒಬ್ಬ ವ್ಯಕ್ತಿಗೆ ಮೀಸಲಾಗಿರಬೇಕು ಎಂಬ ಕಾರಣಕ್ಕೆ ಹುಟ್ಟಿಕೊಂಡ ಕುಟುಂಬ, ವಿವಾಹ, ಮುಂತಾದ ಸಾಮಾಜಿಕ ಘಟಕಗಳು ಅನೇಕ ರೀತಿಯ ಮಾರ್ಪಾಡುಗಳಿಗೆ ಒಳಪಟ್ಟ ಸಂದರ್ಭದಲ್ಲಿಯೂ ಕೂಡ ಹೆಣ್ಣಿನ ಲೈಂಗಿಕತೆ ಒಬ್ಬ ವ್ಯಕ್ತಿಗೆ ಮಾತ್ರ ಸೀಮಿತವಾಗಿರಬೇಕು ಎಂಬುದು ಇಂದಿಗೂ ಕೂಡ ಒಪ್ಪಿತ ಮೌಲ್ಯವೇ ಆಗಿದೆ. ಎಂತಹ ಸಂದರ್ಭದಲ್ಲಿಯೂ ಕೂಡ ಹೆಣ್ಣು ಇದನ್ನು ಮೀರುವುದು ಅಪರಾಧವೇ.

ಇಷ್ಟೆಲ್ಲಾ ಹುನ್ನಾರಗಳನ್ನು ಹೆಣೆದು ಹೆಣ್ಣನ್ನು ಪುರುಷಾಪೇಕ್ಷಿತ ಮೌಲ್ಯವ್ಯವಸ್ಥೆಯ ಚೌಕಟ್ಟಿನೊಳಗೆ ಬಂಧಿಸಿಡುವ ಪ್ರಯತ್ನಗಳು ನಿರಂತರವಾಗಿ ನಡೆಯುತ್ತಿರುವ ಸಂದರ್ಭದಲ್ಲಿಯೂ ಕೂಡ ಹೆಣ್ಣಿನ ಮೇಲೆ ಸಂಪೂರ್ಣ ಹಿಡಿತವನ್ನು ಸ್ಥಾಪಿಸುವುದು ಪುರುಷ ಪ್ರಭುತ್ವಕ್ಕೆ ಸಾಧ್ಯವಾಗಿಲ್ಲ ಎಂಬುದು ಹೆಣ್ಣಿನಲ್ಲಿ ಅಡಕವಾಗಿರಬಹುದಾದ ಅಗಾಧ ಶಕ್ತಿಯ ಸಂಕೇತವಾಗಿದೆ. ಮತ್ತು ಇದು ಪುರುಷ ಪ್ರಭುತ್ವಕ್ಕೆ ದೊಡ್ಡ ಸವಾಲಾಗಿದೆ ಕೂಡ. ಹೆಣ್ಣನ್ನು ಅಧೀನತೆಗೆ ಒಳಪಡಿಸಿಕೊಳ್ಳಲು ಪ್ರಯತ್ನಿಸಿದಷ್ಟು ಅವಳ ಆಂತರ್ಯದ ಶಕ್ತಿ ಸಂಚಲನ ಹಲವು ರೂಪಗಳನ್ನು ಧರಿಸಿ ಪಿತೃ ಪ್ರಭುತ್ವಕ್ಕೆ ಸವಾಲೊಡ್ಡುತ್ತಿದೆ ಎಂಬುದು ಅತ್ಯಂತ ಪ್ರಮುಖ ಸಂಗತಿ. ಆದರೂ ತನ್ನ ಅಧಿಕಾರದಾಹ ಹಾಗೂ ಪ್ರಭುತ್ವದ ಧೋರಣೆ ಹೆಣ್ಣನ್ನು ಮಣಿಸುವ ಹೊಸ ಹೊಸ ಹುನ್ನಾರಗಳನ್ನು ರೂಪಿಸುವಂತೆ

ಪ್ರೇರೇಪಿಸುತ್ತದೆ. ಇದು ಪ್ರಭುತ್ವದ ಹುನ್ನಾರಗಳು ಹೆಣ್ಣಿನ ಶಕ್ತಿಯ ಮುಂದೆ ಸಂಪೂರ್ಣ ಯಶಸ್ವಿಯಾಗಿಲ್ಲ ಎಂಬ ಅಂಶವನ್ನೂ ಕೂಡ ತೆರೆದಿಡುತ್ತದೆ. ಅದೇನೇ ಆದರೂ ಪುರುಷ ಪ್ರಭುತ್ವ ಹೆಣ್ಣನ್ನು ತನ್ನ ಅಧೀನತೆಗೆ ಒಳಪಡಿಸಿಕೊಳ್ಳುವ ಸಲುವಾಗಿ ಹೊಸ ಹೊಸ ತಂತ್ರಗಳನ್ನು ರೂಪಿಸುತ್ತಿರುತ್ತದೆ ಎಂಬುದು ಸ್ತ್ರೀವಾದಿ ಸಾಹಿತ್ಯಾಧ್ಯಯನದಿಂದ ಸ್ಪಷ್ಟವಾಗುತ್ತದೆ.

ರಾಷ್ಟ್ರೀಯ ಚಳುವಳಿಗಳು ಹುಟ್ಟುಹಾಕಿದ ಮಹತ್ವದ ಪ್ರತಿಮೆ ಆದರ್ಶ ಸ್ತ್ರೀ ಮಾದರಿಗಳು ಆರ್ಯ ಸ್ತ್ರೀ ಪ್ರತಿಮೆಗಳು. ಸೀತೆ, ಸಾವಿತ್ರಿ, ದಮಯಂತಿ, ಮುಂತಾದ ಸ್ತ್ರೀ ಪಾತ್ರಗಳ ವಿನಯ, ವಿದೇಯತೆ, ಪತಿಭಕ್ತಿ, ಸೇವಾಮನೋಭಾವ ಮುಂತಾದ ಕಾರ್ಯಮಾದರಿಗಳನ್ನು ಉನ್ನತೀಕರಿಸಿ ಈ ರೀತಿಯಲ್ಲಿ ಬದುಕುವುದೇ ಜೀವನದ ಪ್ರಮುಖ ಧ್ಯೇಯ ಎಂಬಂತೆ ಮಹಿಳೆಯರಿಗೆ ತರಬೇತಿಯನ್ನು ನೀಡಲಾಯಿತು. ಇದರಿಂದ ಪ್ರೇರಿತರಾದ ಮಹಿಳೆಯರನೇಕರು ಈ 'ಆದರ್ಶಪ್ರಿಯತೆ'ಯನ್ನು ಅಳವಡಿಸಿಕೊಳ್ಳುವುದರೊಂದಿಗೆ ತಮ್ಮ ಸಾಹಿತ್ಯದ ಮೂಲಕ ಆ ರೀತಿ ನಡೆದುಕೊಳ್ಳಲು ಇತರೆ ಸ್ತ್ರೀಯರಿಗೂ ಕೂಡ ಪ್ರೇರೇಪಣೆಯನ್ನು ನೀಡಿದರು. ಸೀತೆ, ಸಾವಿತ್ರಿ, ಮುಂತಾದ ಪತಿವ್ರತಾ ಸ್ತ್ರೀಯರಂತೆ ತಾವೂ ಕೂಡ ಪತಿಭಕ್ತಿ, ಕುಟುಂಬ ಹಿತ, ರಾಷ್ಟ್ರ ಹಿತಕ್ಕಾಗಿ ಪ್ರಾಣತ್ಯಾಗಕ್ಕೂ ಸಿದ್ಧರಾಗಬೇಕೆಂದು ಕರೆ ನೀಡಿದರು. ತಿರುಮಲಾಂಬ ಅಂಗನೆಯರ ಅವಶ್ಯ ಕರ್ತವ್ಯಗಳನ್ನು ಹೇಳುವ ಸಂದರ್ಭದಲ್ಲಿ "ವಿಶ್ವಸೇವೆ, ದೇಶಸೇವೆ, ಮಾತೃಸೇವೆಗಳನ್ನು ಉಲ್ಲೇಖಸುತ್ತಾ ಹೆಣ್ಣಿಗೆ ಇವುಗಳಾಚೆಗೂ ಮಾಡಬಹುದಾದ ಸೇವೆ ಇದೆ. ಅದೆಂದರೆ 'ಪತಿಸೇವೆ,' 'ಈ ಪತಿಸೇವೆಯಲ್ಲಿ ಮೇಲೆ ಹೇಳಿರುವ ಭಾವಶುದ್ಧಿ, ಕ್ರಿಯಾಶುದ್ಧಿಗಳೆರಡೂ ದೃಢಭಾವದಲ್ಲಿರಬೇಕಲ್ಲದೆ, ಇತರ ಸೇವೆಗಳಂತೆಯೇ ಇದೊಂದಾಗಿದೆಯೆಂದು ಭಾವಿಸದೆ ಪರಮಾತ್ಮನ ಸಾಕಾರ ರೂಪವೇ ಇದೆಂದು ತಿಳಿದು ಈ ಮೂರ್ತಿಯನ್ನು ಸರ್ವ ಪ್ರಕಾರದಿಂದಲೂ ಸೇವಿಸಿ ಆ ಪರಮಾತ್ಮನ ಪೂರ್ಣಾನುಗ್ರಹಕ್ಕೆ ಪಾತ್ರಳಾಗಬೇಕೆಂಬ ಆಸಕ್ತಿಯು ಅಂಗನಾನಿವಹಕ್ಕೆಲ್ಲಾ ಬಲವಾಗಿರಬೇಕು".[೨೪] ಎಂದು ಪಿತೃ ಪ್ರಭುತ್ವದ ಅಪೇಕ್ಷಿತ ರೀತಿಯಲ್ಲಿ ಮಹಿಳೆ ಕಾರ್ಯಪ್ರವೃತ್ತರಾಗುವಂತೆ ಕರೆ ನೀಡುತ್ತಾರೆ. ಈ ರೀತಿ ಹೆಣ್ಣಿನ ಮೂಲಕವೇ ಮೌಲ್ಯವ್ಯವಸ್ಥೆಯನ್ನು ಬಿತ್ತುವುದು ಪಿತೃಸಂಸ್ಕೃತಿಯ ಕಾರ್ಯಮಾದರಿಗಳಲ್ಲಿ ಅತ್ಯಂತ ಪ್ರಮುಖವಾದ ವಿಧಾನವಾಗಿದೆ. ಆದರ್ಶ ಪ್ರಿಯತೆಯವ್ಯಸನಕ್ಕೆ ಗುರಿಯಾದ ಸ್ತ್ರೀವರ್ಗ ಈ ಪುರುಷ ನಿರ್ಮಿತಿಯ ಮೌಲ್ಯವ್ಯವಸ್ಥೆಯ ವಿರುದ್ಧ ದನಿಯೆತ್ತುವುದಿರಲಿ, ಅದನ್ನು ಕಾಪಾಡುವುದು, ಮೌಲ್ಯವ್ಯವಸ್ಥೆಗೆ ಚ್ಯುತಿಬಾರದಂತೆ ನಡೆದುಕೊಳ್ಳುವುದು ತನ್ನ ಆದ್ಯ ಕರ್ತವ್ಯ ಎಂಬಂತೆ ವರ್ತಿಸತೊಡಗಿದರು. ಇದರಿಂದಾಗಿ ಮಹಿಳಾ ಸಮುದಾಯದಲ್ಲಿಯೇ ಒಡಕುಗಳುಂಟಾಗಲು, ಭಿನ್ನಾಭಿಪ್ರಾಯಗಳು ಮೂಡಲು ಕಾರಣವಾಯಿತು. ಈ ಅಂಶಗಳನ್ನು ಆಧರಿಸಿ ಪುರುಷ ಪ್ರಭುತ್ವ ತನ್ನ ಹಿಡಿತವನ್ನು ಮತ್ತಷ್ಟು ಬಿಗಿಗೊಳಿಸಿ, ಸಾರ್ವತ್ರಿಕ ಗೊಳಿಸಲು ಸಾಧ್ಯವಾಯಿತು.

೧೮೫೬ರಲ್ಲಿ ಜಾರಿಗೆ ಬಂದ ವಿಧವಾ ಪುನರ್ವಿವಾಹ ಕಾಯ್ದೆ ಎಷ್ಟರಮಟ್ಟಿಗೆ ಸ್ತ್ರೀಪರವಾಗಿ ಕಾರ್ಯನಿರ್ವಹಿಸಿತು ಎಂಬುದನ್ನು ಡಾ॥ಬಿ.ಎನ್.ಸುಮಿತ್ರಾಬಾಯಿ ಚರ್ಚಿಸುತ್ತಾ "ಮರುಮದುವೆ ಮಾಡಿಕೊಂಡ ವಿಧವೆಯನ್ನು ಮೃತ ಪತಿಯ ಆಸ್ತಿಯಲ್ಲಿ ಪಾಲಿರದ, ಆ ಮಟ್ಟಿಗೆ 'ಸತ್ತಂತೆಯೆ'ಎಂದು

ಈ ಕಾನೂನು ಪರಿಗಣಿಸುತ್ತಿದ್ದರಿಂದ ಧಾರ್ಮಿಕ, ಆರ್ಥಿಕ, ಹಾಗೂ ಕ್ರೂರ ಸಾಮಾಜಿಕ ದಿಗ್ಬಂಧನದಲ್ಲಿ ಸಿಲುಕಿದ್ದ ಮೇಲು ಜಾತಿ ವರ್ಗಗಳ ಮಹಿಳೆಯರು ಈ ಕಾನೂನಿನಡಿ ರಕ್ಷಣೆ ಪಡೆಯುವುದು ಅಸಾಧ್ಯವೇ ಆಗಿತ್ತು. ವಿವಾಹಕ್ಕೆ ವಿರೋಧವೇನೂ ಇರದ ಕೆಳಜಾತಿ, ವರ್ಗಗಳಲ್ಲಿ ಕೂಡ ಆಸ್ತಿಯ ಸಲುವಾಗಿ ಮೃತನ ಸೋದರ ಸಂಬಂಧಿಗಳನ್ನೇ ಮರುಮದುವೆ ಮಾಡಿಕೊಳ್ಳಲೆಂಬ ಒತ್ತಡಗಳಿರುತ್ತಿದ್ದು, ಅದಕ್ಕೆ ತಪ್ಪಿದರೆ ತನ್ನ ಮೊದಲ ಪತಿಯ ಮಕ್ಕಳಿಂದಲೂ ಅಗಲಬೇಕಾಗುತ್ತಿತ್ತು. ಮಕ್ಕಳನ್ನು ಬಿಟ್ಟು ಬೇರೆಡೆ ಮದುವೆಯಾದಾಗ ಬರುತ್ತಿದ್ದ ಸಮಾಜದ ನಿಂದನೆ, ಬಹಿಷ್ಕಾರಗಳು ತುಂಬ ಭೀಕರವಾಗಿಯೇ ಇರುತ್ತಿದ್ದುದರಿಂದ ಈ ಕಾನೂನಿನ ಬಲದಿಂದ ವಿಧವೆಯರು ಮರುಮದುವೆಯಾಗಲು ಆಗ ಮುಂದೆ ಬರದಿದ್ದರೆ ಆಶ್ಚರ್ಯವಿಲ್ಲ"[31] ಎನ್ನುತ್ತಾರೆ ಇದು ಸುಧಾರಣಾವಾದಿ ಮನೋಭಾವದಿಂದ ರೂಪುಗೊಂಡ ಸ್ತ್ರೀಪರವಾದ ಕಾನೂನಾದರೂ ಕೂಡ ಹೆಣ್ಣಿನ ಶೋಷಣೆಗಾಗಲೀ, ಅವಳ ಏಕಾಂಗಿತನಕ್ಕಾಗಲೀ ಇದರಿಂದ ಮುಕ್ತಿದೊರೆಯಲಿಲ್ಲ. ಅದೇ ರೀತಿಯಲ್ಲಿ ಸುಧಾರಣೆಗೆ ಒಳಗಾದ ಸತೀಪದ್ಧತಿ ಕೂಡ ತನ್ನ ಹಿಂದಿನ 'ಬಲವಂತದ', ಒತ್ತಾಯಪೂರ್ವಕವಾದ ಆಚರಣೆಯಾಗದೆ ಹೆಣ್ಣಿನ ಒಪ್ಪಿತ ಆಯ್ಕೆಯಾಗಿ, ಸತಿಯಾದವಳು ದೇವಿಯಾಗಿ, ಮುಕ್ತಿಯನ್ನು ಪಡೆಯುವ ಪ್ರತಿಮೆಗಳ ಮೂಲಕ ಸ್ತ್ರೀಸಮುದಾಯವೇ ಅದನ್ನು ಒಪ್ಪಿ ಮುನ್ನೆಡೆಸುವಂತಾಯಿತು.

ಹೆಣ್ಣಿಗೆ ಕುಟುಂಬದಲ್ಲಿ ಕೊಡಮಾಡಿದೆ ಎನ್ನಲಾಗುವ ತಾಯ್ತನದ ಹೊಣೆಗಾರಿಕೆ ಕೂಡ ನೆಪಮಾತ್ರಕ್ಕೆ ಎಂಬುದನ್ನು ಮಹಿಳಾಕಾವ್ಯ ಚರ್ಚೆಗೆ ಒಳಪಡಿಸುತ್ತದೆ. ಪಿತೃ ಪ್ರಭುತ್ವ ಹೆಣ್ಣಿನ ಶಕ್ತಿ ಕೇಂದ್ರವಾಗಬೇಕಿದ್ದ ಅವಳ ತಾಯ್ತನದ ಸಾಮರ್ಥ್ಯವನ್ನು ತನ್ನ ಅನುಕೂಲಕ್ಕೆ ತಕ್ಕಂತೆ ಅರ್ಥೈಸುವುದರೊಂದಿಗೆ ಅವಳ ಸಂಪತ್ತಿನ ಭಾಗವಾಗಬೇಕಿದ್ದ ಮಕ್ಕಳನ್ನೂ ಕೂಡ ತನ್ನ ಒಡೆತನಕ್ಕೆ ಒಳಪಡಿಸಿಕೊಂಡಿರುವುದನ್ನು ಗಮನಿಸಬಹುದು. ಹೆತ್ತು, ಹೊತ್ತು, ಸಾಕುವ ಹೊಣೆಗಾರಿಕೆ ಹೆಣ್ಣಿನದಾದರೂ ಅವರ ಜೀವನಕ್ಕೆ ಸಂಬಂದಿಸಿದ ನಿರ್ಧಾರಗಳನ್ನು ತೆಗೆದುಕೊಳ್ಳುವುದು, ಮತ್ತು ಅವರನ್ನು ಗುರುತಿಸುವುದು ತಂದೆ, ಅಥವಾ ಗಂಡನ ಮೂಲಕವೇ. ಇಲ್ಲಿ ಹೆಣ್ಣಿನ ಅಸ್ತಿತ್ವಕ್ಕಾಗಲೀ, ಅವಳ ಕಾರ್ಯಕ್ಷಮತೆಗಾಗಲೀ ಯಾವುದೇ ರೀತಿಯ ಮಾನ್ಯತೆ ಇಲ್ಲ. ಜೊತೆಗೆ ಈ ಎಲ್ಲಾ ಕೆಲಸಗಳನ್ನು ಪೂರೈಸಿದ ನಂತರವೂ ಕೂಡ ಅವಳದು 'ಶೂನ್ಯ'ಗಳಿಕೆ. ಈ ಬಗೆಯ ನಿರ್ಬಂಧಗಳು ಎಲ್ಲಾ ಕಾಲದಲ್ಲೂ, ಎಲ್ಲಾ ಸಮುದಾಯದಲ್ಲೂ ಏಕರೀತಿಯಲ್ಲಿ ಅನ್ವಯಿಸಲ್ಪಡುವುದನ್ನು ಬಿ.ಟಿ.ಲಲಿತಾ ನಾಯಕ್ ರವರ ಕಾವ್ಯ ಅತ್ಯಂತ ಸಮರ್ಥವಾಗಿ ಬಿಚ್ಚಿಡುತ್ತದೆ.

ಹೆತ್ತವಳು ಅಷ್ಟೇ ಅವ್ವ
ಬರೆದನು ಹಣೆ ಬರಹವ ಅಪ್ಪ
ಎಲ್ಲ ಅವ್ವಂದಿರಿಗೂ
ಅವರಪ್ಪ ಅಜ್ಜರದೇ ಬರಹ.
ದೇವಲೋಕದಲ್ಲೂ ಬ್ರಹ್ಮಪ್ಪನದೇ ಗುತ್ತಿಗೆ.[32]

ಇದೇ ಅಂಶವನ್ನು ಪ್ರತಿಭಾ ನಂದಕುಮಾರ್ ಹೆಣ್ಣಿನ ಅಸ್ತಿತ್ವದ ಪ್ರಶ್ನೆಯ ಹಿನ್ನೆಲೆಯಲ್ಲಿ ಚರ್ಚಿಸುತ್ತಾರೆ. ವಿವಾಹದ ಪೂರ್ವದಲ್ಲಿ ತಂದೆಯ ಮನೆಯಲ್ಲಿಯೂ, ವಿವಾಹದ ನಂತರ ಗಂಡನ ಮನೆಯಲ್ಲಿಯೂ

ಹೆಣ್ಣಿನ ಅಸ್ತಿತ್ವವನ್ನು ಗುರುತಿಸುವ, ಅದಕ್ಕೆ ಮಾನ್ಯತೆಯನ್ನು ನೀಡುವ ಕ್ರಮ ಜಾರಿಯಲ್ಲಿದೆಯಾದರೂ ಕೂಡ ಅದೂ ಕೂಡ ಕೇವಲ ಮೇಲ್ನೋಟದ, ಕಣ್ಣೊರೆಸುವ ತಂತ್ರ ಎಂಬುದನ್ನು ಮಹಿಳಾ ಕಾವ್ಯ ಬಯಲಿಗೆಳೆಯಲು ಪ್ರಯತ್ನಿಸುತ್ತದೆ. ಈ ಬಗೆಯ ಹುನ್ನಾರಗಳ ಮೂಲಕ ಇಡೀ ಹೆಣ್ಣಿನ ಬದುಕೇ ತನ್ನ ನೆಲೆಯನ್ನು ಕಂಡುಕೊಳ್ಳುವಲ್ಲಿ ವಿಫಲವಾಗಿರುವುದನ್ನೂ, ಯಾವುದೇ ರೀತಿಯ ಘನತೆ ಮಾನ್ಯತೆ ದೊರೆಯದೆ ಇರುವಂತೆ ಪಿತೃಪ್ರಭುತ್ವ ಕಾರ್ಯ ನಿರ್ವಹಿಸುವ ಪರಿಯನ್ನೂ, ಅದಕ್ಕೆ ಹೆಣ್ಣು ಬದ್ಧವಾಗಿರಬೇಕಾದ ಅನಿವಾರ್ಯತೆಯನ್ನೂ ಈ ಕವನ ಅತ್ಯಂತ ಸಮರ್ಥವಾಗಿ ಚರ್ಚಿಸುತ್ತದೆ.

ನಾನೊಬ್ಬನ ಪತ್ನಿ.
ಮೂರು ಮಕ್ಕಳ ತಾಯಿ.
ಇನ್ನೂ ನನ್ನ ಸೀರೆ ಕುಪ್ಪಸ
ಬಟ್ಟು, ಬೈತಲೇ ಎಲ್ಲ
ನನ್ನ ಅತ್ತೆ ಮಾವದಿರ ಮರ್ಜಿ.
ನನ್ನದೇ ಮಕ್ಕಳ ಚಪ್ಪಲಿ
ಚಾಕಲೇಟು ಸ್ಲೇಟುಗಳೂ
ನನ್ನ ಪರಿಧಿ ಮೀರಿದ ವಿಷಯಗಳು
. . . . . . .
ನನ್ನದೊಂದು ಮನೆಯೇ ಇಲ್ಲ
ಆದರೂ ಇದನ್ನು ಬಿಟ್ಟು ಹೋದರೆ
'ಮನೆಯ ಮಾನ' ಕಳೆಯುವ ಹೆದರಿಕೆ.[೨೭]

ಕುಟುಂಬಕ್ಕೆ ಸಂಬಂಧಿಸಿದಂತೆ ಹೆಣ್ಣಿನ ಮೇಲೆ ಹೇರಲ್ಪಟ್ಟಿರುವ ನಿರ್ಬಂಧಿತ ಕಾರ್ಯ ಮಾದರಿಗಳು ಯಾವುದೇ ರೀತಿಯ ಬಂಧನ, ಹಿಡಿತ ಎನಿಸದೆ ಅವು ಅವಳ ಜೀವನ ಕ್ರಮವಾಗಿ, ಪಾಲಿಸಲೇ ಬೇಕಾದ ನಿಯಮಗಳಾಗಿ ಮಾರ್ಪಟ್ಟಿರುವುದನ್ನು ಮಹಿಳಾ ಕಾವ್ಯದ ಮೂಲಕ ಗುರುತಿಸಬಹುದು. ಆದರೆ ಹೆಣ್ಣು ಬಂಧನದ ಬಿಗಿಯನ್ನಷ್ಟೇ ಅರಿಯಲು ಸಾಧ್ಯವೇ ವಿನಃ ತನ್ನನ್ನು ಬಂಧಿಸಿರುವವರು ಯಾರು? ಈ ಬಂಧನದ ಸ್ವರೂಪ ಎಂತದ್ದು? ಎಂಬುದನ್ನು ಸುಲಭವಾಗಿ ತಿಳಿಯಲು ಸಾಧ್ಯವಿಲ್ಲ.

**ಕೊನೆ ಟಿಪ್ಪಣಿ**

೧. ಆಧುನಿಕ ಮಹಿಳಾ ಸಾಹಿತ್ಯ : ಇನ್ನಷ್ಟು ಪುಟಗಳು, ಡಾ.ಎಂ ಉಷಾ, ಪ್ರಸ್ತಾವನೆ ಪು.ಸಂ.೧೫
೨. ಶ್ರೀಮತಿ ನಂಜನಗೂಡು ತಿರುಮಲಾಂಬಾ ಜೀವನ ಮತ್ತು ಸಾಹಿತ್ಯ. ಪ್ರ. ಸಂ. : ಪ್ರೊ.ಎಲ್.ಎಸ್.ಶೇಷಗಿರಿರಾವ್. ಪು.ಸಂ.೦೫
೩. ಅದೇ, ಪು.ಸಂ.೦೬
೪. ಬಿದಿರು ಮಳೆ ಕಂಟಿಯಲಿ, ಬಿ.ಟಿ. ಲಲಿತಾ ನಾಯಕ್, ಪು.ಸಂ.೫
೫. ಆಧುನಿಕ ಮಹಿಳಾ ಸಾಹಿತ್ಯ ಇನ್ನಷ್ಟು ಪುಟಗಳು. ಡಾ.ಎಂ.ಉಷಾ.ಪ್ರಸ್ತಾವನೆ. ಪು.ಸಂ.೩೭
೬. ಶ್ರೀಮತಿ ನಂಜನಗೂಡು ತಿರುಮಲಾಂಬಾ ಜೀವನ ಮತ್ತು ಸಾಹಿತ್ಯ.ಪ್ರ. ಸಂ. ಪ್ರೊ.ಎಲ್.ಎಸ್.ಶೇಷಗಿರಿರಾವ್. ಪು.ಸಂ.೦೯
೭. ಅದೇ, ಪು.ಸಂ.೦೯
೮. ಬೆಳಗೆರೆ ಜಾನಕಮ್ಮ ಬದುಕು-ಬರಹ, ಸಂ.ನೇಮಿಚಂದ್ರ ಪು.ಸಂ.೨೬
೯. ಪಾರಿಜಾತ, ವೈದೇಹಿ, ಪು.ಸಂ. ೨೧
೧೦. ಮಧ್ಯಂತರದ ಒಂದು ಗದ್ಯ ಗೀತೆ, ಶಶಿಕಲಾ ವೀರಯ್ಯಸ್ವಾಮಿ, ಪು.ಸಂ.೭
೧೧. ಬಿದಿರು ಮೆಳೆ ಕಂಟಿಯಲಿ, ಬಿ.ಟಿ. ಲಲಿತಾ ನಾಯಕ್, ಪು.ಸಂ.೪೯
೧೨. ಇತಿ ಗೀತಿಕೆ, ವಿಜಯಾದಬ್ಬೆ, ಪು.ಸಂ. ೪೬
೧೩. ಅದೇ, ಪು.ಸಂ. ೨೩
೧೪. ಕಲ್ಯಾಣ ಸರಸ್ವತಿ, ಸಂ.ಡಾ॥ಬಿ.ಎನ್.ಸುಮಿತ್ರಾ ಬಾಯಿ. ಪು.ಸಂ.೧೨೨
೧೫. ಶ್ರೀಮತಿ ನಂಜನಗೂಡು ತಿರುಮಲಾಂಬಾ ಜೀವನ ಮತ್ತು ಸಾಹಿತ್ಯ. ಪ್ರ. ಸಂ. : ಪ್ರೊ.ಎಲ್.ಎಸ್.ಶೇಷಗಿರಿರಾವ್, ಪು.ಸಂ.೧೦
೧೬. ಮುಂತಾದ ಕೆಲ ಪುಟಗಳು, ಸರಸ್ವತಿಬಾಯಿ ರಾಜವಾಡೆ ಅವರ ಬದುಕು ಮತ್ತು ಬರಹ ವೈದೇಹಿ(ಸಂ) ಪು.ಸಂ. ೧೫
೧೭. ಅದೇ ಪು.ಸಂ.೨೭
೧೮. ಬಾಳೆಗರ್ಭದಲ್ಲಿ, ಹೇಮಾ ಪಟ್ಟಣಶೆಟ್ಟಿ, ಪು.ಸಂ.೪೬
೧೯. ಬಿದಿರು ಮಳೆ ಕಂಟಿಯಲಿ, ಬಿ.ಟಿ. ಲಲಿತಾ ನಾಯಕ್, ಪು.ಸಂ.೫
೨೦. ಅದೇ ಪು.ಸಂ.೧೦೨
೨೧. ಇತಿಗೀತಿಕೆ, ವಿಜಯಾದಬ್ಬೆ, ಪು.ಸಂ. ೩೮
೨೨. ಮುಂತಾದ ಕೆಲ ಪುಟಗಳು, ಸರಸ್ವತಿಬಾಯಿ ರಾಜವಾಡೆ ಅವರ ಬದುಕು ಮತ್ತು ಬರಹ ವೈದೇಹಿ(ಸಂ) ಪು.ಸಂ.೪೨
೨೩. ಅದೇ. ಪು.ಸಂ.೪೨
೨೪. ಹಿತೈಷಿಣಿಯ ಹೆಜ್ಜೆಗಳು, ಸಂ. ವಿಜಯಾದಬ್ಬೆ, ಪು.ಸಂ. ೯೫
೨೫. ಕಲ್ಯಾಣ ಸರಸ್ವತಿ, ಡಾ॥ಬಿ.ಎನ್.ಸುಮಿತ್ರಾಬಾಯಿ ಪು.ಸಂ. ೦೫.
೨೬. ಬಿದಿರು ಮಳೆ ಕಂಟಿಯಲಿ, ಬಿ.ಟಿ. ಲಲಿತಾನಾಯಕ್, ಪು.ಸಂ.೪೮.
೨೭. ಮುನ್ನುಡಿ ಬೆನ್ನುಡಿಗಳ ನಡುವೆ, ಪ್ರತಿಭಾ ನಂದಕುಮಾರ್, ಪು.ಸಂ.೦೯

# ಅಧ್ಯಾಯ ೩ :

# ಆಧುನಿಕ ಮಹಿಳಾ ಕಾವ್ಯ ಮತ್ತು ಸ್ತ್ರೀವಾದಿ ಚಿಂತನೆ

# ಅಧ್ಯಾಯ : ೬

## ಮಹಿಳಾ ಕಾವ್ಯ ಮತ್ತು ಸ್ತ್ರೀವಾದಿ ಚಿಂತನೆ

ಸ್ತ್ರೀವಾದಿ ಚಿಂತನೆ ಎನ್ನುವುದು ಕೇವಲ ಹೆಣ್ಣಿನ ಪರವಾದ, ಏಕಾಕೃತಿಯ, ಏಕಮುಖ ಚಲನೆಯ ಆಲೋಚನಾ ಕ್ರಮವಲ್ಲ. ಗಂಡು ಹೆಣ್ಣಿನ ಸಂಬಂಧದ ಸ್ವರೂಪದಲ್ಲಿನ ಭಿನ್ನತೆ ಹಾಗೂ ವೈವಿಧ್ಯತೆಯನ್ನು ಗುರುತಿಸಿ ಅದಕ್ಕೆ ಪರಿಹಾರಗಳನ್ನು ಕಂಡುಕೊಳ್ಳುವ ಮಾದರಿಯದ್ದು. ಇದು ನಾಗರಿಕ ಸಮಾಜದಲ್ಲಿ ನೆಲೆಸಿರುವ ಶ್ರೇಣೀಕರಣದ ನೆಲೆಗಳನ್ನು ತೊಡೆದುಹಾಕುವ ಆಶಯವನ್ನು ಒಳಗೊಂಡಿದೆ. ಸ್ತ್ರೀವಾದಿ ಚಿಂತನೆ ತಾತ್ವಿಕತೆಯನ್ನು ಕಟ್ಟಿಕೊಡುವಲ್ಲಿ ಹಿಂದಿನಿಂದಲೂ ಹಲವು ಸವಾಲುಗಳನ್ನು ಎದುರಿಸುತ್ತಾ ಬಂದಿದೆ. ಸ್ತ್ರೀವಾದಿ ಚಿಂತನೆಯ ವ್ಯಾಖ್ಯಾನವೇ 'ಪುರುಷ ದ್ವೇಷಿಯಾದದ್ದು', 'ಸಮಾಜದ ಆರೋಗ್ಯವನ್ನು ಹಾಳುಮಾಡುವಂತದ್ದು' ಎಂಬ ಅಪವ್ಯಾಖ್ಯಾನದಿಂದ ಆರಂಭವಾಗುತ್ತದೆ. ಕಾರಣವೇನೆಂದರೆ ಭಾರತೀಯ ಸಂದರ್ಭದಲ್ಲಿ 'ಸ್ತ್ರೀವಾದ' ಎನ್ನುವುದು ಬಹುಮುಖೀ ಆಯಾಮಗಳಿಂದ ಕೂಡಿದ್ದು, ಸಮುದಾಯದಿಂದ ಸಮುದಾಯಕ್ಕೆ, ಕಾಲದಿಂದ ಕಾಲಕ್ಕೆ ಅದರ ಗ್ರಹಿಕೆ ಹಾಗೂ ನಿರೂಪಣೆಯಲ್ಲಿ ಭಿನ್ನತೆ ಹಾಗೂ ವೈವಿಧ್ಯತೆಯನ್ನು ಗುರುತಿಸಬಹುದು. ಹಾಗಾಗಿ ಭಾರತೀಯ ಸಂದರ್ಭದಲ್ಲಿ ಸ್ತ್ರೀವಾದ ಎಂದರೇನು? ಸ್ಥಳೀಯ ಮತ್ತು ಸಾಮುದಾಯಿಕ ನೆಲೆಗಳಲ್ಲಿ ಸ್ತ್ರೀವಾದಿ ಚಿಂತನೆ ನಿರ್ವಚನಗೊಂಡಿರುವ ಬಗೆ ಹೇಗೆ? ಎಂಬುದನ್ನು ಚರ್ಚಿಸಿ ನಂತರ ಕನ್ನಡ ಕಾವ್ಯದಲ್ಲಿ ಸ್ತ್ರೀವಾದಿ ಚಿಂತನೆಯ ಮಾದರಿಗಳು ರೂಪುಗೊಂಡಿರುವ ವಿಧಾನವನ್ನು ಅಧ್ಯಯನಕ್ಕೆ ಒಳಪಡಿಸುವುದು ಸೂಕ್ತ.

ಸಮುದಾಯದಲ್ಲಿ ಹೆಣ್ಣಿನ ಪರವಾದ ಚಿಂತನೆ ಹಾಗೂ ಹೋರಾಟಗಳು ಆರಂಭಗೊಳ್ಳುವುದಕ್ಕೆ ಹೆಣ್ಣಿನ ಮೇಲೆ ಹೇರಲ್ಪಟ್ಟ ಅಧೀನತೆಯ ಸ್ಥಾನ, ಅದರಿಂದುಂಟಾದ ಅಸ್ಮಿತೆಯ ಪ್ರಶ್ನೆ ಹಾಗೂ ಅಸ್ತಿತ್ವದ ಹುಡುಕಾಟ ಕಾರಣವಾಗಿದೆ. ಹಿಂದಿನಿಂದಲೂ ಹೆಣ್ಣು ಅನುಭವಿಸಿದ ಶೋಷಣೆಯ ವಿಭಿನ್ನ ಆಯಾಮಗಳು, ಪುರುಷಾಧಿಕಾರದಿಂದ ಸುಲಭವಾಗಿ ಬಿಡಿಸಿಕೊಳ್ಳಲಾಗದ ಸಂದಿಗ್ಧತೆಗಳು ಸ್ತ್ರೀವಾದಿ ಚಳುವಳಿಗಳು, ಸ್ತ್ರೀವಾದಿ ಚಿಂತನೆಗಳು ರೂಪುಗೊಳ್ಳಲು ಪ್ರೇರಣೆಯಾಯಿತು. ರಾಜಕೀಯ, ಆರ್ಥಿಕ, ಸಾಮಾಜಿಕ ವ್ಯವಸ್ಥೆಯಲ್ಲಿ ಹೆಣ್ಣಿನ ಮೇಲೆ ಹೇರಲ್ಪಟ್ಟ ನಿಗಧಿತ ಚೌಕಟ್ಟುಗಳಿಂದಾಗಿ ಅಸಮಾನತೆ, ಅನ್ಯಾಯ, ಶೋಷಣೆಯ ವಿರುದ್ಧ ಮಹಿಳೆ ಸಿಡಿದೇಳುವಂತಾಯಿತು. ಇದು ಬೇರೆ ಬೇರೆ ದೇಶಗಳಲ್ಲಿ ಹೆಣ್ಣಿನ ಸಾಮಾಜಿಕ ಪರಿಸ್ಥಿತಿ, ಸಾಂಸ್ಕೃತಿಕ ವಿನ್ಯಾಸಕ್ಕೆ ತಕ್ಕಂತೆ ಬೇರೆ ಬೇರೆ ರೂಪ ಪಡೆದುಕೊಂಡಿರುವುದು ಸಹಜ. ಆದರೆ ಪ್ರಪಂಚದಾದ್ಯಂತ ಮಹಿಳೆ ಒಂದಲ್ಲಾ ಒಂದು ರೀತಿಯಲ್ಲಿ

'ಶೋಷಣೆ' ವಸ್ತುವಾಗಿದ್ದಾಳೆ. ಮತ್ತು ಎಲ್ಲಾ ಸಂದರ್ಭದಲ್ಲೂ ಕೂಡ ಹೆಣ್ಣಿಗೆ 'ಅಧೀನ ದರ್ಜೆ' ಸ್ಥಾನವನ್ನೆ ನೀಡಲಾಗಿದೆ ಎಂಬುದಂತೂ ಸಾರ್ವತ್ರಿಕ ಸತ್ಯ. ಆದರೆ ಮಾತೃಪ್ರಧಾನ ಕುಟುಂಬಗಳು ಹಾಗೂ ಕೆಲ ಬುಡಕಟ್ಟು ಸಮುದಾಯಗಳಲ್ಲಿ ಹೆಣ್ಣಿಗೆ ಪ್ರಾಧಾನ್ಯತೆಯನ್ನು ನೀಡಲಾಗಿದೆಯಾದರೂ ಅದು ಅದು ಅತ್ಯಂತ ಸಣ್ಣ ಪ್ರಮಾಣದಲ್ಲಿ ಮಾತ್ರ. ಇನ್ನೂ ಕೆಲ ಸಂದರ್ಭಗಳಲ್ಲಿ ನೆಪಮಾತ್ರದ ಅಧಿಕಾರ ಹೆಣ್ಣಿನದು. ಇದರಿಂದಾಗಿ ವ್ಯವಸ್ಥೆಯ ಈ ಅಸಮಾನ ಧೋರಣೆಯ ವಿರುದ್ಧದ ಹೆಣ್ಣಿನ ಬಂಡಾಯ ಹಾಗೂ ಪ್ರತಿರೋಧದ ನೆಲೆಗಳನ್ನು ದೇಶಕಾಲಾತೀತವಾಗಿ ಗುರುತಿಸಲು ಸಾಧ್ಯ. ಆದರೆ ಇದು ಪ್ರಪಂಚದಾದ್ಯಂತ ಏಕಕಾಲಕ್ಕೆ ಸಂಭವಿಸಿದ ಕ್ರಾಂತಿಯಲ್ಲ. ಯಾವಾಗ ಹೆಣ್ಣು ಶೋಷಣೆಯ ವಸ್ತುವಾಗಿ ಪುರುಷಾಧೀನಕ್ಕೆ ಒಳಪಟ್ಟಳೊ ಅಂದಿನಿಂದಲೆ ಬಿಡುಗಡೆ ಪಡೆಯುವ ಆಶಯವೂ ಕೂಡ ಆರಂಭವಾಗಿದೆ. ತನ್ನನ್ನು ಅರಿಯುವ, ಆ ಅರಿವನ್ನು ವಿಸ್ತರಿಸಿಕೊಳ್ಳುವ ಹೆಣ್ಣಿನ ಪರವಾದ ಆಲೋಚನಾ ವಿಧಾನವೆ ಸ್ತ್ರೀವಾದಿ ಚಿಂತನೆಗೆ ನಾಂದಿಯಾಯಿತು.

ಭಾರತೀಯ ಸ್ತ್ರೀವಾದದ ಅಧ್ಯಯನವನ್ನು ಸ್ತ್ರೀವಾದಿ ಚಿಂತನೆಯ ಬಗೆಗಿನ ಸಂದೇಹ, ಸವಾಲು ಮತ್ತು ವಾಸ್ತವಗಳನ್ನು ಚರ್ಚಿಸಿ ಮುಂದುವರೆಸುವುದು ಸೂಕ್ತ. ಮೊದಲಿಗೆ ಭಾರತೀಯ ಸ್ತ್ರೀವಾದದ ಬಗೆಗಿನ ಸಂದೇಹ ಸ್ತ್ರೀವಾದಿ ಚಿಂತನೆ ಎಂಬ ಪರಿಕಲ್ಪನೆ 'ಪಾಶ್ಚಾತ್ಯ ಪ್ರಭಾವ'ದಿಂದ ಬಂದದ್ದು ಎಂಬುದು. ಆದರೆ ಅದಕ್ಕೊಂದು ಸ್ಥಳೀಯ ಚಹರೆಯನ್ನು ಸಾಹಿತ್ಯವೂ ಸೇರಿದಂತೆ ಕಲೆ, ಇತಿಹಾಸದ ಅಧ್ಯಯನದಿಂದ ಗುರುತಿಸಬಹುದು. ಪ್ರತಿಯೊಂದು ಹೆಣ್ಣಿನ ಆಂತರ್ಯ ತನ್ನ ಪರಿಮಿತಿಯಲ್ಲಿಯೇ ತನ್ನೊಳಗಿನ ಅಂತಸ್ಸತ್ವವನ್ನು ಕುರಿತು ಅನಾದಿ ಕಾಲದಿಂದಲೂ ಆಲೋಚಿಸುತ್ತಾ ಬಂದಿದೆ. ಭಾರತದಂತಹ ಬಹುಮುಖಿ ಸಂಸ್ಕೃತಿಯ ನೆಲದಲ್ಲಿ ಸ್ತ್ರೀಪರವಾದ ಆಲೋಚನೆಗಳು, ಚಿಂತನೆಗಳು ವಿಭಿನ್ನ ಮಾದರಿಗಳಲ್ಲಿ ಪ್ರಕಟಗೊಂಡಿದೆ. ಈ ಮಾದರಿಗಳನ್ನು ಒಂದು ನಿರ್ದಿಷ್ಟ ಚೌಕಟ್ಟಿಗೆ ಒಳಪಡಿಸಲು ಸ್ತ್ರೀವಾದಿ ಚಿಂತನೆಯ ಜಾಗತಿಕ ಅರಿವು ಅಗತ್ಯ. ಬಿ.ಎನ್.ಸುಮಿತ್ರಾಬಾಯಿ ಪಾಶ್ಚಾತ್ಯ ಸ್ತ್ರೀವಾದಿ ಚಿಂತನೆಯ ಅಗತ್ಯತೆಯನ್ನು ಈ ರೀತಿ ಗುರುತಿಸುತ್ತಾರೆ. "ಭಾರತೀಯ ಸಂದರ್ಭದಲ್ಲಿ ಸ್ತ್ರೀವಾದದ ಮೂಲಕ ಮಹಿಳೆಯರ ಹಾಗೂ ಇಡೀ ಸಾಂಸ್ಕೃತಿಕ ಸಂರಚನೆಯ ಸ್ವರೂಪವನ್ನು ಅರ್ಥ ಮಾಡಿಕೊಳ್ಳುವ ಆಧುನಿಕ ಚಿಂತನೆಗೆ ಹೊರಗಿನಿಂದ ಪ್ರೇರಣೆ ದೊರೆತಿದೆ ನಿಜ. ಆದರೆ ಸ್ತ್ರೀಯರ ಬಗೆಗಿನ ಈ ನೆಲದ ಚಿಂತನೆಗಳನ್ನು ಯಾವಾಗಲೂ ಸ್ತ್ರೀಯರ ವಿರುದ್ಧವಾಗಿಯೇ ಇವೆಯೆಂದೇನೂ ಅಲ್ಲ. ಲಿಂಗತಾರತಮ್ಯದ ವಿರುದ್ಧವಾದ ಧ್ವನಿಗಳೂ ಚರಿತ್ರೆಯ ಹಲವು ಹಂತಗಳಲ್ಲಿ ಕೇಳಬಂದಿವೆ. ಆ ರೀತಿಯಲ್ಲಿ ಪ್ರತಿಭಟನೆ, ಪಶ್ಚಿಮದ ಸ್ತ್ರೀವಾದದ ಚರಿತ್ರೆಗಿಂತ ಎಷ್ಟೋ ಹಿಂದಿನಿಂದಲೂ ನಮ್ಮಲ್ಲಿ ಕಾಣಿಸಿಕೊಂಡಿದೆ. ಆದರೆ 'ಸ್ತ್ರೀಪರತೆ'ಯ ಈ ಸ್ಥಳೀಯ ಲಕ್ಷಣಗಳನ್ನು ವಿಶ್ಲೇಷಿಸಲು ತುಲನಾತ್ಮಕವಾಗಿ ಪಶ್ಚಿಮದ ಸ್ತ್ರೀವಾದದೊಂದಿಗೆ ಹೋಲಿಸಿ ನೋಡಲು ಪಾಶ್ಚಿಮಾತ್ಯ ಸ್ತ್ರೀವಾದಿ ಚಿಂತನೆಗಳ ಪರಿಚಯ ಅವಶ್ಯವಿದೆ".[೧] ಹಾಗಾಗಿ ಭಾರತೀಯ ಸ್ತ್ರೀವಾದ ಸಂಪೂರ್ಣ ಪಶ್ಚಿಮದ ನಕಲಲ್ಲ. ಕೇವಲ ಹೆಣ್ಣಿಗೆ ಸಂಬಂಧಿಸಿದ, ಹೆಣ್ಣು ಮಾತ್ರವೇ ಪರಿಹಾರ ಕಂಡುಕೊಳ್ಳಬೇಕಾದ

ಚಿಂತನೆಯೂ ಅಲ್ಲ. ಇಲ್ಲಿ ಸ್ತ್ರೀಸಮುದಾಯದ ಬಿಡುಗಡೆಯೊಂದಿಗೆ ಇಡೀ ಮಾನವ ಸಮಾಜದ ಬಿಡುಗಡೆಯ ಆಶಯವೂ ಇದೆ.

ಇತರೆ ಯಾವುದೇ ಜ್ಞಾನಶಾಖೆಗಳು ಎದುರಿಸದಿರುವಷ್ಟು ಸಮಸ್ಯೆ ಹಾಗೂ ಸವಾಲುಗಳನ್ನು ಸ್ತ್ರೀವಾದಿ ಚಿಂತನೆ ಎದುರಿಸುತ್ತಿದೆ. ಪರಿಕಲ್ಪನೆಯಿಂದ ಹಿಡಿದು ತಾತ್ವಿಕತೆ, ಆಶಯ, ಆಲೋಚನಾ ಕ್ರಮ ಎಲ್ಲವೂ ಕೂಡ ಮತ್ತೆ ಮತ್ತೆ ಅಪವ್ಯಾಖ್ಯಾನಕ್ಕೆ ಒಳಪಟ್ಟಿದೆ. ಇದು ಪಾಶ್ಚಾತ್ಯ ದೇಶಗಳಲ್ಲಿ ಎದುರಿಸುತ್ತಿರುವ ಸವಾಲುಗಳಿಗಿಂತ ಭಾರತೀಯ ಸಂದರ್ಭದಲ್ಲಿ ಭಿನ್ನವಾದ ಗೊಂದಲ, ಗುಮಾನಿಗಳನ್ನು ಹುಟ್ಟುಹಾಕಿದೆ. ಸ್ತ್ರೀವಾದದ ಬಗೆಗೆ ಇರುವಂತಹ ಈ ದಿಗಿಲು ಮತ್ತು ಆತಂಕಗಳು ಬಹುಶಃ ನಮ್ಮ ಯಾವ ಸಿದ್ಧಾಂತ ಅಥವಾ ಚಳುವಳಿಗಳ ಮುಂದೆ ಇಲ್ಲ. ಇದನ್ನು ಕುರಿತಂತೆ ಗಾಯತ್ರಿ ನಾವಡ "ಭಾರತೀಯ ಸಂದರ್ಭದಲ್ಲಿ ಸ್ತ್ರೀವಾದ ಹೊತ್ತಿರುವ ಅಪಕಲ್ಪನೆ ಎಂದರೆ ಸ್ತ್ರೀವಾದ ಪಶ್ಚಿಮದ ಆಮದು ಸರಕು. ಇದು ನಮ್ಮ ಸಂಸ್ಕೃತಿಕ ಪರಂಪರೆಗೆ, ಸಾಮಾಜಿಕ ಸಂದರ್ಭಗಳಿಗೆ ಒಗ್ಗುವುದಿಲ್ಲ ಎನ್ನುವುದು. ವಿಶ್ವಾತ್ಮಕ ನೆಲೆಯಲ್ಲಿ ನಿಂತು ಮಾತಾಡುವ ವರ್ಗ ಈ ಆರೋಪಗಳನ್ನು ನಿರಾಕರಿಸಿದರೆ ದೇಶೀಯ ಚಿಂತಕರು ಭಾರತೀಯ ಸಂದರ್ಭ, ಒತ್ತಾಯಗಳಿಗೆ ಹೊಂದುವಂತೆ ಪಾಶ್ಚಾತ್ಯ ಸ್ತ್ರೀವಾದವನ್ನು ಮರುಸೃಷ್ಟಿಸಬೇಕಾಗಿದೆ ಎಂದು ಪ್ರತಿಪಾದಿಸುತ್ತಾರೆ".[೨] ಎನ್ನುವುದು ಸ್ತ್ರೀವಾದ ಎದುರಿಸುತ್ತಿರುವ ಸಮಸ್ಯೆಯ ಸ್ವರೂಪವನ್ನೂ, ಅದನ್ನು ಒಪ್ಪಿಕೊಳ್ಳುವಲ್ಲಿ ವ್ಯವಸ್ಥೆ ನೆಡೆಸುತ್ತಿರುವ ಹುನ್ನಾರಗಳನ್ನೂ ಸ್ಪಷ್ಟಪಡಿಸುತ್ತದೆ. ಮುಂದುವರೆದು "ನಮ್ಮ ಅನೇಕ ಜ್ಞಾನಶಾಖೆಗಳು, ಸೈದ್ಧಾಂತಿಕ ವಿಧಾನಗಳು ಪಶ್ಚಿಮದಿಂದ ಹರಿದು ಬಂದವುಗಳು. ವಿಜ್ಞಾನ, ಸಮಾಜಶಾಸ್ತ್ರ, ಮಾನವಶಾಸ್ತ್ರ ಅಥವಾ ಮಾರ್ಕ್ಸವಾದವಾಗಲೀ ಅಥವಾ ನವೋದಯ, ನವ್ಯದ ಸಾಹಿತ್ಯ ತತ್ವಗಳನ್ನಾಗಲಿ ನಾವು ಪಡೆದದ್ದು ಪಶ್ಚಿಮದಿಂದಲೇ. ಈ ಯಾವ ಶಾಸ್ತ್ರ ಅಥವಾ ಸಿದ್ಧಾಂತಕ್ಕೆ ಅಂಟಿಕೊಳ್ಳದ ಅಸ್ಪೃಶ್ಯತೆ, ಅಪವಾದಗಳು ಸ್ತ್ರೀವಾದದ ಮಟ್ಟಿಗೆ ಏಕೆ?"[೩] ಎನ್ನುವ ಪ್ರಶ್ನೆಯಾಗಲಿ "ಸ್ತ್ರೀವಾದದ ವಿಷಯಕ್ಕೆ ಬಂದಾಗ ಮಾತ್ರ ಪ್ರಯೋಜನ, ವ್ಯಾವಹಾರಿಕ ಹಿತದೃಷ್ಟಿಗಿಂತ ರಾಷ್ಟ್ರೀಯ ಅಭಿಜ್ಞಾನ, ಅಪ್ಪಟತನದಗಳಿಗೇ ಏಕೆ ಅಗ್ರ ಪೂಜೆ ಸಲ್ಲುತ್ತದೆ"[೪] ಎನ್ನುವ ತೇಜಸ್ವಿನಿ, ಸೀಮಂತಿನಿ ನಿರಂಜನರವರ ಅಭಿಪ್ರಾಯ ಸ್ತ್ರೀವಾದಿ ಚಿಂತನೆಯ ಅಪವ್ಯಾಖ್ಯಾನವನ್ನು ಕುರಿತಾದ ವಿರೋಧ ಮತ್ತು ಸ್ತ್ರೀವಾದಿ ಚಿಂತನೆಯ ಅನ್ವಯಿಕತೆಯ ಬಗೆಗಿನ ಸಂದೇಹಗಳಿಗೆ ಉತ್ತರವಾಗಿದೆ.

ಸ್ತ್ರೀವಾದ ಎಂಬ ಪರಿಕಲ್ಪನಾತ್ಮಕವಾದ ಚಿಂತನೆ ಪಶ್ಚಿಮದ ಕೈಗಾರಿಕಾ ಕ್ರಾಂತಿಯ ಫಲವಾಗಿ ರೂಪುಗೊಂಡದ್ದು. ಔದ್ಯೋಗಿಕ ಕ್ರಾಂತಿಯಿಂದ ಏರ್ಪಟ ಅಸಮಾನತೆಯ ವಿರುದ್ಧದ ಹೋರಾಟ ಸ್ತ್ರೀ ಸಮಾನತೆಯ ಹೋರಾಟಕ್ಕೆ ಪ್ರೇರಣೆಯಾಯಿತು. ಮಾನವತಾವಾದದ ವಿಶಾಲ ಭಿತ್ತಿಯಲ್ಲಿ ಆರಂಭವಾದ ಸಮಾನತೆಯ ಪರವಾದ ಹೋರಾಟ ನಿಶ್ಚಿತ ಯಶಸ್ಸನನ್ನು ಪಡೆಯಲು ಸಾಧ್ಯವಾಗದ ಕಾರಣ ಹಲವು ಸಮಸ್ಯೆಗಳನ್ನು ಎದುರಸಬೇಕಾಯಿತು. ಹೀಗಾಗಿ ಆರಂಭದಲ್ಲಿ ಸ್ತ್ರೀವಾದಿ ಚಿಂತನೆ ಎನ್ನುವುದು ಪುರುಷ ವಿರೋಧಿ, ಪುರುಷ ದ್ವೇಷಿ, ಕುಟುಂಬ ನಾಶಕ್ಕೆ ಕಾರಣ ಎಂಬ ರೀತಿಯಲ್ಲಿ ಬಿಂಬಿತವಾಗಿದೆ. ಇದನ್ನು ಮತ್ತಷ್ಟು ಸ್ಪಷ್ಟ ಪಡಿಸುವುದಾದರೆ, ಸರೋಜಿನಿ ಶಿಂತ್ರಿಯವರು

ಗುರುತಿಸುವಂತೆ ಹೆಣ್ಣು "ಸಮಾಜದಲ್ಲಿ ಪ್ರತಿಷ್ಠಿತ ಸ್ಥಾನದಲ್ಲಿದ್ದ ಪುರುಷರೇ ತಮ್ಮ ಎಲ್ಲ ಕುಂದು ಕೊರತೆಗಳಿಗೆ, ದುಃಖ ದುಮ್ಮಾನಗಳಿಗೆ ಮತ್ತು ಶೋಷಣೆಗೆ ಜವಾಬ್ದಾರೆಂದು ತಿಳಿದಿದ್ದರು".[೫] ಎಂಬ ಅಂಶದ ಜೊತೆಗೆ ಹಿಂದಿನಿಂದಲೂ ಅಧಿಕಾರ ಸ್ಥಾನದಲ್ಲಿ ಪ್ರಾಧಾನ್ಯತೆಯನ್ನು ಕಾಯ್ದುಕೊಂಡು ಬಂದ ಪುರುಷ ಪ್ರಭುತ್ವ ಸ್ತ್ರೀಪರ ಆಲೋಚನೆಗಳನ್ನು ಮಾನ್ಯ ಮಾಡದಿರುವುದು ಸ್ತ್ರೀವಾದಿ ಚಿಂತನೆ ಸಹಜವಾಗಿಯೇ ಪುರುಷ ವಿರೋಧಿಯಾಗಲು ಕಾರಣವಾಯಿತು. ಆದರೆ ನಂತರದ ದಿನಗಳಲ್ಲಿ "ಸ್ತ್ರೀವಾದ ಈಗ ಒಬ್ಬ ನಿರ್ದಿಷ್ಟ ಪುರುಷನ ವಿರುದ್ಧದ ಪ್ರತಿಭಟನೆಯಾಗಿ ಉಳಿದಿಲ್ಲ. ಬದಲಿಗೆ ಪುರುಷ ಪರವಾಗಿ ನಿಂತಿರುವ ಸಮಾಜ ವ್ಯವಸ್ಥೆಯ ವಿರುದ್ಧ ಮಹಿಳಾ ಸಮುದಾಯವು ಒಡ್ಡಿರುವ ಪ್ರತಿಭಟನೆಯಾಗಿ ಬೆಳೆದಿದೆ".[೬] ಎನ್ನುವ ಎಚ್.ಎಸ್.ಶ್ರೀಮತಿಯವರ ಅಭಿಪ್ರಾಯ ಸಮಂಜಸವಾದದ್ದು. ಇದು ಭಾರತೀಯ ಸ್ತ್ರೀವಾದದ ನಿರ್ದಿಷ್ಟ ಆಯಾಮವನ್ನೂ ಕೂಡ ಸೂಚಿಸುತ್ತದೆ.

ಭಾರತೀಯ ಸಂದರ್ಭದಲ್ಲಿ ಸರೋಜಿನಿ ನಾಯ್ಡು, ಮಧುಕೀಶ್ವರ್, ಪ್ರತಿಭಾ ನಂದಕುಮಾರ್ ಮುಂತಾದವರು 'ನಾನು ಸ್ತ್ರೀವಾದಿಯಲ್ಲ' ಎಂದು ಘೋಷಿಸಿದ್ದಾರೆ.[೭] ಅದಕ್ಕೆ ಸರೋಜಿನಿ ನಾಯ್ಡು ಕೊಡುವ ಕಾರಣವೆಂದರೆ

೧.ಸ್ತ್ರೀವಾದಿ ಎಂದು ಹೇಳಿಕೊಳ್ಳುವಾಕೆ ಮೊದಲಿಗೆ ತನಗೆ ಆರೋಪಿತವಾದ ಕೀಳು ಸ್ಥಾನವನ್ನು ಒಪ್ಪಿಕೊಂಡಂತಾಗುತ್ತದೆ.

೨.ಭಾರತದಲ್ಲಂತೂ ಅಂತಹ ಒಂದು ಸಂದರ್ಭಕ್ಕೆ ಕಾರಣ ಇಲ್ಲ

೩.ಸಮಾಲೋಚನೆಗಳಲ್ಲೂ ಸಂಘರ್ಷಗಳಲ್ಲೂ ಸಮಾನವಾಗಿಯೇ ಇಲ್ಲಿನ ಮಹಿಳೆ ಸದಾ ಪುರುಷನ ಸಹಚರಿಯಾಗಿ ಸಾಗಿ ಬಂದಿದ್ದಾಳೆ.[೮] ಎನ್ನುವುದು ಕೂಡ ಸ್ತ್ರೀವಾದಿ ಚಿಂತಕಿ ಎಂದು ಗುರುತಿಸಿಕೊಳ್ಳುವ ಬಗೆಗಿನ ಭಯ ಮತ್ತು ಆತಂಕಗಳೇ ಆಗಿವೆ. ಆದರೆ "ಹೆಣ್ಣು ತನ್ನ ಮನೆಯಲ್ಲಿ ತನ್ನ ಅಸ್ತಿತ್ವ ಅಧೀನ ಸ್ತರದ್ದಲ್ಲ, ಸಮಾನ ನೆಲೆಯದು ಎಂಬುದನ್ನು ಪ್ರಜ್ಞಾಪೂರ್ವಕವಾಗಿ ನಿರುಪಿಸಲು ನಡೆಸುವ ಅವಳ ಪ್ರಯತ್ನಕ್ಕೆ ತನ್ನದೇ ಮಹತ್ವ ಖಂಡಿತಾ ಇದೆ. ತನ್ನ ಕುಟುಂಬದಲ್ಲಿ ತನ್ನ ಇರವನ್ನು ಸ್ಪಷ್ಟಪಡಿಸುವ ಈ ಪ್ರಯತ್ನದಲ್ಲಿ ಆಕೆ ಪುರುಷ ದ್ವೇಷಿಯಾಗಿಯೋ, ಕುಟುಂಬನಾಶಿನಿಯಾಗಿಯೇ ನಡೆದುಕೊಳ್ಳಬೇಕಾಗುತ್ತದೆ ಎಂದೇನಿಲ್ಲ. ತನ್ನ ಆತ್ಮಾಭಿಮಾನಕ್ಕೆ ಕುಂದುಂಟಾಗದಂತೆ, ಅದರೊಂದಿಗೆ ಕುಟುಂಬದ ಸೌಹಾರ್ದ ಹಾಳಾಗದಂತೆ ಕಾಯ್ದುಕೊಳ್ಳುವ ಅವಳ ಪ್ರಯತ್ನವೂ ಸುಸಂಗತವಾದ ಸ್ತ್ರೀವಾದಿ ಚಿಂತನೆಯೇ".[೯] ಎನ್ನುವ ಶ್ರೀಮತಿ ಅವರ ವಾದ ಸಾಮಾನ್ಯ ಹೆಣ್ಣಿನ ಸಹಜ ಬಂಡಾಯ ಕೂಡ ಸ್ತ್ರೀವಾದವೇ ಎಂಬುದನ್ನು ನಿರೂಪಿಸುತ್ತದೆ. ಜೆರಾಲ್ಡಿನ್ ಫೋರ್ಬ್ಸ್ "ಸರೋಜಿನಿ ನಾಯ್ಡು ಅವರೇನೋ 'ನಾನು ಸ್ತ್ರೀವಾದಿಯಲ್ಲ' ಎಂದು ಹೇಳುತ್ತಾರೆ. ಆದರೆ ಅವರ ಆದರ್ಶಗಳು ಹೇಳುವುದು ಸಾಮಾಜಿಕ ಸ್ತ್ರೀವಾದವನ್ನೆ. ಸಾಮಾಜಿಕ ಸ್ತ್ರೀವಾದವನ್ನು ರಾಷ್ಟ್ರೀಯವಾದದೊಂದಿಗೆ ತಳುಕು ಹಾಕುವ ಇಂತಹ ಪ್ರಕ್ರಿಯೆಯಲ್ಲಿ ಸರೋಜಿನಿ ನಾಯ್ಡು ಅವರಂತಹ ಮಹಿಳಾ ನಾಯಕಿಯರು ಮಹಿಳೆಯರ ದುಡಿಮೆಯನ್ನು ನ್ಯಾಯಯುತವಾಗಿ ಪರಿಗಣಿಸಬೇಕೆಂಬ ಮೂಲಭೂತ ಸ್ತ್ರೀವಾದಿ ಸಿದ್ಧಾಂತವು

ಬೆಳೆಯಲು ಅಡ್ಡಿಯೇ ಆದರು"[೧೦]. ಭಾರತದ ಸ್ತ್ರೀವಾದಕ್ಕೆ ಎದುರಾದ ಬಹು ದೊಡ್ಡ ಸವಾಲು ಈ ಬಗೆಯದ್ದು. ಸ್ತ್ರೀವಾದಿ ಚಿಂತನೆ ಬಹುತ್ವವನ್ನು ಗುರುತಿಸಲು ವಿಸ್ತಾರವನ್ನು ಪಡೆಯಲು ಪುರುಷ ಆಲೋಚನೆಯಿಂದ ಪ್ರೇರಿತರಾದ ಸ್ತ್ರೀಯರೂ ಕೂಡ ಅಡ್ಡಿಯುಂಟುಮಾಡಿದರು. ಆದುದರಿಂದಾಗಿಯೇ ಸ್ತ್ರೀವಾದಿ ಚಿಂತನೆ ಎಂದಾಕ್ಷಣ ಅದು ವೇದಿಕೆಗಳಲ್ಲಿ ನಿಂತು ಹೆಣ್ಣಿನ 'ಸ್ವೇಚ್ಛೆಯ' ಪರವಾಗಿ ನಡೆಸುವ ಹೋರಾಟ ಎಂಬಷ್ಟಕ್ಕೆ ಮಾತ್ರ ಸೀಮಿತವಾಗಿಬಿಡುತ್ತದೆ. ಈ ಪೂರ್ವಗ್ರಹ ಪೀಡಿತ ಆಲೋಚನೆಯಿಂದ ಹೊರಬಂದು ಸ್ತ್ರೀವಾದದ ಮೂಲ ಕಾಳಜಿಗಳನ್ನು, ಅದರ ಆಶಯಗಳನ್ನು ವಿಸ್ತರಿಸಿಕೊಳ್ಳಬೇಕಾಗಿದೆ.

ಇಂದು ಸ್ತ್ರೀವಾದಿ ಚಿಂತನೆ ಎನ್ನುವುದು ಪುರುಷ ಪ್ರಧಾನ ಸಾಮಾಜಿಕ ಹಾಗೂ ರಾಜಕೀಯ ಶ್ರೇಣೀಕರಣದ ವಿರುದ್ಧದ ಬಂಡಾಯ ಹಾಗೂ ತೀವ್ರತರವಾದ ಹೋರಾಟ ಎಂಬ ಮನೋಭಾವಕ್ಕಿಂತ 'ಸಮಾನತೆಯ ಆಶಯ' ಹಾಗೂ 'ಸಹಜೀವನ ವಿಧಾನದ ಆಯ್ಕೆಗೆ ಸಂಬಂಧಿಸಿದ ಆಲೋಚನಾ ಕ್ರಮ' ಎಂಬ ವ್ಯಾಪ್ತಿಯನ್ನು ಒಳಗೊಂಡಿದೆ. ಇದು ಕನ್ನಡ ಮಹಿಳಾ ಕಾವ್ಯದ ಸ್ತ್ರೀವಾದಿ ಚಿಂತನೆಯ ಕೇಂದ್ರ ಕಾಳಜಿಯಾಗಿದೆ. ಪ್ರಪಂಚದಾದ್ಯಂತ ಕಂಡುಬರುವ ಸ್ತ್ರಿವಾದಿ ಚಿಂತನೆಯ ಆಲೋಚನಾ ಕ್ರಮ ಹಾಗೂ ಹೋರಾಟದ ಭಿನ್ನ ಮಾರ್ಗಗಳು ಕನ್ನಡ ಕವಯಿತ್ರಿಯರ ಮೇಲೂ ಗಮನಾರ್ಹವಾದ ರೀತಿಯಲ್ಲಿ ಪ್ರಭಾವ ಬೀರಿವೆ. ಆದರೆ ಕನ್ನಡ ಕವಯಿತ್ರಿಯರು ತಮ್ಮ ಕಾವ್ಯದ ಮೂಲಕ ಕಟ್ಟಿಕೊಡುವ ಸ್ತ್ರೀವಾದಿ ಚಿಂತನೆ ಭಿನ್ನತೆ ಹಾಗು ವೈಶಿಷ್ಟ್ಯತೆಯಿಂದ ಕೂಡಿದ್ದು, ವಿಭಿನ್ನ ಆಯಾಮಗಳಲ್ಲಿ ಪಿತೃ ಸಂಸ್ಕೃತಿಗೆ ಮುಖಾಮುಖಿಯಾಗುತ್ತದೆ. ಹಾಗಾದರೆ ಕನ್ನಡದ ಸ್ತ್ರೀವಾದಿ ಚಿಂತನೆ ಪಾಶ್ಚಾತ್ಯ ಸ್ತ್ರೀವಾದಿ ಚಿಂತನೆಗಿಂತ ಭಿನ್ನವೇ? ಆ ರೀತಿಯಲ್ಲಿ ಭಿನ್ನವಾಗಿದ್ದರೆ ಅದರ ಸ್ವರೂಪವೇನು? ಎಂಬ ಅಂಶ ಸ್ತ್ರೀವಾದಿ ಅಧ್ಯಯನದ ದೃಷ್ಟಿಯಿಂದ ಕುತೂಹಲಕಾರಿಯಾದದ್ದು ಹಾಗೂ ಪ್ರಮುಖವಾದದ್ದೂ ಕೂಡ. ಈ ಬಗೆಯ ಭಿನ್ನತೆ ಹಾಗೂ ವೈವಿಧ್ಯತೆಗೆ ಕಾರಣಗಳೇನು ಎಂಬುದನ್ನು ಮಹಿಳಾ ಕಾವ್ಯದ ಅಧ್ಯಯನದ ಮೂಲಕ ಗುರುತಿಸಲು ಪ್ರಯತ್ನಿಸಲಾಗಿದೆ.

ಸ್ತ್ರೀವಾದಕ್ಕೂ ಹೆಣ್ಣಿನ ಬದುಕಿಗೂ ನಿಕಟವಾದ ಸಂಬಂಧವಿರುವುದರಿಂದ ಹೆಣ್ಣು ಬೆಳೆದ ಪರಿಸರ, ಎದುರಿಸಿದ ಸವಾಲುಗಳು, ಸಿಕ್ಕ ಅವಕಾಶಗಳು, ಅನುಭವಿಸಿದ ಅವಮಾನ, ಯಾತನೆ, ಹಿಂಸೆ ಎಲ್ಲವೂ ಸೇರಿ ಸ್ತ್ರೀವಾದಿ ಚಿಂತನೆ ರೂಪುಗೊಳ್ಳುತ್ತಿರುತ್ತದೆ ಎನ್ನಬಹುದು. ಆರ್ಥಿಕ, ಸಾಮಾಜಿಕ, ಕೌಟುಂಬಿಕ ಸ್ಥಾನಗಳಿಗೆ ಸಂಬಂಧಿಸಿದಂತೆ ಪ್ರಪಂಚದಾದ್ಯಂತ ಎಲ್ಲಾ ಮಹಿಳೆಯರ ಸ್ಥಿತಿಗತಿ ಒಂದೇ ರೀತಿಯದ್ದಾದರೂ ಅದರ ಸ್ವರೂಪ ಹಾಗೂ ಒಳರಚನೆಗಳಲ್ಲಿ ಭಿನ್ನತೆಯಿರುವುದನ್ನು ಗಮನಿಸಬಹುದು. ಕಾಲ, ದೇಶ, ಪರಿಸ್ಥಿತಿ ಸಂಸ್ಕೃತಿಗಳ ಸ್ವರೂಪಕ್ಕೆ ತಕ್ಕಂತೆ ಸ್ತ್ರೀವಾದಿ ಚಿಂತನೆಯ ಸ್ವರೂಪ ಕೂಡ ಭಿನ್ನ ಭಿನ್ನವಾಗಿ ರೂಪುಗೊಂಡಿರುತ್ತದೆ. ಪಾಶ್ಚಾತ್ಯ ಸ್ತ್ರೀವಾದಕ್ಕಿಂತ ಭಾರತದ ಅದರಲ್ಲೂ ಕರ್ನಾಟಕದ ಸ್ತ್ರೀವಾದ ತನ್ನದೇ ಆದ ವಿಶಿಷ್ಟ ಚಹರೆಯೊಂದನ್ನು ರೂಪಿಸಿಕೊಳ್ಳಲು ಪ್ರಯತ್ನಿಸಿರುವುದನ್ನು ಮಹಿಳಾ ಕಾವ್ಯದ ಅಧ್ಯಯನದಿಂದ ಗುರುತಿಸಬಹುದಾಗಿದೆ. ಕನ್ನಡದ ಮಹಿಳಾ ಕಾವ್ಯದಲ್ಲಿ ಸ್ತ್ರೀವಾದಿ ಚಿಂತನೆ, ಹೆಣ್ಣಿನ ಪರಿಸ್ಥಿತಿ ಹಾಗೂ ಅವಳು ರೂಪುಗೊಂಡ ಪ್ರದೇಶದ ಪ್ರಭಾವದಿಂದಾಗಿ ಭಿನ್ನ ಭಿನ್ನ ರೂಪಗಳಲ್ಲಿ ಕಂಡು ಬರುತ್ತದೆ ಎಂಬುದನ್ನು ಈ ಹಿಂದಿಯೇ ಗುರುತಿಸಲಾಗಿದೆ. ಅಲ್ಲದೆ ಕಾಲಘಟ್ಟದ

ಹಿನ್ನೆಲೆಯಲ್ಲಿಯೂ ಕೂಡ ಸ್ತ್ರೀಯ ಪರಿಸ್ಥಿತಿಗೆ ಸಂಬಂಧಿಸಿದಂತೆ ಭಿನ್ನ ಭಿನ್ನ ರೀತಿಯ ಆಲೋಚನೆ, ಚಿಂತನೆಗಳು ಮೂಡಿಬಂದಿರುವುದನ್ನು ಕಾಣಬಹುದು.

ಮೊದಲ ತಲೆಮಾರಿನ ನಂಜನಗೂಡು ತಿರುಮಲಾಂಬ, ಸರಸ್ವತಿ ಬಾಯಿ ರಾಜವಾಡೆ, ತಿರುಮಲೆರಾಜಮ್ಮ ಇವರ ಕವನಗಳನ್ನು ಪುರುಷಾಧಿಕಾರದ ಹಿಡಿತದ ನೆಲೆ, ಉದಾರವಾದಿ ಸಾಂಸ್ಕೃತಿಕ ನೆಲೆ, ಮೌಲ್ಯವ್ಯವಸ್ಥೆಯನ್ನು ಒಪ್ಪಿ ಅದರಂತೆ ನಡೆದುಕೊಳ್ಳಲು ಪ್ರೇರೇಪಿಸಿದಂತಹ ಸಾಹಿತ್ಯ ಮುಂತಾದ ಕ್ರಮಗಳಲ್ಲಿ ನೋಡುವ ಕ್ರಮ ಜಾರಿಯಲ್ಲಿದೆ. ಆದರೆ ಈ ಕ್ರಮವನ್ನು ಆಧರಿಸಿ ಅವರ ಬರವಣಿಗೆ ಸ್ತ್ರೀ ವಿರೋಧಿ ಚಿಂತನೆಯಿಂದ ಕೂಡಿತ್ತು ಎಂದು ಹೇಳಲು ಸಾಧ್ಯವಿಲ್ಲ. ಏಕೆಂದರೆ ಈ ಕಾಲಘಟ್ಟದ ಲೇಖಕಿಯರಿಗೆ 'ಸ್ತ್ರೀವಾದಿ ಚಿಂತನೆ' ಎಂಬ ಸಂಘಟನಾತ್ಮಕ ಸ್ತ್ರೀಪರ ಹೋರಾಟದ ಪರಿಕಲ್ಪನೆಯ ಪರಿಚಯವೂ ಇಲ್ಲದೆ, ಬದುಕಿನ ಹೋರಾಟದ ಹಿನ್ನೆಲೆಯಲ್ಲಿ ಹುಟ್ಟಿದ ತನ್ನ ಸಮಕಾಲೀನ ಸಮಾಜದ ಹೆಣ್ಣಿನ ಶೋಷಣೆಯ ಬಗೆಗಿನ ಅರಿವು ಹಾಗೂ ಅವಳ ಜೀವನವನ್ನು ಸುಧಾರಣೆಯತ್ತ ಕೊಂಡೊಯ್ಯಬೇಕೆಂಬ ಹಂಬಲವೇ ಸ್ತ್ರೀ ಪರವಾದ ಹೋರಾಟದ ಪ್ರಧಾನ ಅಂಶವಾಗಿ ಕಂಡುಬರುತ್ತದೆ. ಹೆಣ್ಣಿನ ಜೀವನ ಸುಖಕರವಾಗಿರಲು ಅಗತ್ಯವಾದ ಶಾಂತಿ, ತ್ಯಾಗ, ತಾಳ್ಮೆಗಳ ಭೋಧನೆಯ ಕಡೆಗೆ ಗಮನ ನೀಡಿರುವುದನ್ನು ಆರಂಭ ಘಟ್ಟದ ಸ್ತ್ರೀವಾದಿ ಚಿಂತನೆಯ ಆಶಯ ಎಂದು ಗುರುತಿಸಬಹುದು.

ಈ ಕಾಲಘಟ್ಟದ ಮಹಿಳಾ ಸಮುದಾಯಕ್ಕೆ ಇದ್ದಂತಹ ಅವಕಾಶಗಳು ಹಾಗೂ ಸಮಾಜದ ಬಗೆಗಿನ ಅರಿವು ಸೀಮಿತವಾಗಿದ್ದವು. ಮತ್ತು ಹೊರ ಜಗತ್ತಿನೊಂದಿಗೆ ಯಾವುದೇ ರೀತಿಯ ಸಂಪರ್ಕ, ಸಂವಹನ, ಸಾಧ್ಯವಿಲ್ಲದ ಸಂದರ್ಭದಲ್ಲಿ ಉದಾರವಾದಿ ಚಿಂತನೆಯ ಹಿನ್ನೆಲೆಯಿಂದ ದತ್ತವಾದ ಆಧುನಿಕ ಶಿಕ್ಷಣ, ವಿಧವಾ ವಿವಾಹ, ಬಾಲ್ಯ ವಿವಾಹದ ನಿಷೇಧದಂತಹ ಕಾಯ್ದೆಗಳು ಹೆಣ್ಣಿಗೂ ಕೂಡ ಅನ್ವಯವಾಗುವಂತೆ ವಿಸ್ತರಣೆ ಪಡೆದದ್ದು ಪುರುಷಾಧಿಪತ್ಯಕ್ಕೆ-ಹೆಣ್ಣಿನ ಬಗೆಗಿದ್ದ ಕಾಳಜಿ ಮತ್ತು ಒಲವು ಎಂದಲ್ಲದೆ ಬೇರೆ ರೀತಿಯಲ್ಲಿ ಗ್ರಹಿಸಲು ಇವರಿಗೆ ಸಾಧ್ಯವಿರಲಿಲ್ಲ ಕೂಡ. ಆದ್ದರಿಂದಾಗಿ ಈ ಕಾಲಘಟ್ಟದ ಲೇಖಕಿಯರು ತಮ್ಮ ಹಾಗೂ ಸಮಕಾಲೀನ ಹೆಣ್ಣಿನ ಪರಿಸ್ಥಿತಿಗೆ 'ತಾವು ಹೆಣ್ಣಾಗಿ ಹುಟ್ಟಿದುದೇ ಕಾರಣ' ಎಂದಲ್ಲದೆ ಪುರುಷಾಧಿಕಾರದ ಹುನ್ನಾರಗಳನ್ನು ಗುರುತಿಸಲು ಹಾಗೂ ವಿರೋಧಿಸಲು ಸಾಧ್ಯವಾಗಲಿಲ್ಲ. ಆದ್ದರಿಂದ ಈ ಹಂತವನ್ನು 'ಸುಧಾರಣಾವಾದದ ಲಕ್ಷ್ಮಣ ರೇಖೆ' ಎಂದು ಕರೆಯಬಹುದು. ಹಾಗೆಂದ ಮಾತ್ರಕ್ಕೆ ಸಮಾಜದಿಂದ ದತ್ತವಾದ ಎಲ್ಲಾ ಬಗೆಯ ಶೋಷಣೆಯನ್ನೂ ಧಿಕ್ಕರಿಸದೆ ಒಪ್ಪಿ ನಡೆದರು ಎಂಬದೂ ಕೂಡ ಅಲ್ಲ. ತನಗೆ ಅವಕಾಶ ಸಿಕ್ಕಾಗಲೆಲ್ಲಾ ತನ್ನ ಅಧೀನ ಸ್ಥಿತಿಗೆ ಕಾರಣರಾದವರ ಬಗೆಗಿನ ಬೇಸರ, ನೋವು, ವಿಭಿನ್ನ ರೂಪಗಳಲ್ಲಿ ವ್ಯಕ್ತವಾಗಿರುವುದನ್ನು ಕಾಣಬಹುದು. ಅಲ್ಲದೆ ಮತ್ತೊಂದು ಹೆಣ್ಣಿನ ನೋವಿನ ಬಗ್ಗೆ ಮಿಡಿಯುವ ಉದಾರತೆ ಈ ಕಾಲಘಟ್ಟದ ಲೇಖಕಿಯರಲ್ಲಿ ಪ್ರಧಾನವಾಗಿ ಕಂಡುಬರತ್ತದೆ. ಇದೇ ಇವರು ಕಂಡು ಕೊಂಡ ಸ್ತ್ರೀವಾದಿ ಚಿಂತನೆಯ ಮೊದಲ ಹೆಜ್ಜೆ.

ಹೆಣ್ಣಿಗೆ ಅಭಿವ್ಯಕ್ತಿ ಸ್ವಾತಂತ್ರ್ಯವೇ ಇಲ್ಲ ಎನ್ನುವ ಸಂದರ್ಭದಲ್ಲಿ ಇವರು ಬರವಣಿಗೆಯನ್ನು ಆರಂಭಿಸಿದ್ದೇ ಒಂದು ಬಗೆಯ ಹೋರಾಟ ಎನ್ನಬಹುದು. ಇವರು ತಮ್ಮ ಬರವಣಿಗೆಯ ಮೂಲಕ ಸ್ತ್ರೀಯರು ಜಾಗೃತರಾಗುವಂತೆ ಪ್ರೇರೇಪಿಸಿದ್ದು ಒಂದು ವಿಧವಾದರೆ ಸ್ವತಃ ತಾವೇ ಮುಂದೆ ನಿಂತು ಪತ್ರಿಕೆಗಳನ್ನು ಪ್ರಾರಂಭಿಸುವುದರ ಮೂಲಕ ಸ್ತ್ರೀಯರ ಅಭಿವ್ಯಕ್ತಿಗೆ ನಾಲಗೆಯಾಗಿ, ಬಾಯಾಗಿ, ಮಾತಾಗಿ, ಬೆನ್ನೆಲುಬಾಗಿ ನಿಂತದ್ದು ಮತ್ತೊಂದು ಮಹತ್ವದ ಅಂಶ. ಮಹಿಳೆಯರು ಸಂಘಟನಾತ್ಮಕವಾಗಿ ಒಂದಾಗುವ ಹಾಗೂ ಆ ಮೂಲಕ ತಮ್ಮ ಅಸ್ಥಿತ್ವವನ್ನು ಉಳಿಸಿಕೊಳ್ಳುವ ಪ್ರಯತ್ನಕ್ಕೆ ಮುಂದಾದದ್ದು ಹಾಗೂ ಅದಕ್ಕೊಂದು ವಿನ್ಯಾಸವನ್ನು ಸಿದ್ಧಗೊಳಿಸಿದ್ದು ಹೆಣ್ಣಿನ ಬಗೆಗೆ ಇವರಿಗಿದ್ದ ಕಾಳಜಿಯನ್ನು ಪ್ರತಿಬಿಂಬಿಸುತ್ತದೆ.

ಮೊದಲ ತಲೆಮಾರಿನ ಲೇಖಕಿಯರಲ್ಲಿ ಗುರುತಿಸಲೇಬೇಕಾದ ಮತ್ತೊಂದು ಪ್ರಮುಖ ಅಂಶವೆಂದರೆ ಇವರಿಗೆ ಹೆಣ್ಣಿನ ನೋವಿನ, ಅಧೀನ ಬದುಕಿನ ಸ್ಥಿತಿಗತಿಯ ಅರಿವು ಇದ್ದಿತ್ತು. ಅಲ್ಲದೆ ಹೆಣ್ಣು ಮಕ್ಕಳಿಗೆ ಸಾಮಾಜಿಕವಾಗಿ ಮಾನ್ಯತೆ ತಂದುಕೊಡಲು ಈ ಲೇಖಕಿಯರು ಒಂದಲ್ಲಾ ಒಂದು ರೀತಿಯಲ್ಲಿ ಪ್ರಯತ್ನಿಸಿದರು. ಅದರ ಸಲುವಾಗಿ ಆರಂಭವಾದ ಪತ್ರಿಕೆಗಳು ಲೇಖಕಿಯರ ಬರವಣಿಗೆಗೊಂದು ಅಧಿಕೃತತೆಯನ್ನು ತಂದುಕೊಡುವುದರೊಂದಿಗೆ ಸಮಕಾಲೀನ ಬರಹಗಾರ್ತಿಯರಿಗೆ ಹಾಗೂ ಸಾಮಾನ್ಯ ಮಹಿಳೆಯರಿಗೆ ಮಾದರಿಯಾಗಿ ಅವರು ತಮ್ಮ ಜೀವನದ ಮಾರ್ಗಗಳನ್ನು ಕಂಡುಕೊಳ್ಳಲು ಕೆಲಮಟ್ಟಿಗಾದರೂ ಸಹಾಯಕವಾಯಿತು.

ಆಧುನಿಕ ಮಹಿಳಾ ಕಾವ್ಯದ ಅಧ್ಯಯನದ ಸಂದರ್ಭದಲ್ಲಿ ಕನ್ನಡದ ಸ್ತ್ರೀ ಜಗತ್ತು ತನ್ನದೇ ಆದ ಗ್ರಹಿಕೆಯ ಮೂಲಕ ಸ್ತ್ರೀವಾದವನ್ನು ನಿರ್ವಚಿಸುವ ಪ್ರಯತ್ನ ಮಾಡಿದೆ. ಈ ವಿಧಾನ ಒಂದೆಡೆಯಾದರೆ ಕಾವ್ಯದ ಮೂಲಕ ಹೊರಹೊಮ್ಮುತ್ತಿರುವ ಸ್ತ್ರೀವಾದಿ ಚಿಂತನೆಯ ಗ್ರಹಿಕೆ ಮತ್ತೊಂದು ಬಗೆಯದು.

ಮೊದಲ ಘಟ್ಟದ ಕವಯಿತ್ರಿಯರು ಎದುರಿಸಿದ ಹಲವು ಸವಾಲುಗಳಲ್ಲಿ ಭಾಷೆಯ ಬಳಕೆ ಹಾಗೂ ಅಭಿವ್ಯಕ್ತಿಗೆ ಸಂಬಂಧಿಸಿದ್ದೂ ಕೂಡ ಅತ್ಯಂತ ಪ್ರಮುಖವಾದವುಗಳಲ್ಲೊಂದು. ಇವರಿಗೆ ತಮ್ಮ ಬಳಕೆಯ ಭಾಷೆಯೇ ತೊಡಕಾಗಿದ್ದ ಕಾರಣ ಅವರು ತಮ್ಮ ಅಂತರಗದ ಅನಿಸಿಕೆಗಳನ್ನು ಸೂಕ್ತವಾದ ರೀತಿಯಲ್ಲಿ ತೆರೆದಿಡಲು ಸಾಧ್ಯವಾಗಲಿಲ್ಲ ಎನ್ನಬಹುದು. ಪುರುಷ ನಿರ್ಮಿತ ಭಾಷಾ ವ್ಯವಸ್ಥೆ ಪುರುಷ ಪರವಾಗಿದೆಯೇ ವಿನಃ ಹೆಣ್ಣಿನ ಭಾವಾಭಿವ್ಯಕ್ತಿಗೆ ಸಹಕಾರಿಯಾಗುವಂತಹ ಮಾರ್ಗಗಳನ್ನು ಸೂಚಿಸುವುದಿಲ್ಲ. ಈ ಹಿನ್ನೆಲೆಯಲ್ಲಿ ಅವರ ಕಾವ್ಯದ ಭಾವಕ್ಕೂ ಆಂತರ್ಯದ ಭಾವಕ್ಕೂ ಭಿನ್ನತೆ ಇರುವುದನ್ನು ಗುರುತಿಸಬಹುದಾಗಿದೆ. ಹೆಣ್ಣಿನ ಬಗೆಗಿನ ಇವರ ಅಭಿಪ್ರಾಯ, ಅನಿಸಿಕೆಗಳು ಗದ್ಯ ಪ್ರಕಾರದಲ್ಲಿ ರೂಪುಗೊಂಡಿರುವ ಸ್ತ್ರೀ ಪಾತ್ರಗಳನ್ನು ಗಮನಿಸಿದಾದ ಇವರ ಸ್ತ್ರೀ ಪರ ಕಾಳಜಿಯನ್ನು ಗ್ರಹಿಸಲು ಸಾಧ್ಯವಾಗುತ್ತದೆ. ಕಾರಣ ಕಾವ್ಯದ ಸಂಕೀರ್ಣ ರಚನೆ, ಅದರಲ್ಲಿ ಬಳಕೆಯಾಗುವ ಉಪಮೆ, ರೂಪಕ, ಪ್ರತಿಮೆಗಳನ್ನು ಕೆಲ ಸಂದರ್ಭದಲ್ಲಿ ವಿರುದ್ಧರೀತಿಯಲ್ಲಿ ಅರ್ಥೈಸಿರುವ ಸಾಧ್ಯತೆಯಿದೆ. ಈ

ಮಾತಿಗೆ ಸಮರ್ಥನೆ ಎನ್ನುವುದಾದರೆ ಸಂಚಿ ಹೊನ್ನಮ್ಮನ ಹದಿಬದೆಯ ಧರ್ಮ 'ಸ್ತ್ರೀ ಬೋಧೆ' ಎಂದೇ ಪ್ರಸಿದ್ಧವಾಗಿದೆ. ಆದರೆ ಹೊನ್ನಮ್ಮ ಕೇವಲ ಹೆಣ್ಣಿಗಷ್ಟೇ ಬುದ್ಧಿ ಮಾತನ್ನು ಹೇಳದೆ ಸಂಸಾರವನ್ನು ಮುನ್ನೆಡೆಸಲು ಗಂಡು ಕೂಡ 'ಸರಿಯಾಗಿ' ನಡೆದುಕೊಳ್ಳಬೇಕು ಎಂಬ ಅಂಶವನ್ನು ಎತ್ತಿಹಿಡಿಯುತ್ತಾಳೆ. ಆದರೆ ವ್ಯವಸ್ಥೆ ಈ ಕೃತಿಯನ್ನು 'ಪತಿವ್ರತಾ ಧರ್ಮ' ಅಥವಾ 'ಸ್ತ್ರೀ ನೀತಿ ಬೋಧೆ' ಎಂದು ಬಿಂಬಿಸುವಲ್ಲಿ ಹೆಚ್ಚು ಆಸಕ್ತಿ ವಹಿಸಿರುವುದನ್ನು ಕಾಣಬಹುದು. ಇದರಿಂದಾಗಿ ಈ ಕೃತಿಯ ಒಟ್ಟು ಆಶಯವೇ ತಿರುವು ಮುರುವಾಗಿದೆ ಎನ್ನಬಹುದು. ಆದರೆ ಇದನ್ನು ಸೂಕ್ಷ್ಮವಾಗಿ ಗಮನಿಸಿದಾಗ ಪುರುಷ ಪ್ರಭುತ್ವದ ಭದ್ರ ಸಂಕೋಲೆಯೊಳಗೆ ಸಿಲುಕಿದ ಹೆಣ್ಣು ತನ್ನ ಪರವಾಗಿ, ತಮ್ಮ ಸಮುದಾಯದ ಪರವಾಗಿ ಧ್ವನಿ ಎತ್ತಿದ್ದು ಹಾಗೂ ಹೆಣ್ಣೆಂದು ಕೀಳುಗಳೆಯುವವರನ್ನು ನಯವಾಗಿ ವಿರೋಧಿಸಿದ್ದು ಆ ಕಾಲದ ದೃಷ್ಟಿಯಿಂದ ಕ್ರಾಂತಿಕಾರಕ ಅಂಶವೇ ಸರಿ. ಆ ಕಾಲದ ಒತ್ತಡ ಹಾಗೂ ಸಾಮಾಜಿಕ ಪರಿಸ್ಥಿತಿಯ ಹಿನ್ನೆಲೆಯಲ್ಲಿ ಹೊನ್ನಮ್ಮನ ಕಾವ್ಯವನ್ನು ಅರಿಯುವ, ಆಂತರ್ಯದ ಸ್ತ್ರೀ ಧ್ವನಿಯನ್ನು ಗುರುತಿಸುವ ಹಾಗೂ ಹೊನ್ನಮ್ಮನ ಮೌನವನ್ನು ಮಾತಾಗಿಸುವ ತುರ್ತು ಅಗತ್ಯವಾಗಿದೆ. ಈ ಹಿನ್ನೆಲೆಯಲ್ಲಿ ಪ್ರಸ್ತುತ ಸಂದರ್ಭದಲ್ಲಿ ನಿಂತು ಹೊನ್ನಮ್ಮನನ್ನು, ವಚನಗಾರ್ತಿಯರನ್ನು ವಿಶ್ಲೇಷಿಸುವ ಕ್ರಮ ಹೇಗೆ ಒಪ್ಪಿತವಲ್ಲವೋ ಅದೇ ರೀತಿ ಆರಂಭ ಘಟ್ಟದ ಮಹಿಳೆಯರ ಬರವಣಿಗೆಯನ್ನೂ ಕೂಡ ಅವರ ಕಾಲ ಹಾಗೂ ಸಾಂಸ್ಕೃತಿಕವಾಗಿ ದತ್ತವಾದ ಉದಾರವಾದಿ ರಾಷ್ಟ್ರೀಯತೆಯ ಹಿನ್ನೆಲೆಯಲ್ಲಿ ಗುರುತಿಸಬೇಕಾಗುತ್ತದೆಯೇ ಹೊರತು ಅವರು ಪುರುಷ ಪ್ರಧಾನ ಮೌಲ್ಯಗಳನ್ನು ಒಪ್ಪಿ ನಡೆದದ್ದರಿಂದ ಅವರದ್ದು ಸ್ತ್ರೀವಿರೋಧಿ ಚಿಂತನೆ ಎಂದು ಗುರುತಿಸುವುದು ತಪ್ಪಾಗುತ್ತದೆ. ಇವರು ವ್ಯವಸ್ಥೆಯ ವಿರುದ್ಧದ ತಮ್ಮ ಪ್ರತಿಭಟನೆಯನ್ನು ವ್ಯಕ್ತಪಡಿಸಲು ದೇವರು, ಧರ್ಮ, ಆಧ್ಯಾತ್ಮ ಹಾಗೂ ಅಲೌಕಿಕ ಅನುಭವಗಳ ಅಭಿವ್ಯಕ್ತಿಯ ಮೊರೆ ಹೋದದ್ದು ಮಾತ್ರ ಅನಿವಾರ್ಯವಾಗಿತ್ತು ಎಂದೆನಿಸುತ್ತದೆ.

ಮೊದಲ ಘಟ್ಟದ ಮಹಿಳಾ ಕಾವ್ಯವನ್ನು ಅಂದಿನ ಸಾಮಾಜಿಕ ಪರಿಸ್ಥಿತಿಯ ಹಿನ್ನೆಲೆಯಲ್ಲಿ ಅಂದರೆ ರಾಷ್ಟ್ರೀಯ ಚಳುವಳಿಯ ಪ್ರಭಾವ, ಬಾಲ್ಯವಿವಾಹ, ಸತೀ ಪದ್ಧತಿ, ವಿಧವಾ ಸಮಸ್ಯೆಗಳ ಹಿನ್ನೆಲೆಯಲ್ಲಿ ಗ್ರಹಿಸಲು ಪ್ರಯತ್ನಿಸಿದಾಗ ಅವರ ಸ್ತ್ರೀ ಪರ ಚಿಂತನೆಯ ವಿಧಾನವನ್ನು ಅರಿಯಬಹುದಾಗಿದೆ. ಬಿ.ಎನ್.ಸುಮಿತ್ರಾಬಾಯಿಯವರು ಗುರುತಿಸಿರುವಂತೆ ಭಾರತೀಯ ಸ್ತ್ರೀವಾದ ಪಾಶ್ಚಾತ್ಯ ಸ್ತ್ರೀವಾದಕ್ಕಿಂತ ಭಿನ್ನವಗಿರುವುದು ಸ್ತ್ರೀವಾದಿ ಚಿಂತಯನೆಯ ಚಹರೆಗಳನ್ನು ಭಾರತೀಯ ಪುರುಣ, ಇತಿಹಾಸ, ಚರಿತ್ರೆಗಳ ಮೂಲಕ ಹುಡುಕಲು ಪ್ರಯತ್ನಿಸುವುದರಿಂದ ಎಂಬ ಅಂಶ ಅತ್ಯಂತ ಮಹತ್ವವಾದುದ್ದಾಗಿದೆ. ಅದೇ ರೀತಿ ಈ ಲೇಖಕಿಯರೂ ಕೂಡ ಪುರಾಣ ಪಾತ್ರಗಳಾದ ರಾಮ, ಕೃಷ್ಣ, ಸೀತೆ, ದ್ರೌಪದಿ ಪಾತ್ರಗಳ ನಡವಳಿಕೆಗಳನ್ನು ವಿಮರ್ಷಿಸುವ, ತನ್ನ ಅಪೇಕ್ಷಿತ ಪುರುಷ ಪಾತ್ರ ಮಾದರಿಯೊಂದನ್ನು ಕಟ್ಟಿಕೊಳ್ಳಲು ಪ್ರಯತ್ನಿಸುವ ಮೂಲಕ ಕನ್ನಡಕ್ಕೆ ಸ್ವಾಯತ್ತ ಸ್ತ್ರೀವಾದಿ ಚಿಂತನೆಯೊಂದನ್ನು ರೂಪಿಸಲು ಪ್ರಯತ್ನಿಸಿದರು ಎನ್ನಬಹುದು.

ಮಹಿಳಾ ಕಾವ್ಯದ ಎರಡನೆಯ ಘಟ್ಟವನ್ನು ೨೦ ರಿಂದ ೬೦ ರ ದಶಕದ ವರೆಗೆ ಗುರುತಿಸಿಕೊಳ್ಳಬಹುದು. ಪಾಶ್ಚಾತ್ಯ ಸ್ತ್ರೀವಾದಿ ಚಿಂತನೆಯ ಪ್ರಭಾವ ಗಾಢವಾಗಿದ್ದ ಈ ಕಾಲಘಟ್ಟದಲ್ಲಿ

ಹೆಣ್ಣಿನ ಅಧೀನ ಸ್ಥಿತಿಗೆ ಕಾರಣವಾದ ಅಂಶಗಳನ್ನು ಸ್ಪಷ್ಟವಾಗಿ ಗುರುತಿಸಿಕೊಳ್ಳಲು ಪ್ರಯತ್ನಿಸಲಾಯಿತು. ಪಿತೃ ಸಂಸ್ಕೃತಿ, ಪುರುಷ ಪ್ರಭುತ್ವಗಳು ಹೆಣ್ಣು ಅಧಿನ ಗೊಳಸಿರುವ ಬಗೆಗೆ ತೀವ್ರವಾದ ಅಸಹನೆ, ಆಕ್ರೋಶ, ವ್ಯಕ್ತವಾಗಿರುವುದನ್ನು ಕಾಣಬಹುದು. ಹೆಣ್ಣಿನ ಎಲ್ಲಾ ಬಗೆಯ ಸಮಸ್ಯೆಗಳಗೆ ಪುರುಷ ಪರವಾದ ಚಿಂತನೆ, ಆಲೋಚನೆಗಳೇ ಕಾರಣ ಎಂಬ ಅಂಶವನ್ನು ಮನಗಂಡ ಲೇಖಕಿಯರು ಪುರುಷಾಧಿಕಾರದ ವಿರುದ್ಧ ತಮ್ಮ ಪ್ರತಿಭಟನೆಯನ್ನು ವ್ಯಕ್ತಪಡಿಸಿದರು.

ಈ ಕಾಲಘಟ್ಟದ ಲೇಖಕಿಯರ ಸ್ತ್ರೀಪರ ಚಿಂತನೆಯನ್ನು ಎರಡು ಹಂತದಲ್ಲಿ ಗುರುತಿಸಿಕೊಳ್ಳಬಹುದಾಗಿದೆ. ಮೊದಲನೆಯ ಹಂತದಲ್ಲಿ ಪುರುಷಾಧಿಕಾರದ ವಿರುದ್ಧದ ಪ್ರತಿಭಟನೆ ವ್ಯಕ್ತಗೊಂಡರೆ ಎರಡನೆಯ ಹಂತದಲ್ಲಿ ಪುರುಷ ಪ್ರಭುತ್ವದಿಂದ ರೂಪುಗೊಂಡ ಮೌಲ್ಯವ್ಯವಸ್ಥೆಯ ಪ್ರಮುಖ ಘಟಕಗಳಾದ ವಿವಾಹ, ದಾಂಪತ್ಯ, ಸತೀ ಪದ್ಧತಿ, ಮುಂತಾದವುಗಳನ್ನು ಕುರಿತು ತೀವ್ರವಾದ ಪ್ರತಿರೋಧ ವ್ಯಕ್ತಗೊಂಡಿತು. ಈ ಲೇಖಕಿಯರು ಎದುರಿಸಿದ ಬಹುದೊಡ್ಡ ಸಮಸ್ಯೆಯೆಂದರೆ ಪುರುಷ ಚಿಂತನೆಯ ಘಟಕಗಳನ್ನು ಒಡೆಯುವಷ್ಟು ತ್ರೀವ್ರವಾಗಿ ಪರ್ಯಾಯ ಘಟಕವೊಂದನ್ನು ಕಂಡುಕೊಳ್ಳಲು ಇವರಿಂದ ಸಾಧ್ಯವಾಗಲಿಲ್ಲ. ಆದುದರಿಂದ ಮುಂದೇನು ಎಂಬ ದೊಡ್ಡ ದ್ವಂದ್ವ, ಗೊಂದಲಗಳಂದ ಕೂಡಿದ ಒಂದು ಬಗೆಯ ನಿರಾಶಾವಾದ ಈ ಕಾಲಘಟ್ಟದ ಲೇಖಕಿಯರ ಕವನಗಳಲ್ಲಿ ಹೆಚ್ಚಿನ ಪ್ರಮಾಣದಲ್ಲಿ ಕಂಡುಬರುತ್ತದೆ.

ಮೂರನೇ ಘಟ್ಟ ೮೦ರ ದಶಕದ ನಂತರದ ಕಾವ್ಯ. ಈ ಘಟ್ಟವನ್ನು 'ಸ್ವಾಯತ್ತ' ಅಥವಾ 'ಸ್ವಯಂಪೂರ್ಣ' ನೆಲೆಯ ಕಾವ್ಯ ಘಟ್ಟ ಎಂದು ಗುರುತಿಸಬಹುದು. ಮೊದಲ ಎರಡೂ ಕಾಲಘಟ್ಟದ ಲೇಖಕಿಯರ ಬದುಕು ಬರಹಗಳನ್ನು ಸೂಕ್ಷ್ಮವಾಗಿ ಗಮನಿಸಿದಾಗ ಹೆಣ್ಣಿನ ಸಾಮಾಜಿಕ ಪರಿಸ್ಥಿತಿಗೂ, ಅವಳ ಬದುಕು ಬರಹಕ್ಕೂ ನಿಕಟವಾದ ಸಂಬಂಧವಿರುವುದನ್ನು ಸ್ಪಷ್ಟವಾಗಿ ಗುರುತಿಸಬಹುದು. ಈ ಅಂಶವನ್ನು ಪ್ರಮುಖವಾಗಿ ಗುರುತಿಸಿದ ಈ ಬರಹಗಾರ್ತಿಯರು ಹೆಣ್ಣಿನ ಅಧೀನ ಬದುಕಿಗೆ ಲಿಂಗರಾಜಕಾರಣದ ಸಾಮಾಜಿಕ, ಆರ್ಥಿಕ, ರಾಜಕೀಯ ಕೌಟುಂಬಿಕ ರಚನೆಗಳ ಒಳವಿನ್ಯಾಸದಲ್ಲಿ ಅಡಕವಾಗಿರುವ ಲಿಂಗ ಶ್ರೇಣೀಕರಣದ ಹುನ್ನಾರಗಳನ್ನು ಅರಿಯುವಲ್ಲಿ ಯಶಸ್ವಿಯಾದರು. ಸಮಾಜದ ಸಂರಚನಾ ವಿಧಾನವೇ ಹೆಣ್ಣಿನ ಅಧೀನತೆಗೆ ಅಧಿಕೃತ ಸಾಕ್ಷಿಯಾಗಿರುವುದನ್ನು ಕಂಡು ಕೊಂಡ ಲೇಖಕಿಯರು ಈ ವ್ಯವಸ್ಥೆಯ ಬದಲಾವಣೆ ಒಬ್ಬರಿಂದ, ಒಂದು ಸಮುದಾಯದಿಂದ ಏಕಕಾಲಕ್ಕೆ ಸಂಭವಿಸಬಹುದಾದ ಘಟನೆಯಾಗಿರದ ಕಾರಣದಿಂದಾಗಿ ಹೆಣ್ಣಿನ ಸ್ವಾಯತ್ತತೆಗೆ ಅವಶ್ಯಕವಾದ ಶಕ್ತಿಯನ್ನು 'ಹೊರಗಿನಿಂದ' ಅಪೇಕ್ಷಿಸದೆ 'ತನ್ನೊಳಗಿನಿಂದ'ಲೇ ರೂಪಿಸಿಕೊಳ್ಳಲು ಪ್ರಯತ್ನಿಸಿದರು. ಈ ಹಿನ್ನೆಲೆಯಲ್ಲಿ ರೂಪುಗೊಂಡ ಮೂರನೇ ಕಾಲಘಟ್ಟದ ಮಹಿಳಾ ಕಾವ್ಯ ಭಾಷೆ, ವೈವಿಧ್ಯ, ಹಾಗೂ ಸ್ತ್ರೀ ಪರವಾದ ಆಲೋಚನೆಯ ದೃಷ್ಟಿಯಿಂದ ಹೆಚ್ಚು ಅರ್ಥಪೂರ್ಣವೂ, ಸಮರ್ಥನೀಯವೂ ಆದುದಾಗಿದೆ.

ಹೆಣ್ಣಿನ ಸ್ಥಿತಿಯ ಬದಲಾವಣೆಗೆ ಹೊರಗಿನ ಸಹಾಯ, ಸಹಕಾರ ಪ್ರೇರಣೆ ಎಷ್ಟು ಮುಖ್ಯವೋ ಅಷ್ಟೇ ಅಥವಾ ಅದಕ್ಕಿಂತ ಹೆಚ್ಚಿನ ಪ್ರಮಾಣದಲ್ಲಿ ಹೆಣ್ಣಿನ ಅಂತರಂಗದ ಜಾಗೃತಿ ಹಾಗೂ ಆಶೋತ್ತರಗಳು ಮುಖ್ಯ ಎಂಬ ಅಂಶವನ್ನು ಈ ಲೇಖಕಿಯರು ಮನಗಂಡರು. ಮತ್ತು ಹೆಣ್ಣಿನ ಈ ಪರಿಸ್ಥಿತಿಗೆ ಅವಳಲ್ಲಿರುವ ಅಜ್ಞಾನ, ಅಂಧಕಾರ, ಭಯ, ಹಿಂಜರಿಕೆ ಗುಣಗಳು ಎಷ್ಟು ಕಾರಣವೋ ಅದಕ್ಕಿಂತ ಮುಖ್ಯವಾಗಿ ಪುರುಷ ಪ್ರಭುತ್ವ ತನ್ನ ಅಧಿಕಾರ ಸ್ವಾಮ್ಯವನ್ನು ಉಳಿಸಿಕೊಳ್ಳುವ ಸಲುವಾಗಿ ರೂಪಿಸುತ್ತಿರುವ ಹೊಸ ಹುನ್ನಾರಗಳು ಹಾಗೂ ಹಿಡಿತದ ಪ್ರಭಾವವನ್ನು ಗುರುತಿಸಿಕೊಂಡರು ಈ ಎಲ್ಲಾ ಸವಾಲುಗಳನ್ನೂ ಮೀರಿ ಹೆಣ್ಣು ತನ್ನ ಜೀವನವನ್ನು ತನ್ನ ಆಯ್ಕೆಗೆ ತಕ್ಕಂತೆ ರೂಪಿಸಿಕೊಳ್ಳ ಬೇಕು ಹಾಗೂ ಆ ಸಾಮರ್ಥ್ಯ ಹೆಣ್ಣಿನಲ್ಲಿದೆ ಎಂಬುದರ ಕಡೆಗೆ ಈ ಲೇಖಕಿಯರು ಗಮನ ಸೆಳೆದರು.

ಈ ಕಾಲಘಟ್ಟದ ಲೇಖಕಿಯರು ದಲಿತ ಬಂಡಾಯ ಸಾಹಿತ್ಯ ಚಳುವಳಿ ಹಾಗೂ ನವ್ಯ ಸಾಹಿತ್ಯದ ಪ್ರಭಾವಕ್ಕೆ ಒಳಗಾಗಿದ್ದ ಕಾರಣದಿಂದಾಗಿ ತಮ್ಮ ಬರವಣಿಗೆಯಲ್ಲಿ ಹೊಸ ತನವನ್ನು ರೂಡಿಸಿಕೊಳ್ಳಲು ಹಾಗು ಜೀವನ ಕ್ರಮದಲ್ಲಿ ಬದಲಾವಣೆಗಳನ್ನು ತರಲು ಸಹಜವಾದ ಅಪೇಕ್ಷೆಯನ್ನು ವ್ಯಕ್ತಪಡಿಸಲು ಸಾಧ್ಯವಾಯಿತು. ಬಹುತೇಕ ಲೇಖಕಿಯರ ಕವನಗಳು 'ನಾನು' ಅಥವಾ 'ನಾವು' ಎಂಬ ಆತ್ಮ ಪ್ರತ್ಯಯದಿಂದಲೇ ಹೊರಡುತ್ತದೆ. ನನ್ನಿಂದಲೇ ಎಲ್ಲಾ ಬದಲಾವಣೆ, ಹೊಸತನದ ಆರಂಭ ಸಾಧ್ಯ ಎಂಬ ಆಶಾವಾದ ಇವರಲ್ಲಿ ಕಂಡುಬರುತ್ತದೆ. ಹಾಗೆಂದ ಮಾತ್ರಕ್ಕೆ ಈ ಕಾಲಘಟ್ಟದ ಲೇಖಕಿಯರಿಗೆ ಸಮಸ್ಯೆಗಳಿರಲಿಲ್ಲ, ಕಾಲಬದಲಾಗಿತ್ತು, ಅವಕಾಶಗಳಿದ್ದವು ಎಂದು ಅರ್ಥವಲ್ಲ. ಆಧುನಿಕತೆ ತಂದೊಡ್ಡಿದ ಹೊಸ ಹೊಸ ಸವಾಲುಗಳ ಮಧ್ಯೆ ತನ್ನನ್ನು, ತನ್ನ ತನವನ್ನು ಕಾಯ್ದುಕೊಳ್ಳಲು ಇವರು ಹಿಂದಿನವರಿಗಿಂತ ಹೆಚ್ಚು ಜಾಗೃತರಾಗಿರಬೇಕಾದ ಅವಶ್ಯಕತೆ ಇತ್ತು. ಹಿಂದೆ ಹೆಣ್ಣಿನ ಸಮಸ್ಯೆ ಹಾಗೂ ಸವಾಲುಗಳು ನೇರವಾಗಿ ಕಾಣುವಂತಿದ್ದರೆ ಆಧುನಿಕತೆಯ ಹೊಸ ಕಾಲಘಟ್ಟದಲ್ಲಿ ಸುಧಾರಣೆಯ, ಸ್ವಾವಲಂಬನೆಯ, ಹೊಸ ಹೊಸ ರೂಪಗಳನ್ನು ಧರಿಸಿ ಹೆಣ್ಣನ್ನು ಹಿಡಿತದಲ್ಲಿಡಲು, ನಿಯಂತ್ರಿಸಲು ಹೊಸ ಹೊಸ ಹುನ್ನಾರಗಳನ್ನು ವ್ಯವಸ್ಥೆ ಹುಡುಕುತ್ತಲೇ ಇರುತ್ತದೆ. ಇವೆಲ್ಲವುಗಳನ್ನು ನಿಭಾಯಿಸುವ, ತಮ್ಮ ಸ್ವಂತಿಕೆಯನ್ನು ಕಾಯ್ದುಕೊಳ್ಳುವ, ಬಿದ್ದ ಪೆಟ್ಟನ್ನು ಸಕಾರಾತ್ಮಕವಾಗಿ ಸ್ವೀಕರಿಸುವ, ನೋವು, ಹಿಂಸೆ, ಯಾತನೆಗಳ ನಡುವೆಯೂ ಸುಂದರ ಬದುಕಿನ ಕನಸು ಕಾಣುವ ಆಶಾವಾದದಿಂದ ಕೂಡಿದ ಈ ಕಾಲಘಟ್ಟದ ಕಾವ್ಯ ಅತ್ಯಂತ ಮುಖ್ಯವಾದದ್ದು ಹಾಗೂ ಸ್ವಾಯತ್ತ ನೆಲೆಯಿಂದ ಕೂಡಿದುದಾಗಿದೆ.

ಬೇರೆ ಬೇರೆ ಕಾಲಘಟ್ಟ, ಪರಿಸರ, ಪ್ರಭಾವ ಅವಕಾಶಗಳು ವಿಭಿನ್ನ ಸ್ವರೂಪದ ಸ್ತ್ರೀವಾದಿ ಚಿಂತನೆಗಳು ರೂಪುಗೊಳ್ಳಲು ಸಹಕಾರಿಯಾಗುತ್ತವೆ ಎಂಬ ಅಂಶವನ್ನು ಸ್ಪಷ್ಟಪಡಿಸಿಕೊಂಡ ನಂತರದಲ್ಲೂ ಸ್ತ್ರೀ ಪರವಾದ ಚಿಂತನೆ, ಆಲೋಚನೆ, ಅಪೇಕ್ಷೆಗಳು ದೇಶ, ಕಾಲಾತಿತವಾಗಿ ಸಮಾನ ಆಶಯದಿಂದ ಕೂಡಿರುವುದನ್ನು ಕಾಣಬಹುದು. ಒಟ್ಟಾರೆ ಆಧುನಿಕ ಮಹಿಳಾ ಕಾವ್ಯದ ಸಂದರ್ಭದಲ್ಲಿ ರೂಪುಗೊಂಡಿರುವ ಸ್ತ್ರೀವಾದಿ ಚಿಂತನೆಯ ಆಲೋಚನಾ ಕ್ರಮವನ್ನು ಅಧ್ಯಯನದ ಅನುಕೂಲದ ದೃಷ್ಟಿಯಿಂದ ಕೆಳಕಂಡಂತೆ ಗುರುತಿಸಿಕೊಳ್ಳಬಹುದು.

### ೩.೧ ಸ್ವಂತಿಕೆಯ ಹುಡುಕಾಟ :

ಆರಂಭದಿಂದ ಇಂದಿನವರೆಗೂ ಮಹಿಳಾ ಕಾವ್ಯದ ಆಸಕ್ತಿ ವ್ಯವಸ್ಥೆಯಲ್ಲಿ ತನ್ನ ಅಸ್ತಿತ್ವವನ್ನು ನಲೆಗೊಳಿಸುವ ಕುರಿತಾದ ಹೋರಾಟ ಮತ್ತು ಹುಡುಕಾಟದ ಪ್ರಯತ್ನವೇ ಆಗಿದೆ. ಹಿಂದಿನಿಂದಲೂ ವ್ಯವಸ್ಥೆಯಿಂದ ನಿರ್ದೇಶಿಸಲ್ಪಟ್ಟ ತಾಯಿ, ಹೆಂಡತಿ, ಮಗಳು, ಅತ್ತೆ, ಸೊಸೆ ಮುಂತಾದ ಪಾತ್ರಗಳ ಮೂಲಕವೇ ಗುರುತಿಸಲ್ಪಟ್ಟವಳಿಗೆ ತನ್ನ ವ್ಯಕ್ತಿತ್ವವನ್ನು ಕಂಡುಕೊಳ್ಳುವ ಅಥವಾ ಕಟ್ಟಿಕೊಳ್ಳುವುದು ಎಷ್ಟೋ ಕಾಲದವರೆಗೆ ಅವಶ್ಯಕ ಎಂದು ಎನಿಸಿರಲಿಲ್ಲ. ಆದರೆ ಮಹಿಳಾ ಕಾವ್ಯದ ಸಂದರ್ಭದಲ್ಲಿ ಹೆಣ್ಣಿನ ಸ್ವಂತಿಕೆಯ ಹುಡುಕಾಟ ಭಿನ್ನ ಭಿನ್ನ ನೆಲೆಯಲ್ಲಿ ವ್ಯಕ್ತಗೊಂಡಿರುವುದನ್ನು ಕಾಣಬಹುದು. ಇದನ್ನು 'ಆತ್ಮಶೋಧದ'ಹಂಬಲ ಎಂದು ಗುರುತಿಸಲಾಗಿದೆ. ಕಾಲ ಕಾಲಕ್ಕೆ ಲೇಖಕಿಯಿಂದ ಲೇಖಕಿಗೆ ಇದರ ಸ್ವರೂಪ ಹಾಗೂ ಮಾದರಿಗಳಲ್ಲಿ ಭಿನ್ನತೆಯನ್ನು ಗುರುತಿಸಬಹುದಾಗಿದೆ. ಗಂಡು ಹೆಣ್ಣಿನ ಸಂಬಂಧ, ಕುಟುಂಬ, ಸಮಾಜ, ಧರ್ಮ, ದುಡಿಮೆ, ಮುಂತಾದ ಸಂದರ್ಭಗಳಲ್ಲಿ ತನ್ನ ಅಸ್ತಿತ್ವ ನೆಲೆಗೊಂಡಿರುವ ಬಗೆ, ಹಾಗು ಪುರುಷ ಷಾಹಿ ಅಧಿಕಾರ ಹೆಣ್ಣಿನ ಅಸ್ತಿತ್ವವನ್ನು ಹಿನ್ನೆಲೆಗೆ ಸರಿಸಿರುವ ವಿಧಾನಗಳನ್ನು ಕುರಿತಂತೆ ವಿಸ್ತ್ರುತವಾದ ಚರ್ಚೆಯನ್ನು ನಡೆಸುವ ಮಹಿಳಾ ಕಾವ್ಯ ಅದೆಲ್ಲಕ್ಕೂ ತನ್ನದೇ ಆದ ರೀತಿಯಲ್ಲಿ ಪರಿಹಾರ ಹಾಗೂ ಪ್ರತಿಕ್ರಿಯೆಯನ್ನು ವ್ಯಕ್ತಪಡಿಸುತ್ತದೆ.

ಹೆಣ್ಣನ್ನು ಮಾತೆ, ಮಹಾಮಾತೆ, ಜಗಜ್ಜನನಿ, ದೇವಿ ಮುಂತಾದ ಇತ್ಯಾತ್ಮಕ ಪಾತ್ರಗಳಲ್ಲಿಯೂ, ರಾಕ್ಷಸಿ, ಮಾಯೆ, ಕಾಳ, ದುರ್ಗಿಯಂತಹ ನೇತ್ಯಾತ್ಮಕ ಪಾತ್ರಗಳಲ್ಲಿಯೂ ಕಂಡ ವ್ಯವಸ್ಥೆಗೆ ಅವಳ ಸಹಜ ವ್ಯಕ್ತಿತ್ವವನ್ನು ಗುರುತಿಸುವುದು ಸಾಧ್ಯವಾಗಲೇ ಇಲ್ಲ. ಹೆಣ್ಣು ಕೂಡ ವ್ಯವಸ್ಥೆಯಿಂದ ನಿರ್ದೇಶಿಸಲ್ಪಟ್ಟ ತ್ಯಾಗಮಯಿ, ಸಹನಾ ಮೂರ್ತಿ, ಪತಿವ್ರತೆ, ಸಹಧರ್ಮಿಣಿಯಾಗಿ ಇರುವ ಪ್ರಯತ್ನದಲ್ಲಿ ತನ್ನ ಅಸ್ತಿತ್ವವೊಂದನ್ನು ಗುರುತಿಸಿಕೊಳ್ಳುವ, ಹಾಗು ಇರುವಿಕೆಯನ್ನು ಜಾಗೃತಗೊಳಿಸಿಕೊಳ್ಳಲು ಪ್ರಯತ್ನಿಸಿದ್ದು ತೀರಾ ಕಡಿಮೆ. ಆದರೆ ಮಹಿಳಾ ಕಾವ್ಯದ ಸಂದರ್ಭದಲ್ಲಿ ಇದರ ಸುಳಹುಗಳನ್ನು ಗುರುತಿಸಬಹುದು. ಬೆಳಗೆರೆ ಜಾನಕಮ್ಮನವರ 'ಪೀಠಿಕೆ' ಪದ್ಯ ಮಹಿಳಾ ಕಾವ್ಯ ಹಾಗೂ ಸ್ತ್ರೀವಾದಿ ಚಿಂತನೆಯ ಹೋರಾಟದ ಮಾದರಿಯನ್ನು ಸ್ಪಷ್ಟಪಡಿಸುತ್ತದೆ.

> ಹೊಗಳುವುದು ಬೇಡೆನಗೆ, ತೆಗಳುವುದು ಬೇಡೆನಗೆ
> ನನ್ನೊಳಗೆ ಬಂದುದೇ ಸಾಕು ಸಾಕು! [೧೧]

ಎಂಬಲ್ಲಿ ಹೆಣ್ಣನ್ನು ಹೊಗಳಿಕೆ ತೆಗಳಿಕೆಯ ಎರಡು ಅತಿರೇಕಗಳಲ್ಲಿ ಗುರುತಿಸಲಾಗಿದೆಯೇ ವಿನಃ ಸಹಜಸ್ಥಿತಿಯಲ್ಲಿ ಗುರುತಿಸಲಾಗಿಲ್ಲ ಎಂಬ ಅರಿವು ಹಾಗೂ ಇದರಿಂದಾಗಿ ಹೆಣ್ಣಿನ ಜೀವನದಲ್ಲಿ ಸಂಭವಿಸಿರುವ ಮಹತ್ವದ ಚಲನೆಗಳನ್ನು ನೆನಪಿಗೆ ತರುತ್ತದೆ. ಈ ಮುಖಾಂತರವಾಗಿಯೇ ಹೆಣ್ಣನ್ನು ಹೊಗಳಿಕೆ ಹಾಗೂ ತೆಗಳಿಕೆಯ ತಕ್ಕಡಿಯಲ್ಲಿಟ್ಟು ತೂಗುವ ಕ್ರಮ ಇನ್ನಾದರೂ ನಿಲ್ಲಬೇಕು ಎಂಬ ಆದೇಶವೂ, ಜೊತೆಗೆ 'ಒಳ ಒಳಗಿನೆನ್ನೊಲವೆ ಸಾಕು ಸಾಕು' ಎಂಬ ಆತ್ಮವಿಶ್ವಾಸವೂ ಒಟ್ಟಿಗೆ ವ್ಯಕ್ತವಾಗಿದೆ. ಕಾಣಬಹುದು. ಈ ಬಗೆಯ ಆತ್ಮವಿಶ್ವಾಸವೇ ಆತ್ಮಶೋಧವಾಗಿ, ಆತ್ಮವಿಮರ್ಶೆಯಾಗಿ ಮಹಿಳಾ ಕಾವ್ಯದಲ್ಲಿ ಕಂಡು ಬರುತ್ತದೆ. ಏಕೆಂದರೆ ತಾನು ಹೆಣ್ಣಾಗಿ ಹುಟ್ಟಿದುದೇ ತನ್ನೆಲ್ಲಾ ಸಂಕಷ್ಟಗಳಿಗೆ

ಕಾರಣ ಎಂಬ ಸ್ವಮರುಕದಿಂದ ಬಿಡುಗಡೆ ಪಡೆದು ತನ್ನ ತನದ ಬಗೆಗೆ ಆತ್ಮವಿಶ್ವಾಸವನ್ನು ಮೂಡಿಸಿಕೊಂಡಿದ್ದೆ ಆರಂಭದ ಲೇಖಕಿಯರ ಬಹು ದೊಡ್ಡ ಸಾಧನೆ. ಈ ಬಗೆಯ ಆತ್ಮವಿಶ್ವಾಸದ ಮಾದರಿಗಳು ಕೆಲವೊಮ್ಮೆ ನೇರ ಬರಹದ ಮೂಲಕ ಕಂಡು ಬಂದರೆ ಮತ್ತೆ ಕೆಲ ಸಂದರ್ಭಗಳಲ್ಲಿ ಅವ್ಯಕ್ತ ಪಾತ್ರಗಳ ಮೂಲಕ, ಪುರಾಣ ಪಾತ್ರಗಳ ಅಂತರಾಳವನ್ನು ಬಿಚ್ಚಿಡುವ ಪ್ರಯತ್ನದ ಮೂಲಕ ವ್ಯಕ್ತವಾಗುತ್ತವೆ.

ಮೊದಲ ಘಟ್ಟದ ಲೇಖಕಿಯರಲ್ಲಿ ಸ್ವಂತಿಕೆಯನ್ನು ಗುರುತಿಸಿಕೊಳ್ಳುವ ಪ್ರಜ್ಞೆ ಅಗೋಚರವಾಗಿದೆ. ಪುರುಷ ಪ್ರಧಾನ ವ್ಯವಸ್ಥೆಯ ಆದರ್ಶ ಪಾತ್ರಮಾದರಿಗಳಾದ ರಾಮ, ಕೃಷ್ಣ, ಶಿವ, ವಿಷ್ಣು ಮುಂತಾದ ಪುರಾಣ ಪಾತ್ರಗಳ ಕಾರ್ಯಮಾದರಿಗಳನ್ನು ವಿಮರ್ಶಿಸುವ, ಟೀಕಿಸುವ ಹಾಗೂ ಅದನ್ನು ನಯವಾಗಿ ವಿರೋಧಿಸುವ ಕ್ರಮಗಳ ಮೂಲಕ ತನ್ನ ತನದ ಹುಡುಕಾಟಕ್ಕೆ ತೊಡಗಿಕೊಂಡಿರುವುದನ್ನು ಕಾಣಬಹುದು. ನಂಜನಗೂಡು ತಿರುಮಲಾಂಬ ಅವರ ಬರವಣಿಗೆ ಭಕ್ತಿ ಪ್ರಧಾನ ಕೀರ್ತನೆಗಳೆಂಬಂತೆ ಕಂಡು ಬಂದರೂ ಕೂಡ ಅವು ಪುರುಷ ಪ್ರಧಾನ ವ್ಯವಸ್ಥೆ ಹೆಣ್ಣನ್ನು ನಡೆಸಿಕೊಂಡಿರುವ ಬಗೆಗಿನ ಹೋರಾಟ ಹಾಗು ಹುಡುಕಾಟದ ಮಾದರಿಗಳೇ ಆಗಿವೆ. ಸಿಮೊನ್ ದ ಬೂವಾ ಗುರುತಿಸುವಂತೆ ಹೆಣ್ಣಿನ ಆಧ್ಯಾತ್ಮ ಬಯಕೆ ಹಾಗೂ ಆಯ್ಕೆ ಪುರುಷ ಪ್ರಧಾನ ಸ್ಥಾಪಿತ ವ್ಯವಸ್ಥೆಯಿಂದ ಬಿಡುಗಡೆ ಪಡೆಯುವ ಹಂಬಲದ ಚಿನ್ಹೆ ಎಂಬ ಮಾತು ಈ ಕಾಲಘಟ್ಟದ ಲೇಖಕಿಯರ ಬರಹಕ್ಕೆ ಹೆಚ್ಚು ಹೊಂದಿಕೆಯಾಗುತ್ತದೆ. ಏಕೆಂದರೆ ಈ ಕಾಲಘಟ್ಟದ ಲೇಖಕಿಯರಿಗೆ ಆಧ್ಯಾತ್ಮದ ಬದುಕು ತಮ್ಮ ಜೀವನದ ಎಲ್ಲಾ ಬಗೆಯ ಜಂಜಡಗಳಿಂದ ಬಿಡುಗಡೆಪಡೆಯುವ ಸಾಧನವೇ ಆಗಿತ್ತು. ಆದ್ದರಿಂದಲೇ ಇವರು ಆಧ್ಯಾತ್ಮ ಸಾಧನೆಯ ಮೂಲಕ ತಮ್ಮ ಸ್ವ ಅಸ್ತಿತ್ವವೊಂದನ್ನು ರೂಪಿಸಿಕೊಳ್ಳಲು ಪ್ರಯತ್ನಿಸಿದರು. ಆದರೆ ಅನಂತರದ ಲೇಖಕಿಯರಲ್ಲಿ ಇದರ ಸ್ವರೂಪ ಭಿನ್ನ ರೂಪಗಳಲ್ಲಿ ವ್ಯಕ್ತಗೊಂಡಿದೆ. ಎಲ್.ಜಿ.ಸುಮಿತ್ರಾ ತನ್ನ ಇರುವಿಕೆಯನ್ನು ಗುರುತಿಸುವ ಕ್ರಮ ಮತ್ತೊಂದು ವಿಧಾನದ್ದು.

> ನಾನು, ಈ ಕುಲದ ಕುವರಿ,
> ಅಜ್ಜನಜ್ಜಂದಿರ ಕನಸಿನ ನನಸು,
> ಅಜ್ಜಿಯಜ್ಜಿಯರ ಪರಂಪರೆಯ ಪ್ರತೀಕ,
> ಆದರೆ ಅದೇ ನಾನು,
> ನನ್ನ ತಲೆಮಾರಿನೆಲ್ಲರಲಿ ಸುಪ್ತವಾಗಿದ್ದ ಪ್ರತಿಭಟನೆಯ ಆವಿರ್ಭಾವ'[13]

ಹಿಂದಿನಿಂದ ಪುರುಷಪ್ರಧಾನ ವ್ಯವಸ್ಥೆ ಹೆಣ್ಣಿನ ಅಸ್ತಿತ್ವವನ್ನು ಸಂಪೂರ್ಣ ಅಲ್ಲಗಳೆದು ಅವಳ ಇರುವಿಕೆಯನ್ನು ಕುಟುಂಬದ ಸಂಬಂಧದ ಹಿನ್ನೆಲೆಯಲ್ಲಿಯೇ ಗುರುತಿಸುವ ಕ್ರಮ ಜಾರಿಯಲ್ಲಿದ್ದರೂ ಕೂಡ ಲೇಖಕಿ ಅದೆಲ್ಲವನ್ನೂ ಮೀರಿ ತನ್ನದೇ ಆದ ಸ್ವಂತ ವ್ಯಕ್ತಿತ್ವವೊಂದು ತನ್ನ ಅಂತರ್ಯದಲ್ಲಿ ಅಡಕವಾಗಿದೆ ಎಂಬುದುನ್ನು ಈ ಕವನದ ಮೂಲಕ ವ್ಯಕ್ತಪಡಿಸುತ್ತಾರೆ. ಅಲ್ಲದೆ ಈ ಅರಿವು ಹಾಗೂ ಪ್ರತಿಭಟನೆ ವೈಯಕ್ತಿಕ ನೆಲೆಯನ್ನು ಮೀರಿ ತನ್ನೆಲ್ಲಾ ತಲೆಮಾರಿನ ಮಹಿಳೆಯರು ಹೊಂದಿರಬಹುದಾದ, ಸಾರ್ವತ್ರಿಕವಾದ ಸ್ತ್ರೀವಾದಿ ಚಿಂತನೆಯ ಆಲೋಚನಾ ಕ್ರಮವನ್ನು ಬಯಲಿಗೆಳೆಯುತ್ತದೆ. ಇಲ್ಲಿ ತನ್ನ ಕುಟುಂಬ ಹಾಗೂ ಪರಿಸರದಲ್ಲಿ ತಾನು ಕಂಡುಕೊಂಡಿರುವ ನೆಲೆ ಯಾವುದು ಎಂಬುದೇ ಮುಖ್ಯವಾಗಿ

ಕಂಡುಬರುತ್ತದೆ. ಹೆಣ್ಣನ್ನು ಅವಳ ಗಂಡ, ತಂದೆ, ಮಕ್ಕಳು, ಮೊಮ್ಮಕ್ಕಳು ಹಾಗೂ ಇತರೆ ಸದಸ್ಯರ ಮೂಲಕ ಗುರುತಿಸುವ ಕ್ರಮ ಚಾಲ್ತಿಯಲ್ಲಿದೆಯಾದರೂ ಅದರೊಳಗೆ ಅವಿರ್ಭವಿಸಿರುವ ಹೆಣ್ಣು ಮಾತ್ರ ತನ್ನ ಸ್ವಅರಿವನ್ನು ಕಂಡುಕೊಳ್ಳುವ ನಿರಂತರ ಪ್ರಯತ್ನದಲ್ಲಿ ತೊಡಗಿರುವುದನ್ನು ಕಾಣಬಹುದು. ಇವರ ಹುಟ್ಟಿದಳು ಶಕುಂತಲೆ ಕವನ ಕೂಡ ಪಿತೃ ಸಂಸ್ಕೃತಿಯಿಂದ ರೂಪುಗೊಂಡ ಹೆಣ್ಣಿನ ಮಾದರಿಯನ್ನು ತೆರೆದಿಡುತ್ತದೆ. ಈ ಕವನವನ್ನು ನಾನು-೧ ಕವನದ ಮುಂದುವರಿಕೆಯಂತೆ ಗಮನಿಸಿದಾಗ ಇಲ್ಲಿ ರೂಪುಗೊಂಡಿರುವ ಶಕುಂತಲೆ ಲೇಖಕಿಯೂ ಆಗಿರುವುದನ್ನು ಕಾಣಬಹುದು. ಪುರುಷ ಪ್ರಧಾನ ವ್ಯವಸ್ಥೆ ಶಕುಂತಲೆಯಲ್ಲಿರುವ ಶಕ್ತಿ ಸಾಮರ್ಥ್ಯಗಳನ್ನು ಕಡೆಗಣಿಸುವ ಕ್ರಮ ಒಂದೆಡೆಯಾದರೆ, ಅವಳ ಶಕ್ತಿಯನ್ನೇ ಇಲ್ಲವಾಗಿಸುವ ಅಥವಾ ಅದು ಇಲ್ಲವೆಂದೇ ಬಿಂಬಿಸುವ ಕ್ರಮ ಮತ್ತೊಂದು ಬಗೆಯದು. ಈ ಎಲ್ಲಾ ಬಗೆಯ ಹುನ್ನಾರಗಳನ್ನೂ ಕೂಡ ಬೇಧಿಸಿ ಮಹಿಳಾ ಕಾವ್ಯ ತನ್ನ ಅಸ್ಥಿತ್ವವನ್ನು ಕಂಡು ಕೊಳ್ಳುವ ಹಾಗೂ ಅದನ್ನು ಗುರುತಿಸುವ ಪ್ರಯತ್ನದಲ್ಲಿ ನಿರಂತರವಾಗಿ ತೊಡಗಿಕೊಂಡಿರುವುದನ್ನು ಗಮನಿಸಬಹುದಾಗಿದೆ.

ಬಹುತೇಕ 'ನಾನು' ಎಂಬುವ ಆತ್ಮಾತ್ಮಕ ಪ್ರತ್ಯಯದಿಂದಲೇ ಹೊರಡುವ ಪ್ರತಿಭಾನಂದಕುಮಾರ್ ಕಾವ್ಯ ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ಹೆಣ್ಣಿನ ಸ್ಥಾನ ನಿರ್ದೇಶನವನ್ನು ಕುರಿತಂತೆ ಮಹತ್ವದ ಪ್ರಶ್ನೆಗಳನ್ನು ಎತ್ತುವುದರ ಮೂಲಕವೇ ತನ್ನ ಸ್ವಂತಿಕೆಯ ಹುಡುಕಾಟವನ್ನು ಆರಂಭಿಸುತ್ತದೆ. ಅವರ 'ನಾನು' ಕವನ ಈ ದೃಷ್ಟಿಯಿಂದ ಅತ್ಯಂತ ಮಹತ್ವವಾದದ್ದಾಗಿದೆ. ಹೆಣ್ಣಿನ ಅಸ್ತಿತ್ವದ ಸ್ಥಾನ ನಿರ್ದೇಶನದ ಸಂದರ್ಭದಲ್ಲಿ ಎದುರಾಗುವ ಬಹುದೊಡ್ಡ ಸವಾಲು ತಾನು ಯಾರು? ಎಂಬುದನ್ನು ಕಂಡು ಕೊಳ್ಳುವುದು. ಆಗಿದೆ. ಏಕೆಂದರೆ ಇದುವರೆಗೂ ಹೆಣ್ಣನ್ನು ಅವಳ ತಂದೆ, ಗಂಡ, ಮಗನ, ವ್ಯಕ್ತಿತ್ವದ ಹಿನ್ನೆಲೆಯಲ್ಲಿ ಗುರುತಿಸುವ ಕ್ರಮ ಜಾರಿಯಲ್ಲಿದೆ. ಮತ್ತು ಆ ಮೂಲಕವೇ ಅವಳ ಸಾಮಾಜಿಕ ಹಾಗೂ ಕೌಟುಂಬಿಕ ವಲಯದ ಸ್ಥಾನ ನಿಗದಿಯಾಗುತ್ತದೆ. ಆಧುನಿಕ ಸಂದರ್ಭದಲ್ಲಿ ಮಹಿಳೆ ಶಿಕ್ಷಣ, ಉದ್ಯೋಗ, ಮುಂತಾದ ಸಾಮಾಜಿಕ ವಲಯಗಳಲ್ಲಿ ತನ್ನದೇ ಆದ ಪರಿಣಿತಿಯನ್ನು ಸಾಧಿಸಿದ್ದಾಳೆ. ಈ ಸಂದರ್ಭದಲ್ಲಿಯೂ ತನ್ನ ವ್ಯಕ್ತಿತ್ವವನ್ನು ಬೇರೊಬ್ಬರ ಮೂಲಕ ಗುರುತಿಸಿಕೊಳ್ಳಬೇಕಾಗಿರುವ ಸಂಕಷ್ಟಕ್ಕೆ ಸಿಲುಕಿರುವುದರ ಬಗ್ಗೆ ತೀವ್ರವಾದ ಅಸಹನೆ, ಆಕ್ರೋಶ ಮಹಿಳಾ ಕಾವ್ಯದಲ್ಲಿ ವ್ಯಕ್ತಗೊಂಡಿದೆ. ಆದರೆ ಅದೇ ಸಂದರ್ಭದಲ್ಲಿ ತನ್ನನ್ನು ತಾನು ವ್ಯಕ್ತಗೊಳಸಬಹುದಾದ ಬಗೆ ಹೇಗೆ ಎಂಬುದು ಕೂಡ ಬಹು ದೊಡ್ಡ ಸವಾಲಾಗಿದೆ. ವ್ಯವಸ್ಥೆಯ ಈ ಒಪ್ಪಿತ ವಿಧಾನವನ್ನೇ ಅಂಧಾನುಕರುಣೆಯಿಂದ ಮುಂದುವರೆಸುವುದಾದರೆ ಹೆಣ್ಣಿನ ಸ್ವ ಅಸ್ತಿತ್ವವೇ ಇಲ್ಲವಾಗಿ ಬಿಡುವ ಆತಂಕ ಮಹಿಳಾ ಕಾವ್ಯದಲ್ಲಿ ಪ್ರಧಾನವಾಗಿ ಕಂಡುಬರುತ್ತದೆ.

ಹೆಣ್ಣು ತನ್ನ ಅಸ್ಥಿತ್ವವನ್ನು ಗುರುತಿಸಿಕೊಳ್ಳುವಲ್ಲಿ ಎದುರಿಸಬೇಕಾದ ಸಮಸ್ಯೆ ಬಹುಮುಖೀಯಾದದ್ದು. ಏಕೆಂದರೆ ಹೆಂಡತಿಯಾಗಿ ತಾಯಿಯಾಗಿ, ಮಗಳಾಗಿ, ಸೊಸೆಯಾಗಿ ಗುರುತಿಸಲ್ಪಡುವ ಮೂಲಕ ಅವಳ ವ್ಯಕ್ತಿತ್ವ ನಿರಾಕರಣೆಯ ಮಾದರಿ ಒಂದೆಡೆಯಾದರೆ ಅವಳ ಬೇಕು ಬೇಡ, ಆಸೆ ಆಕಾಂಕ್ಷೆಗಳನ್ನು ಕೂಡ ನಿರ್ಧರಿಸುವವರು ತನ್ನನ್ನು ಹೊರತುಪಡಿಸಿ, ಕುಟುಂಬದ ಇತರೆ

ಸದಸ್ಯರೆ ಎಂಬ ನೋವು ಮತ್ತೊಂದು ಬಗೆಯದ್ದು. ಪ್ರತಿಭಾ ನಾನು ಎಂಬ ಕವನದಲ್ಲಿ 'ನಾನು' ಅವ್ಯಕ್ತವಾಗಿರುವ ಬಗೆಯನ್ನು ವ್ಯಂಗ್ಯ ಹಾಗೂ ವಿಶಾದದ ಮೂಲಕ ತಿಳಿಸಿದ್ದಾರೆ. ಸಮಸ್ಯೆ ಇಷ್ಟಕ್ಕೆ ನಿಲ್ಲದೆ ಹೆಣ್ಣು ತನ್ನ ಮಕ್ಕಳನ್ನು ತನ್ನವರೆಂದು ಗುರುತಿಸಲಾಗದ ಅವರ ಆಸೆ ಆಕಾಂಕ್ಷೆಗಳನ್ನು ಅರಿಯುವ ಅಥವಾ ಪೂರೈಸುವ ಹೊಣೆಗಾರಿಕೆಯನ್ನೂ ಹೊರಲಾರದ, ಹೊರಬಾರದ, ರೀತಿಯಲ್ಲಿ ವಂಚಿಲಾಗಿದೆ. ಇದನ್ನು ಮಹಿಳಾ ಕಾವ್ಯ ಆಕ್ರೋಶದ ಧ್ವನಿಯಿಂದಲೇ ಪ್ರಶ್ನಿಸುತ್ತದೆ. ಪ್ರತಿಭಾ 'ನಾನು' ಎಂಬ ಕವನದಲ್ಲಿ ಹೆಣ್ಣಿನ ಅಸ್ತಿತ್ವದ ಪ್ರಶ್ನೆಯನ್ನು ಎದುರುಗೊಳ್ಳುವ ಬಗೆ ಹೀಗೆ.

> ನಾನೊಬ್ಬನ ಪತ್ನಿ.
> ಮೂರು ಮಕ್ಕಳ ತಾಯಿ
> ಇನ್ನೂ ನನ್ನ ಸೀರೆ ಕುಪ್ಪಸ
> ಬಟ್ಟು. ಬೈತಲೇ ಎಲ್ಲ
> ನನ್ನ ಅತ್ತೆ ಮಾವದಿರ ಮರ್ಜಿ
> ನನ್ನದೇ ಮಕ್ಕಳ ಚಪ್ಪಲಿ
> ಚಾಕಲೇಟು ಸ್ಲೇಟುಗಳೂ
> ನನ್ನ ಪರಿಧಿ ಮೀರಿದ ವಿಷಯಗಳು [18]

ಇಲ್ಲಿ ಹೆಣ್ಣಿಗೊಂದು ಸ್ವಂತ ಅಸ್ತಿತ್ವವೇ ಇಲ್ಲದಿರುವುದನ್ನು ಗುರುತಿಸುತ್ತಾರೆ. ಮುಂದುವರೆದು 'ನನಗೆ ಅದೂ ಮನೆಯಲ್ಲ ಇದೂ ಮನೆಯಲ್ಲ ನನ್ನದೊಂದು ಮನೆಯೇ ಇಲ್ಲ'. ಎಂಬ ನಿರಾಶೆ ನೋವು ಕಂಡುಬಂದರೂ ಅವೆಲ್ಲವನ್ನೂ ಮೀರುವ ತುಡಿತ ಸದಾ ಇವರ ಕವನಗಳಲ್ಲಿದೆ.

ಹೆಣ್ತನದ ಮೂಲಕವೇ ಸ್ವಂತಿಕೆಯ ಹುಡುಕಾಟಕ್ಕೆ ಮುಂದಾಗಿರುವುದು ಆಧುನಿಕ ಮಹಿಳಾ ಕಾವ್ಯದ ಒಂದು ವಿಶಿಷ್ಟ ಶಕ್ತಿ. ಜೈವಿಕ ಅಂಶಗಳನ್ನೇ ಆಧರಿಸಿ ರೂಪಿಸಿರುವ ಹಣ್ಣಿನ ಅಧೀನತೆಯ ನೆಲೆಗಳನ್ನು ಮಹಿಳಾ ಕಾವ್ಯ ಪ್ರಶ್ನಿಸುವುದರೊಂದಿಗೆ ಯಾವುದನ್ನು ಹೆಣ್ಣಿನ ಮಿತಿ, ಹಾಗೂ ನಿರ್ಬಂಧಿಸುವ ಸಾಧನ ಎಂದು ಪುರುಷ ಪ್ರಧಾನ ವ್ಯವಸ್ಥೆ ಪರಿಗಣಿಸಿತ್ತೋ ಅದನ್ನೇ ಮಹಿಳಾ ಕಾವ್ಯ ತನ್ನ 'ಶಕ್ತಿ ಕೇಂದ್ರ'ವಾಗಿ ಬಳಸಿಕೊಂಡಿರುವುದು ವಿಶೇಷ. ಅದರಲ್ಲೂ ಮುಖ್ಯವಾಗಿ ಹೆಣ್ಣಿನ ತಾಯಿಯಾಗುವ ಕ್ರಿಯೆಯನ್ನು ತನ್ನ ನಿರ್ಭಂಧಕ್ಕೆ ಒಳಪಡಿಸಿಕೊಳ್ಳುವುದರ ಮೂಲಕ ಪ್ರಭುತ್ವ ಅವಳನ್ನು ಅಧೀನತೆಗೆ ಒಳಪಡಿಸಿದರೆ ಆಧುನಿಕ ಸಂದರ್ಭದಲ್ಲಿ ಹೆಣ್ಣು ಅದನ್ನೇ ತನ್ನ ಶಕ್ತಿಕೆಂದ್ರವಾಗಿಸಿಕೊಳ್ಳುವುದರೊಂದಿಗೆ ತಾಯ್ತನದ ಮೂಲಕವೇ ತನ್ನ ಅಸ್ತಿತ್ವಕ್ಕೊಂದು ಅಧಿಕೃತತೆಯನ್ನು ಪಡೆಯಲು ಮುಂದಾಗಿದ್ದಾಳೆ. ಮೊದಲ ತಲೆಮಾರಿನ ಲೇಖಕಿಯರು ಹೆಣ್ತನವನ್ನು ಒಂದು ಮೌಲ್ಯವಾಗಿಯೂ ಅದೇ ಸಂದರ್ಭದಲ್ಲಿಯೇ ತಮ್ಮ ಬಂಧನದ ಕೇಂದ್ರವಾಗಿಯೂ ಗುರುತಿಸಿದರೆ ಮೂರನೇ ಘಟ್ಟದ ಲೇಖಕಿಯರು ಹೆಣ್ತನವನ್ನೆ ತಮ್ಮ ಶಕ್ತಿ ಕೇಂದ್ರವಾಗಿಸಿ ಕೊಂಡು ತನ್ನೆಲ್ಲಾ ಸಾಧನೆ, ಶ್ರಮ, ಹಾಗೂ ತಾಳ್ಮೆಯ ಹಿಂದಿನ ಪ್ರೇರಕ ಶಕ್ತಿ ಇದೇ ಆಗಿದೆ ಎಂದು ಗುರುತಿಸಿಕೊಳ್ಳುವುದರ ಮೂಲಕ ಇಡೀ ವ್ಯವಸ್ಥೆಯೊಂದಿಗೆ ಸಂವಾದಕ್ಕೆ ಮುಂದಾಗುತ್ತಾರೆ.

ಮಹಿಳಾ ಕಾವ್ಯ ತಾಯ್ತನವನ್ನು ಸ್ವೀಕರಿಸಿರುವ ಬಗೆ ವಿಶಿಷ್ಟವಾದದ್ದು. ಇದು ಪುರುಷ ಪ್ರಧಾನ ವ್ಯವಸ್ಥೆಯ 'ಹೆರುವಿಕೆ'ಗಿಂತ ಭಿನ್ನವಾದ ಜೀವೋತ್ಪತ್ತಿಯ ಕ್ರಿಯೆಯಾಗಿ ರೂಪುಗೊಂಡಿದೆ. ಮಹಿಳಾ

ಕಾವ್ಯ ತಾಯಿಯಾಗುವ ಹಂಬಲವನ್ನಾಗಲೀ, ತಾಯ್ತನದ ಸ್ವೀಕರಾರವನ್ನಾಗಲೀ, ಅತ್ಯಂತ ಸಂಭ್ರಮ, ಸಡಗರ ಸಂತೋಷಗಳಿಂದ ಬರಮಾಡಿಕೊಳ್ಳುತ್ತದೆ. ತಾಯ್ತನದ ಹೊಣೆಗಾರಿಕೆಯಿಂದಾಗಿ ಹೆಣ್ಣು ಸಾಮಾಜಿಕ, ಸಾಂಸ್ಕೃತಿಕ ವಲಯಗಳಲ್ಲಿ ನಿರಂತರವಾಗಿ ತೊಡಗಿಕೊಳ್ಳಲು ಸಾಧ್ಯವಾಗುವುದಿಲ್ಲ. ಇದರಿಂದಾಗಿ ಅಭಿವ್ಯಕ್ತಿಯ ಸಂದರ್ಭದಲ್ಲಿಯೂ ಕೂಡ ಅನೇಕ ತೊಡಕುಗಳನ್ನು ಎದುರಿಸಬೇಕಾಗಿದೆ. ಆದರೆ ತಾಯ್ತನ ಒಂದು ರೀತಿಯ ಬಂಧನವೇ ಆಗಿದ್ದ ಸಂದರ್ಭದಲ್ಲಿಯೂ ಕೂಡ ಮಹಿಳಾ ಕಾವ್ಯ ತಾಯ್ತನದ ಮೂಲಕವೇ ತನ್ನೆಲ್ಲಾ ಹಂಬಲಗಳನ್ನು ಸಾಕಾರಗೊಳಿಸಿಕೊಳ್ಳುವ ಪ್ರಯತ್ನದಲ್ಲಿ ತೊಡಗಿದೆ. ವೈದೇಹಿ ಜೋಗಿತೆ ಕವನದಲ್ಲಿ ತಾಯ್ತನದ ಬವಣೆ, ಸಂಕಟ, ಬದಲಾವಣೆಗಳನ್ನು ಗುರುತಿಸುತ್ತಾರೆ. ತಾಯಿ ಮಗುವಿನ ಸಂಬಂಧದಲ್ಲಿ ದೊರೆಯುವ ಸಂತೃಪ್ತಿಗೆ ಮಿಗಿಲಾದದ್ದು ಯಾವುದೂ ಇಲ್ಲ, ಅದರಿಂದಾಗಿಯೇ ಹೆಣ್ಣಿನ ಜೀವನಕ್ಕೊಂದು ಪೂರ್ಣತೆ ದೊರೆತಿದೆ ಎಂಬುದು ಈ ಕವನದಿಂದ ವ್ಯಕ್ತವಾಗುತ್ತದೆ.

ದೇವರೇ ಈ ಮಗುವನು
ನನ್ನ ಕೈಗೆ ಯಾಕಿಟ್ಟೆ!
ಒಂದು ಮಾತು ಕೇಳೋದಿಲ್ಲ
ಒಂದ ಕೂಡ ಮಾಡೊದಿಲ್ಲ
ಒಂದು ಗಳಿಗೆ ಮಲಗೊದಿಲ್ಲ
ತಿರುಗಿ ಮನೆ ಸವೆಸಿದೆ
. . . . . . . .
ಕಾಗೆ ಗುಬ್ಬಿ ಕರೆದು ಸೋತೆ
ತಟ್ಟಿ ಕಥೆಯ ಕಟ್ಟಿ ಸೋತೆ
ಸುತ್ತು ಮದ್ದು ತೇದು ಸೋತೆ
ಪೆಟ್ಟೂ ಕೊಡಲಾರೆ ಸೋತೆ
ಒಟ್ಟೂ ಸರ್ವಸ್ವ ಸೋತೆ
. . . . . . . . . . .
ಹುಟ್ಟಿದಾಗ ಇಷ್ಟಕಿತ್ತು, ದಿನಾ ದಿನಾ ಬೆಳೆದಿದೆ
ಮುಟ್ಟಲಾರದೆತ್ತರಕ್ಕೆ ನಿತ್ಯ ಸನ್ನೆ ಕರೆದಿದೆ
ನನ್ನನ್ನೇ ನಡೆಸುತಿದೆ ಉಸಿರಾಟವ ಕಲಿಸಿದೆ
ಅಂಗೈಯ ಅಗಲದಲ್ಲೆ
ಜೋಗಿತವ ಜೀಕಿದೆ!
ಜಗಜಂಗಮವಾಗಿದೆ! [೧೪]

ಇಲ್ಲಿ ಮಗುವಿನ ಲಾಲನೆ, ಪಾಲನೆ, ಅದರಿಂದ ಏರ್ಪಡುವ ಕೌಟುಂಬಿಕ ಬದ್ಧತೆ, ಇವುಗಳಿಂದಾಗಿ ಮನಸ್ಸು ರೋಸಿಹೋದರೂ ಕೂಡ ಮಗುವಿನ ಪ್ರಪಂಚದಲ್ಲಿ ತಾಯಿ ಎಲ್ಲವನ್ನೂ ಮರೆಯುವ, ಪ್ರತಿಯೊಂದನ್ನೂ ಪ್ರೀತಿಯಿಂದ ಕಾಣುವ ವಿಧಾನವನ್ನು ಗುರುತಿಸಬಹುದು. ಪುರುಷ ಪ್ರಧಾನ ಮೌಲ್ಯವ್ಯವಸ್ಥೆ ಯಾವುದನ್ನು ಹೆಣ್ಣಿನ ಸಹಜಗುಣಗಳು ಎಂಬಂತೆ ಬಿಂಬಿಸಲಾಗಿದೆಯೋ ಅವೆಲ್ಲವೂ ಕೂಡ ತಾಯ್ತನದಿಂದ ದತ್ತವಾದ ವರಗಳೇ ಎಂದು ಮಹಿಳಾ ಕಾವ್ಯ ಭಾವಿಸುತ್ತದೆ. ಸಹನೆ, ತಾಳ್ಮೆ, ತ್ಯಾಗಗಳು ಹೆಣ್ಣನ್ನು ಹಲವು ರೀತಿಯಲ್ಲಿ ಶೋಷಣೆಗೊಳಪಡಿಸಲು ಕಾರಣವಾಗುತ್ತವಾದರೂ ಮಹಿಳಾ ಕಾವ್ಯ ಅವನ್ನು ಹೆಣ್ಣಿನ ವಿಶೇಷ ಶಕ್ತಿ ಎಂದೇ ಪರಿಗಣಿಸುತ್ತದೆ. ಎಂ.ಎಸ್. ಆಶಾದೇವಿಯವರು ಹೇಳುವಂತೆ ಯಶೋಧೆ ಕೃಷ್ಣನ ಬಾಯಲ್ಲಿ ಬ್ರಂಹ್ಮಾಂಡವನ್ನು ಕಂಡಿದ್ದು ಕೇವಲ ರೂಪಕವಾಗಿ ಮಾತ್ರ

ನಿಲ್ಲದೆ ಮಕ್ಕಳ ಗೆಲುವಿನಲ್ಲಿಯೇ ಪ್ರಪಂಚವನ್ನು ಗೆಲ್ಲುವ ತಾಯಿ ಶಕ್ತಿಯ ಸಂಕೇತ ಎಂಬ ಮಾತು ಅರ್ಥಪೂರ್ಣವಾದ್ದು. ಈ ಶಕ್ತಿ ಕೂಡ ಹೆಣ್ಣಿನ ತಾಯ್ತನದ ಭಾಗವೆ ಎಂಬುದನ್ನು ಶೈಲಜಾ ಉಡಚಣ ಗುರುತಿಸುತ್ತಾರೆ.

ನೀ ನನ್ನ ಇರಿಯಬಯಸಿದೆ
ನಿನ್ನ ದರ್ಪದಿಂದ ತಿರಸ್ಕಾರದಿಂದ
ನಾನಾದರೋ ಮತ್ತೆ ಮತ್ತೆ
ಬದುಕಿದೆ ನೀ ಸವಿದು ಬಿಟ್ಟ
ಅಮೃತ ಹನಿಯಿಂದ
ನೀ ತುಳಿದು ತಣಿದೆ ನಿನ್ನ
ಅವಜ್ಞೆಯ ಕಾಲುಗಳಿಂದ
ನಾ ಬೆಳೆದು ನಿಂತೆ ಹಾಲು ಚೀಪಿ
ನಿನ್ನ ಅಕ್ಷಯದುಂಗುಟದಿಂದ
. . . . . . . . . . . . .
ಬೆಳೆಸುವುದೇ ನನ್ನ ಸಹಜ ಲೀಲೆ. [79]

ಪುರುಷ ಪ್ರಧಾನ ವ್ಯವಸ್ಥೆ ತನ್ನ ದರ್ಪ, ತಿರಸ್ಕಾರ, ಅವಜ್ಞೆಗಳಿಂದ ಹೆಣ್ಣನ್ನು ಹಿಡಿತದಲ್ಲಿಡುವ, ಅಧೀನಕ್ಕೆ ಒಳಪಡಿಸಿಕೊಳ್ಳುವ ಅವಳ ಅಸ್ತಿತ್ವವನ್ನು ಇಲ್ಲವಾಗಿಸುವ ಪ್ರಯತ್ನದಲ್ಲಿ ತೊಡಗಿದರೆ. ಹೆಣ್ಣು ಅವೆಲ್ಲವನ್ನೂ ಮೀರಿ ಸಿಕ್ಕ ಅಲ್ಪ ಅವಕಾಶದಲ್ಲಿಯೇ ತನ್ನ ವ್ಯಕ್ತಿತ್ವವನ್ನು ರೂಪಿಸಿಕೊಳ್ಳುವ ಹಾದಿಯ ಹುಡುಕಾಟಕ್ಕೆ ಮುಂದಾಗಿರುವುದನ್ನು ಗುರುತಿಸುತ್ತಾರೆ. ಹೆಣ್ಣಿಗೆ ತಾನು ಬೆಳೆಯಬೇಕೆಂಬ ಹಂಬಲದ ಜೊತೆ ಜೊತೆಗೇ 'ಬೆಳೆಸುವುದೇ ತನ್ನ ಸಹಜ ಲೀಲೆ' ಎಂಬ ಅರಿವು ಹೆಣ್ಣಿನ ತಾಯ್ತನದ ಶಕ್ತಿಯನ್ನು ಪ್ರತಿಷ್ಠಾಪಿಸಲು ಪ್ರಯತ್ನಿಸುತ್ತದೆ. ಈ ಮೂಲಕ ಹೆಣ್ಣು ಅಸಹಾಯಕತೆ ಹಾಗೂ ಗೊಂದಲದ ಸ್ಥಿತಿಯಿಂದ ಹೊರಬರಲು ಸಾಧ್ಯ ಎಂಬ ಅಂಶವನ್ನು ಎತ್ತಿ ಹಿಡಿಯಲು ಪ್ರಯತ್ನಿಸುತ್ತದೆ.

ಅಧಿಕಾರ ಕೇಂದ್ರಿತ ವ್ಯವಸ್ಥೆಯ ಹುನ್ನಾರಗಳಿಂದ ದತ್ತವಾದ ಸ್ತ್ರೀಯ ಅನುಭವಲೋಕದ ನಿರ್ಲಕ್ಷ್ಯ ಹಾಗೂ ಆಮೂಲಕ ರೂಪುಗೊಂಡ ಅವಳ ಅಭಿವ್ಯಕ್ತಿಯ ಸಾಧನ, ಮಾದರಿಗಳನ್ನು ಪುರುಷ ಪ್ರಧಾನ ವ್ಯವಸ್ಥೆ ಹಿಂದಿನಿಂದಲೂ ಅಂಚಿಗೆ ಸರಿಸಿರುವುದು ತಿಳಿದಿರುವ ವಿಷಯವೇ. ಮಹಿಳಾ ಕಾವ್ಯ ತನ್ನ ಅನುಭವದ ಅಭಿವ್ಯಕ್ತಿಗೆ ಅಧಿಕೃತತೆಯನ್ನು ತಂದುಕೊಡಲು ಪ್ರಯತ್ನಿಸುವ ಮೂಲಕ ತನ್ನ ಸ್ವಂತಿಕೆಯ ಹುಡುಕಾಟಕ್ಕೆ ಮುಂದಾಗಿರುವುದು ಮತ್ತೊಂದು ಕ್ರಮ. ಹೆಣ್ಣಿನ ಜೀವೋತ್ಪತ್ತಿಯ ಶಕ್ತಿ, ಅದರ ಹಿಂದಿನ ಶ್ರಮ, ಗೃಹ ನಿರ್ವಹಣೆ ಇವೆಲ್ಲವುಗಳನ್ನೂ ಕೂಡ ವ್ಯವಸ್ಥೆ ಅನುತ್ಪಾದಕ, ನಿಷ್ಪ್ರಯೋಜಕ ವರ್ಗಕ್ಕೆ ಸೇರಿಸುವುದರ ಮೂಲಕ ಅವಳ ಅನುಭವ ಲೋಕ ಗಂಡಿನದಕ್ಕಿಂತ ಬಿನ್ನ, ಹಾಗೂ ವೈಶಿಷ್ಟ್ಯತೆಯಿಂದ ಕೂಡಿದ್ದು ಎಂಬುದನ್ನು ಪುರುಷ ಪ್ರಭುತ್ವ ಸಂಪೂರ್ಣ ಅವಜ್ಞೆಗೆ ಒಳಪಡಿಸಿತ್ತು. ಆದರೆ ಮಹಿಳಾ ಕಾವ್ಯ ತನ್ನ ಅನುಭವಗಳು ಪುರುಷ ಪಡೆಯಬಹುದಾದ ಅನುಭವಗಳಿಗಂತ ಹೇಗೆ ಭಿನ್ನ ಹಾಗೂ ಅಂತಹ ಅನುಭವಗಳನ್ನು ಪುರುಷ ಎಂದೆಂದಿಗೂ ಪಡೆಯಲು ಸಾಧ್ಯವೇ ಇಲ್ಲ ಎಂಬುದರ ಕಡೆಗೆ ಗಮನ ಹರಿಸುತ್ತವೆ. ಈ ಮೂಲಕ ಹೆಣ್ಣಿನ ಅನುಭವಗಳು ಗಂಡು ಪಡೆಯಬಹುದಾದ ಅನುಭಗಳಿಗಿಂತ ಹೇಗೆ ಭಿನ್ನ, ವಿಶಿಷ್ಟ ಹಾಗು

ವೈವಿಧ್ಯಮಯವಾದವುಗಳು ಎಂಬುದನ್ನು ಸ್ಪಷ್ಟಪಡಿಸುತ್ತವೆ. ಪ್ರತಿಭಾ ನಂದಕುಮಾರ್ ಅವರ 'ಗೃಹಿಣಿಗೀತ', 'ಅಡುಗೆ ಮಾಡುತ್ತಿದ್ದೇನೆ' ವೈದೇಹಿ 'ತಿಳಿದವರೆ ಹೇಳಿ' 'ನೋಡಬಾರದು ಚೀಲದೊಳಗನು' ಲಲಿತಾ ಸಿದ್ದಬಸವಯ್ಯ ಅವರ 'ಲವಾಜಮೆ' 'ಮಾಗಡಮ್ಮ ಉಫೇ ಉಫೇ' ಮುಂತಾದ ಕವನಗಳು ಹೆಣ್ಣಿನ ವಿಶೇಷಾನುಭವಗಳ ಅಧಿಕೃತತೆ ಹಾಗೂ ಅನಿವಾರ್ಯತೆಗಳನ್ನು ಎತ್ತಿ ಹಿಡಿಯುತ್ತವೆ. ಮತ್ತು ಗಂಡು ಎಂದಿಗೂ ಈ ಅನುಭವಗಳನ್ನು ಪಡೆಯಲಾರಲು, ಅನುಭವಿಸಲು ಸಾಧ್ಯವೇ ಇಲ್ಲ ಎಂಬುದನ್ನು ಒಂದು ಬಗೆಯ ಗರ್ವ, ಹೆಮ್ಮೆಯಿಂದ ವ್ಯವಸ್ಥೆಗೆ ತಿಳಿಸಬಯಸುತ್ತದೆ. ವೈದೇಹಿಯವರ 'ತಿಳಿದವರೇ ಹೇಳಿ' ಸ್ತ್ರೀ ಸಂವೇದನೆಯ ವೈಶಿಷ್ಟತೆಯನ್ನೂ ಜೊತೆಗೆ ಅನನ್ಯತೆಯನ್ನು ಎತ್ತಿಹಿಡಿಯುವ ಕವನ. ಕಾವ್ಯದ ಬಗ್ಗೆ ತಿಳಿದವರೇ ಹೇಳಿ ನನಗೆ ಕಾವ್ಯ ಗೊತ್ತಿಲ್ಲ ತಿಳಿಸಾರು ಗೊತ್ತು. ಎಂಬುದು ತಿಳಿಸಾರಿನ ತಯಾರಿ ಕೂಡ ಕಾವ್ಯ ರಚನೆಯಷ್ಟೇ ಅಥವಾ ಅದಕ್ಕಿಂತ ಹೆಚ್ಚು ಶ್ರಮವನ್ನೂ ಅಪೇಕ್ಷಿಸುವಮತದ್ದು ಎಂಬುದನ್ನು ತಿಳಿಸಲು ಪ್ರಯತ್ನಿಸುತ್ತದೆ. ಒಂದು ಕಡೆ ಕಾವ್ಯ ಮತ್ತು ತಿಳಿಸಾರಿನ ಸಹಜ ಕ್ರಿಯೆಯ ಹೋಲಿಕೆ ಇದ್ದರೆ ಇನ್ನೊಂದು ಹಂತದಲ್ಲಿ ತಿಳಿಸಾರು ಮತ್ತು ಮಾಂಸದಡಿಗೆಯ ಬಾಳಿಕೆಯ ಪ್ರಶ್ನೆಯನ್ನು ಮುಖಾಮುಖಿಯಾಗಿಸುತ್ತದೆ. ಗಟ್ಟಿಯಾದ , ವಿಶೇಷವಾದ ಮಾಂಸದಡುಗೆಯ ಮುಂದೆ ತಿಳಿಸಾರು 'ತಿಳಿ' ಎನಿಸಬಹುದಾದರೂ ಅದರ ವೈಶಿಷ್ಟ್ಯತೆ ಇದಕ್ಕೆ ಬರಲು ಸಾಧ್ಯವಿಲ್ಲ ಎಂಬ ಎಚ್ಚರಿಕೆಯನ್ನು ಕೂಡ ನೀಡುತ್ತದೆ. ಹಾಗೂ ಬಾಳಿಕೆಯ ದೃಷ್ಟಿಯಿಂದ ಮಾಂಸದಡುಗೆಗಿಂತ ತಿಳಿಸಾರೇ ಉತ್ತಮ ಎನ್ನುವ ಮೂಲಕ ಪುರುಷ ಪ್ರಧಾನ ಸಾಹಿತ್ಯದ ಕನ್ನಡಿಯಲ್ಲಿ ಮಹಿಳಾ ಸಾಹಿತ್ಯವನ್ನು ತುಲನೆಮಾಡುವ ಕ್ರಮವೇ ತಪ್ಪು ಎಂಬುದನ್ನು ಪ್ರಸ್ತುತ ಪಡಿಸುತ್ತದೆ. ಮಾತ್ರವಲ್ಲದೆ ಹೆಣ್ಣಿಗೆ ದತ್ತವಾಗಿರುವ ಅನುಭವದ ವ್ಯಾಪ್ತಿಯಲ್ಲಿ ಅವಳ 'ತಿಳಿಸಾರೇ' ಅತ್ಯಂತ ಶ್ರೇಷ್ಟವಾದದ್ದು ಎಂಬುದನ್ನು ಗುರುತಿಸುವ ಮೂಲಕ ಮಹಿಳಾ ಅಭಿವ್ಯಕ್ತಿ ಹಾಗೂ ಮಹಿಳಾ ಕಾವ್ಯದ ಪ್ರಾಮುಖ್ಯತೆಯನ್ನು ಸಾರುತ್ತದೆ. ಅಲ್ಲದೆ ತಿಳಿಸಾರನ್ನು ತಯಾರಿಸುವುದು ಅತ್ಯಂತ ಸುಲಭವಾಗಿದೆ ಎನಿಸಿದರೂ ಅದರ ಹದ, ರುಚಿ ಕೆಡದಂತೆ ತಯಾರಿಸುವ ಸಾಮರ್ಥ್ಯ ತನಗಲ್ಲದೆ ನಿಮಗೆ ಒಲಿಯಲು ಸಾಧ್ಯವಿಲ್ಲ ಎನ್ನುವ ಮೂಲಕ ತನ್ನದೇ ಆದ ಅನುಭವ ಲೋಕವೊಂದನ್ನು ಕಟ್ಟಿಕೊಳ್ಳುವ, ಅದರ ಮೂಲಕ ತನ್ನ ಅನುಭವದ ಅಧಿಕೃತತೆಯನ್ನು ಕಂಡುಕೊಳ್ಳುವ ವಿಧಾನ ಇಲ್ಲಿದೆ.

ಸುಕನ್ಯಾ ಮಾರುತಿ ಅವರ ಕವನ ತನ್ನ ಶಕ್ತಿಯನ್ನು ಗುರುತಿಸುವ ವಿಧಾನ ಮತ್ತೊಂದು ಬಗೆಯದ್ದು.

> ನನಗಿಂತ ನನಗೆ ಮಿತ್ರರಿಲ್ಲ ಶತ್ರುಗಳು ಕೂಡ.
> ಸ್ವರ್ಗ, ಮರ್ತ್ಯ, ಪಾತಾಳಗಳಲ್ಲ ವಿಜೃಂಭಿಸುವುದು 'ನಾನು'
> ಕೈಚೆಲ್ಲಿ ವಿರಮಿಸುವುದೂ 'ನಾನು' [74]

ಇಲ್ಲಿ ಲೇಖಕಿಗೆ ತನ್ನ ಶಕ್ತಿ ಹಾಗು ಮಿತಿಯ ಬಗ್ಗೆ ಸಂಪೂರ್ಣ ಅರಿವಿದೆ. ಹಾಗಾಗಿ ಎಲ್ಲಾ ಬಗೆಯ ಬಿಡುಗಡೆ ಹಾಗೂ ಸಂಕೋಲೆಗಳಿಗೆ ತಾನೆ ಕಾರಣ ಎಂಬ ಅರಿವು ಅದನ್ನು ಮೀರುವ ಕಡೆಗೆ ತಿರುಗುವಂತೆ ಮಾಡಿದೆ.

### ೬.೨ ಸಮಾನತೆಯ ಆಶಯ

ಮಹಿಳಾ ಕಾವ್ಯದ ಮತ್ತೊಂದು ಪ್ರಧಾನ ಆಶಯ ಗಂಡು ಹೆಣ್ಣಿನ ನಡುವಿನ ಸಮಾನತೆಯನ್ನು ಸಾಧಿಸುವುದಾಗಿದೆ. ಅನಾದಿಕಾಲದಿಂದಲೂ ಪುರುಷ ಪ್ರಧಾನ ವ್ಯವಸ್ಥೆಯಿಂದ ಒಂದಲ್ಲಾ ಒಂದು ರೀತಿಯಲ್ಲಿ ಶೋಷಣೆಗೊಳಪಟ್ಟಿರುವ ಹೆಣ್ಣು ಅದರಿಂದ ಬಿಡುಗಡೆ ಹೊಂದುವ ಆಶಯವನ್ನು ಹೊಂದಿರುವುದು ಹಾಗೂ ಅದನ್ನು ತೀವ್ರವಾಗಿ ವ್ಯಕ್ತಪಡಿಸುವುದು ಸಹಜವೇ ಆಗಿದೆ. ಆದರೆ ಅದು ಕೆಲ ಸಂದರ್ಭದಲ್ಲಿ ಪುರುಷ ದ್ವೇಷದಂತೆ ಕಂಡು ಬರುತ್ತದೆಯಾದರೂ, ಹೆಚ್ಚಿನ ಸಂದರ್ಭದಲ್ಲಿ ಮಹಿಳಾ ಕಾವ್ಯದ ಆಶಯ ಗಂಡು ಹೆಣ್ಣಿನ ನಡುವೆ ಮೇಲು ಕೀಳು ಎಂಬ ಬೇಧವಿಲ್ಲದ, ಸಮಾನ ನೆಲೆಯ ಬದುಕನ್ನು ಕಟ್ಟಿಕೊಳ್ಳುವ ವಿಧಾನದ್ದು. ಒಬ್ಬರು ಇನ್ನೊಬ್ಬರ ಮೇಲೆ ನಿಯಂತ್ರಣವನ್ನು ಸಾಧಿಸುವ ಹಾಗೂ ಅಧೀನಕ್ಕೆ ಒಳಪಡುವ, ಒಳಪಡಿಸಿಕೊಳ್ಳುವ ಯಾವುದೇ ರೀತಿಯ ಶ್ರೇಣೀಕರಣಕ್ಕೆ ಅವಕಾಶವಿರದಂತೆ ಸಮಾನ ಚಿಂತನೆ, ಆಲೋಚನೆ, ಮಾನ್ಯತೆಯಿಂದ ಕೂಡಿದ ಸಮಾಜವನ್ನು ರೂಪಿಸುವ ಆಶಯ ಲೇಖಕಿಯರದ್ದು. ಬಹುತೇಕ ಎಲ್ಲಾ ಕಾಲಘಟ್ಟದ ಲೇಖಕಿಯರ ಮುಖ್ಯ ಕಾಳಜಿ ಇದೇ ಆಗಿದೆ. ಆದರೆ ಈ ಸಮಾನತೆಯನ್ನು ಹೇಗೆ ಸಾಧಿಸಬೇಕು ಎಂಬುದು ಮಹಿಳಾ ಕಾವ್ಯದ ಎದುರಿಗಿರುವ ಸವಾಲು ಹಾಗೂ ಸಂದಿಗ್ಧ ಸಂಗತಿಯಾಗಿದೆ. ಆದುದರಿಂದಾಗಿ ಆಧುನಿಕ ಮಹಿಳಾ ಕಾವ್ಯ ಈ ವಿಷಯದ ಕಡೆಗೆ ಹೆಚ್ಚಿನ ಗಮನ ಹರಿಸುತ್ತದೆ. ಆರಂಭದ ಲೇಖಕಿಯರು ಆಧುನಿಕ ಶಿಕ್ಷಣ ಹೆಣ್ಣಿನ ಮಾನ್ಯತೆಯನ್ನೂ ಸಮಾನತೆಯನ್ನೂ ತಂದುಕೊಡುತ್ತದೆ ಎಂದು ಬಲವಾಗಿ ನಂಬಿದ್ದವರು ಆದರೆ ಶಿಕ್ಷಣವನ್ನು ಪಡೆಯುವುದು ತಮ್ಮ ಹಕ್ಕು ಎಂದಾಗಲೀ, ಅದನ್ನು ಪಡೆದೇ ತೀರಬೇಕು ಎಂಬ ಛಲವಾಗಲೀ ಅವರಲ್ಲಿ ತೀವ್ರವಾಗಿ ಪ್ರಕಟಗೊಳ್ಳುವುದಿಲ್ಲ. ಶಿಕ್ಷಣವನ್ನು ಪುರುಷಪ್ರಧಾನ ವ್ಯವಸ್ಥೆ ತನಗೆ ನೀಡಿದ 'ದಾನ' ಎಂಬ ಮನೋಭಾವವೇ ಇವರಲ್ಲಿ ಇದ್ದ ಕಾರಣದಿಂದಾಗಿ ಇವರು ತಮಗೆ ದತ್ತವಾದ ಶಿಕ್ಷಣದ ಮೂಲಕವೇ ತಮ್ಮ ಜೀವನದ ಹೊಸ ದಾರಿಗಳನ್ನು ಕಂಡುಕೊಳ್ಳಲು ಪ್ರಯತ್ನಿಸಿದರು. ಇನ್ನುಳಿದಂತೆ ಸಮಾಜ, ಕುಟುಂಬ, ಧಾರ್ಮಿಕ ಆಚರಣೆಗಳಲ್ಲಿ ಸಮಾನತೆಯನ್ನು ಪಡೆಯುವ ಹಂಬಲ ಇವರದ್ದಾಗಿರಲಿಲ್ಲ.

ಚ. ಸರ್ವಮಂಗಳ ಹೆಣ್ಣಿನ ಸಮಾನತೆಯ ಹಂಬಲವನ್ನು ಗುರುತಿಸುವ ವಿಧಾನ ವಿಶಿಷ್ಟವಾಗಿದೆ. ಅವರ 'ನಾನು ನಾನೇ' ಕವನ ಪುರುಷ ಪ್ರಧಾನ ಮೌಲ್ಯ ವ್ಯವಸ್ಥೆಯ ಎದುರು ಹೆಣ್ಣಿನ ಅಸ್ಮಿತೆಯನ್ನು ಈ ರೀತಿ ಗುರುತಿಸುತ್ತಾರೆ.

ತೊಡೆಮೇಲೊಬ್ಬಳು ತಲೆ ಮೇಲೊಬ್ಬಳು
ಮೆರೆಸಿ ತನ್ನನ್ನು ತಾನೇ ಅರ್ಧನಾರೀಶ್ವರನೆಂದು
ಬೀಗಿದವನ ಪಾಡು ನನಗೆ ಬೇಡ
– – – – – –
ಇನ್ನೊಬ್ಬಳ ಹೊಕ್ಕಳನ ನಾಭಿ ಹೂವಿನಲ್ಲರಳಿ
ತನ್ನ ಮಗಳನ್ನೇ ಮೋಹಿಸಿದ ಆ ಠಕ್ಕ
ಅವನ ನೆರವೂ ಬೇಡ.
ರಕ್ತ ಮಾಂಸದ ಪಿಂಡವಾಗಿ ಹುಟ್ಟಿ ಬೆಳೆದು
ಅದಕ್ಕೆ ಬೆಲೆ ಕೊಡಬೇಡ ಎನ್ನುವ ಇವರಾರೂ
ನನಗೆ ಬೇಡವೇ ಬೇಡವಯ್ಯಾ.

ಅಯ್ಯಾ ನನಗೆ ಬೇಕು:
ಕ್ಷಣ ತಿಕ್ಕಾಟದಲ್ಲಿ ಹೇಸಿಗೆ ನಡುವೆ
ಹುಟ್ಟಿ ಅಲ್ಲಿಯೇ ಇನ್ನೂ ಗಿರಗಿಟ್ಲೆ
ಆಡುತ್ತಿರುವ ನನ್ನ ನಾನೇ ಅರಿವುದಯ್ಯಾ. [೧೭]

ಗಂಡಿನ ವಿವಿಧ ಅವತಾರಗಳನ್ನೂ, ಪುರಾಣದ ಶ್ರೇಷ್ಟ ಪಾತ್ರಗಳೆಂದು ಪ್ರತಿನಿಧಿಸಲ್ಪಟ್ಟಿರುವ ಶಿವ, ಕೃಷ್ಣ, ಬ್ರಹ್ಮ ಮುಂತಾದವರ ಪಾತ್ರಗಳ ಹಿರಿತನ ತನಗೆ ಬೇಡ ಎಂಬುದರ ಹೊತೆಗೆ ಹೇಸಿಗೆ ನಡುವೆ ಹುಟ್ಟಿರುವ ತನ್ನ ಅಸ್ತಿತ್ವವೇ ತನಗೆ ಶ್ರೇಷ್ಟ ಎಂಬ ಮನೋಭಾವೇ ತನ್ನ ಸ್ವಂತಿಕೆಯನ್ನು ಕಂಡುಕೊಳ್ಳುವ ಪ್ರಯತ್ನದ್ದಾಗಿದೆ. ಅಲ್ಲದೆ ಈ ಕವನದ ಮೂಲಕ ಪುರುಷ ಪ್ರಭುತ್ವದ ಶ್ರೇಷ್ಟತೆಯನ್ನು ಅವರ ಮಾನ್ಯತೆಯನ್ನೂ ಅಲ್ಲಗಳೆಯುವುದರ ಜೊತೆಯಲ್ಲಿಯೇ ತನ್ನ ಸ್ಥಿತಿಯನ್ನು ವಾಸ್ತವದ ಅರಿವಿನೊಂದಿಗೆ ಸ್ವೀಕರಿಸುವ 'ಅರಿಯುವ' ಪ್ರಯತ್ನವಿದೆ. ಹೆಣ್ಣಿನ ಪರಾವಲಂಬನೆಗೆ ಅವಕಾಶಗಳ ಕೊರತೆ, ಪುರುಷ ಹಿತಾಸಕ್ತಿಯನ್ನು ಪ್ರಧಾನವಾಗಿ ಗುರುತಿಸುವ ಸಂದರ್ಭದಲ್ಲಿ ಚ.ಸರ್ವಮಂಗಳ ತಾನು ಇರುವ ಸ್ಥಿತಿಯನ್ನು ಮತ್ತೆ ಮತ್ತೆ ಪರಾಮರ್ಶನೆಗೆ ಒಳಪಡಿಸುವ, ಹೊಸದನ್ನು ಅರಿಯುವ ಪ್ರಯತ್ನದಲ್ಲಿ ತೊಡಗಿದ್ದಾರೆ. ಶ್ರೇಷ್ಟಗುಣಗಳು ಎಂದು ಕರೆಯಲ್ಪಡುವ ತ್ಯಾಗ, ವೈರಾಗ್ಯಗಳ ಹಿಂದಿನ ಸ್ವಾರ್ಥದ ಪರಾಕಾಷ್ಟೆಯನ್ನು ಹಿಡಿದಿಡುತ್ತಾರೆ. ಆದರೆ ತಿಕ್ಕಾಟದ, ಹೇಸಿಗೆಯ ವಾತಾವರಣವಾದರೂ ತನ್ನ ಬದುಕು ತನಗೊಂದು ನೆಲೆಯನ್ನೂ, ಸಂತೋಷವನ್ನೂ, ತಂದುಕೊಡುತ್ತದೆ ಎಂಬ ಭಾವ ಈ ಕವನದಲ್ಲಿದೆ. ಈ ಲೇಖಕಿ ವ್ಯವಸ್ಥೆಯೊಂದಿಗೆ ಮುಖಾಮುಖಿಯಾಗುತ್ತಲೇ ವ್ಯವಸ್ಥೆಯ ಶ್ರೇಷ್ಟತೆಯ ಕಲ್ಪನೆಯನ್ನು ಅಲ್ಲಗಳೆಯುವ ಮೂಲಕ ತನ್ನತನದೊಂದಿಗೆ ಅನುಸಂಧಾನಕ್ಕೆ ಮುಂದಾಗಿದ್ದಾರೆ.

ನಾಗರೀಕತೆಯ ಸಂದರ್ಭದಲ್ಲಿ ಗಂಡು ಹೆಣ್ಣಿನ ವರ್ತನೆಗೆ ಸಂಬಂಧಿಸಿದಂತೆ ನಿರ್ದಿಷ್ಟ ಗುಣಗನ್ನು ಹೇರುವುದರ ಮೂಲಕ ಗಂಡು ಮತ್ತು ಹೆಣ್ಣಿಗೆ ಸಂಬಂಧಿಸಿದಂತೆ ಪ್ರತ್ಯೇಕ ಗುಣ ಸ್ವಭಾವಗಳನ್ನು ಆರೋಪಿಸಲಾಗಿದೆ. ಸಹನೆ, ತಾಳ್ಮೆ, ತ್ಯಾಗ ಮನೋಭಾವನೆಗಳನ್ನು ಹೆಣ್ಣು ಗುಣಗಳೆಂದೂ, ಗಡುಸುತನ, ಧೈರ್ಯ, ಮುನ್ನುಗುವ ಮನೋಭಾವಗಳನ್ನು ಹೆಣ್ಣು ಗುಣಗಳೆಂದು ಗುರುತಿಸಲಾಗಿದೆ. ಹೆಣ್ಣು ಗುಣಗಳೆಂದು ಕರೆಯಲ್ಪಡುವ ಅಂಶಗಳಂದ ಅವಳಿಗೆ ಅನುಕೂಲಗಳಿಗಿಂತ ಅನಾನುಕೂಲಗಳೇ ಹೆಚ್ಚು. ಈ ಗುಣ ಸ್ವಭಾವಗಳು ಗಂಡು ಹೆಣ್ಣಿನಲ್ಲಿ ಜನ್ಮದತ್ತವಾಗಿ ಬಂದವಲ್ಲವಾದರೂ ಹಾಗೆ ಬದುಕುವಂತೆ ಹಾಗೂ ನಡೆದುಕೊಳ್ಳುವಂತೆ ಅಪೇಕ್ಷಿಸಲಾಗುತ್ತದೆ. ಈ ಗುಣಸ್ವಭಾವಗಳಂದ ಹೊರನಡೆದ ಗಂಡಿಗೆ ಹೆಚ್ಚಿನ ಆತಂಕಗಳಲ್ಲವಾದರೂ ಈ ನಡವಳಿಕೆಯಿಂದ ಹೆಣ್ಣು ಬಿಡುಗಡೆ ಪಡೆಯುವುದು ಸಾಧ್ಯವೇ ಇಲ್ಲದಂತೆ ನಿರ್ಬಂಧಗಳನ್ನು ಹೇರಲಾಗಿದೆ. ಹಾಗೂ ಹಾಗೆ ನಡೆದುಕೊಳ್ಳದಂತೆ ಎಚ್ಚರ ವಹಿಸಲಾಗುತ್ತದೆ. ಆಧುನಿಕ ಮಹಿಳಾ ಕಾವ್ಯ ಈ ಅಂಶವನ್ನು ಮುಖ್ಯವಾಗಿ ಗಮನಿಸುವುದರೊಂದಿಗೆ ವ್ಯವಸ್ಥೆಯಿಂದ ಹೇರಲ್ಪಟ್ಟ ಈ ಗುಣ ಸ್ವಭಾವಗಳು ಹೆಣ್ಣು ಗಂಡು ಇಬ್ಬರೂ ಕೂಡ ತಮ್ಮ ಸಹಜ ಭಾವನೆಗಳನ್ನು ವ್ಯಕ್ತಪಡಿಸದಂತೆ ತಡೆಯೊಡ್ಡುತ್ತದೆ ಎಂಬುದನ್ನು ಸ್ಪಷ್ಟಪಡಿಸುತ್ತವೆ. ಅಲ್ಲದೆ ಈ ಬಗೆಯ ಗಂಡು ಹಾಗೂ ಹೆಣ್ಣುಗುಣಗಳು ಪ್ರತ್ಯೇಕವಾಗಿರಲು ಸಾಧ್ಯವಿಲ್ಲ,

ಅವು ರೂಢಿಯಿಂದ ಬಂದವುಗಳು, ಆದರೆ ಒಂದಕ್ಕೊಂದು ಪೂರಕವಾಗಿದ್ದರೆ ಮಾತ್ರ ಬದುಕು ಹಸನಾಗಲು ಸಾಧ್ಯ ಎಂಬುದನ್ನು ಈ ಕವನ ಸ್ಪಷ್ಟಪಡಿಸುತ್ತದೆ.

ಅವನು ಬಸವ ಅವಳು ಕಮಲ
ಬಸವ ಅಪ್ಪನೊಂದಿಗೆ ಮಾಡುವ
ತೋಟದ ಕೆಲಸ.
ಕಮಲ ಅಮ್ಮನೊಂದಿಗೆ ಮಾಡುವಳು
ಅಡಿಗೆ ಕೆಲಸ
ಕಮಲ ಒಲೆ ಊದುವಳು
ಕುಳಿತು.
ಬಸವ ಗಿಡಕ್ಕೆ ನೀರು ಹೊಯ್ಯುವ
ನಿಂತು.
ಕಮಲ ಕುಳಿತು ಮಾಡುವುದನ್ನು
ನಿಂತು ಮಾಡುವ ಬಸವ.
ಬಸವ ಚಿಣ್ಣಿದಾಂಡು ಆಡುವ
ತಲೆ ಎತ್ತೋ ಹುಡುಗ
ಕಮಲ ಕುಂಟೆಬಿಲ್ಲೇ ಆಡುವ
ತಲೆ ತಗ್ಗೋ ಹುಡುಗಿ'
ಓದುತ್ತಲೇ ಇದನ್ನ ಹೀಗೆ
ದೊಡ್ಡವಳಾದೆ.
ಗೊತ್ತಾಗಿದೆ ಈಗ.
ಬಸವನಿಗೆ ಕೋಡಿದ್ದರೇನು?
ಕಮಲ ಅರಳುವುದಿಲ್ಲವೇ ಬೆಳೆಯುತ್ತ?
ಅರಳಿದ ಕಮಲಳ ಮುಂದೆ ಜಿನುಗಿ
ಸೋರುವುದಿಲ್ಲವೇ ಕೋಡಿನ ಬಿಗುಮಾನ?
ಬಸವನ ಗಂಡಸ್ತನಕ್ಕೆ ಒತ್ತಿ ಮುದ್ರೆ
ಚಲಾವಣೆಗೆ ತರೋಳು ಕಮಲ ಅಲ್ಲವೆ? [೮] ಎನ್ನುವಲ್ಲಿ ವ್ಯವಸ್ಥೆ ಗಂಡು ಹೆಣ್ಣನ್ನು ಬೆಳಸಿರುವ ಕ್ರಮವನ್ನು ಕುರಿತು ಆಲೋಚಿಸುತ್ತಲೇ ಅದನ್ನು ಮೀರುವ ವಿಧಾನವನ್ನೂ ಕೂಡ ತೆರೆದಿಡುತ್ತದೆ. ಬಸವನಿಗೆ ಕೋಡಿದ್ದರೇನು ಕಮಲ ಅರಳುವುದಿಲ್ಲವೇ ಬೆಳೆಯುತ್ತ ಎನ್ನುವ ಮಾತು 'ಬಸವ' 'ಕಮಲ' ಇಬ್ಬರ ಕೆಲಸ, ಕಾರ್ಯ ಬೇರೆ ಬೇರೆಯಾದರೂ ಸಮಾನ ಶ್ರಮ ಆಸಕ್ತಿಯಿಂದ ಕೂಡಿದವು ಎಂಬುದನ್ನು ತಿಳಿಸುತ್ತದೆ. ಬಸವನ ಗಂಡಸ್ತನಕ್ಕೆ ಮುದ್ರೆ ಒತ್ತಿ ಚಲಾವಣೆಗೆ ತರೋಳು ಕಮಲ ಎನ್ನುವ ಮಾತು ಗಂಡಿನ ಶ್ರೇಷ್ಟತೆಯ ಭ್ರಮೆಯನ್ನು ಅಲ್ಲಗಳೆಯುತ್ತಲೇ ಸಮಾನ ಬದುಕಿನ ಆಶಾವಾದವನ್ನು ಎತ್ತಿಹಿಡಿಯುತ್ತದೆ.

ಹಿಂದಿನಿಂದಲೂ ಹೆಣ್ಣಿನ ಲೈಂಗಿಕತೆಯನ್ನು ನಿಯಂತ್ರಣಗೊಳಿಸಲು ಹಲವು ನಿರ್ಬಂಧಗಳನ್ನು ವಿಧಿಸಲಾಗಿತ್ತು. ಹೆಣ್ಣು ಕಾಮ, ಲೈಂಗಿಕ ಅಪೇಕ್ಷೆಗಳನ್ನು ಕುರಿತು ಮಾತನಾಡುವುದೇ ನಿಷಿದ್ಧವೆಂಬ ಮನೋಭಾವನೆ ಬಲವಾಗಿದ್ದ ಸಂದರ್ಭದಲ್ಲಿ ಲೈಂಗಿಕತೆಯನ್ನು ಕುರಿತಾದ ಮಹಿಳಾ ಅಭಿವ್ಯಕ್ತಿ ವ್ಯವಸ್ಥೆಯೊಂದಿಗಿನ ಜಟಾಪಟಿಯ, ಹೆಣ್ಣಿನ ಸಹಜ ಅಪೇಕ್ಷೆಯನ್ನು ಕುರಿತಾದ ಹಲವು ಸೂಕ್ಷ್ಮಗಳನ್ನು ತೆರೆದಿಡುತ್ತದೆ. ಆಧುನಿಕ ಮಹಿಳಾ ಕಾವ್ಯ ಗಂಡಿನಂತಯೇ ಹೆಣ್ಣಿಗೂ ಕೂಡ ಲೈಂಗಿಕತೆಯನ್ನು ಕುರಿತಾದ ಸಹಜ ಬಯಕೆ ಆಸಕ್ತಿಗಳಿರುವುದನ್ನು ಗುರುತಿಸುತ್ತದೆ. ಅಲ್ಲದೆ ತನ್ನ ದೇಹ ತನ್ನದು. ಅದರ ಬಳಕೆ ಕೂಡ ತನ್ನ ಅಪೇಕ್ಷೆಗೆ ಸಂಬಂದಿಸಿದ್ದು ಎಂಬ ಅಂಶದ ಕಡೆಗೆ ಒತ್ತು ನೀಡುತ್ತದೆ. ವೈದೇಹಿ, ಶಶಿಕಲಾ ವೀರಯ್ಯಸ್ವಾಮಿ ಮುಂತಾದವರು ಇದನ್ನು ಮುಚ್ಚಿ ಹೇಳಿದರೆ ಪ್ರತಿಭಾ, ಎನ್.ವಿ. ಭಾಗ್ಯಲಕ್ಷ್ಮಿ, ಚ. ಸರ್ವಮಂಗಳ ಮುಂತಾದವರು ಮಾತ್ರ ಲೈಂಗಿಕತೆಯನ್ನೂ ಒಳಗೊಂಡತೆ ಹೆಣ್ಣಿನ ಪ್ರೀತಿ, ಪ್ರೇಮ,

ಪ್ರಣಯದ ಭಾವಗಳನ್ನು ಯಾವುದೆ ಅಂಜಿಕೆ ಮುಜುಗರಗಳಿಲ್ಲದೆ ಬಿಡುಬೀಸಾಗಿ ಹೇಳಬಲ್ಲರು. ಇವರಲ್ಲಿ ಸಮಾನತೆ ಎನ್ನುವುದು ಹೆಣ್ಣು ಗಂಡು ಎಂಬ ಬೇಧಭಾವವಿಲ್ಲದೆ ಮಾನವ ಸಹಜ ಬಯಕೆಗಳ ಪೂರೈಕೆ ಮತ್ತು ಮಾನ್ಯತೆಯ ನೆಲೆಯಲ್ಲಿ ಮೂಡಿಬಂದಿವೆ. ಆದರೆ ವ್ಯವಸ್ಥೆ ವಿವಾಹ ಬಂಧನಕ್ಕೆ ಒಳಪಡಿಸುವುದರ ಮೂಲಕ ಹೆಣ್ಣಿನ ಲೈಂಗಿಕತೆಯನ್ನು ಗಂಡನಿಗೆ ಮೀಸಲುಗೊಳುಸುವ ಕ್ರಮ ಒಂದಾದರೆ ವಿವಾಹೇತರ ಲೈಂಗಿಕತೆಯನ್ನು 'ಬಹಿಷ್ಕರಿಸುವ'ಅವರನ್ನು ವೇಷ್ಯೆ, ಸೂಳೆ, ಎಂದು ಗುರುತಿಸುವ ಮೂಲಕ ಹೆಣ್ಣಿನ ಲೈಂಗಿಕತೆಯನ್ನು ನಿಯಂತ್ರಣಗೊಳಿಸುವ ಕ್ರಮ ಮತ್ತೊಂದು ಬಗೆಯದು. ಆದರೆ ಮಹಿಳಾ ಕಾವ್ಯ ಲೈಂಗಿಕತೆಯನ್ನು ಪ್ರಕೃತಿ ಸಹಜ ಕ್ರಿಯೆ ಎಂದು ಭಾವಿಸುತ್ತದೆ. ಜೀವ ಕಾಮದ ಬಯಕೆಯ ನಿರಂತರತೆಯನ್ನೂ, ಸರ್ವವ್ಯಾಪಕತೆಯನ್ನೂ ಹಿಡಿದಿಡುತ್ತದೆ.

ಕ್ಷಣಕ್ಕೊಂದು ಪ್ರಾಣಿಯಾಗಿ
ಬಗೆಬಗೆದು ಕಾಡುತ್ತದೆ.
ನನ್ನ ಸುತ್ತ ಹುತ್ತ ಕಟ್ಟಿ
ಸಾಯಿಸುತ್ತಿದೆ ಜೀವಂತವಾಗಿ
ಬದುಕಿಗಂಟಿಕೊಂಡು ಬಂದ
ಇದರಿಂದಲೇ ಇನ್ನೂ ಬದುಕಿರುವೆ. ೧೯

ಮಹಿಳಾ ಕಾವ್ಯದ ವಿಶಿಷ್ಟಯತೆ ಅಡಗಿರುವುದೇ ಈ ಬಗೆಯ ಧೋರಣೆಯಲ್ಲಿ, ಯಾವುದು ತನ್ನನ್ನು ಹಿಂಸಿಸುತ್ತದೆಯೋ, ಯಾವುದು ಬಂಧನದ ಸಾಧನವಾಗಿದೆಯೋ, ಅದೇ ಹೆಣ್ಣಿನ ಆಶ್ರಯ ಸ್ಥಾನ ಕೂಡ ಆಗಿದೆ.ಪಿತೃ ಪ್ರಧಶಾನ ಮೌಲ್ಯವ್ಯವಸ್ಥೆ ಲೈಂಗಿಕತೆಯನ್ನು ಸಂತಾನೋತ್ಪತ್ತಿಯ ಮಾಧ್ಯಮವನ್ನಾಗಿ ಮಾತ್ರ ವಿಶ್ಲೇಷಿಸಿದ್ದರೆ ಮಹಿಳಾ ಕಾವ್ಯ ಲೈಂಗಿಕತೆಯನ್ನು ಬದುಕು ಮತ್ತು ಸಾವಿನ ಸಂಕೇತವಾಗಿ ಗ್ರಹಿಸುತ್ತದೆ. ಹಾಗಾಗಿಯೇ ಮಹಿಳಾ ಕಾವ್ಯದಲ್ಲಿ ಪ್ರೇಮ ಮತ್ತು ಕಾಮಗಳನ್ನು ಪ್ರತ್ಯೇಕಿಸಿ ನೋಡಲು ಸಾಧ್ಯವಿಲ್ಲ. ಶಶಿಕಲಾ ವೀರಯ್ಯಸ್ವಾಮಿ ಪ್ರೀತಿಯಿಂದ, ಪ್ರೀತಿಯನ್ನು ಪಡೆಯುವ ಮೂಲಕವೇ ಸಮಾನತೆಯನ್ನು ಪಡೆಯುವ ಹಂಬಲವನ್ನು ವ್ಯಕ್ತಪಡಿಸುತ್ತಾರೆ.

ಹಿಂದೆ ನಾನು ನಿನ್ನನ್ನು ಪ್ರೀತಿಸಿದ್ದೆ
ಈಗಲೂ ಪ್ರೀತಿಸುತ್ತಿದ್ದೇನೆ
ನೀ ದೂಡಿ ತಿರಸ್ಕರಿಸಿದರೂ
ಮುಂದೂ ಪ್ರೀತಿಸುತ್ತಲೇ ಇರುತ್ತೇನೆ. ೨೦

ನಾ ಮೇಲಿನವನು ಬಲು ದೊಡ್ಡವನು ಎಂದು
ಮೆರೆದಾಡಬೇಡ ಗೆಳೆಯ
ನಿನಗಿಂತ ಮಿಗಿಲವರು ಇದ್ದಾರು ಬುವಿಯಲ್ಲಿ
ಸುಳ್ಳು ಭ್ರಮೆಯಲಿ ನೀ ಮುಳುಗಬೇಡ ೨೧

ಗಂಡಿನ ಅಹಂಮ್ಮಿಕೆಯ, ಹಿರಿತನದ ಬುಡಕ್ಕೆ ಕೊಡಲಿ ಪೆಟ್ಟನ್ನು ನೀಡುವಚಿತಹ ಕವನ ಇದಾಗಿದೆ. ಹಿರಿತನದ ಹೆಮ್ಮೆಯ ಅಹಂಮಿಕೆಯಲ್ಲಿ ಮೆರೆಯುತ್ತಿರುವ ಗಂಡು ತನಗಿಂತ ಶ್ರೇಷ್ಟರ ಬಗ್ಗೆ ಅರಿಯುವ ಅವಶ್ಯಕತೆ ಇದೆ ಎಂಬುದನ್ನು ಕವನ ಎತ್ತಿಹಿಡಿಯಲು ಪ್ರಯತ್ನಿಸುತ್ತದೆ. ಜೊತೆಗೆ ಅಧಿಕಾರ ಶಾಹಿ, ಆಡಳಿತ ವರ್ಗದ ಧರ್ಪ, ದುಮ್ಮಾನಗಳನ್ನೂ ಕೂಡ ಇಲ್ಲಿ ವಿರೋಧಿಸಲಾಗಿದೆ.

ಬಿ.ಟಿ.ಲಲಿತಾ ನಾಯಕ್‌ರವರ ಮುಂಜಾವು ಪುರುಷ ಪ್ರಧಾನ ವ್ಯವಸ್ಥೆ ಕಾಲದಿಂದ ಕಾಲಕ್ಕೆ ಬೇರೆ ಬೇರೆ ಮಾದರಿಗಳಲ್ಲಿ ಹೆಣ್ಣಿನ ಮೇಲೆ ಮೌಲ್ಯ ವ್ಯವಸ್ಥೆಯನ್ನು ಜಾರಿಗೊಳಿಸಿದ ವಿಧಾನವನ್ನು ಸ್ಪಷ್ಟವಾಗಿ ಪ್ರತಿಬಿಂಬಿಸುತ್ತದೆ. 'ನರನರಗಳಲ್ಲಿ ಸ್ವರ್ಗ ಸುಖವೆಂಬ ಕನಸ ಹರಿಸಿದಿರಿ' ಎನ್ನುವ ಸಾಲು ಹೆಣ್ಣಿನ ಒಳಿತಿನ ರೂಪದಿಂದ ಬಿತ್ತಲಾದ ಮೌಲ್ಯವ್ಯವಸ್ಥೆಯ ಹುನ್ನಾರಗಳನ್ನು ತಿಳಿಸಲು ಪ್ರಯತ್ನಿಸುತ್ತದೆ. ಆದರೆ ಇಂತಹ ಸ್ಥಿತಿ ಹೆಚ್ಚು ದಿನಗಳ ಕಾಲ ಉಳಿಯಲಾರದು ಎಂಬುದನ್ನು ಕೂಡ ಇದೇ ಕವನ ತಿಳಿಯಪಡಿಸುತ್ತದೆ. 'ಆಗ ನಿದ್ದೆ ಮಂಪರು ನಮಗೆ ಜೋರಾಗಿ ಕವಿದಿತ್ತು ನಿಮ್ಮ ಕಣ್ಣು ಮುಚ್ಚಾಲೆಯಾಟ ಭರದಿ ನಡೆದಿತ್ತು'; ಆದರೆ ಅಂದಿನ ಸ್ಥಿತಿ ಇಂದು ಇಲ್ಲ. 'ಬಾಯಿ ಬಂದಿದೆ ನಮಗೆ ಹೊಸ ದೃಷ್ಟಿ ಕೂಡ. ನಮ್ಮೆದೆಯ ಮೇಲಿಡುವ ನಿಮ್ಮ ಕಾಲಿಗೆ ಪೂಜೆ ಸಲ್ಲಬಹುದೆಂಬ ಕನಸ ಕಾಣದಿರಿ ನೀವು ಬರುತ್ತಿದ್ದೇವೆ ಬಿರುಗಾಳಿಯಾಗಿ ಗುಡುಗಾಗಿ, ಸಿಡಿಲಾಗಿ ಇನ್ನು ತಡೆಯಲಾರಿರಿ ನಮ್ಮ ಸರಿದು ನಿಲ್ಲಿ! ಎನ್ನುವಲ್ಲಿ ಹಿಂದಿನಂತೆ ಇಂದು ನಮ್ಮನ್ನು ಸುಲಭವಾಗಿ ಮೋಸಗೊಳಿಸಲು ಸಾಧ್ಯವಿಲ್ಲ ಎಂಬ ಅಂಶ ಪ್ರಧಾನವಾಗಿ ಕಂಡುಬರುತ್ತದೆ. ಇದುವರೆಗೂ ಒಂದು ಬಗೆಯ ವಿಸ್ಮೃತಿಗೆ ಒಳಗಾಗಿದ್ದ ಸ್ತ್ರೀ ಸಮುದಾಯ ಇಂದು ಜಾಗೃತಗೊಂಡಿದೆ. ಈ ಜಾಗೃತಿ ತನ್ನ ಸ್ವಂತಿಕೆಯನ್ನು ಕಂಡು ಕೊಳ್ಳುವ ಹೋರಾಟಕ್ಕೆ ಹೊಸ ಅರಿವನ್ನೂ, ಹೊಸ ನೋಟವನ್ನು ಕಟ್ಟಿ ಕೊಡಲು ಪ್ರಯತ್ನಿಸುತ್ತದೆ. ಬಡತನ, ಅಸಹಾಯಕತೆ ಹೆಣ್ಣಿನ ಶೋಷಣೆಗೆ ಕಾರಣವಾಗಿರುವುದನ್ನು ಬಿ.ಟಿ.ಲಲಿತಾನಾಯಕ್‌ರವರ 'ನಂರೂಪ್ಲಿ' ಕವನದಲ್ಲಿ ಗುರುತಿಸಬಹುದು.

ಹೆಣ್ಣಿನ ಸೃಜನಶೀಲತೆಯನ್ನೂ, ಅವಳ ಸೃಷ್ಟಿಶಕ್ತಿಯನ್ನೂ ಪುರುಷ ಪ್ರಧಾನ ವ್ಯವಸ್ಥೆ ಸರಿಯಾಗಿ ಗ್ರಹಿಸಲಾರದೆ ಸೂಲುತ್ತಿರುವುದು ಒಂದೆಡೆಯಾದರೆ ಮತ್ತೊಂದೆಡೆ ಅದನ್ನು ಸರಿಯಾಗಿ ಮೌಲ್ಯಮಾಪನ ಮಾಡದೆ ಅದಕ್ಕೆ ಅಪಚಾರವೆಸಗುತ್ತಿರುವುದು ಮತ್ತೊಂದು ಬಗೆಯ ರಾಜಕಾರಣವಾಗಿದೆ. ಇದರಿಂದಾಗಿ ಹೆಣ್ಣು ಏನನ್ನೂ ಪ್ರತಿ ನಿರ್ಮಿಸಲಾರದವಳು, ಶಕ್ತಿಹೀನಳು ಎಂದು ಗರುಸಿಸುವ ಗಂಡಿನ ಹುನ್ನಾರಗಳಿಗೆ ಮತ್ತಷ್ಟು ಪುಷ್ಟಿ ಸಿಕ್ಕಂತಾಗುತ್ತಿದೆ. ದೃಷ್ಟಿ ಕವನ ಇದಕ್ಕೊಂದು ಉತ್ತಮ ನಿದರ್ಶನ. ಇಲ್ಲಿ ಸ್ತ್ರೀವಾದಿ ಚಿಂತನೆ ಸಮಾನತೆಯನ್ನು ಪಡೆಯುವ, ಆ ಮೂಲಕ ಬದುಕನ್ನು ಪರಿಪೂರ್ಣವಾಗಿಸಿಕೊಳ್ಳುವ, ಯಾವ ಬೇಧ ಭಾವಗಳಿಲ್ಲದೆ ಬದುಕನ್ನು ಅರಿಯುವ ವಿಧಾನದ್ದಾಗಿದೆ.

**೬.೩ ಸ್ತ್ರೀ ಸಂಸ್ಕೃತಿ ಶೋಧ ಮತ್ತು ಪುನರ್ರಚನೆ**

ಕನ್ನಡದ ಸ್ತ್ರೀವಾದಿ ಚಿಂತನೆ ಬೆಳೆದು ಬಂದ ಬಗೆಗಳಲ್ಲಿ ಹೆಣ್ಣಿನ ಅಸ್ತಿತ್ವದ ನೆಲೆಗಳನ್ನು ಹುಡುಕುವ ಮತ್ತು ಪುನರ್ರಚಿಸುವ ವಿಧಾನ ಕೂಡ ಒಂದು. ಮೊದಲ ತಲೆಮಾರಿನ ಲೇಖಕಿಯರ ಆಲೋಚನೆ ಹಾಗೂ ಕಾರ್ಯವಿಧಾನಗಳು ಈ ನಿಟ್ಟಿನಲ್ಲಿ ಸಾಗಿಬಂದಿವೆ. ಇಲ್ಲಿ ಸ್ತ್ರೀ ಸಂಸ್ಕೃತಿ ಶೋಧವನ್ನು ಎರಡು ರೀತಿ ವಿವರಿಸಲು ಸಾಧ್ಯವಿದೆ. ಒಂದು ಹೆಣ್ಣಿನಲ್ಲಿ ಅಡಕವಾಗಿರುವ ಸಾಂಸ್ಕೃತಿಕ ಅನನ್ಯತೆಯ ಬೇರುಗಳನ್ನು ಗುರುತಿಸುವುದು. ಎರಡನೆಯದು ಪುರಾತನ ಪರಂಪರೆಯೊಂದಿಗೆ ಬೆಸೆದುಕೊಂಡಿರುವ ಹೆಣ್ಣಿನ ಸಾಂಸ್ಕೃತಿಕ ಅನನ್ಯತೆಯ ನೆಲೆಗಳನ್ನು ಗುರುತಿಸುವುದು ಮತ್ತು ಮಾನ್ಯ ಮಾಡುವುದು.

ಮಹಿಳಾ ಕಾವ್ಯ ಹೆಣ್ಣಿನ ಶಕ್ತಿ, ಸಾಮರ್ಥ್ಯ, ಅಸ್ತಿತ್ವದ ನೆಲೆಗಳನ್ನು ನಮ್ಮ ಸಂಸ್ಕೃತಿಯ ಒಳರಚನೆಗಳ ಮೂಲಕವೇ ಕಟ್ಟಿಕೊಡಲು ಪ್ರಯತ್ನಿಸುತ್ತದೆ. ಚರಿತ್ರೆ ಪುರಾಣಗಳಲ್ಲಿ ದಾಖಲಾಗಿರುವ ಹೆಣ್ಣಿನ ಅಸ್ತಿತ್ವವನ್ನು ಗುರತಿಸುವ, ಅದಕ್ಕೊಂದು ಮಾನ್ಯತೆಯನ್ನು ನೀಡುವ ವಿಧಾನ ಇಲ್ಲಿ ನಡೆದಿದೆ. ಪುರಾಣದ ಸ್ತ್ರೀ ಪಾತ್ರಗಳನ್ನು ಆಧುನಿಕತೆಗೆ ಮುಖಾಮುಖಿಯಾಗಿಸುವುದರೊಂದಿಗೆ ಹೆಣ್ಣಿನ ಶಕ್ತಿ ಮತ್ತು ಸಾಮರ್ಥ್ಯವನ್ನು ಗುರುತಿಸುವ ವಿಧಾನ ಇಲ್ಲಿದೆ. ಅಹಲ್ಯೆ, ಅಮೃತಮತಿ, ಸೀತ, ಸಾವಿತ್ರಿ, ದ್ರೌಪದಿಯರನ್ನು ಕುರಿತಾದ ಸ್ವಗತದ ಕವನಗಳು ಹೆಣ್ಣನ್ನು ಹೆಣ್ಣಾಗಿ ನೋಡುವ ಅವಳ ಮನಸ್ಸನ್ನು ಬಿಚ್ಚಿಡುವ ಪ್ರಯತ್ನವನ್ನು ಮಾಡುತ್ತವೆ. ಎನ್.ವಿ.ಭಾಗ್ಯಲಕ್ಷ್ಮಿ ಅವರ 'ದ್ರೌಪದಿ' ಕವನ ವ್ಯವಸ್ಥೆ ರೂಪಿಸಿರುವ ಸಾಂಸ್ಕೃತಿಕ ಕಟ್ಟು ಪಾಡುಗಳಿಗೆ ಮುಖಾಮುಖಿಯಾಗುವ ಮೂಲಕ ಹೆಣ್ಣಿನ ಅನನ್ಯತೆಯನ್ನು ಗುರುತಿಸಿದ್ದಾರೆ. ಲೇಖಕಿಯರು ಪುರಾಣ ಪಾತ್ರಗಳಾದ ಸೀತೆ, ಸಾವಿತ್ರಿ, ಅಹಲ್ಯೆ, ಶಕುಂತಲೆ ಮುಂತಾದ ಪಾತ್ರಗಳನ್ನು ಪುನರ್ರಚಿಸುವ ಮೂಲಕ ಹೆಣ್ಣಿನ ಆಂತರ್ಯವನ್ನು ಗುರುತಿಸಲು ಪ್ರಯತ್ನಿಸಿದ್ದಾರೆ. ಜೊತೆಗೆ ದುರ್ಗಿ, ಚಾಮುಂಡಿ, ಗೌರಿ ಮುಂತಾದ ಸ್ತ್ರೀ ಪಾತ್ರಗಳನ್ನು ಹೆಣ್ಣಿನ ಶಕ್ತಿಯನ್ನು ವ್ಯವಸ್ಥೆ ತನ್ನ ಅಧೀನಕ್ಕೆ ಒಳಪಡಿಸಿಕೊಂಡಿರುವ ವಿಧಾನವನ್ನು ಚರ್ಚಿಸುತ್ತಲೇ ಹೆಣ್ಣು ಅದರಿಂದ ಹೊರಬರುವ ಶಕ್ತಿ ಸಾಮರ್ಥ್ಯಗಳೆಲ್ಲವನ್ನೂ ಹೊಂದಿದ್ದಾಳೆ ಎಂಬುದರ ಕಡೆಗೆ ಗಮನ ಸೆಳೆಯುತ್ತದೆ. ಗುರುತಿಸುವ ಮೂಲಕ ನಮ್ಮ ಸಂಸ್ಕೃತಿಯಲ್ಲಿನ ಸ್ತ್ರೀ ಪರವಾದ ಆಲೋಚನೆಗಳನ್ನು ಎತ್ತಿಹಿಡಿದಿದ್ದಾರೆ. ಜೊತೆಗೆ ಪುರುಷ ಶ್ರೇಷ್ಟ ಮಾದರಿಗಳ ನಿರಾಕರಣೆ ಕೂಡ ಇಲ್ಲಿದೆ. ಬಿ.ಟಿ.ಲಲಿತಾನಾಯಕ್ ಸಖಿಯರ ಸಂವಾದ ಕವನದಲ್ಲಿ ಇದನ್ನು ಈ ರೀತಿ ಹಿಡಿದಿಟ್ಟಿದ್ದಾರೆ.

ಏನಾದರೂ ಆಗದಿರೋಣ ಕೇಳೆ
ದಶಕಂಠ ಪಂಚಪತಿಗಳ ದೂರವಿರಿಸೋಣ
ಒಂದೇ ತಲೆಯವನ
ಒಂದೇ ನೆಲೆಯವನ
ಒಂದೇ ಹೆಣ್ಣಿಗೊಲಿವವನ ಕೈ ಹಿಡಿಯೋಣ
ನಾವು ನಾವೇ ಆಗಿ ಉಳಿಯೋಣ; [33]

ಇಲ್ಲಿ ಪುರಾಣ ಪಾತ್ರ ಮಾದರಿಗಳ ಅನುಕರಣೆಗಿಂತ ತನ್ನತನವನ್ನು ತನ್ನ ಶಕ್ತಿ ಸಾಮರ್ಥ್ಯಗಳಿಂದಲೇ ಕಟ್ಟಿಕೊಳ್ಳುವ ಹಾಗೂ ತನಗಾಗಿಯೇ ತನ್ನ ಬದುಕನ್ನು ರೂಪಿಸಿಕೊಳ್ಳಬೇಕೆಂಬ ಆಶಯವೇ ಪ್ರಧಾನವಾಗಿದೆ. ಮಾದರಿ ಪಾತ್ರಗಳ ಹಿಂದೆ ಪುರುಷ ಪ್ರಧಾನ ಆಲೋಚನೆ ಹೇಗೆ ಕೆಲಸ ಮಾಡುತ್ತಿರುತ್ತದೆ ಎಂಬುದನ್ನು ಬಿ.ಟಿ.ಲಲಿತಾ ನಾಯಕ್‌ರವರ ಸಖಿಯರ ಸಂವಾದ ಅತ್ಯಂತ ಸಮರ್ಥವಾಗಿ ಚರ್ಚಿಸುತ್ತದೆ. ಹೆಣ್ಣು ತನ್ನ ಅಸ್ತಿತ್ವವನ್ನು ಗುರುತಿಸಿಕೊಳ್ಳಬೇಕಾದ ನೆಲೆಗಳನ್ನೂ, ಪುರುಷ ಪ್ರಭುತ್ವದ ಹಿಡಿತದಿಂದ ಹೊರಬರಬಹುದಾದ ಹಾದಿಗಳನ್ನು ಚರ್ಚಿಸುತ್ತಲೇ ಹೆಣ್ಣಿನ ಮುಂದಿನ ಹಾದಿ ಯಾವುದಾಗಿರಬೇಕು ಎಂಬುದನ್ನು ಈ ಕವನ ಎತ್ತಿ ಹಿಡಿಯುತ್ತದೆ

ಹೆಣ್ಣಿನ ಶಕ್ತಿ ಸಾಮರ್ಥ್ಯ, ಸ್ವಂತಿಕೆಯ ಹುಡುಕಾಟ, ಸಮಾನತೆಯ ಆಶಯ ಎಲ್ಲವನ್ನೂ ಕೂಡ ಪರಂಪರೆಯ ಬೇರುಗಳಿಂದಲೇ ಹೆಕ್ಕಿ ತೆಗೆಯುವ ವಿಧಾನ ಮಹಿಳಾ ಕಾವ್ಯದಲ್ಲಿ ಕಂಡು ಬರುತ್ತದೆ. ಹೆಣ್ಣಿನ ಶಕ್ತಿ ಸಾಮರ್ಥ್ಯವನ್ನು ತನ್ನ ಅಮ್ಮ, ಅಜ್ಜಿಯರ ಮೂಲಕ ಗುರುತಿಸುವುದುನ್ನು ಕಾಣಬಹುದು.

ಇದು ಒಂದು ರೀತಿಯಲ್ಲಿ ಹೆಣ್ಣು ವ್ಯವಸ್ಥೆಗೆ ಮುಖಾಮುಖಿಯಾಗುವ, ಅದನ್ನು ವಿರೋಧಿಸುವ, ಪರ್ಯಾಯವನ್ನು ಕಂಡುಕೊಳ್ಳುವ ವಿಧಾನ. ಪ್ರತಿಭಾ, ಡಿ.ಬಿ.ರಜಿಯಾ, ಮಮತ ಸಾಗರ್, ಸ. ಉಷಾ, ಶಶಿಕಲಾ ವೀರಯ್ಯಸ್ವಾಮಿ ಮುಂತಾದವರು 'ಅಮ್ಮನನ್ನು' ಪ್ರೀತಿ ಮತ್ತು ಶಕ್ತಿಯ ಸಾಕಾರ ರೂಪವಾಗಿ ಚಿತ್ರಿಸಿದ್ದಾರೆ. ಹೆಣ್ಣು ತನ್ನ ಅಸ್ಮಿತೆಯನ್ನು ಈ ಮೂಲಕ ಉಳಿಸಿಕೊಳ್ಳುವ ವಿಧಾನವನ್ನು ಲೇಖಕಿಯರು ಹಿಡಿದಿಟ್ಟಿದ್ದಾರೆ.

ಇಡೀ ವ್ಯವಸ್ಥೆಯನ್ನು ಹೆಣ್ಣಿನ ದೃಷ್ಟಿಕೋನದಿಂದ ನೋಡುವ ಹಾಗೂ ಅದನ್ನು ಪನರ್ರಚಿಸುವ ವಿಧಾನವನ್ನು ಮಹಿಳಾ ಕಾವ್ಯದಲ್ಲಿದೆ. ಇತಿಹಾಸ ಪುರಾಣದಿಂದ ಸಮಕಾಲೀನ ಬದುಕಿನ ಏಳುಬೀಳಿನವರೆಗೂ ಎಲ್ಲವನ್ನು ಮತ್ತೆ ಮತ್ತೆ ಚರ್ಚಿಸುವ ಮೂಲಕ ಅಲ್ಲಿನ ಹೆಣ್ಣಿನ ಅಸ್ತಿತ್ವದ ನೆಲೆಗಳನ್ನು ಗುರುತಿಸುವ ಪ್ರಯತ್ನವನ್ನು ಲೇಖಕಿಯರು ಮಾಡಿದ್ದಾರೆ. ಸವಿತಾ ನಾಗಭೂಷಣ್ ಅವರ **ಕೊಂಡ ಹಾಯುವಳು** ಕವನ ವ್ಯವಸ್ಥೆಯನ್ನು ಎದುರಿಸುವ ಶಕ್ತಿ ಹೆಣ್ಣಿನಲ್ಲಿ ಅಂತರ್ಗತವಾಗಿರುವುದನ್ನು ತಿಳಿಸುತ್ತದೆ.

ಮಹಿಳಾ ಕಾವ್ಯದಲ್ಲಿ ಮತ್ತೆ ಮತ್ತೆ ಚರ್ಚೆಯಾಗುವ ಸ್ವಗತದ ಮಾದರಿಗಳು ಹೆಣ್ಣಿನ ಆಂತರ್ಯವನ್ನು ಅರಿಯುವ, ಪರಂಪರೆಯ ಹಿಡಿತದಿಂದ ಅವಳನ್ನು ಬಿಡುಗಡೆಗೊಳಿಸುವ, ಮರೆಗೆ ಸರಿದಿರುವ ಹೆಣ್ಣಿನ ಅಸ್ಮಿತೆಯ ಚಹರೆಗಳನ್ನು ಗುರುತಿಸುವ, ಅಸ್ತಿತ್ವ ನೆಲೆಗಳನ್ನು ಬೆಳಕಿಗೆ ತರುವ ಕಾರ್ಯದಲ್ಲಿ ನಿರತವಾಗಿವೆ. ಹೆಣ್ಣಿನ ಶಕ್ತಿ ಸಾಮರ್ಥ್ಯವನ್ನು ಜಾನಪದೀಯ ಬೇರುಗಳಿಂದ ಗುರುತಿಸುವ ಕ್ರಮ ಮತ್ತೊಂದು ಬಗೆಯದ್ದು. ಹಳ್ಳಿಗಾಡಿನ ಸಾಮಾನ್ಯ ಹೆಣ್ಣಿನ ಅಂತಶಕ್ತಿ, ಸಾಮರ್ಥ್ಯವನ್ನು ಲಲಿತಾ ಸಿದ್ಧಬಸವಯ್ಯ ಸುಂದರವಾಗಿ ಹಿಡಿದಿಡುತ್ತಾರೆ. ಇವರ ಮಾಗಡಮ್ಮ ಉಘೇ ಉಘೇ ಕವನ ಶ್ರಮ ಸಂಸ್ಕೃತಿಯಲ್ಲಿ ಹೆಣ್ಣಿನ ಪಾತ್ರವನ್ನು ಸಮರ್ಥವಾಗಿ ಹಿಡಿದಿಡುತ್ತದೆ. ಪುರುಷ ಪ್ರಧಾನ ಮೌಲ್ಯ ವ್ಯವಸ್ಥೆಯ ಪರಿಮಿತಿಯೊಳಗೇ ದುಡಿಯುವ ಹೆಣ್ಣಿನ ಕೆಲಸದ ವಿಶೇಷತೆ, ಕೌಶಲ್ಯವನ್ನು ವಿವರಿಸುತ್ತಲೇ ಪುರುಷ ಪ್ರಧಾನ ವ್ಯವಸ್ಥೆ ಅದನ್ನು ನಿರ್ಲಕ್ಷ್ಯಕ್ಕೆ ಗುರಿಮಾಡಿರುವ ವಿಧಾನವನ್ನು ಈ ಕವನ ಚರ್ಚಿಸುತ್ತದೆ. ರಾಗಿ ಮಾಡುವ ಮಾಘಡಮ್ಮನ ಕೈ ಚಳಕ, ಕುಶಲತೆ ಯಾವ ಆಧುನಿಕ ತಂತ್ರಜ್ಞಾನಕ್ಕೂ ಸಾಧ್ಯವಿಲ್ಲ ಎಂಬುದನ್ನು ಸಾರುತ್ತಲೇ ಅದರ ಬಗೆಗೆ ಮೆಚ್ಚುಗೆ ಹಾಗೂ ಅಭಿಮಾನ ಹೆಣ್ಣಿನ ದುಡಿಮೆಯ ಅನನ್ಯತೆ ಸಂಕೇತವಾಗಿವೆ. ಒಂದೆಡೆ ಗಂಡಿನ ಹಿರಿಮೆಯ ಬಗೆಗೆ ಬೆಳೆದು ಬಂದಿರುವ ಸಾಂಪ್ರದಾಯಿಕ ನಂಬಿಕೆಯನ್ನು ಪ್ರಶ್ನಿಸುತ್ತಲೇ ಕಡೆಗೆ ಆ ಹಿರಿಮೆಯ ಹಿಂದಿನ ರಾಜಕಾರಣವನ್ನು ಬಯಲಿಗೆಳೆಯುತ್ತಾರೆ.

ಸುಮ್ಮನಿರ್ರೇ ರಾಗಿ ಮಾಡುವುದೇನು ಹುಡುಗಾಟವಾ
ಮಣ್ಣುಳಿದು ಬಿಟ್ಟು ಹಿಟ್ಟಿನ ದ್ವಾರಾ
ಗಂಡಸರ ಹೊಟ್ಟೆಗೋದರೇನು ಗತಿ
ಶಿವಶಿವಾ ಮಲಮೂತ್ರ ಬಂದು
ತಿಳಕೊಳ್ರೇ

. . . . . . . . . . . . . . . .

. . . .  
ಇಲ್ಲಿಗೆ ಮುಗಿದು  
ಆಮೇಲಿನದೇನಿದ್ದರೂ ಚೀಲದ ಬಾಯಿಪೊಲಿದು  
ಅಲ್ಲಲ್ಲಿಗೆ ಎತ್ತಿಟ್ಟು ಎಳೆಯುವ ಕೂಡಿಸುವ  
ಗಂಡಸರ ಸರಬರ [೨೭]

ಈ ಕವನ ಏಕಕಾಲಕ್ಕೆ ಗಂಡಿನ ಮಿತಿ ಹಾಗೂ ಹೆಣ್ಣಿನ ಶಕ್ತಿ ಎರಡನ್ನೂ ಕೂಡ ಒಟ್ಟಿಗೆ ಹಿಡಿದಿಡುತ್ತದೆ. ತಿಂದದ್ದನ್ನು ಅರಗಿಸಿಕೊಳ್ಳಲಾರದ ಗಂಡಿಗಾಗಿ ಹೆಣ್ಣು ಏನೆಲ್ಲಾ ಮಾಡಬೇಕಾಗಿದೆ ಎಂಬುದನ್ನು ಸೂಕ್ಷ್ಮವಾಗಿ ಚರ್ಚಿಸುತ್ತದೆ. ಈ ಶಕ್ತಿ ಹೆಣ್ಣಿನಲ್ಲಿ ಹಿಂದಿನಿಂದಲೂ ಅಂತರ್ಗತವಾಗಿ ಬಂದಿದೆ. ಆದರೆ ವ್ಯವಸ್ಥೆ ತನ್ನ ಅನುಕೂಲಕ್ಕಾಗಿ ಎಷ್ಟೆಲ್ಲಾ ಶ್ರಮ ವಹಿಸುವ ಹೆಣ್ಣಿಗಿಂತ ಕಡೆಯಲ್ಲಿ ಚೀಲದ ಬಾಯಿಪೊಲಿದು ಅಲ್ಲಲ್ಲಿಗೆ ಎತ್ತಿಟ್ಟು ಎಳೆಯುವ ಗಂಡಿಗೆ ಮಾನ್ಯತೆಯನ್ನು ನೀಡಿದೆ. ಆದರೆ ಲೇಖಕಿಗಂಡಿನ ಈ ರಾಜಕಾರಣದ ನಡುವೆಯೂ ಹೆಣ್ಣು ತನ್ನ ಶಕ್ತಿಯನ್ನು ಉಳಿಸಿಕೊಂಡು ಬಂದಿರುವ ಕಡೆಗೆ ಗಮನ ಸೆಳೆಯುತ್ತಾರೆ.

ಯಾವಾಗ ಹೆಣ್ಣಿನ ಶಕ್ತಿ ಸಾಮರ್ಥ್ಯ ತನಗಿಂತಲೂ ಮೇಲು ಎಂಬ ಅರಿವು ಗಂಡಿಗೆ ಆಗತೊಡಗಿತೋ ಆಗ ಹೆಣ್ಣನ್ನು ನಿಯಂತ್ರಿಸಲು ಬೇರೆ ಬೇರೆ ರೀತಿಯ ಹುನ್ನಾರಗಳನ್ನು ಹೆಣೆಯಲು ಪ್ರಾರಂಬಿಸಿದ. ಇದರ ಫಲವಾಗಿಯೇ ಹೆಣ್ಣು ಶೋಷಣೆಗೆ ಒಳಗಾಗಲು ಕಾರಣವಾಗಯಿತು. ಇದನ್ನು ಮಹಿಳಾ ಕಾವ್ಯ ಭಿನ್ನ ಭಿನ್ನ ಆಯಾಮಗಳಲ್ಲಿ ಚರ್ಚೆಗೆ ಒಳಪಡಿಸುತ್ತದೆ. ಮೇಲಿನ ಕವನ ಮಾಗಡಮ್ಮನ 'ಕುಶಲತೆ' ಮರೆಗೆ ಸರಿದಿರುವುದನ್ನು ತಿಳಿಸಿದರೆ ಮೀನಕಣ್ಣಿನ ಹೆಣ್ಣು ವ್ಯವಸ್ಥೆ ಹೆಣ್ಣನ್ನು ತನ್ನ ಅಧೀನಕ್ಕೆ ಒಳಪಡಿಸಿಕೊಳ್ಳಲು ಸಾಧ್ಯವಾಗದಾದಗ ಹೇಗೆ ಅವಳನ್ನು ತನ್ನ ಹಿಡಿತಕ್ಕೆ ತೆಗೆದುಕೊಳ್ಳುತ್ತದೆ ಎಂಬುದನ್ನು ತಿಳಿಸಿದ್ದಾರೆ.

ಉಟ್ಟು ಬಂದಳೋ ಬಂದಳೋ  
ಇಡೀ ಗಂಡಸುಕುಲವೇ ತಿರುಗಿ ನೋಡುವಂತೆ  
ನಿಂದಳೋ ನಿಂದಳೋ  
ನಡುಬಳಕನ್ನು ಗತ್ತಲ್ಲೇ ಸ್ಥಿರಗೊಳಿಸಿ ಏಕಾಗ್ನಿಯಂತೆ  
ಅಂದೇ ತೀರ್ಮಾನಿಸಿಬಿಟ್ಟ ಅವನು  
ಇಂಥವಳನ್ನಾಳುವುದು ನನ್ನ ಯೋಗ್ಯತೆಗೆ ಮೀರಿದ್ದು  
ಏನಿದ್ದರೂ ಕಾಲುಗಳ ಬಳಿ ಕುಳಿತು ಬೇಡಬಹುದಷ್ಟೆ  
ಅವಳಪ್ಪಣೆಯ ಅವಳೊಳು ಹೊಗಲು  
ಅಷ್ಟಕ್ಕೂ ಆಸ್ಪದ ದಕ್ಕಲಿಲ್ಲ ಅವನಿಗೆ, ಬೇಡ ಹೋಗಲಿ  
ವೀರಾಧಿ ವೀರ ಅವರಣ್ಣನಿಗೂ  
ಪಿಶಾಚನೀಚನ ನೈಚ್ಯಾನು ಸಂಧಾನ  
ಕೊನೆಗೂ ಆಸೆ ತೀರಿಸಕೊಂಡಿದ್ದು  
ಸಭೆಯಲ್ಲಿ ಸೆರಗೆಳೆದು [೨೮]

ಆದರೆ ಗಂಡಿನ ಈ ಬಗೆಯ ಶೋಷಣೆ ಎಲ್ಲಾ ಕಾಲದಲ್ಲೂ ನಡೆಯಲು ಸಾಧ್ಯವಿಲ. ಹೆಣ್ಣು ಅದಕ್ಕೆ ಪರ್ಯಾಯಗಳನ್ನು ಬೇರೆ ಬೇರೆ ರೀತಿಯಲ್ಲಿ ಕಂಡುಕೊಂಡಿದ್ದಾಳೆ. ಎನ್.ವಿ.ಭಾಗ್ಯಲಕ್ಷ್ಮಿ ವ್ಯವಸ್ಥೆಯ ಹುನ್ನಾರದ ನಡುವೆಯೂ ದ್ರೌಪದಿ ತನ್ನ ಇರುವಿಕೆಯನ್ನು ಕಂಡುಕೊಳ್ಳಲು ಹೂಡುವ

ಪ್ರತಿಹುನ್ನಾರಗಳನ್ನು 'ದ್ರೌಪದಿ' ಕವನದಲ್ಲಿ ಹಿಡಿದಿಟ್ಟಿದ್ದಾರೆ. ವೈದೇಹಿ ಹೆಣ್ಣಿನ ಶಕ್ತಿಯನ್ನು ಗುರುತಿಸುವ ವಿಧಾನ ಇನ್ನೊಂದು ಬಗೆಯದ್ದು. ಗಂಡು ಎಂಬ ಅಹಂಮಿಕೆಯಿಂದ ಊರೆಲ್ಲಾ ಅಲೆಯುವ ಶಿವನಿಗೆ ಗೌರಿ ಹಾಸ್ಯ, ವ್ಯಂಗ್ಯ, ಕಟಕಿಗಳ ಮೂಲಕ ಎದುರಾಗುತ್ತಾಳೆ. ಮೇಲ್ನೋಟಕ್ಕೆ ಇದು ಸಾಂಪ್ರದಾಯಿಕ ಹೆಣ್ತನದ ಮಾದರಿಯನ್ನು ಒಪ್ಪಿನಡೆದಂತೆ ಭಾಸವಾದರೂ ಅದು ಹೆಣ್ಣಿನ ಶಕ್ತಿ ಎಂದು ವೈದೇಹಿ ಗುರುತಿಸುತ್ತಾರೆ.

> ಶಿವನಿದ್ದೂ ಶಿವನಿಲ್ಲದಂಥ ಚೋದ್ಯಗಳೆಲ್ಲ
> ಹೊಸತೇನು ಶಿವಕಾಮಿಗೆ?
> ಮಿಸುಕಾಡದೇ ಕುಳಿತು ತಲ್ಲಣವ ತಡೆಯುವ
> ಆರ್ದ್ರ ಗರ್ವದ ಹುಡುಗಿ ನಮ್ಮ ಗೌರಿ [39]

ಹೆಣ್ಣು ತನ್ನ ಮೇಲೆ ನಡೆಯಬಹುದಾದ ಎಲ್ಲಾ ಬಗೆಯ ಹಿಂಸೆ, ನೋವುಗಳನ್ನೂ ತಾಳ್ಮೆಯಿಂದ ಸಹಿಸಬಹುದಾದರೂ ಮತ್ತೊಂದು ಹೆಣ್ಣಿನ ಮೇಲೆ ನಡೆಯುವ ಶೋಷಣೆಯನ್ನು ಅತ್ಯಂತ ಜಾಗರೂಕತೆಯಿಂದ ಹಾಗೂ ತೀಕ್ಷ್ಣ ಪ್ರತಿರೋಧದೊಂದಿಗೆ ವಿರೋಧಿಸುವುದನ್ನು ಮಹಿಳಾ ಕಾವ್ಯ ಹಿಡಿದಿಡುತ್ತದೆ. ಮಗಳು ತಂದೆಗೆ ದಬಾಯಿಸಿದ ದಿನ ಹೋಳಿಗೆ ಮಾಡುವ ಪ್ರತಿಭಾ, ತನ್ನ ವಡವೆ, ಬಟ್ಟೆಗಳನ್ನು ಮಗಳ ಕಷ್ಟಕೆಂದು ಜೋಪಾನ ಮಾಡುವ ವೈದೇಹಿಯ 'ಅಮ್ಮ' (ಅವಳ ಉಯಿಲು), ಉದ್ಯೋಗಸ್ಥ ಮಹಿಳೆ ಅನುಭವಿಸುತ್ತಿರುವ ಸವಾಲುಗಳನ್ನು ಹಿಡಿದಿಡುವ ವಿಜಯಾದಬ್ಬೆ, ಸ. ಉಷಾ ಕವನಗಳ ಹೆಣ್ಣು ಪರಂಪರೆಯಲ್ಲಿ ಅಡಕವಾಗಿರುವ ಹೆಣ್ಣಿನ ಪರವಾದ ಧ್ವನಿಯ ಸಂಕೇತಗಳಾಗಿದ್ದಾರೆ. ಆರಂಭದ ಹಂತದಲ್ಲಿ ಹೆಣ್ಣಿನ ಬಗ್ಗೆ, ಹೆಣ್ತನದ ಶೋಷಣೆಯ ಬಗ್ಗೆ ಮರುಕ ಕಂಡುಬಂದರೆ ನಂತರದ ಹಂತದಲ್ಲಿ ಹೆಣ್ಣಿನ ಮೇಲೆ ನಡೆಯಬಹುದಾದ ಎಲ್ಲಾ ಬಗೆಯ ಶೋಷಣೆ ಹಾಗೂ ದೌರ್ಜನ್ಯಗಳನ್ನು ಪತ್ತೆ ಹಚ್ಚುವ ಹಾಗೂ ಅದನ್ನು ವಿರೋಧಿಸುವ ಮನೋಭಾವವನ್ನು ಕಾಣಬಹುದು. ಸ್ತ್ರೀಯರ ಸಂಘಟಿತ ಹೋರಾಟ ಕುಟುಂಬದ ಹಂತದಿಂದಲೇ ಆರಂಭವಾಗುವುದನ್ನು ಮಹಿಳಾ ಕಾವ್ಯ ಹಿಡಿದಿಡುತ್ತದೆ.

ಕನ್ನಡ ಮಹಿಳಾ ಕಾವ್ಯದ ಸಂದರ್ಭದಲ್ಲಿ ಸ್ತ್ರೀವಾದಿ ಚಿಂತನೆ, ಆಲೋಚನೆಗಳು ಹಿಂದಿನಿಂದಲೂ ಹೆಣ್ಣಿನಲ್ಲಿ ಅಂತರ್ಗತವಾಗಿ ಬಂದಿರುವ 'ಹೆಣ್ಣಿನ ಪರ' ಚಿಂತನೆ ಎಂಬುದನ್ನು ಕಟ್ಟಿಕೊಡುತ್ತವೆ. ಇದು ಪ್ರತಿ ಹೆಣ್ಣಿನಲ್ಲೂ ಅಡಕವಾಗಿರುವ ತನ್ನ , ತನ್ನ ಕುಟುಂಬವನ್ನು ಪೋಷಿಸುವ, ಕಾಪಿಡುವ ಹೆಣ್ಣಿನ ಕಾಳಜಿಯೊಂದಿಗೆ ಬೆಸೆದುಕೊಂಡಿದೆ ಎಂಬುದನ್ನು ಮಹಿಳಾ ಕಾವ್ಯದ ಮೂಲಕ ಗುರುತಿಸಬಹುದು.

**ಕೊನೆ ಟಿಪ್ಪಣಿ**

೧. ಸ್ತ್ರೀವಾದ, ಸುಮಿತ್ರಾಬಾಯಿ ಬಿ.ಎನ್, ಪು.ಸ೧೨
೨. ಡಾ. ಗಾಯತ್ರಿ ನಾವಡ, ಭಾರತೀಯ ಸ್ತ್ರೀವಾದ: ಒಂದು ಸಂಕಥನ,ಪು.ಸಂ.೩.
೩. ಅದೇ, ಪು.ಸಂ.೩.
೪. ಅದೇ, .ಪು.ಸಂ.೩.
೫. ಕನ್ನಡ ಸಾಹಿತ್ಯ ಮತ್ತು ಸ್ತ್ರೀವಾದಿ ಚಿಂತನೆ. ಸರೋಜಿನಿ ಶಿಂತ್ರಿ, ಪು.ಸಂ ೫
೬. ಸ್ತ್ರೀವಾದ : ತಾತ್ವಿಕತೆ, ಶ್ರೀಮತಿ ಹೆಚ್.ಎಸ್. ಪು.ಸಂ.೧೩
೭. ಆಧುನಿಕ ಭಾರತದಲ್ಲಿ ಮಹಿಳೆ. ಮೂಲ ಜೆರಾಲ್ಡಿನ್ ಫೋರ್ಬ್ಸ್ ಅನು: ಎಚ್.ಎಸ್.ಶ್ರೀಮತಿ, ಪು.ಸಂ.೧೩
೮. ಅದೇ, ಪು.ಸಂ.೨೩೧
೯. ಸ್ತ್ರೀವಾದ : ತಾತ್ವಿಕತೆ, ಶ್ರೀಮತಿ ಹೆಚ್.ಎಸ್. ಪು.ಸಂ.೧೨
೧೦. ಆಧುನಿಕ ಭಾರತದಲ್ಲಿ ಮಹಿಳೆ. ಮೂಲ ಜೆರಾಲ್ಡಿನ್ ಫೋರ್ಬ್ಸ್ ಅನು: ಎಚ್.ಎಸ್.ಶ್ರೀಮತಿ, ಪು.ಸಂ.೨೩೧
೧೧. ಬೆಳಗೆರೆ ಜಾನಕಮ್ಮ ಬದುಕು ಬರಹ, ಸಂ.ನೇಮಿಚಂದ್ರ. ಪು.ಸಂ ೨೫
೧೨. ಸ್ಪರ್ಶರೇಖೆಗಳು, ಎಲ್.ಜಿ.ಸುಮಿತ್ರಾ, ಪು.ಸಂ.೩೨
೧೩. ಮುನ್ನುಡಿ ಬೆನ್ನುಡಿಗಳ ನಡುವೆ, ಪ್ರತಿಭಾ ನಂದಕುಮಾರ್, ಪು.ಸಂ. ೯
೧೪. ಪಾರಿಜಾತ, ವೈದೇಹಿ, ಪು.ಸಂ.೧೪
೧೫. ಶೈಲಜಾ ಸಮಗ್ರ ಕಾವ್ಯ, ಶೈಲಜಾ ಉಡಚಣ, ಪು.ಸಂ. ೧೮
೧೬. ನಾನೆಂಬ ಮಾಯೆ, ಸುಕನ್ಯಾ ಮಾರುತಿ, ಪು.ಸಂ. ೨೮೬
೧೭. ಅಮ್ಮನಗುಡ್ಡ, ಚ.ಸರ್ವಮಂಗಳ, ಪು.ಸಂ.೧
೧೮. ಅದೇ, ಪು.ಸಂ.೨೨
೧೯. ಅದೇ, ಪು.ಸಂ.೭
೨೦. ಜೀವ-ಸಾವುಗಳ ನಡುವೆ, ಶಶಿಕಲಾ ವೀರಯ್ಯಸ್ವಾಮಿ, ಪು.ಸಂ.೨೮
೨೧. ಬಿದಿರು ಮೆಳೆ ಕಂಟಿಯಲಿ, ಬಿ.ಟಿ.ಲಲಿತಾನಾಯಕ್, ಪು.ಸಂ.೧೨೪
೨೨. ಅದೇ, ಪು.ಸಂ.೭೨
೨೩. ಮೊದಲ ಸಿರಿ, ಲಲಿತಾ ಸಿದ್ಧಬಸವಯ್ಯ, ಪು.ಸಂ. ೧೩
೨೪. ಅದೇ, ಪು.ಸಂ. ೧೭
೨೫. ಬಿಂದು ಬಿಂದಿಗೆ, ವೈದೇಹಿ, ಪು.ಸಂ. ೩೬

# ಅಧ್ಯಾಯ ೭

## ಮಹಿಳಾ ಕಾವ್ಯ ಪರಂಪರೆಯ ಪ್ರಜ್ಞಾ ವಿನ್ಯಾಸ

## ಅಧ್ಯಾಯ ೭

## ಮಹಿಳಾ ಕಾವ್ಯ ಪರಪರೆಯ ಪ್ರಜ್ಞಾ ವಿನ್ಯಾಸ

ಮಹಿಳೆ ಹಾಗೂ ಸಾಹಿತ್ಯದ ನಂಟು ಪುರುಷ ಮತ್ತು ಸಾಹಿತ್ಯದ ನಂಟಿನಷ್ಟೇ ಪ್ರಾಚೀನವಾದದ್ದು. ಗಂಡಿನಂತೆ ಅಭಿವ್ಯಕ್ತಿಗಾಗಿ ಹೆಣ್ಣಿನ ಮನಸ್ಸು ಸದಾ ಸನ್ನದ್ಧವಾಗಿರುತ್ತದೆ. ತನ್ನ ನಿತ್ಯ ಬದುಕಿನ ಆಗುಹೋಗುಗಳನ್ನು ಮಹಿಳಾ ಜಗತ್ತು ಜಾನಪದ ಸಾಹಿತ್ಯದ ಮೂಲಕ ಅಭಿವ್ಯಕ್ತಪಡಿಸಿದೆ. ಆದರೆ ಪ್ರಧಾನ ವ್ಯವಸ್ಥೆಯ ನಿರ್ಲಕ್ಷ್ಯ ಹಾಗು ತಾರತಮ್ಯ ಧೋರಣೆಯಿಂದಾಗಿ ಹೆಣ್ಣಿನ ಸೃಜನಶೀಲ ಅಭಿವ್ಯಕ್ತಿ ಮಾನ್ಯತೆಯನ್ನು ಪಡೆಯುವಲ್ಲಿ ಸವಾಲುಗಳನ್ನು ಎದುರಿಸಬೇಕಾಗಿದೆ. ಇದು ಕೇವಲ ಹೆಣ್ಣಿನ ಅಭಿವ್ಯಕ್ತಿಗೆ ಮಾತ್ರ ಸಂಬಂಧಿಸಿರದೆ ಸಾಮಾಜಿಕ ಮೌಲ್ಯವ್ಯವಸ್ಥೆಯಿಂದ ರೂಪುಗೊಂಡ ತರತಮ ಭಾವದಿಂದ ಮೂಡಿದ ಆಲೋಚನೆಯ ವಿಧಾನವೇ ಆಗಿದೆ. ಜೊತೆಗೆ ಪ್ರಭುತ್ವ ಕೇಂದ್ರಿತ ನೆಲೆಗಳು ತನ್ನ ಅಧೀನತೆಗೆ ಒಳಪಡುವ ಸಮುದಾಯದ ಎಲ್ಲಾ ಬಗೆಯ ಕಾರ್ಯ ಚಟುವಟಿಕೆಗಳನ್ನೂ ಸದಾ ನಿಯಂತ್ರಣದಲ್ಲಿಡಲು ಪ್ರಯತ್ನಿಸುತ್ತಿರುತ್ತದೆ. ಇದರಿಂದಾಗಿ ಜಾನಪದ ಸಾಹಿತ್ಯದೊಂದಿಗೆ ಆಧುನಿಕ ಮಹಿಳಾ ಅಭಿವ್ಯಕ್ತಿ ಹೊಂದಿರುವ ಸಾತತ್ಯವನ್ನು ಗುರುತಿಸುವಲ್ಲಿ ಅನೇಕ ತೊಡಕುಗಳಿವೆ. ಅವುಗಳಲ್ಲಿ ಕಾವ್ಯಮೀಮಾಂಸೆಯ ಪ್ರಶ್ನೆ ಇದೆ. ಹೆಣ್ಣಿನ ಅಭಿವ್ಯಕ್ತಿ ಕೂಡ ತೀವ್ರವಾದ ಮತ್ತು ಬಹುಮುಖಿಯಾದ ನಿಯಂತ್ರಣಕ್ಕೆ ಒಳಪಟ್ಟು ಅಧಿಕೃತತೆಯನ್ನು ಪಡೆಯಲು ದೊಡ್ಡ ಹೋರಾಟವನ್ನೇ ನಡೆಸಬೇಕಾಗಿದೆ.

ಆಧುನಿಕ ಮಹಿಳಾ ಕಾವ್ಯದಲ್ಲಿ ಆರಂಭದಿಂದ ಇಂದಿನವರೆಗೂ ಮಹಿಳೆ ತನ್ನ ಅಂತರಂಗದ ಆಲೋಚನೆಗಳಿಗೆ ಧ್ವನಿಕೊಡಲು ಪ್ರಯತ್ನಿಸಿದ ವಿಧಾನ, ಅದರಲ್ಲಿ ಎದುರಾದ ಸವಾಲುಗಳು, ಅವುಗಳನ್ನು ಮೆಟ್ಟಿ ತನ್ನ ಅಭಿವ್ಯಕ್ತಿಗೆ ಸಮರ್ಪಕ ರೂಪ ಕೊಟ್ಟದ್ದಕ್ಕೆ ಅನಂತ ದಾಖಲೆಗಳಿವೆ. ಇದು ಮಹಿಳಾ ಅಸ್ಮಿತೆಯ ವಿಕಾಸದ ಪ್ರಕ್ರಿಯೆಯಾಗಿ ರೂಪುಗೊಂಡಿರುವುದನ್ನು ಮಹಿಳಾ ಸಾಹಿತ್ಯಾಧ್ಯಯನದಿಂದ ತಿಳಿಯಬಹುದು. ಈ ದೃಷ್ಟಿಯಿಂದ ಮಹಿಳಾ ಕಾವ್ಯ ಪರಂಪರೆ ನಿರಂತರವಾಗಿ ವಿಕಾಸಗೊಳ್ಳುತ್ತಿದೆ. ಈ ವಿಕಾಸಶೀಲ ಪ್ರಕ್ರಿಯೆಯಲ್ಲಿ ಅದು ತನ್ನ ಪರಂಪರೆಯೊಂದಿಗೆ ಏಕಕಾಲಕ್ಕೆ ಸ್ನೇಹ ಮತ್ತು ವಿರೋಧದ ವಿಲಕ್ಷಣ ಸಂಬಂಧವನ್ನು ಕಟ್ಟಿಕೊಂಡಿದೆ. ಈ ವಿಲಕ್ಷಣತೆಯನ್ನು ವಿರೋಧಾಭಾಸ ಎಂದು ನೋಡಲಾಗದು. ಮೂರ್ತ ಮತ್ತು ಅಮೂರ್ತ ನಿರ್ಬಂಧಗಳ ವಿರುದ್ಧ ಹೋರಾಡಬೇಕಾಗಿರುವ ಮಹಿಳಾ ಸಂಕಥನವು ಒಂದೊಂದೇ ಹೆಜ್ಜೆಯನ್ನು ಇಡಬೇಕಾದ ಹೊತ್ತಿನಲ್ಲಿ

ಅನಿವಾರ್ಯವಾಗಿ ಎದುರಿಸಬೇಕಾಗಿರುವ ವಿವಿಧ ಘಟ್ಟಗಳು ಇವು ಎಂದು ಗಮನಿಸಬೇಕು. ಏಕೆಂದರೆ ಯಾವುದೇ ದೀರ್ಘವಾದ ಪ್ರಯಾಣವು ಆರಂಭವಾಗಬೇಕಾಗಿರುವುದು ಮೊದಲ ಹೆಜ್ಜೆಯಿಂದ. ಸ್ವಮರುಕ ಎನ್ನುವುದು ಹೆಣ್ಣು ತನ್ನನ್ನು ತಾನು ಅನಾವರಣ ಮಾಡಿಕೊಳ್ಳುವ ಪ್ರಕ್ರಿಯೆಯ ಒಂದು ನಿರ್ಣಾಯಕ ಘಟ್ಟ. ಈ ಘಟ್ಟದ ಆಚೆಗಿನ ಮಹಿಳಾ ಅಭಿವ್ಯಕ್ತಿ ಸ್ವಮರುಕವನ್ನು ಸ್ಪಷ್ಟವಾಗಿ ನಿರಾಕರಿಸುತ್ತದೆ. ಹೆಣ್ಣಿನ ಆತ್ಮಘನತೆಯನ್ನು ಎತ್ತಿಹಿಡಿಯುವ ಮತ್ತು ಪ್ರತಿಪಾದಿಸುವ ಈ ಮುಂದಿನ ಘಟ್ಟವು ಸಹಜವಾಗಿಯೇ ಸ್ವಮರುಕದ ವಿರೋಧದ ನೆಲೆಯಲ್ಲಿ ನಿಲ್ಲುತ್ತದೆ. ಇದರರ್ಥ ಮಹಿಳಾ ಅಭಿವ್ಯಕ್ತಿಯು ಪರಂಪರೆಯನ್ನೇ, ಅಥವಾ ಪರಂಪರೆಯ ಸ್ವಮರುಕದ ಬೆಳವಣಿಗೆಯ ಘಟ್ಟವನ್ನೇ ನಿರಾಕರಿಸುತ್ತದೆ ಎಂದಲ್ಲ. ಬದಲಿಗೆ ತನ್ನ ಚಲನೆಯ ಒಂದು ಘಟ್ಟವನ್ನು ಗಮನದಲ್ಲಿಟ್ಟುಕೊಂಡೇ ಅದನ್ನು ದಾಟುವ ಮತ್ತು ಮೀರುವ ಪ್ರಯತ್ನವನ್ನು ನಡೆಸುತ್ತಿದೆ ಎಂದರ್ಥ. ಎಂದರೆ ಪರಂಪರೆಯೊಂದಿಗೆ ಮಹಿಳಾಕಾವ್ಯಕ್ಕಿರುವುದು ಸಾವಯವ ಸಂಬಂಧ. ಗುರುತಿಸುವ, ಗುರುತಿಸುತ್ತಲೇ ನಿರಾಕರಿಸುವ, ನಿರಾಕರಿಸುತ್ತಲೇ ಅದು ತಾನು ನಡೆದುಬಂದ ಹಾದಿಯ ಹೆಜ್ಜೆ ಗುರುತು ಎನ್ನುವುದನ್ನು ನೆನಪಿನಲ್ಲಿಡುವ ಪ್ರಕ್ರಿಯೆ ಇದು. ಆದುದರಿಂದಾಗಿ ಸಾಹಿತ್ಯಾಧ್ಯಯನದಲ್ಲಿ ಇದು ಅತ್ಯಂತ ಮಹತ್ವದ ಸಂಗತಿ. ಪ್ರಸ್ತುತ ಅಧ್ಯಾಯದಲ್ಲಿ ಮಹಿಳಾಕಾವ್ಯ ಹಾಗೂ ಮಹಿಳಾ ಅಭಿವ್ಯಕ್ತಿ ಕಾಲಕಾಲಕ್ಕೆ ತನ್ನ ಅಸ್ಮಿತೆ ಹಾಗು ಅಸ್ತಿತ್ವವನ್ನು ಗುರುತಿಸಿಕೊಳ್ಳುವ ಪ್ರಕ್ರಿಯೆಯನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ. ಈ ಪ್ರಕ್ರಿಯೆಯನ್ನು ಮಹಿಳಾ ಪ್ರಜ್ಞಾವಿನ್ಯಾಸದ ಮಜಲುಗಳು ಎಂದೂ ಗುರುತಿಸಲು ಸಾಧ್ಯ.

ಆಧುನಿಕ ಮಹಿಳಾ ಕಾವ್ಯದ ಹೆಜ್ಜೆ ಗುರುತುಗಳನ್ನು ನಂಜನಗೂಡು ತಿರುಮಲಾಂಬರವರ ಬರವಣಿಗೆಯ ಕಾಲದಿಂದ ಗುರುತಿಸುವ ಕ್ರಮ ಜಾರಿಯಲ್ಲಿದೆಯಾದರೂ ಹನ್ನೆರಡನೆಯ ಶತಮಾನದ ವಚನಕಾರ್ತಿಯರ ಸಾಹಿತ್ಯದೊಂದಿಗೆ ಮಹಿಳಾಕಾವ್ಯ ಪರಂಪರೆಯನ್ನು ಗುರುತಿಸುವುದು ಸೂಕ್ತ. ವಚನಸಾಹಿತ್ಯದ ನಂತರ ನಿರ್ಮಾಣಗೊಂಡಿರುವ ನಿರ್ವಾತ ಮಹಿಳಾ ಸಾಹಿತ್ಯದ ಕೊರತೆಗಿಂತ ಅದರ ದಾಖಲಾತಿಯ ಕೊರತೆಯನ್ನೇ ಎತ್ತಿಹಿಡಿಯುತ್ತದೆ. ಆದುದರಿಂದಾಗಿ ಮಹಿಳಾಕಾವ್ಯ ಪರಂಪರೆ ಎನ್ನುವುದು ಜನಪದ ಕಾವ್ಯದಿಂದ ಹಿಡಿದು ಇಂದಿನವರೆಗೂ ಹೆಣ್ಣಿನ ಮನೋಬೌದ್ಧಿಕ ಜಾಗೃತಿಯ ನೆಲೆಯಲ್ಲಿ, ಸ್ವಪ್ರಜ್ಞೆಯ ನೆಲೆಯಲ್ಲಿ ಸಾತತ್ಯವನ್ನು ಉಳಿಸಿಕೊಂಡಿದೆಯೇ ವಿನಃ ಅದು ಕಡಿದುಹೋದ ಸಂಪರ್ಕವಲ್ಲ. ಅಲ್ಲದೆ ಅಕ್ಕನನ್ನೂ ಒಳಗೊಂಡಂತೆ ಈ ಕಾಲದಲ್ಲಿ ಬರೆದ ಅನೇಕ ವಚನಕಾರ್ತಿಯರ ಸಾಹಿತ್ಯ, ಸಂವಾದ, ಆಲೋಚನೆ, ಅಭಿವ್ಯಕ್ತಿ, ಪ್ರಧಾನವ್ಯವಸ್ಥೆಯೊಂದಿಗಿನ ಅನುಸಂಧಾನ, ಭಾಷೆಯ ವೈವಿಧ್ಯತೆ ಹಾಗೂ ಸಾಹಿತ್ಯಿಕ ಮೌಲ್ಯದ ಕಾರಣಗಳಿಂದಾಗಿ ಅವರ ವಚನಗಳನ್ನು ಆಧುನಿಕ ಸಾಹಿತ್ಯದಿಂದ ಬೇರ್ಪಡಿಸಿ ನೋಡಲು ಸಾಧ್ಯವಿಲ್ಲ. ಸಾಹಿತ್ಯವೆನ್ನುವುದು ಕಾಲಘಟ್ಟದ ಗಡಿಗಳನ್ನು ದಾಟಿ ಆಶಯಗಳ ಬೆನ್ನುಹತ್ತಿರುವ ಈ ಸಂದರ್ಭದಲ್ಲಿ ಸತ್ವಯುತವಾದ ಎಲ್ಲಾ ಸಾಹಿತ್ಯವೂ ಪ್ರಸ್ತುತವೇ. ಎಲ್ಲಾ ಬಗೆಯ ಸ್ಥಾಪಿತ ಹಿತಾಸಕ್ತಿಗಳನ್ನು ತನ್ನ ವಚನಗಳ ಮೂಲಕ ಸಾರಾಸಗಟಾಗಿ ವಿರೋಧಿಸುವ ಅಕ್ಕ ಮುಂದಿನ ಕನ್ನಡ ಮಹಿಳಾ ಸಾಹಿತ್ಯದ ಮೇಲೆ ಬೀರಿದ ಪ್ರಭಾವ, ಹುಟ್ಟಿಸಿದ ವಿಸ್ಮಯ ಅನನ್ಯವಾದದ್ದು. "ಅಕ್ಕನ ಮಾದರಿ ಪ್ರತಿಭಟನೆಯನ್ನು ಮಾತ್ರವಲ್ಲ, ಪ್ರತಿಭಟನೆಯ ರೂಪವನ್ನೂ

ಸೂಚಿಸುತ್ತದೆ. ಅದು ಮುರಿದು ಕಟ್ಟುವ ಮಾದರಿಯಲ್ಲ. ಮುರಿದು, ಕಟ್ಟುವ ಹಂಗನಿಟ್ಟುಕೊಳ್ಳದ ಮಾದರಿ".[೧] ಇದರಿಂದಾಗಿ ಇಂದಿನ ಎಲ್ಲಾ ಬರಹಗಾರ್ತಿಯರೂ ಒಂದಲ್ಲ ಒಂದು ರೀತಿಯಲ್ಲಿ ಅಕ್ಕನ ಪ್ರಭಾವಕ್ಕೆ ಒಳಗಾಗಿ ಕೃತಿ ರಚಿಸಿದವರೇ, ಆದರೂ ಅಕ್ಕನ ರೀತಿಯ ಬದುಕು ಹಾಗು ಬರವಣಿಗೆ ಒಂದು ರೀತಿಯ ಸವಾಲಾಗಿಯೇ ಉಳಿದಿದೆ. ಅನಂತರ ಬಂದ ಸಂಚಿಹೊನ್ನಮ್ಮ, ಹೆಳವನಕಟ್ಟೆ ಗಿರಿಯಮ್ಮ ಮುಂತಾದವರ ಬರವಣಿಗೆ ಕೂಡ ಒಂದಲ್ಲಾ ಒಂದು ರೀತಿಯಲ್ಲಿ ಪುರುಷಪ್ರಧಾನ ಮೌಲ್ಯವ್ಯವಸ್ಥೆಗೆ ಮುಖಾಮುಖಿಯಾಗುತ್ತಲೇ ಅಭಿವ್ಯಕ್ತಗೊಳ್ಳುತ್ತದೆ. ಈ ಕಾರಣದಿಂದಾಗಿ ವಚನಕಾರ್ತಿಯರಿಂದ ಹಿಡಿದು ತಿರುಮಲಾಂಬವರೆಗೆ ಬಂದ ಮಹಿಳಾ ಸಾಹಿತ್ಯದ 'ಮುಖ್ಯಕೇಂದ್ರ'ಗಳನ್ನು ಪ್ರಸ್ತಾವಿಕವಾಗಿ ಚರ್ಚಿಸಿ ನಂತರ ಆಧುನಿಕ ಮಹಿಳಾ ಕಾವ್ಯವನ್ನು ವಿಸ್ತೃತವಾಗಿ ಚರ್ಚಿಸಲಾಗುವುದು.

ಹೆಣ್ಣಿಗೆ ಯಾವುದೇ ರೀತಿಯ ಸ್ವಾತಂತ್ರ್ಯವಿಲ್ಲ. ಅವಳ ಬದುಕು ಸಂಪೂರ್ಣ ಪರಾಧೀನ ಎನ್ನುವ ಸಂದರ್ಭದಲ್ಲಿ ವಚನಕಾರರು ಹೆಣ್ಣಿಗೆ ಆಧ್ಯಾತ್ಮಿಕ ಜೀವನ ಹಾಗೂ ಅಭಿವ್ಯಕ್ತಿಗೆ ಸಂಬಂಧಿಸಿದಂತೆ 'ಅವಕಾಶ'ಗಳನ್ನು ನೀಡುವ ಮೂಲಕ ಸ್ತ್ರೀಯರ ಸಾಮಾಜಿಕ ಸಮಾನತೆಗೆ ನಾಂದಿ ಹಾಡಿದರು. ಈ ಕಾಲವನ್ನು ಸಮರ್ಪಕವಾಗಿ ಬಳಸಿಕೊಂಡ ವಚನಕಾರ್ತಿಯರು ತಮ್ಮ ಆಯ್ಕೆಯ ಬದುಕನ್ನು ರೂಪಿಸಿಕೊಳ್ಳಲು ಮುಂದಾದರು. ಸಮಾಜದ ಆಗುಹೋಗುಗಳಿಗೆ ಸೂಕ್ಷ್ಮವಾಗಿ ಸ್ಪಂಧಿಸಿದ ಅಕ್ಕ ಪ್ರತಿಹಂತದಲ್ಲೂ ಸಮಾಜಕ್ಕೆ ಮುಖಾಮುಖಿಯಾದ ಬಗೆ ಮಾತ್ರ ಎಲ್ಲರಿಗಿಂತ ವಿಭಿನ್ನವಾದದ್ದು. "ಅಕ್ಕನಿಗೂ ಉಳಿದವರಿಗೂ ಇರುವ ಪ್ರಮುಖ ವ್ಯತ್ಯಾಸವೆಂದರೆ ಅಕ್ಕ ಇಡೀ ವ್ಯವಸ್ಥೆಯನ್ನೇ ದಿಕ್ಕರಿಸಿದವಳು. ಉಳಿದವರು ವ್ಯವಸ್ಥೆಯಲ್ಲಿ ಬದಲಾವಣೆ ಬಯಸಿದವರು. ಅದಕ್ಕಾಗಿ ಶ್ರಮಿಸಿದವರು. ಅಕ್ಕ ಸಾಂಸ್ಥಿಕವಾದ ಎಲ್ಲವನ್ನೂ ವಿವಾಹ, ಕುಟುಂಬ, ಗಂಡ, ಮನೆಗಳನ್ನು ದಿಕ್ಕರಿಸಿದವಳು. ಹಾಗೆಯೇ ದೇಹ, ಕಾಮಗಳ ಬಗೆಗಿನ ಸಾಂಪ್ರದಾಯಿಕ ನಿಲುವುಗಳನ್ನೂ ಧಿಕ್ಕರಿಸಿದವಳು. ಆದರೆ ಉಳಿದವರು ಈ ವ್ಯವಸ್ಥೆಗಳಲ್ಲಿರುವ ದೋಷಗಳನ್ನು ನಿವಾರಿಸಿ ಹೊಸತನವನ್ನು ತುಂಬಲು ಪ್ರಯತ್ನಮಾಡುವವರು. ಅಕ್ಕ ಮುರಿಯುತ್ತಾ ಹೋದವಳು, ಉಳಿದವರು ಮುರಿದು ಕಟ್ಟಲು ಪ್ರಯತ್ನಿಸಿದರು."[೨] ಎನ್ನುವ ಮಾತು ಒಂದು ಹಂತಕ್ಕೆ ಸತ್ಯವಾದರೂ ಮುಂದುವರೆದ ಹಂತದಲ್ಲಿ ಈ ಕಾಲಘಟ್ಟದ ವಚನಕಾರ್ತಿಯರು ವ್ಯವಸ್ಥೆಯ ಒಳಗಿದ್ದುಕೊಂಡೇ ಅದರ ಹಿಡಿತದಿಂದ ಹೊರಬರುವ, ಅದರ ಹುನ್ನಾರಗಳನ್ನು ಒಡೆಯುವ, ಪರ್ಯಾಯಗಳನ್ನು ಕಟ್ಟಿಕೊಳ್ಳುವ ಪ್ರಯತ್ನಗಳನ್ನು ತಮ್ಮ ಕೈಲಾದಮಟ್ಟಿಗೆ ಮಾಡಿದ್ದಾರೆ. ಈ ಹಿನ್ನೆಲೆಯಲ್ಲಿ ಅಕ್ಕ ತನ್ನ ಜೀವನವನ್ನೇ ಹೋರಾಟವಾಗಿಸಿಕೊಂಡು ಪ್ರತಿ ಹಂತದಲ್ಲಿಯೂ ಸಮಾಜ, ಸಂಸ್ಕೃತಿಗೆ ಸವಾಲಾಗಿ, ಇತರರಿಗಿಂತ ಭಿನ್ನವಾಗಿ ನಿಲ್ಲುತ್ತಾಳೆ. ಎಷ್ಟೆಲ್ಲಾ ಸವಾಲುಗಳು ಎದುರಾದರೂ ಎದೆಗುಂದದೆ ಅವಳು ಮುನ್ನಡೆದ ಕ್ರಮ ಬೆರಗು ಹುಟ್ಟಿಸುವಂತದ್ದು. ಹೆಣ್ಣಿನ ವ್ಯಕ್ತಿತ್ವವೆ ಸಂಪೂರ್ಣ ಅವಗಣನೆಗೆ ಒಳಗಾಗಿದ್ದ ಸಂದರ್ಭದಲ್ಲಿ 'ಆಯ್ಕೆ' ಮತ್ತು 'ಅಭಿವ್ಯಕ್ತಿ' ಸ್ವಾತಂತ್ರ್ಯಕ್ಕೆ ವಚನಕಾರ್ತಿಯರು ನಡೆಸಿದ ಹೋರಾಟ ಪ್ರಮುಖವಾದದ್ದು.

ಅಕ್ಕ ಎಲ್ಲಾ ಬಗೆಯ ಸ್ಥಾಪಿತ ಹಿತಾಸಕ್ತಿಗಳ ನಿರಾಕರಣೆಯ ಮೂಲಕ ಸಾಮಾಜಿಕ ಸಂಘರ್ಷಕ್ಕೆ ಮುಂದಾಗುತ್ತಾಳೆ. ಕುಟುಂಬದ ಎಲ್ಲಾ ನಿರ್ಧಾರಗಳು ಗಂಡಿಗೆ ಸೀಮಿತವಾಗಿದ್ದ

ಸಂದರ್ಭದಲ್ಲಿ ಅಕ್ಕ ತನ್ನ ಜೀವನದ ಆಗುಹೋಗುಗಳನ್ನು ಕುರಿತಂತೆ ಚಿಂತಿಸಿ ನಿರ್ಧಾರಗಳನ್ನು ತೆಗೆದುಕೊಳ್ಳುತ್ತಾಳೆ. ಸಂಸಾರದ ರೀತಿ ರಿವಾಜುಗಳು, ಕಟ್ಟುಕಟ್ಟಳೆಗಳು ಹಾಗೂ ಸಂಪ್ರದಾಯಿಕ ಮೌಲ್ಯಗಳನ್ನು ನಿರಾಕರಿಸುವುದರ ಮೂಲಕ ಸಂಸಾರದ ಅನಿಶ್ಚಿತತೆಯನ್ನು ಸಾರುತ್ತಾಳೆ. ಲೌಕಿಕ ಸಂಸಾರಕ್ಕಿಂತ ಭಿನ್ನವಾದ ವಿಕಾಸದ ನೆಲೆಯನ್ನು ಇವಳ ವಚನಗಳಲ್ಲಿ ಗುರುತಿಸಬಹುದು. ಮಾನವೀಯ ಸಂಬಂಧಗಳು ಅರ್ಥಹೀನವಾಗಿರುವ ಸಂದರ್ಭದಲ್ಲಿ ಅದರಿಂದ ಬಿಡುಗಡೆ ಹೊಂದುವ ತೀವ್ರವಾದ ಹಂಬಲ, ಸಾಮಾಜಿಕ ಒಪ್ಪಿತ ಸಂಸಾರ ಬಂಧನವನ್ನು ಮುರಿದು ತನ್ನ ಬಯಕೆಯ ಬುದಕನ್ನು ರೂಪಿಸಿಕೊಳ್ಳುವ ಪ್ರಯತ್ನ ಇವಳ ವಚನಗಳಲ್ಲಿ ನಿರಂತರವಾಗಿರುವುದನ್ನು ಗುರುತಿಸ ಬಹುದು. ಸಂಸಾರವನ್ನು 'ಹಗೆ' ಎನ್ನುವ ಅಕ್ಕ ಅದು ಎಷ್ಟೇ ಭದ್ರನೆಲೆಯಾದರೂ ಕೂಡ ಬಂಧನವೇ, ಒಮ್ಮೆ ಈ ಬಂಧನದಲ್ಲಿ ಸಿಲುಕಿಕೊಂಡರೆ ಅದರಿಂದ ಬಿಡುಗಡೆ ಅಸಾಧ್ಯ ಎಂಬುದನ್ನು 'ತರಣಿಯ ಹುಳು'ವಿನ ರೂಪಕದ ಮೂಲಕ ಕಟ್ಟಿಕೊಡುತ್ತಾಳೆ. ಮದುವೆಯಂತ ಸಾಮಾಜಿಕ ಬಂಧನಕ್ಕೆ ಒಳಗಾಗದೆ ಚೆನ್ನಮಲ್ಲಿಕಾರ್ಜುನನೆಂಬ ಇಚ್ಚಾಪತಿಯ ಆಯ್ಕೆಯನ್ನು ವ್ಯಕ್ತಪಡಿಸುವ ಅಕ್ಕ ಸ್ತ್ರೀ ಸ್ವಾತಂತ್ರ್ಯ ಹಾಗೂ ಸಮಾನತೆಗೆ ತನ್ನ ವಚನಗಳ ಮೂಲಕ ಮುನ್ನುಡಿ ಬರೆಯುತ್ತಾಳೆ.

ಪಿತೃಪ್ರಧಾನ ವ್ಯವಸ್ಥೆ ಗಂಡು ಹೆಣ್ಣಿನ ಸಾಂಸಾರಿಕ ಜೀವನವನ್ನು ನಿರ್ವಚಿಸುವ ಬಗೆ ಗಂಡಿನ ಪ್ರಾಧಾನ್ಯತೆಯನ್ನು ಎತ್ತಿ ಹಿಡಿಯುವಂತದ್ದೇ ಆಗಿದೆ. ಆದರೆ ಅಕ್ಕ ಹೆಣ್ಣಿನ ಅಧೀನತೆಯ ಆಧಾರದಿಂದ ರೂಪುಗೊಳ್ಳುವ ಲೌಕಿಕ ಸಂಸಾರ, ದಾಂಪತ್ಯದ ಪರಿಕಲ್ಪನೆಗಳನ್ನು ಮೀರಿ 'ಸಮಾನತೆಯ ಆಶಯದಿಂದ' ಕೂಡಿದ ಲೌಕಿಕ ಸಂಬಂಧಗಳ ಹುಡುಕಾಟಕ್ಕೆ ಮುಂದಾಗುತ್ತಾಳೆ. ಅಕ್ಕ ಗ್ರಹಿಸಿದ ದಾಂಪತ್ಯ ಜೀವನ ಪರಿಕಲ್ಪನೆಗೂ ಲೋಕ ರೂಢಿಯ ದಾಂಪತ್ಯ ಪರಿಕಲ್ಪನೆಗೂ ಅಪಾರ ವ್ಯತ್ಯಾಸವಿದೆ. ಅಕ್ಕನ ಪ್ರಕಾರ ದಾಂಪತ್ಯ ಮಾನಸಿಕ ಪ್ರಬುದ್ಧತೆಯ ಸಮ್ಮಿಲನ. ಲೋಕದ ಪ್ರಕಾರ ಹೆಣ್ಣಿನ ಮಾನಸಿಕ ಮತ್ತು ದೈಹಿಕ ಅಧೀನತೆಯೇ ಆಧಾರ. ಅಕ್ಕನ ಪ್ರಕಾರ ದೇಹ ಒಂದು ಸಾಮಗ್ರಿಯಾದರೆ, ಲೋಕಕ್ಕೆ ದೈಹಿಕ ಆಕರ್ಷಣೆಯೇ ದಾಂಪತ್ಯದ ಕೇಂದ್ರ ಬಿಂದು. ವೈದೃಶ್ಯ ನೆಲೆಯಿಂದ ಕೂಡಿದ ದಾಂಪತ್ಯ ಹಾಗೂ ಗಂಡನನ್ನು ಕುರಿತು

ಎರದ ಮುಳ್ಳಿನಂತೆ ಪರಗಂಡರೆನಗವ್ವಾ,
ಸೋಂಕಲೆಮ್ಮೆ ಸುಳಯಲಮ್ಮೆ, ನಂಬಿ ನೆಚ್ಚಿ ಮಾತಾಡಲಮ್ಮೆನವ್ವಾ,
ಚೆನ್ನಮಲ್ಲಿಕಾರ್ಜುನನಲ್ಲದ ಗಂಡರಿಗೆ
ಉರದಲ್ಲಿ ಮುಳ್ಳುಂಟೆಂದು ನಾನಪ್ಪಲಮ್ಮೆನವ್ವಾ[8]

ಎನ್ನುವ ಮೂಲಕ ಪುರುಷಾಪೇಕ್ಷೆಯಿಂದ ಕೂಡಿದ ದಾಂಪತ್ಯ ಜೀವನದ ಬಗೆಗಿನ ತನ್ನ ವಿರೋಧವನ್ನು ವ್ಯಕ್ತಪಡಿಸುತ್ತಾಳೆ. ಲೋಕದೃಷ್ಟಿಯಲ್ಲಿ ಹೆಣ್ಣು ಗಂಡನೊಂದಿಗೆ ತನ್ನನ್ನು ಗುರುತಿಸಿಕೊಳ್ಳುವುದು ರೂಢಿ ಆದರೆ ಅಕ್ಕ ತನ್ನನ್ನು ಚೆನ್ನಮಲ್ಲಿಕಾರ್ಜುನನೆಂಬ 'ಮಿಂಡ' ನ ಮೂಲಕ ಗುರುತಿಸಿಕೊಳ್ಳುತ್ತಾಳೆ. 'ಒಳಗನ ಗಂಡನಯ್ಯಾ , ಹೊರಗಣ ಮಿಂಡನಯ್ಯಾ' ಎನ್ನುವ ಮೂಲಕ ತನ್ನ ಹಾಗೂ ಲೋಕದೃಷ್ಠಿಯ ನಡುವಿನ ಅಂತರವನ್ನು ಸ್ಪಷ್ಟವಾಗಿ ಗುರುತಿಸುತ್ತಾಳೆ. "ಅಕ್ಕ 'ದೇಹ'ದ ಬಗೆಗೆ ತಳೆದ ನಿಲುವು ಈ ಲೋಕದ ನಿಲುವನ್ನು ಧಿಕ್ಕರಿಸುತ್ತದೆ. ಅವಳಗೆ ಪತಿ ಚೆನ್ನನೊಬ್ಬನೇ. ಆದರೆ ಆ

ಪಾತಿವ್ರತ್ಯವನ್ನು ಅವಳು ದೇಹದ ಮುಖಾಂತರ ಅಳೆಯಲಾರಳು. ಈ ದೇಹವನ್ನು ನಾಯಿ ತಿಂದರೇನು? ನೀರು ಕುಡಿದರೇನು? ಈ ದೇಹದ ಮೇಲೆ ನಡೆಯಬಹುದಾದ ಯಾವ ಆಕ್ರಮಣಗಳೂ ಅವಳ ಪಾವಿತ್ರ್ಯವನ್ನು, ಪಾತಿವ್ರತ್ಯವನ್ನು ನಾಶ ಮಾಡಲಾರವು ಎಂಬ ಅವಳ ನಿಲುವು ಸಾಮಾನ್ಯರಿಗೆ ಗಂಟಲಲ್ಲಿಳಿಯುವುದು ಕಷ್ಟ. ಇದೇ ಮಾತು ಗಂಡನ ಬಗೆಗೂ ಸಲ್ಲುತ್ತದೆ. ಈ ಲೋಕದ ಗಂಡರನೆಲ್ಲಾ ಒಲೆಯೊಳಗಿಕ್ಕು ಎಂಬುದು. ಹಾಗೆಯೇ'ಶೀಲ' ಮುಚ್ಚಿಕೊಳ್ಳಬೇಕಾದ್ದು ಎಂಬ ನಿಯಮವಿರುವಲ್ಲಿ ಬಟ್ಟೆಗಳನ್ನು ಕಿತ್ತೆಸೆದು ಯಾವುದು ಶೀಲ ಎಂದು ಪ್ರಶ್ನಿಸಿದ್ದು ಇವೆಲ್ಲವೂ ಈ ಲೋಕದ ಕಟ್ಟುಪಾಡುಗಳ ಬಗೆಗೆ ಅವಳ ತಿರಸ್ಕಾರದ ಆತ್ಯಂತಿಕ ಸ್ಥಿತಿ".[8] ಎನ್ನುವ ಮಾತು ಪಿತೃ ಪ್ರಭುತ್ವಕ್ಕೆ ಅಕ್ಕ ತೋರಿದ ಪ್ರತಿಭಟನೆಯ ಸ್ವರೂಪವೂ ಕೂಡ ಆಗಿದೆ.

ಅಲ್ಲದೆ ಅಂದಿನ ಸಮಾಜದ ಎಲ್ಲಾ ಕಟ್ಟುಪಾಡುಗಳನ್ನು ಮೀರುವ ಅಕ್ಕ ಸಾಂಪ್ರದಾಯಿಕ ಗಂಡಿನ ಅಸ್ತಿತ್ವವನ್ನು ಪ್ರಶ್ನಿಸುವುದರ ಮೂಲಕ ತನ್ನ ಕಲ್ಪನೆಯ ಗಂಡನ ಚಿತ್ರಣವನ್ನು ವಚನಗಳ ಮೂಲಕ ಕಟ್ಟಿಕೊಡುತ್ತಾಳೆ.ತನ್ನ ಸ್ವಾಭಿಮಾನಕ್ಕೆ, ಆತ್ಮಾಕಾಂಕ್ಷೆಗೆ ಅಡ್ಡಬರದ, ಧೈರ್ಯ, ಸಾಹಸ, ಉತ್ಸಾಹ, ಪ್ರೀತಿ, ಮಮತೆ, ಮಮಕಾರ ಎಲ್ಲದರಲ್ಲಿಯೂ ಪರಿಣಿತನಾಗಿರುವ ವ್ಯಕ್ತಿ ತನ್ನ ಗಂಡನಾಗಬೇಕೆಂದು ಬಯಸುತ್ತಾಳೆ. ಹೆಣ್ಣಿನ ಎಲ್ಲಾ ಕ್ರಿಯೆಗಳು ಗಂಡಿಗೆ ಕೇಂದ್ರವಾಗಿದ್ದ ಸಂದರ್ಭದಲ್ಲಿ ಅಕ್ಕ ತನ್ನ ವ್ಯಕ್ತಿತ್ವವನ್ನು ಕೇಂದ್ರವಾಗಿಸಿಕೊಂಡು ಅದಕ್ಕೆ ಸರಿಹೊಂದುವ ಗಂಡಿನ ಹುಡುಕಾಟಕ್ಕೆ ಮುಂದಾಗುವುದರ ಮೂಲಕ ಸಮಾಜದ ಸಿದ್ಧ ನಂಬಿಕೆಗಳನ್ನು ಮುರಿಯಲು ಪ್ರಯತ್ನಿಸುತ್ತಾಳೆ. ತನಗೆ ಎದುರಾದ ಸಮಸ್ಯೆಗಳಿಗೆ ತಾನೇ ಪರಿಹಾರ ಕಂಡುಕೊಳ್ಳುವ ಮೂಲಕ ತನ್ನ ಸ್ವತಂತ್ರ ಅಸ್ತಿತ್ವವನ್ನು ದೃಢಪಡಿಸುತ್ತಾಳೆ.

ಅಕ್ಕನ ಲೌಕಿಕ ಗಂಡನ ನಿರಾಕರಣೆ ಹಾಗೂ ತನ್ನಿಚ್ಛೆಯ ಚೆನ್ನಮಲ್ಲಿಕಾರ್ಜುನನ ಸ್ವೀಕಾರ ಕ್ರಮ ಮೇಲುನೋಟಕ್ಕೆ ಅವಳ ಆಧ್ಯಾತ್ಮದ ಹಂಬಲದಂತೆ ಕಂಡುಬಂದರೂ ಕೂಡ ಅಂತರಾಳದ ಮೂಲೆಯಲ್ಲಿ ತನ್ನಿಚ್ಛೆಯನ್ನು ಅರಿಯುವ, ತನ್ನ ಮನದ ಮಾತಿಗೆ ಸ್ಪಂದಿಸುವ, ತನ್ನೆಲ್ಲಾ ಕಾರ್ಯಗಳಿಗೆ ಸಹಕರಿಸುವ ಮಾದರಿ ವ್ಯಕ್ತಿಯನ್ನು ತನ್ನವನನ್ನಾಗಿಸಿಕೊಳ್ಳಲು ಪರಿತಪಿಸುವ ಧ್ವನಿಯನ್ನು ಆಂತರ್ಯದಲ್ಲಿ ಅಡಗಿಸಿಕೊಂಡಿವೆ. ಅಲ್ಲದೆ ವ್ಯವಸ್ಥೆಗೆ ತೋರುವ ಪ್ರಭಲ ಪ್ರತಿರೋಧದ ರೂಪ ಕೂಡ ಇದೇ ಆಗಿದೆ. ಈ ಮಾತು ಭಾರತದ ಸಂದರ್ಭದಲ್ಲಿ ಕಂಡು ಬರುವ ಇತರೆ ಭಕ್ತ ಕವಯಿತ್ರಿಯರಿಗೂ ಅನ್ವಯಿಸುತ್ತದೆ. ಇದನ್ನು ಕುರಿತಂತೆ "ಭಕ್ತ ಕವಯಿತ್ರಿಯರಿಗೆ ನಮ್ಮ ಪರಂಪರೆಯಲ್ಲಿ ಗೌರವ ಸ್ಥಾನವಿದೆ ಎಂಬುದು ನಿಜ. ಆದರೆ ಅದೇ ವೇಳೆ, ಈ ಕವಯಿತ್ರಿಯರು ಬಹಳ ಮುಂದೆ ಹೋಗದಂತೆ ಪರಂಪರೆ, ಅವರನ್ನು ತಡೆ ಹಿಡಿದಿರುವುದೂ ಅಷ್ಟೇ ನಿಜ. ಅದು ಕವಯಿತ್ರಿಯರನ್ನು ಪೂರ್ತಿ ತಿರಸ್ಕರಿಸಿ ಬಿಟ್ಟಿದ್ದರೆ, ಅವರು ಒಂದು ನಿಜವಾದ ಪರ್ಯಾಯ ಆಗಿ ಬಿಡುವ ಅಪಾಯವಿತ್ತು! ಭಕ್ತ ಕವಯಿತ್ರಿಯರ ಕುರಿತ ಈ ಸಮ್ಮತಿ ಮತ್ತು ಗೌರವ ಅವರ ಬದುಕನ್ನು ತನ್ನ ತೆಕ್ಕೆಗೆ ತೆಗೆದುಕೊಂಡು ಅವರ ಪ್ರತಿಭಟನೆಯ ಉಗ್ರತೆಯನ್ನು ಮೃದುಗೊಳಿಸುವ ವಿಧಾನ ಕೂಡ ಹೌದು ಎಂಬುದನ್ನು ನಾವು ಮರೆಯಕೂಡದು. ಕ್ರಾಂತಿಕಾರಿಯಾಗಿ ಪ್ರಾರಂಭವಾದ ಭಕ್ತಿಪಂಥ

ಕ್ರಮೇಣ ರೂಢಿಯ ಜಾಡಿನಲ್ಲಿ ಸಾಗುವುದಕ್ಕೆ ಇದೇ ಕಾರಣ."[೫] ಎನ್ನುವ ಮಾತು ಪಿತೃ ಪ್ರಭುತ್ವ ಹಾಗೂ ಪುರುಷ ಪಾರಮ್ಯವೇ ಪ್ರಧಾನವಾಗಿದ್ದ ಸಂದರ್ಭದಲ್ಲಿ ಅದನ್ನು ಮೀರಿ ಹೋದವರನ್ನು ವ್ಯವಸ್ಥೆ ತನ್ನ ತೆಕ್ಕೆಗೆ ತೆಗೆದುಕೊಂಡ ಬಗೆಯನ್ನು ತಿಳಿಸುತ್ತದೆ. ವಾಸ್ತವದಲ್ಲಿ ಭಕ್ತ ಕವಯಿತ್ರಿಯರು ತಮ್ಮ ಆಯ್ಕೆಯ ಬದುಕಿಗೆ ಎದುರಾದ ಅಡ್ಡಿ ಆತಂಕಗಳು ಮತ್ತು ಸಮಾಜದ ಸಂಪ್ರದಾಯಗಳನ್ನು ಒಂದೇ ಬಾರಿಗೆ ಎದುರಿಸಲಾಗದೆ, ಪಾರಮಾರ್ಥಿಕ ಕುಟುಂಬದ ಮೊರೆ ಹೋದರು ಎಂದೆನಿಸುತ್ತದೆ. ಆದರೆ ಈ ಪಾರಮಾರ್ಥಿಕ ಸಂಬಂಧದ ಮೂಲಕ ತನ್ನದೇ ಆದ ಸ್ವತಂತ್ರ ವ್ಯಕ್ತಿತ್ವವನ್ನು ರೂಪಿಸಿಕೊಳ್ಳಲು ಇವರು ಮುಂದಾಗಿದ್ದಾರೆ. ಆದುದರಿಂದಲೇ ಭಕ್ತ ಕವಯಿತ್ರಿಯರ ಅಭಿವ್ಯಕ್ತಿಯಲ್ಲಿ ಕಂಡುಬರುವ ಕುಟುಂಬ, ದಾಂಪತ್ಯ, ಲೈಂಗಿಕತೆ ಮುಂತಾದ ಸಂಬಂಧಗಳು ಲೌಕಿಕಕ್ಕಿಂತ ಭಿನ್ನವಾದ, ಸಂಪೂರ್ಣ ಪಾರಮಾರ್ಥಿಕವೂ ಅಲ್ಲದ, ಉತ್ಕಟ ಪ್ರೇಮಾಭಿವ್ಯಕ್ತಿಯ ಸ್ವರೂಪದ್ದಾಗಿರುವುದು ಎಂದೆನಿಸುತ್ತದೆ. ಇದರ ಭಾಗವಾಗಿಯೆ ಅಕ್ಕನ ಪಾರಮಾರ್ಥಿಕ ಸಂಸಾರವನ್ನೂ, ಆ ಸಂಬಂಧದ ನೆವದಲ್ಲಿ ಲೌಕಿಕದ ಜಡತೆಯಿಂದ ಕೂಡಿದ ಸಂಸಾರ ಮತ್ತು ಸಂಬಂಧದ ವಿರುದ್ಧ ಕಂಡುಬರುವ ತೀವ್ರವಾದ ಪ್ರತಿಭಟನೆಯನ್ನು ಗುರುತಿಸಬಹುದು.

ವಚನ ವ್ಯವಸ್ಥೆಯ ಭಾಗವಾಗಿದ್ದ ಇತರೆ ೩೨ ಜನ ವಚನಕಾರ್ತಿಯರೂ ಕೂಡ ಆರಂಭದ ಕವಯಿತ್ರಿಯರ ಗುಂಪಿಗೆ ಸೇರುತ್ತಾರೆ. ಸಾಹಿತ್ಯಿಕ ಹಾಗೂ ಸಾಂಸ್ಕೃತಿಕ ದೃಷ್ಟಿಯಿಂದ ಈ ವಚನಕಾರ್ತಿಯರ ಕೊಡುಗೆ ಅಪಾರ. ಅಕ್ಕನ ವಚನಗಳಲ್ಲಿ ವೈಯಕ್ತಿಕ ಗುರಿಸಾಧನೆ ಹಾಗೂ ತನ್ನ ಅಸ್ತಿತ್ವದ ಪ್ರತಿಪಾದನೆ ಪ್ರಮುಖವಾದರೆ ಇತರೆ ವಚನಕಾರ್ತಿಯರು ವಚನ ವ್ಯವಸ್ಥೆಯ ಭಾಗವಾಗಿ ತಮ್ಮ ಅಸ್ತಿತ್ವವನ್ನು ಕಾಯ್ದುಕೊಳ್ಳುವ ಹಾಗೂ ಸಮಾಜವನ್ನು ತಿದ್ದುವ ಕಾರ್ಯದಲ್ಲಿ ತೊಡಗಿದ್ದಾರೆ. ಅಕ್ಕನಂತೆ ಇಡೀ ವ್ಯವಸ್ಥೆಯನ್ನು ಧಿಕ್ಕರಿಸುವ, ಸ್ಥಾಪಿತ ಮೌಲ್ಯಗಳನ್ನು ಮೀರುವ ಆಶಯ ಇವರಲ್ಲಿ ಇಲ್ಲವಾದರೂ ಸ್ತ್ರೀ ಸ್ವಾತಂತ್ರ್ಯ ಹಾಗೂ ಸಮಾನತೆಯನ್ನು ಕುರಿತಂತೆ ಸಾಮಾಜಿಕ ವ್ಯವಸ್ಥೆಯ ಲೋಪದೋಷಗಳನ್ನು ಗುರುತಿಸುವ, ಅದನ್ನು ವಿರೋಧಿಸುವ, ದಿಟ್ಟತನದಿಂದ ಅಭಿವ್ಯಕ್ತಪಡಿಸುವ ಆತ್ಮಸ್ಥೈರ್ಯವನ್ನು ಇವರ ವಚನಗಳಲ್ಲಿ ಗುರುತಿಸಬಹುದು.

ಇತರೆ ವಚನಕಾರ್ತಿಯರ ವಚನಗಳಲ್ಲಿ ಇಷ್ಟದೈವದ ಸ್ತುತಿ ಪ್ರಧಾನವಾಗಿರುವಂತೆ ಕಂಡುಬಂದರೂ ಸಮಾಜ ವಿಮರ್ಶೆ, ವ್ಯವಸ್ಥೆಯೊಂದಿಗಿನ ಮುಖಾಮುಖಿ ಇವರ ವಚನಗಳ ಭಾಗವಾಗಿರುವುದು ಮಹತ್ವದ ಸಂಗತಿ. ಬೊಂತಾದೇವಿ ಜಾತಿ ಶ್ರೇಣೀಕರಣವನ್ನು ಪ್ರಶ್ನಿಸುತ್ತಾ "ಬಿತ್ತಿಯಿಂದ ಒಳಹೊರಗೆಂಬ ನಾಮವೈಸೆ, ಎಲ್ಲಿ ನೋಡಿದಡೆ ಕರೆದಡೆ ಓ ಎಂಬಾತನೇ ಬಿಡಾಡಿ",[೬] "ಒಂದೇ ಅನಿಲ, ನಿಂದ ದೇಹಪಟ್ಟೆಗಳೊಳಗೆಲ್ಲ"[೭] ಎಂದು ಕುಲದಿಂದ ಮನುಜನ ವ್ಯಕ್ತಿತ್ವವನ್ನು ಅಳೆಯುವ ವಿಧಾನವನ್ನು ವಿರೋಧಿಸುತ್ತಾಳೆ. ಇದು ಜಾತಿ ಶ್ರೇಣೀಕರಣದ ಜೊತೆಗೆ ಲಿಂಗ ಶ್ರೇಣೀಕರಣದ ಬಗೆಗಿನ ವಿರೋಧ ಕೂಡ ಆಗಿದೆ. "ಅಯ್ಯಾ ನಾ ಹುಟ್ಟುವಾಗ ಬಟ್ಟ ಬಯಲೆ ಗಟ್ಟಿಯಾಯಿತ್ತು".[೮] ಎನ್ನುವ ಹಡಪದ ಲಿಂಗಮ್ಮನ ಮಾತು ಕೂಡ ಜಾತಿ ವ್ಯವಸ್ಥೆಯ ಜೊತೆಗೆ ಲಿಂಗ ವ್ಯವಸ್ಥೆಯ ಬೆಂಬಲಿಗರಿಗೆ ನೀಡಿದ ಚಾಟಿ ಏಟಿನಂತಿದೆ. 'ಬಟ್ಟ ಬಯಲು' ಎನ್ನುವುದು ಹುಟ್ಟಿನ ಬಗೆಗಿನ,

ಕುಟುಂಬ ವ್ಯವಸ್ಥೆಯ ಬಗೆಗಿನ ಸ್ಥಾಪಿತ ನಂಬಿಕೆಗಳನ್ನು ಒಡೆಯುವುದು ಮಾತ್ರವಲ್ಲದೆ ಪ್ರಧಾನ ವ್ಯವಸ್ಥೆಯ ದೇಹದ ಬಗೆಗಿನ ನಿರ್ವಚನಗಳನ್ನೂ ಕೂಡ ಅಲ್ಲಗಳೆಯುತ್ತದೆ. ಸಮಾಜದ ನಿರ್ಬಂಧಗಳಿಂದ ಆವರಿಸಲ್ಪಟ್ಟಿರದ ಹುಟ್ಟು ಮುಂದೆ ಪಡೆಯುವ ರೂಪಾಂತರಗಳು ವ್ಯಕ್ತಿ ಭಿನ್ನತೆಗೆ ಹಾಗೂ ವ್ಯಕ್ತಿತ್ವ ನಾಶಕ್ಕೆ ಕಾರಣವಾದ ಬಗೆಗಳನ್ನು ಇವರ ವಚನಗಳಲ್ಲಿ ಕಾಣಬಹುದು. ಈ ಮೂಲಕ ಲಿಂಗ ಸಮಾನತೆಯ ಆಶಯ ಇಲ್ಲಿ ಕಂಡುಬರುತ್ತದೆ.

ವಚನ ವ್ಯವಸ್ಥೆಯ ಆಧಾರ ಸ್ಥಂಭಗಳಾದ ಗುರು, ಲಿಂಗ, ಜಂಗಮ, ಭಕ್ತಿ ಮುಂತಾದ ಪರಿಕಲ್ಪನೆಗಳ ಬಗೆಗೂ ಕೂಡ ವಚನಕಾರ್ತಿಯರಲ್ಲಿ ಅಸಮಾಧಾನವಿದೆ. ಅಮುಗೆ ರಾಯಮ್ಮ ಗುರು ಲಿಂಗ ಜಂಗಮರ ಮಹತ್ವವನ್ನು ತೀವ್ರವಾಗಿ ಅಲ್ಲಗಳೆಯುತ್ತಾಳೆ. "ಗುರುವೆಂಬೆನೆ, ಗುರುವು ನರನು, ಲಿಂಗವೆಂಬೆನೆ ಲಿಂಗ ಕಲ್ಲು, ಜಂಗಮವೆಂಬೆನೆ ಜಂಗಮವು ಆತ್ಮನು, ಪಾದೋದಕವೆಂಬೆನೆ ಪಾದೋದಕ ನೀರು".[೯] ಎಂದು ಗುರು ಲಿಂಗ ಜಂಗಮರ ಬಗೆಗಿನ ಆಲೋಚನೆಯನ್ನು ತಲೆಕೆಳಗು ಮಾಡುತ್ತಾಳೆ ಇವಳ ಪ್ರಕಾರ ಗುರು ನರ, ಲಿಂಗ ಕಲ್ಲು, ಜಂಗಮ ಆತ್ಮ, ಪಾದೋದಕ ನೀರು. ನರ, ಕಲ್ಲು, ಆತ್ಮ, ನೀರು ತಮ್ಮ ಮೂಲ ಸ್ವರೂಪವನ್ನು ಬಿಡುವವರೆಗೂ ಆ ಸ್ಥಾನಕ್ಕೇರಲು ಸಾಧ್ಯವಿಲ್ಲ, ಮತ್ತು ಮಾನವನಾಗಿ ಹುಟ್ಟಿದ ಮೇಲೆ ಸಹಜ ಸ್ವಭಾವಗಳನ್ನು ಕಳೆದುಕೊಳ್ಳುವುದು ಸುಲಭವೂ ಅಲ್ಲ. ಈ ಅರಿವಿನೊಂದಿಗೆ ವಚನಕಾರ್ತಿಯರು ವ್ಯವಸ್ಥೆಗೆ ಮುಖಾಮುಖಿಯಾಗುತ್ತಾರೆ. ರಾಯಮ್ಮನ ಇತರೆ ವಚನದ ಸಾಲುಗಳು ಈ ಅಂಶವನ್ನು ಮತ್ತಷ್ಟು ಸ್ಪಷ್ಟಪಡಿಸುತ್ತವೆ. "ಮಾಯಾಯೋನಿಯಲ್ಲಿ ಹುಟ್ಟುವ ಮರುಳರೆಲ್ಲರು ಮಹಾಜ್ಞಾನಿಗಳಪ್ಪರೆ"?[೧೦] "ರಚ್ಚೆಯಲ್ಲಿ ಕುಳಿತು ಇಷ್ಟಲಿಂಗವನಪ್ಪಿದವರ ನಿತ್ಯಜ್ಞಾನಿಗಳೆಂದಡೆ ಪ್ರತ್ಯಕ್ಷವಾಗಿ ಸುರಿಯ ಬಾಯಲ್ಲಿ ಬಾಲಹುಳು"[೧೧] ಎಂದು ಕಪಟ ವೇಶದಾರಿಗಳು, ಲಾಂಚನಕ್ಕೆ ಎರಗುವ ಭಕ್ತರನ್ನು ಕೂಡ ಕಟುವಾಗಿ ಟೀಕಿಸುತ್ತಾಳೆ. ಬಸವಣ್ಣನ 'ಲಾಂಛನಕ್ಕೆ ಶರಣೆಂಬೆ' ಎಂಬ ಆಶಯದ ಪೊಳ್ಳುತನವನ್ನೂ, ಅದರ ವಿಭಿನ್ನ ಆಯಾಮಗಳನ್ನೂ ಮರುಪರಿಶೀಲನೆಗೆ ಒಳಪಡಿಸುತ್ತಾಳೆ. ವಚನಕಾರರು ಗುರು ಲಿಂಗ ಜಂಗಮ ಯಾವವೇಶದಲ್ಲಿದ್ದರೂ ವಂದಿಸಬೇಕೆಂದರೆ ರಾಯಮ್ಮ ತಾನೇ ಗುರು ಲಿಂಗ ಜಂಗಮುವಾದ ಬಳಿಕ ತನಗೆ ಅನ್ಯದ ಹಂಗಿಲ್ಲ ಎಂದು ಇಡೀ ವಚನ ವ್ಯವಸ್ಥೆಯ ಆಶಯಗಳನ್ನೇ ಬುಡಮೇಲು ಮಾಡುತ್ತಾಳೆ. ಇಲ್ಲಿಯೂ ಕೂಡ ಲಿಂಗ ಸಮಾನತೆಯ ಆಶಯವೇ ಅಡಗಿರುವುದನ್ನು ಗುರುತಿಸಬಹುದು.

ಅಕ್ಕನನ್ನೂ ಒಳಗೊಂಡಂತೆ ಗಂಡು ಹೆಣ್ಣಿನ ಸಂಬಂಧ ಹಾಗೂ ಇರುವಿಕೆಯ ನೆಲೆಗಳ ಚರ್ಚೆಯನ್ನು ಹೆಚ್ಚಿನ ಪ್ರಮಾಣದಲ್ಲಿ ಮಾಡಿದವರು ವಚನಕಾರ್ತಿಯರು. 'ಎಲ್ಲರ ಗಂಡರ ಶೃಂಗಾರದ ಪರಿಯಲ್ಲ , ಎನ್ನ ನಲ್ಲನ ಶೃಂಗಾರದ ಪರಿ ಬೇರೆ'[೧೨]ಎನ್ನುವ ಅಕ್ಕ ಸಾಮಾಜಿಕವಾಗಿ ಸ್ಥಾಪಿಸಲ್ಪಟ್ಟಿರುವ ಗಂಡು ಹೆಣ್ಣಿನ ಸಂಬಂಧದ ಮೂಲನೆಲೆಗಳನ್ನೇ ಕಿತ್ತೊಗೆಯುತ್ತಾಳೆ. ತನ್ನ ಮತ್ತು ಚೆನ್ನಮಲ್ಲಿಕಾರ್ಜುನನ ಸಂಬಂಧ ಎಂದೆಂದೂ ಬಿಡದ ಬಾಳುವೆ ಎನ್ನುವ ಅಕ್ಕ ಆತ ತನ್ನ 'ಆತ್ಮಸಂಗಾತಿ'ಎನ್ನುತ್ತಾಳೆ. ನೀಲಮ್ಮ ತನ್ನ ಹಾಗೂ ಬಸವಣ್ಣನ ಸಂಬಂಧವನ್ನು ಕುರಿತಂತೆ ಒಂದು

ವಚನದಲ್ಲಿ "ಮಡದಿ ಎನಲಾಗದು ಬಸವಂಗೆ ಎನ್ನನು, ಪುರುಷನೆನಲಾಗದು ಬಸವನ ಎನಗೆ, ಉಭಯದ ಕುಳವ ಹರಿದು ಬಸವಂಗೆ ಶಿಶುವಾನಾದೆನು, ಬಸವನೆನ್ನ ಶಿಶುವಾದನು"[೧೩] ಎಂದು ಗಂಡ ಹೆಂಡತಿ ಸಂಬಂಧ ಕೇವಲ ಲೈಂಗಿಕ ಅಪೇಕೆಗಳಿಗಷ್ಟೇ ಸೀಮಿತವಾದುದಲ್ಲ ಆತ್ಮತೃಪ್ತಿಯ ಅನುಸಂಧಾನ ಕೂಡ ಸಾಧ್ಯ ಎಂಬ ಅಂಶವನ್ನು ಎತ್ತಿಹಿಡಿಯುತ್ತಾಳೆ. ಈ ರೀತಿಯ ಸಂಬಂಧದಿಂದ ಮಾತ್ರ ಪರಸ್ಪರರಲ್ಲಿ ಗೌರವ, ಪ್ರೀತಿ, ವಿಶ್ವಾಸ ಮೂಡುತ್ತದೆ ಎನ್ನುವ ಮೂಲಕ ವ್ಯವಸ್ಥೆಯ ಅಪೇಕ್ಷಿತ ದಾಂಪತ್ಯ ಪರಿಕಲ್ಪನೆಯನ್ನು ಒಡೆಯುತ್ತಾಳೆ. ಗೊಗವ್ವೆಯ ಮತ್ತೊಂದು ವಚನ ಕೂಡ ದಾಂಪತ್ಯದ ಬಗೆಗಿನ ಸ್ಥಾಪಿತ ನಂಬಿಕೆಗಳನ್ನು ಪ್ರಶ್ನಿಸುವುದರ ಮೂಲಕವೇ ನಿರಾಕರಿಸುತ್ತದೆ. "ಗಂಡು ಮೋಹಿಸಿ ಹೆಣ್ಣ ಹಿಡಿದಡೆ ಅದು ಒಬ್ಬರ ಒಡವೆ ಎಂದು ಅರಿಯಬೇಕು, ಹೆಣ್ಣು ಮೋಹಿಸಿ ಗಂಡ ಹಿಡಿದಡೆ ಉತ್ತರವಾವುದೆಂದರಿಯಬೇಕು"[೧೪] ಎಂಬ ವಾಕ್ಯ ಪುರುಷಪ್ರಧಾನ ವ್ಯವಸ್ಥೆ ಹಿಂದಿನಿಂದ ಸ್ಥಾಪಿಸಿಕೊಂಡು ಬಂದಿರುವ ಗಂಡಿನ ಮೋಹಿಸುವ ಹಕ್ಕು, ಹೆಣ್ಣು ತನ್ನ ಆಸ್ತಿಯ ಭಾಗ ಎಂಬ ನಂಬಿಕೆಗಳನ್ನು ಪ್ರಶ್ನಿಸುವುದರೊಂದಿಗೆ, ಹೆಣ್ಣೂ ಕೂಡ ಮೋಹಿಸುವ ಹಕ್ಕು, ಮನಸ್ಸನ್ನು ಹೊಂದಿದ್ದಾಳೆ ಅದನ್ನು ನಿರ್ವಚಿಸುವ ಬಗೆ ಹೇಗೆ ಎನ್ನುತ್ತಾಳೆ. ಏಕೆಂದರೆ ಹೆಣ್ಣಿಗೆ ಯಾವುದೇ ರೀತಿಯ ಲೈಂಗಿಕ ಅಭಿವ್ಯಕ್ತಿಯ ಆಸಕ್ತಿ ಹಾಗೂ ಅವಕಾಶಗಳು ಇಲ್ಲ ಎಂದು ನಂಬಿಸಲಾಗಿರುವ ಸಂದರ್ಭದಲ್ಲಿ ಹೆಣ್ಣು ಗಂಡನ್ನು ಮೋಹಿಸುವುದು ನಿಶಿದ್ಧ. ಹಾಗೇನಾದರೂ ಆಗಿದ್ದಲ್ಲಿ ಅದು ಸಮಾಜದ ಆರೋಗ್ಯವನ್ನು ಹಾಳು ಮಾಡುವ ಬಗೆಯದು ಎಂಬ ವಿಚಾರವೇ ಪ್ರಬಲವಾಗಿದ್ದ ಸಂದರ್ಭದಲ್ಲಿ ಗೊಗ್ಗವ್ವೆಯ ಈ ವಚನ ಹೆಣ್ಣಿನ ಅಪೇಕ್ಷೆಯನ್ನೂ, ಅದಕ್ಕೆ ಸಮಾಜ ನೀಡುತ್ತಿರುವ ಪ್ರತಿಕ್ರಿಯೆಯನ್ನೂ, ಅದಕ್ಕೆ ತನ್ನ ವಿರೋಧವನ್ನೂ ಏಕಕಾಲಕ್ಕೆ ವ್ಯಕ್ತಪಡಿಸುತ್ತದೆ.

ದೇವರ ಕಲ್ಪನೆಯನ್ನು ಕುರಿತ ಇವರ ಆಲೋಚನಾವಿಧಾನ ಕೂಡ ಭಿನ್ನವಾದದ್ದು. ಅಮ್ಮುಗೆ ರಾಯಮ್ಮ ಹೊನ್ನ ಬಯಸುವ ಶಿವನನ್ನಾದರೂ ಟೀಕಿಸದೆ ಬಿಡುವುದಿಲ್ಲ ಎಂದರೆ ಸತ್ಯಕ್ಕ ದೇವರ ಹಿರಿತನವನ್ನು "ಬಾಣನ ಮನೆಯ ಬಾಗಿಲ ಕಾಯ್ವುದು, ನಂಬಿಗೆ ಕುಂಟಣಿಯಾದುದು, ಸಿರಿಯಾಳನ ಮಗನ ಕೊಲುವುದು, ಬಲ್ಲಾಳನ ವಧುವ ಬೇಡುವುದು, ನಾರಿಯರಿಬ್ಬರೊಡನೆ ಇಪ್ಪುದು, ನಿಮ್ಮ ಹಿರಿತನವೇ"?[೧೫] ಎಂದು ಪ್ರಶ್ನಿಸುವ ಮೂಲಕ ದೈವತ್ವದ ಹಿರಿಮೆಯನ್ನು ಸಾರುವ ಕಾರ್ಯಗಳನ್ನು ಕೆಡುಕಿನ ಸಂಕೇತಗಳಾಗಿ ಗುರುತಿಸುತ್ತಾಳೆ. ಕಡೆಯ ಪ್ರಶ್ನೆಗಳಾದ "ಬಲ್ಲಾಳನ ವಧುವ ಬೇಡುವುದು ಹಾಗೂ ನಾರಿಯರಿಬ್ಬರೊಡನಿಪ್ಪುದು" ಹೆಣ್ಣನ್ನು ತನ್ನಿಚ್ಚೆಯಂತೆ ಬಳಸಿಕೊಳ್ಳುವ ಗಂಡಿನ ಮನೋಭಾವವನ್ನೂ, ಗಂಡು ಹೆಣ್ಣಿನ ಸಂಬಂಧದ ಬಿರುಕನ್ನೂ ಎತ್ತಿಹಿಡಿಯುತ್ತದೆ "ದೇವಾಲಯದಲ್ಲಿ ಸತ್ತಡೆ ಸಂಪ್ರೋಕ್ಷಣವಲ್ಲದೆ ದೇವರು ಸತ್ತಲ್ಲಿ ಉಂಟೆ ಸಂಪ್ರೋಕಣೆ"[೧೬] ಎಂದು ಪ್ರಶ್ನಿಸುವ ಅಕ್ಕಮ್ಮ ಹಿಂದಿನಿಂದ ಆಚರಣೆಯಲ್ಲಿದ್ದ ಪ್ರಧಾನ ವ್ಯವಸ್ಥೆಯ ದ್ವಂದ್ವಗಳನ್ನು ಗುರುತಿಸುತ್ತಾಳೆ. ಇದು ಗಂಡು ಹೆಣ್ಣಿನ ಬಗೆಗಿನ ಸಮಾಜದ ದ್ವಂದ್ವ ನೀತಿಯನ್ನು ಕುರಿತಾದ ಪ್ರಶ್ನೆ ಕೂಡ ಆಗಿದೆ. ಹಾಗೂ ದೇವರೆ ಸತ್ತಲ್ಲಿ ಯಾವ ಪರಿಹಾರ ನಿಮ್ಮಿಂದ ಸಾಧ್ಯವಿದೆ ಎಂಬ ಸವಾಲು ಇಂದಿಗೂ ಕೂಡ ಪ್ರಸ್ತುತ.

ಅಕ್ಕನಿಗೆ ಸರಿಸಾಟಿಯಾಗಿ ಲೈಂಗಿಕ ಉಪಮೆಗಳನ್ನು ನೀಡಬಲ್ಲ ಮತ್ತೊಬ್ಬ ವಚನಕಾರ್ತಿ ಕದಿರೆ ರೆಮ್ಮವ್ವೆ, ಜೀವಶಾಸ್ತ್ರೀಯ ಮಾಹಿತಿ ಯಾವುದನ್ನು ಗಂಡು ಎಂದು ಕರೆಯಲ್ಪಟ್ಟಿದೆಯೋ, ಯಾವ ಕಾರಣದಿಂದ ಗಂಡು ಸಮಾಜದಲ್ಲಿ ಮಾನ್ಯತೆಯನ್ನು ಪಡೆದುಕೊಂಡಿದ್ದಾನೋ ಅದನ್ನೇ . ಅಲ್ಲಗಳೆಯುತ್ತಾಳೆ "ಎಲ್ಲರ ಗಂಡಂದಿರು ಪರದಳ ವಿಭಾಡರು, ಎನ್ನ ಗಂಡ ಮನದಳ ವಿಭಾಡ, ಎಲ್ಲರ ಗಂಡಂದಿರು ಗಜವೇಂಟೆಕಾರರು; ಎನ್ನ ಗಂಡ ಮನವೇಂಟೆಕಾರ, ಎಲ್ಲರ ಗಂಡಂದಿರಿಗೆ ಮೂರು, ಎನ್ನ ಗಂಡಗೆ ಅದೊಂದೆ; ಅದೊಂದೂ ಸಂದೇಹ" ಹಾಗೂ "ಎಲ್ಲರ ಗಂಡಂದಿರಿಗೆ ಬೀಜವುಂಟು; ಎನ್ನ ಗಂಡಗೆ ಅಂಡದ ಬೀಜವಿಲ್ಲ. ಎಲ್ಲರ ಗಂಡಂದಿರು ಮೇಲೆ; ಎನ್ನ ಗಂಡ ಕೆಳಗೆ ನಾ ಮೇಲೆ"[೧೭] ಎನ್ನುವ ರೆಮ್ಮವ್ವೆ ಗಂಡನ ಬಗೆಗಿನ ಸಾಮಾಜಿಕ ನಂಬಿಕೆಯನ್ನು ಅಲ್ಲಗಳೆಯುತ್ತಾಳೆ ಹಾಗೂ ಪುರುಷ ಪ್ರಧಾನ ವ್ಯವಸ್ಥೆ ಯಾವುದನ್ನು 'ಗಂಡಿನ', 'ಪೌರುಷದ', 'ಹಿರಿಮೆಯ' ಸಂಕೇತಗಳೆಂದು ಬಿಂಬಿಸಿತ್ತೋ ಅವೆಲ್ಲವನ್ನೂ ನಿರಾಕರಿಸುತ್ತಾಳೆ

ವಚನಕಾರ್ತಿಯರಲ್ಲಿ ಕಂಡುಬರುವ ನೇರವಾದ ಪ್ರತಿಭಟನೆಯ ಮಾದರಿ ಎಂದರೆ ಗಂಡಿಗೆ ಸಮಾನವಾಗಿ ನಿಂತು ಚರ್ಚಿಸುವ, ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸುವ ಅವನ ತಪ್ಪನ್ನು ತಿದ್ದುವ ಕ್ರಮ. ಅಲ್ಲಮನಂತಹ ಮಹಾಜ್ಞಾನಿಯೊಡನೆ ಮುಕ್ತ ಚರ್ಚೆ ಹಾಗೂ ಸಂಭಾಷಣೆಗಳಿಗೆ ತೊಡಗಿದವರು ಮುಕ್ತಾಯಕ್ಕ ಮತ್ತು ಅಕ್ಕಮಹಾದೇವಿ. ಇವರು ಅಲ್ಲಮನಿಗೆ ಸಮಾನವಾದ ಜ್ಞಾನ ಮತ್ತು ಚಿಂತನೆಯನ್ನು ಅಭಿವ್ಯಕ್ತಪಡಿಸುವುದರ ಮೂಲಕ ಅವನಿಂದಲೇ ಮೆಚ್ಚುಗೆ ಪಡೆಯುತ್ತಾರೆ. ಆಯ್ದಕ್ಕಿ ಲಕ್ಕಮ್ಮ ಮತ್ತು ಮೋಳಿಗೆ ಮಹಾದೇವಿ ತಮ್ಮ ಗಂಡಂದಿರು ಮಾಡಿದ ತಪ್ಪನ್ನು ತಿದ್ದುವ ಮೂಲಕ ಸ್ವಂತಿಕೆಯನ್ನು ಮೆರೆದಿದ್ದಾರೆ. ಆಯ್ದಕ್ಕಿ ಲಕ್ಕಮ್ಮನಂತು 'ಒಮ್ಮನವ ಮೀರಿ ಇಮ್ಮನದಲ್ಲಿ ತಂದಿರಿ ಇದು ನಿಮ್ಮ ಮನವೊ ಬಸವಣ್ಣನ ಅನುಮಾನದ ಚಿತ್ತವೋ'೧೮ ಎಂದು ಬಸವಣ್ಣನ ಅನುಮಾನವನ್ನು ಕೂಡ ಸವಾಲಾಗಿ ಸ್ವೀಕರಿಸಲು ಮುಂದಾಗುತ್ತಾಳೆ.

ಒಟ್ಟಾರೆ ವಚನಕಾರ್ತಿಯರು ವಚನ ವ್ಯವಸ್ಥೆಯ ಭಾಗವಾಗಿದ್ದು ಕೊಂಡೆ ಅದರ ಲೋಪದೋಷಗಳನ್ನು ಕಟುವಾಗಿ ಟೀಕಿಸುವ ಸಾಮಾಜಿಕ ವ್ಯವಸ್ಥೆಯ ಏರುಪೇರುಗಳನ್ನು ಗುರುತಿಸುವ, ಅದಕ್ಕೆ ಪ್ರತಿರೋಧವನ್ನು ಒಡ್ಡುವ, ಸರಿಪಡಿಸಲು ಪರಿಹಾರಗಳನ್ನು ಹುಡುಕುವ ಪ್ರಯತ್ನವನ್ನು ಸ್ವಲ್ಪ ಮಟ್ಟಿಗಾದರೂ ಮಾಡಿದ್ದಾರೆ. ಈ ಹಿನ್ನೆಲೆಯಲ್ಲಿ ವಚನಕಾರ್ತಿಯರ ಪ್ರಯತ್ನ ಶ್ಲಾಘನೀಯವಾದುದು.

ಕನ್ನಡ ಮಹಿಳಾ ಸಾಹಿತ್ಯದಲ್ಲಿ ಗುರುತಿಸಬಹುದಾದ ಮತ್ತೊಂದು ಪ್ರಮುಖ ಕೃತಿ ಸಂಚಿಹೊನ್ನಮ್ಮನ ಹದಿಬದೆಯ ಧರ್ಮ. 'ಸ್ತ್ರೀ ನೀತಿ ಬೋಧೆ' ಎಂಬ ಹಣೆಪಟ್ಟಿಯನ್ನು ಹೊತ್ತಿರುವ ಈ ಕೃತಿಯ ಮೂಲ ಆಶಯ , ರಚನೆಯ ಹಿಂದಿನ ಉದ್ದೇಶ ಏನು ಎಂಬುದನ್ನು ಗುರುತಿಸಿಕೊಂಡಲ್ಲಿ ಮಾತ್ರ ಹೊನ್ನಮ್ಮನ ಆಶಯವನ್ನು ಸಮರ್ಥವಾಗಿ ಅರಿಯಲು ಸಾಧ್ಯ. ಮೊದಲನೆಯದಾಗಿ ರಾಜನ

ಒತ್ತಾಯದ ಮೇರೆಗೆ **ಔಚಿತ್ಯ** ವತ್ತು **ಅರ್ಥಕಾಂತಿ** ತುಂಬಿರುವ ಕೃತಿಯನ್ನು ರಚಿಸುತ್ತಿರುವುದಾಗಿ ಹಾಗೂ

ಆದಿಕಾವ್ಯದೊಳೈದನೆಯ ವೇದದೊಳ್ ಮ
ನ್ವಾದಿಕ ಧರ್ಮಶಾಸ್ತ್ರದೊಳು
ಭೇದಿಸಿ ಪಿರಿಯರು ಪೇಳದುದನೆ ಕೃತಿ
ಗೈದಾನು ಕಿವಿಗೊಳಿಸಿದೆನು [೧೯]

ಎಂಬ ಪೀಠಿಕಾ ಭಾಗದಲ್ಲಿನ ಮಾತುಗಳು ಕೃತಿರಚನೆಯ ಹಿಂದಿನ ಒತ್ತಾಯ ಹಾಗೂ ಅನಿವಾರ್ಯತೆಯನ್ನು ಪ್ರತಿಬಿಂಬಿಸುತ್ತದೆ. 'ಸರಸ ಸಾಹಿತ್ಯದ ಅಧಿದೇವತೆ' ಎಂದು ಗುರು ಅಳಸಿಂಗರಾರ್ಯರಿಂದ ಕೀರ್ತಿ ಪಡೆದಿದ್ದ ಹೊನ್ನಮ್ಮ ಪ್ರಭುತ್ವದ ಆಶ್ರಯದಲ್ಲಿದ್ದುಕೊಂಡು ಸ್ವತಂತ್ರ ಅಭಿವ್ಯಕ್ತಿ ಎಷ್ಟು ಕಷ್ಟ ಎಂಬುದನ್ನು "ಒಡೆಯ ನಿರಿಸಿದಂತಿರ್ಪುದಲ್ಲದೆ ಪೇಳೊಡವೆಗೆ ಬೇರಿರವುಂಟೆ"[೨೦] ಎನ್ನುವ ಮೂಲಕ ವ್ಯಕ್ತಪಡಿಸುತ್ತಾಳೆ. ಇಲ್ಲಿ ಗಮನಿಸಬಹುದಾದ ಮುಖ್ಯ ಅಂಶ ಎಂದರೆ ಹಿರಿಯರು ತಿಳಿಹೇಳದ್ದನ್ನು ಕೃತಿಗೈದು ಹೇಳುತ್ತಿದ್ದೇನೆ ಎಂಬ ಮಾತುಗಳು. ಇದೂ ಕೂಡ ಕೃತಿ ರಚನೆಯ ಹಿಂದಿರುವ ಪ್ರಭುತ್ವ ಹಾಗೂ ಸಂಪ್ರದಾಯದ ಒತ್ತಡ ಹಾಗೂ ನಿಯಂತ್ರಣದ ಮಾದರಿಗಳನ್ನು ತೆರೆದಿಡುತ್ತವೆ. ಬೆಳವಣಿಗೆಯ ತುಡಿತದಲ್ಲಿರುವ ಮಹಿಳೆಯ ಅಭಿವ್ಯಕ್ತಿ ಸ್ವಾತಂತ್ರ್ಯವನ್ನು ಪ್ರಧಾನವ್ಯವಸ್ಥೆ ಮೌಲ್ಯಪ್ರತಿಪಾದನೆ ಹಾಗೂ ತನ್ನ ಅನುಕೂಲಕ್ಕೆ ಬಳಸಿಕೊಂಡ ವಿಧಾನ ಹಾಗೂ ಅದನ್ನು ತನ್ನ ಅಪೇಕ್ಷೆಗೆ ತಕ್ಕಂತೆ ಅರ್ಥೈಸಿದ ಬಗೆಗೆ ಇದು ಪ್ರಮುಖ ಉದಾಹರಣೆಯಾಗಿದೆ. ಆದರೆ ಹೊನ್ನಮ್ಮನ ಆಂತರ್ಯದ ಧ್ವನಿ ಈ ಕೃತಿಯನ್ನು ಎಲ್ಲಾ ರೀತಿಯ ಹೆಣ್ಣುಗಳಿಗೂ ಅನುಕೂಲವಾಗುವಂತೆ ರಚಿಸುತ್ತಿರುವೆನು ಎಂಬುದನ್ನು ಪ್ರತಿಪಾದಿಸುತ್ತಿರುವ ಸಂದರ್ಭದಲ್ಲಿಯೂ ಕೂಡ ಪುರುಷ ನಿರ್ಮಿತ ಭಾಷೆಯ ತೊಡಕುಗಳು ಅದಕ್ಕೆ ಅಡ್ಡಿಯುಂಟುಮಾಡಿರುವುದನ್ನು ಇಲ್ಲಿ ಗಮನಿಸಬಹುದು. 'ಹದಿಬದೆಯ' ಮೂಲಕವೇ ಹೆಣ್ಣಿನ 'ಹಿರಿಮೆಯನ್ನು' ಗುರುತಿಸಬೇಕಾಗಿರುವುದು, ಅದಕ್ಕೆ ಪರ್ಯಾಯಗಳನ್ನು ಕಟ್ಟಿಕೊಳ್ಳಲು ಸಾಧ್ಯವಾಗದಿರುವುದು, ಪುರುಷ ಪ್ರಧಾನ ಅಂಗರಾಜಕಾರಣದ ಬಹುದೊಡ್ಡ ಹುನ್ನಾರ. ಆದರೆ ಹೊನ್ನಮ್ಮನ ಆಶಯದ ಹಿನ್ನೆಲೆಯಲ್ಲಿ 'ಹದಿಬದೆಯ ಧರ್ಮ'ವನ್ನು ಸೂಕ್ಷ್ಮವಾಗಿ ಗಮನಿಸಿದಾಗ ಸಮಾಜದ ಪ್ರಮುಖ ಘಟಕವಾದ ಕುಟುಂಬ ವ್ಯವಸ್ಥೆಯನ್ನು ಭದ್ರಪಡಿಸುವ ಹಾಗೂ ಅದರ ಆರೋಗ್ಯವನ್ನು ಕಾಪಾಡುವ ಕಾಳಜಿ ಎದ್ದು ಕಾಣುತ್ತದೆ. ಅಲ್ಲದೆ ಗಂಡನ್ನು ಕುಟುಂಬದ ಆಶಯಗಳಿಗೆ ತಕ್ಕಂತೆ 'ಒಗ್ಗಿಸಿಕೊಳ್ಳುವ' ಪ್ರಯತ್ನ ಹೇಗಿರಬೇಕು ಎಂಬುದನ್ನು ಪುರಾಣ ಪಾತ್ರಗಳಿಂದ ರೂಪುಗೊಂಡ ಮೌಲ್ಯಗಳ ಹಿನ್ನೆಲೆಯಲ್ಲಿ ಮತ್ತೆ ಮತ್ತೆ ಚರ್ಚೆಗೆ ಒಳಪಡಿಸುತ್ತಾಳೆ. ಈ ಮೂಲಕ ಪುರುಷ ಪ್ರಧಾನ ಕುಟುಂಬ, ದಾಂಪತ್ಯ, ಗಂಡ್ತನ, ಹೆಣ್ತನದ ಮೌಲ್ಯಗಳನ್ನು ಮುರಿದು ಕಟ್ಟಲು ಪ್ರಯತ್ನಿಸುತ್ತಾಳೆ.

ಹದಿಬದೆಯ ಧರ್ಮದಲ್ಲಿ ಬರುವ ಆರನೆಯ ಸಂಧಿ ಹೊನ್ನಮ್ಮನ ಕೃತಿ ರಚನೆಯ ಹಿಂದಿನ ಉದ್ದೇಶ ಹಾಗೂ ಒಲವುಗಳನ್ನು ಸ್ಪಷ್ಟಪಡಿಸುತ್ತದೆ. ಅಲ್ಲದೆ ಹೊನ್ನಮ್ಮನ ಸ್ತ್ರೀಪರವಾದ ಕಾಳಜಿಯ ಸ್ವರೂಪವನ್ನು ಅರಿಯುವ ದೃಷ್ಟಿಯಿಂದ ಕೂಡ ಇದು ಪ್ರಮುಖವಾದದ್ದು. ಈ ಭಾಗದಲ್ಲಿ ಕಂಡು ಬರುವ

ಪ್ರಮುಖವಾದ ಅಂಶ ಎಂದರೆ ಹೊನ್ನಮ್ಮ ಕೇವಲ ಹೆಣ್ಣಿಗಷ್ಟೇ ನೀತಿಬೋಧನೆಯನ್ನು ಮಾಡದೆ ಗಂಡಿಗೂ ಕೂಡ ಉತ್ತಮ ರೀತಿಯಲ್ಲಿ ಕುಟುಂಬ ವ್ಯವಸ್ಥೆಯನ್ನು ನಿರ್ವಹಿಸಲುಬೇಕಾದ 'ಗುಣ'ಗಳನ್ನು ಕುರಿತು ತಿಳಹೇಳುತ್ತಾಳೆ. ಆ ಸನ್ನಿವೇಶಕ್ಕೆ ಹೋಲಿಸಿದರೆ ಇದು ಒಂದು ರೀತಿಯಲ್ಲಿ ಕ್ರಾಂತಿಕಾರಕವಾದ ಹೆಜ್ಜೆಯೇ ಆಗಿದೆ. ಏಕೆಂದರೆ ಒತ್ತಾಯದ ಮೇರೆಗೆ ಸ್ತ್ರೀತತ್ವ ಬೋಧನೆಗೆ ಸಂಬಂಧಿಸಿದ ಕಾವ್ಯವನ್ನು ರಚಿಸಲು ತೊಡಗುವ ಕವಯತ್ರಿ ಕುಟುಂಬ ವ್ಯವಸ್ಥೆಯ ಸಮತೋಲನ ಕಾಯ್ದುಕೊಳ್ಳುವ ಹೊಣೆಗಾರಿಕೆ ಹೆಣ್ಣಿನಷ್ಟೇ ಗಂಡಿಗೂ ಇದೆ. ಹೆಣ್ಣು ಗಂಡನ್ನರಿಯುವುದರೊಂದಿಗೆ ಗಂಡೂ ಕೂಡ ಹೆಣ್ಣಿನ ಮನಸ್ಸನ್ನರಿತು ಪರಸ್ಪರ ಗೌರವ ನೀಡಿ ಅವಳನ್ನು 'ಒಲಿಸಿ'ಕೊಳ್ಳಬೇಕು ಎನ್ನುತ್ತಾಳೆ. ಆರನೇ ಸಂಧಿಯ ಮಹತ್ವವನ್ನು ಕುರಿತಂತೆ 'ಎಳೆ ಜವ್ವನದೊಳೆಡೆ ಜವ್ವನದೊಳು ಮತ್ತಿಳವ ಜವ್ವನದೊಳನಿಯಳ ಒಳಗರಿತುಪಚರಿಸುವ ನಲ್ಲನಿಗವಳೊಲಗಪ್ಪ ಬಗೆಯ ಬಣ್ಣಿಪೆನು'[೩೧] ಹಾಗೂ 'ಎರವಳ್ಳೆನಿತಿಲ್ಲದೊರ್ವರೊರ್ವರೊಳೊಡವೆರೆದಿರ್ಪ ಸತಿಪತಿಗಳಗೆ ದೊರೆಕೊಂಬುದು ಸಂಸಾರ ಸುಖದ ಸುಗ್ಗಿ ಪರದೊಳಾನಂದ ಪರ್ಬುವುದು'.[೩೨] ಇಲ್ಲಿ ಗಮನಿಸಬಹುದಾದ ಮುಖ್ಯ ಸಂಗತಿಗಳೆಂದರೆ ಮೊದಲನೆಯದಾಗಿ ಹೊನ್ನಮ್ಮ ಹೆಣ್ಣಿನ ಮನಸ್ಥಿತಿ ಎಳೆಜೌವ್ವನ, ಯೌವ್ವನ, ಹಾಗೂ ಇಳ ಯೌವ್ವನಾವಸ್ಥೆಯಲ್ಲಿ ಭಿನ್ನತೆಯಿಂದ ಕೂಡಿರುತ್ತದೆ ಎಂದೂ, ಗಂಡು ಅದನ್ನರಿತು ಅವಳೊಂದಿಗೆ ಬಾಳಬೇಕೆಂದು ತಿಳಸಬಯಸುತ್ತಾಳೆ. ಬಹುಶಃ ಹೆಣ್ಣಿನ ಮಾನಸಿಕ ಸ್ಥಿತ್ಯಂತರಗಳನ್ನು ಮೊದಲ ಬಾರಿಗೆ ಗುರುತಿಸಿದವಳು ಹೊನ್ನಮ್ಮನೇ ಎಂದೆನಿಸುತ್ತದೆ. ಎರಡನೆಯದಾಗಿ ಮೌಲ್ಯವ್ಯವಸ್ಥೆ ಸಹನೆ, ತಾಳ್ಮೆ, ಹೊಂದಾಣಿಕೆಯಂತಹ ಗುಣಗಳನ್ನು ಹೆಣ್ಣಿನ ಮೇಲೆ ಹೇರುವುದರ ಮೂಲಕ ಅವಳನ್ನು ಸಂಸಾರಕ್ಕೆ ಒಗ್ಗಿಸುವ ಪ್ರಯತ್ನ ಮಾಡುತ್ತಿದ್ದರೆ ಹೊನ್ನಮ್ಮ ಸಂಸಾರದ ಸುಖಕ್ಕೆ ಗಂಡು ಹೆಣ್ಣು ಇಬ್ಬರ ಕೊಡುಗೆ ಕೂಡ ಮುಖ್ಯ ಎಂಬುದರ ಕಡೆಗೆ ಗಮನ ಸೆಳೆಯುತ್ತಾಳೆ. ಅಲ್ಲದೆ 'ಮಚ್ಚರಿಸದೆ ಮೋನದೊಳರದೆ ಮೋಡಿಯ ಕಾಣಿಸದೆ ಸನ್ಮಾನದಿ ಮನಗರಗಿಪುದು',[೩೩] 'ಆಯಿತಾಯಿತು ಎಂದಲ್ಲ ಗಳೆಯದೆ', ಎಂಬ ಮಾತುಗಳು ಪುರುಷಪ್ರಧಾನ ಮೌಲ್ಯವ್ಯವಸ್ಥೆಗೆ ಹೊನ್ನಮ್ಮ ತೋರುವ ಪ್ರತಿಕ್ರಿಯೆ ಎಂದು ಗುರುತಿಸಬಹುದು. ಇಲ್ಲಿ ಗಂಡೂ ಕೂಡ ಬದಲಾಗಬೇಕಾದ ಅನಿವಾರ್ಯತೆಯನ್ನು ಹಾಗೂ ಮಾನಸಿಕ ಸಿದ್ಧತೆಯನ್ನು ಕುರಿತು ಸವಿಸ್ತಾರವಾಗಿ ಚರ್ಚಿಸಲಾಗಿದೆ. ಆದರೆ ಇದುವರೆಗಿನ ಹದಿಬದೆಯ ಧರ್ಮದ ಬಹುಪಾಲು ಓದುಗಳು ಇದನ್ನು 'ಸ್ತ್ರೀ ನೀತಿಬೋಧೆ' ಎಂಬ ಹಣೆಪಟ್ಟಿಯೊಂದಿಗೆ ಗುರುತಿಸಲು ಪ್ರಯತ್ನಿಸುತ್ತವೆಯೇ ವಿನಃ 'ಸಂಸಾರ ಬೋಧೆ', 'ದಾಂಪತ್ಯ ಬೋಧೆ' ಎಂದು ಗುರುತಿಸುವುದರ ಕಡೆಗೆ ಗಮನ ಹರಿಸುವುದಿಲ್ಲ. "ಹೊನ್ನಮ್ಮನ ಪ್ರಕಾರ ಪತಿವ್ರತಾಧರ್ಮದಿಂದಲೇ ಹೆಣ್ಣಿನ ಇಹಪರ ಸಾಧನೆ. ಹಾಗಾಗಿ ಈ ಕೃತಿಯನ್ನು ಓದಿ ಮಹಿಳೆಯರು ತಮ್ಮ ಬದುಕನ್ನು ಹಸನಾಗಿಸಿಕೊಳ್ಳಬೇಕೆಂದು ಆಶಿಸುವ ಈ ಕವಯಿತ್ರಿ ಸೂಚಿಸಿರುವ ಮಾರ್ಗ ಮಾತ್ರ ಹೆಣ್ಣಿನ ಅಸ್ತಿತ್ವಕ್ಕೆ ಧಕ್ಕೆಯನ್ನುಂಟುಮಾಡುವಂತಿವೆ. ಈಕೆ ಮಹಿಳೆಯ ಬದುಕನ್ನು ಪುರುಷ ನೆಲೆಯಿಂದಲೇ ನೋಡಿರುವುದರಿಂದ ಇಲ್ಲಿನ ಬಹಳಷ್ಟು ವಿಚಾರಗಳು ಪುರುಷಪರವಾಗಿವೆ."[೩೪] ಈ ಬಗೆಯ ವಿಮರ್ಶೆಗಳೂ ಕೂಡ ಹೊನ್ನಮ್ಮನ ಕಾವ್ಯದ ನಿಜವಾದ ಆಶಯವನ್ನು ಅರಿಯುವಲ್ಲಿ ಸೋತಿವೆ ಎಂದೇ ಹೇಳಬೇಕು. ಮತ್ತೊಂದು ಪ್ರಮುಖ ಸಂಗತಿ ಎಂದರೆ ಪುರುಷ ಪ್ರಧಾನ ವ್ಯವಸ್ಥೆ ಹೆಣ್ಣಿನ

ಅಭಿವ್ಯಕ್ತಿಯನ್ನು ನಿಯಂತ್ರಿಸುವ ವಿಧಾನವನ್ನು ಇಲ್ಲಿ ಸ್ಪಷ್ಟವಾಗಿ ಗುರುತಿಸಬಹುದು. ಹೊನ್ನಮ್ಮ ಸಾಮಾಜಿಕ ಹಿತದ ದೃಷ್ಟಿಯಿಂದ ಹೆಣ್ಣು ಗಂಡು ಇಬ್ಬರಿಗೂ ಸಮಾನವಾಗಿ ತಿಳಿಯಪಡಿಸುವ ಅಂಶಗಳನ್ನು ಹೆಣ್ಣಿಗೆ ಮಾತ್ರ ಸೀಮಿತಗೊಳಿಸಿ ಸ್ತ್ರೀ ನೀತಿಬೋಧೆ, ಪತಿವ್ರತಾಧರ್ಮ ಮುಂತಾಗಿ ಗುರುತಿಸುವುದರೊಂದಿಗೆ ಹೊನ್ನಮ್ಮ ಹೇಳುವ ಧರ್ಮ ಪರಿಪಾಲನೆ ಹೆಣ್ಣಿನ ಆದ್ಯ ಕರ್ತವ್ಯ ಎಂದು ಬಿಂಬಿಸಲಾಗುತ್ತಿದೆ. ಅದೇನೇ ಆದರೂ ಸಂಚಿ ಹೊನ್ನಮ್ಮ ಹೆಣ್ಣಿನ ಬದುಕಿನ ನೆಮ್ಮದಿಗಾಗಿ ತನ್ನ ಕೃತಿಯಲ್ಲಿ ಸ್ಥಾಪಿತ ಮೌಲ್ಯಗಳೊಂದಿಗಿನ ಅನುಸಂಧಾನ ಮಾರ್ಗವನ್ನು ಪ್ರಧಾನವಾಗಿ ಎತ್ತಿಹಿಡಿಯುತ್ತಾಳೆ. ಆದ್ದರಿಂದಲೇ "ಹೊನ್ನಮ್ಮ ತನ್ನನ್ನು ಸುತ್ತುವರಿದ ವ್ಯವಸ್ಥೆಯ ಬಗ್ಗೆ ಒಮ್ಮೆಲೇ ಸಿಡಿದೇಳುವುದಿಲ್ಲ. ನಮ್ರ ಭಾವವನ್ನು ಪ್ರದರ್ಶಿಸುತ್ತಾಳೆ".[೨೫] ಅದರೊಂದಿಗೆ ವ್ಯವಸ್ಥೆ ಹೆಣ್ಣನ್ನು ನಡೆಸಿಕೊಳ್ಳುತ್ತಿರುವ ಕ್ರಮ, ಅವಳ ಮೇಲೆ ಹೇರುತ್ತಿರುವ ಒತ್ತಡವನ್ನು ಕುರಿತಂತೆ ತಣ್ಣನೆಯ ಪ್ರತಿಭಟನೆಯನ್ನು ವ್ಯಕ್ತಪಡಿಸುತ್ತಾಳೆ. ಈ ಹಿನ್ನೆಲೆಯಲ್ಲಿ "ಹೊನ್ನಮ್ಮನಿಗೆ ಹೆಣ್ಣಿನ ಬಗ್ಗೆ ಇರುವ ಅಪಾರ ಮರುಕ ಹಾಗೂ ಪ್ರೇಮಕ್ಕೆ ಈ ಕೃತಿ ಒಂದು ಉದಾಹರಣೆ"[೨೬] ಎಂಬ ಮಾತು ಅತಿಶಯೋಕ್ತಿ ಎಂದೆನಿಸುವುದಿಲ್ಲ.

ಸಂಚಿಹೊನ್ನಮ್ಮನ ನಂತರ ಕಾವ್ಯಕ್ಷೇತ್ರದಲ್ಲಿ ಕೇಳಬರುವ ಹೆಸರುಗಳೆಂದರೆ ಹೆಳವನಕಟ್ಟೆ ಗಿರಿಯಮ್ಮ, ನಿಡುದುಡಕಿ ಜೀವೂಬಾಯಿ, ಅಂಬಾಬಾಯಿ, ಗಲಗಲಿ ಅವ್ವ ಮುಂತಾದ ಹನ್ನೆರಡಕ್ಕೂ ಹೆಚ್ಚು ಜನ ಕೀರ್ತನಾಕಾರ್ತಿಯರು, ಕೀರ್ತನಾಕಾರರಂತೆಯೇ ಇವರೂ ಕೂಡ ಕೃಷ್ಣ ಭಕ್ತಿ, ಕೃಷ್ಣ ಪಾರಮ್ಯವನ್ನು ತಮ್ಮ ಕೀರ್ತನೆಗಳ ವಸ್ತುವಾಗಿಸಿ ಕೊಂಡವರು. ದುರಂತವೆಂದರೆ ಕನ್ನಡ ಸಾಹಿತ್ಯ ವಲಯದಲ್ಲಿ ಹೆಳವನಕಟ್ಟೆ ಗಿರಿಯಮ್ಮನನ್ನು ಹೊರತುಪಡಿಸಿ ಬೇರೆ ಯಾವ ಹರಿದಾಸಿಣಿಯರ ಕೀರ್ತನೆಗಳೂ ಹೆಚ್ಚು ಚರ್ಚೆಗೆ ಒಳಪಟ್ಟಿಲ್ಲ. ಹಾಗೂ ಇವರ ಬಗ್ಗೆ ಹೆಚ್ಚಿನ ಮಾಹಿತಿಗಳೂ ಕೂಡ ದೊರೆಯುವುದಿಲ್ಲ. ಆದರೂ ವಚನಕಾರ್ತಿಯರಿಗೆ ಹೋಲಿಸಿದರೆ ಅವರಿಗೆ ಅಂದಿನ ಸಮಾಜದಲ್ಲಿ ಸಿಕ್ಕ ಸ್ವಾತಂತ್ರ್ಯ, ಸಮಾನತೆಗಳು ಕೀರ್ತನಾಕಾರ್ತಿಯರಿಗೆ ಸಿಗಲಿಲ್ಲವೆಂದೆನಿಸುತ್ತದೆ. ಹೆಳವನಕಟ್ಟೆ ಗಿರಿಯಮ್ಮ ಕೀರ್ತನೆಗಳ ಜೊತೆಗೆ 'ಉದ್ದಾಳಕನ ಕಥೆ', ಸೀತಾ ಕಲ್ಯಾಣ, ಚಂದ್ರಹಾಸನ ಕಥೆ, ಲವಕುಶರ ಕಾಳಗ, ಶಂಕರಗಂಡನ ಹಾಡು, ಕೃಷ್ಣ ಕೊರವಂಜಿ, ಬ್ರಹ್ಮ ಕೊರವಂಜಿ ಮುಂತಾದ ಲಘು ಕಾವ್ಯಗಳನ್ನು ರಚಿಸಿದ್ದಾಳೆ. ಉದ್ದಾಳಕನ ಕಥೆಯಲ್ಲಿ ಬರುವ ಚಂದ್ರಮತಿಗೆ ಅವಳ ತಂದೆ ವಿದ್ಯಾಭ್ಯಾಸ ಮಾಡಿಸುವ ಪ್ರಸಂಗದ ಮೂಲಕ ಸ್ತ್ರೀ ವಿದ್ಯಾಭ್ಯಾಸದ ಕಡೆಗೆ ಗಿರಿಯಮ್ಮನ ಒಲವಿತ್ತು ಎಂಬುದನ್ನು ತಿಳಿಯಬಹುದು. "ಚಂದ್ರಮತಿಗೆ ಸಂಗೀತ ನರ್ತನದ ಜೊತೆಗೆ ಅಕ್ಷರಾಭ್ಯಾಸ ನಾಟ್ಯ ಕವಿತಾ ಶಾಸ್ತ್ರವನ್ನು ಕಲಿಸಿದ್ದರೆಂದು ಹೇಳುವಲ್ಲಿ ಗಿರಿಯಮ್ಮ ಸ್ತ್ರೀ ಶಿಕ್ಷಣದ ಮಹತ್ವವನ್ನರಿತಿದ್ದಳೆಂಬುದು ವ್ಯಕ್ತವಾಗಿದೆ".[೨೭] ಅದನ್ನು ಉಳಿದಂತೆ " ದೃಢಭಕ್ತಿಯೇ ಈಕೆಯ ಕಾವ್ಯಗಂಗೆಯಾಗಿ ಹರಿದು ಬಂದಿತು. ಧರ್ಮಗಳ ದಟ್ಟ ಪ್ರಭಾವದಿಂದಲೇ ಭಕ್ತಿಯ ಆವೇಶದಲ್ಲಿಯೇ ತನ್ನ ವೈಚಾರಿಕತೆಯನ್ನು ಮೆರೆಸಿದ ಹಿರಿಮೆಗೆ ಕಾಡುಕುಸುಮವಾಗಿ ಕಾವ್ಯ ಸೌಂದರ್ಯದಿಂದ ಸಾಹಿತ್ಯದ ಪರಿಮಳ ಬೀರಿದ್ದಾಳೆ"[೨೮] ಎಂಬ ಮಾತು ಒಟ್ಟಾರೆ ಇವಳ ಸಾಹಿತ್ಯದ ಸ್ವರೂಪವನ್ನು ತಿಳಿಸುತ್ತದೆ. ಇವಳ ನಂತರ

ಹರಪನಹಳ್ಳಿ ಭೀಮವ್ವ, ಓರುಬಾಯಿ ಲಕ್ಷ್ಮೀದೇವಮ್ಮ, ಹೆಬ್ಬಳ್ಳಿ ಸುಂದರಾಬಾಯಿ, ಗುರುಲಿಂಗಮ್ಮ ಸಿದ್ಧಮಲ್ಲಪ್ಪಾ ಮುಂತಾದವರು ತಮ್ಮ ಕೀರ್ತನೆಗಳಲ್ಲಿ ಪುರಾಣದ ಪ್ರತೀಕಗಳ ಮೂಲಕ ಹೆಣ್ಣಿನ ಸ್ಥಿತಿ, ಪುರುಷಪ್ರಧಾನ ವ್ಯವಸ್ಥೆಯ ಧೋರಣೆ ಹಾಗೂ ಶಿಕ್ಷಣದ ಮಹತ್ವವನ್ನು ಅಭಿವ್ಯಕ್ತಪಡಿಸಲು ಪ್ರಯತ್ನಿಸಿದ್ದಾರೆ.

ಆಧುನಿಕ ಮಹಿಳಾ ಕಾವ್ಯದ ಹೆಜ್ಜೆ ಗುರುತುಗಳನ್ನು ನಂಜನಗೂಡು ತಿರುಮಲಾಂಬರವರಿಂದ ಆರಂಭಿಸಲಾಗಿದೆ. “೧೮೮೭-೧೯೮೨ರವರೆಗಿನ ತಮ್ಮ ತುಂಬು ಜೀವನದಲ್ಲಿ ಸಾಹಿತ್ಯದ ಬರವಣಿಗೆಯನ್ನೇ ಪ್ರಧಾನ ಆಸಕ್ತಿಯನ್ನಾಗಿ ರೂಪಿಸಿಕೊಂಡಿದ್ದ ತಿರುಮಲಾಂಬ ಅವರು ಒಂದು ಅರ್ಥದಲ್ಲಿ ಆಧುನಿಕ ಕನ್ನಡ ಮಹಿಳಾ ಸಾಹಿತ್ಯದ ಪ್ರಾರಂಭದ ಬಿಂದುವನ್ನು ಸಂಕೇತಿಸಿದರು ಅನ್ನಬಹುದು. ಇದರ ಅರ್ಥ ಇವರಿಗಿಂತ ಮೊದಲು ಮಹಿಳಾ ಸಾಹಿತಿಗಳು ಇರಲೇ ಇಲ್ಲ ಎಂದು ಅರ್ಥವಲ್ಲ. ತಿರುಮಲಾಂಬ ಅವರ ಪ್ರಾಮುಖ್ಯವೇನೆಂದರೆ ಸಾಹಿತ್ಯದ ವಸ್ತು, ಸಂವೇದನೆ, ಶೈಲಿ ಮತ್ತು ಪ್ರಕಾರಗಳ ದೃಷ್ಟಿಯಿಂದ ಮಹಿಳಾ ಸಾಹಿತ್ಯಕ್ಕೆ ಪ್ರಾರಂಭದಲ್ಲಿ ಅಗತ್ಯವಾಗಿದ್ದ ಗುರುತು ಮತ್ತು ಆತ್ಮವಿಶ್ವಾಸವನ್ನು ನೀಡಿದ ಲೇಖಕಿ ಅವರು. ಸಾಹಿತ್ಯವನ್ನು ತಮ್ಮ ಪ್ರಮುಖ ಅಭಿವ್ಯಕ್ತಿ ಮಾಧ್ಯಮವಾಗಿ ಸ್ವೀಕರಿಸಿ, ಈ ಕ್ಷೇತ್ರದಲ್ಲಿ ಹಲವು ದಶಕಗಳ ಕಾಲ ತೊಡಗಿಸಿಕೊಂಡು, ಪ್ರಕಟಣೆಯತ್ತಲೂ ಮನಸ್ಸು ಮಾಡಿ ಸ್ತ್ರೀಯರ ಸಾಹಿತ್ಯ ಮಾಧ್ಯಮ ಪ್ರವೇಶವನ್ನು ಪೃಥಕ್ಕರಿಸಿದ ತಿರುಮಲಾಂಬ ಮಹಿಳಾ ಸಾಹಿತ್ಯದ ನವೋದಯವೆನ್ನಬಹುದಾದ ಅವಧಿಗೆ ತಲೆಮಣಿಯಾಗಿದ್ದಾರೆ”[೩೯]. ಎಂಬ ಮಾತು ತಿರುಮಲಾಂಬರವರ ಬರವಣಿಗೆಯಿಂದ ಮಹಿಳಾ ಕಾವ್ಯದ ಅಧ್ಯಯನವನ್ನು ಆರಂಭಿಸುವ ಪ್ರಸ್ತುತತೆಯನ್ನು ತಿಳಿಸುತ್ತದೆ.

ಸೃಜನಶೀಲ ಚಟುವಟಿಕೆಗಳನ್ನು ಪುರುಷರಚನೆ, ಮಹಿಳೆಯರ ರಚನೆ ಎಂಬ ವಿಭಾಗಕ್ರಮಗಳಲ್ಲಿ ಗುರುತಿಸುವುದು ತಪ್ಪಾದರೂ ಮಹಿಳಾ ಕಾವ್ಯದ ಭಿನ್ನತೆ, ವೈವಿಧ್ಯತೆಗಳನ್ನು ಹಿಡಿಯಲು ಮಹಿಳಾಕಾವ್ಯ ಪುರುಷಕಾವ್ಯಕ್ಕಿಂತ ಹೇಗೆ ಭಿನ್ನ ಎಂಬುದನ್ನು ತಿಳಿಯುವುದು ಅವಶ್ಯಕ. ಪುರುಷನಿಗೆ ಕಾವ್ಯ ಸೃಜನಶೀಲ ಅಭಿವ್ಯಕ್ತಿಯ ಒಂದು ಮಾಧ್ಯಮವಾದರೆ ಹೆಣ್ಣಿನ ಮಟ್ಟಿಗೆ ಕಾವ್ಯ ಎನ್ನುವುದು ತನ್ನ ಅಂತರಂಗವನ್ನು ತೆರೆದಿಡುವ, ತನ್ನೊಳಗಿನ ಹೊಯ್ದಾಟಗಳಿಗೆ ಮಾತುಕೊಡುವ, ಸಮಾಜದೊಂದಿಗಿನ ವಿರಸ, ವಿಷಮತೆಯನ್ನು ಅಭಿವ್ಯಕ್ತಪಡಿಸುವ, ತನ್ನ ನೋವು ನಲಿವುಗಳಿಗೊಂದು ಜೀವ ತುಂಬುವ ಸಾಧನವಾಗಿ ರೂಪುಗೊಂಡಿದೆ. ಈ ಕಾರಣದಿಂದಾಗಿಯೇ ಮಹಿಳಾ ಕಾವ್ಯದಲ್ಲಿ ಭಿನ್ನತೆ ವೈವಿಧ್ಯತೆ, ಹೊಯ್ದಾಟಗಳು ಹೆಚ್ಚಾಗಿ ಕಂಡುಬರುತ್ತವೆ. ಎಲ್ಲಕ್ಕಿಂತ ಮುಖ್ಯವಾಗಿ ಮಹಿಳೆಗೆ ಕಾವ್ಯ ಎನ್ನುವುದು ‘ತನ್ನೊಳಗಿನಿಂದ ಬಿಡುಗಡೆಯ ಸಾಧನವಾಗಿ’ ‘ತನ್ನೆಲ್ಲಾ ಗೊಂದಲಗಳಿಗೆ ಪರಿಹಾರವನ್ನು ಕಂಡುಕೊಳ್ಳುವ ಸಾಂತ್ವಾನ’ವಾಗಿ ಮೂಡಿಬಂದಿದೆ.

ಪುರುಷ ಪ್ರಧಾನ ವ್ಯವಸ್ಥೆಯಿಂದ ಒಂದಲ್ಲಾ ಒಂದು ರೀತಿಯಲ್ಲಿ ನಿರಂತರವಾಗಿ ಶೋಷಣೆಗೊಳಪಟ್ಟ ಸ್ತ್ರೀ ಸಮುದಾಯದಿಂದ ರಚನೆಗೊಂಡ ಕಾವ್ಯ ಪ್ರಕಾರ ಪ್ರಧಾನ ವ್ಯವಸ್ಥೆಯೊಂದಿಗೆ

ನಿರಂತರವಾಗಿ ಮುಖಾಮುಖಿಯಾಗುವುದರ ಮೂಲಕ ಅದರೊಂದಿಗೆ ವಾಗ್ವಾದವನ್ನು ನಡೆಸುತ್ತಾ ಬಂದಿದೆ. ಕಾಲ ಕಾಲಕ್ಕೆ ಮಹಿಳಾ ಅಭಿವ್ಯಕ್ತಿಯ ಸ್ವರೂಪದಲ್ಲಿ, ಅನುಸಂಧಾನದ ಬಗೆಗಳಲ್ಲಿ, ಗ್ರಹಿಕೆಯ ನೆಲೆಗಳಲ್ಲಿ, ವ್ಯವಸ್ಥೆಯ ಬಗೆಗಿನ ಧೋರಣೆ ಹಾಗೂ ನಿಲುವುಗಳಲ್ಲಿ ಹಲವು ರೀತಿಯ ಭಿನ್ನತೆಯನ್ನು ಗುರುತಿಸಬಹುದು. ಈ ದೃಷ್ಟಿಯನ್ನು ಆಧಾರವಾಗಿಟ್ಟುಕೊಂಡು ಮಹಿಳಾಕಾವ್ಯ ಪರಂಪರೆಯ ಚಹರೆಗಳನ್ನು ಕಾವ್ಯದ ಆಶಯದ ಹಿನ್ನೆಲೆಯಲ್ಲಿ ಮೂರು ಹಂತಗಳಾಗಿ ವಿಂಗಡಿಸಿಕೊಳ್ಳಲಾಗಿದೆ. ಅವುಗಳೆಂದರೆ

೧. ಸ್ವಮರುಕ ಅಥವಾ ಪುರುಷಾಧಿಕಾರದ ಹಿಡಿತದ ನೆಲೆ

೨. ಆಯ್ಕೆಯ ದ್ವಂದ್ವಗಳ ವಿನ್ಯಾಸ

೩. ಸ್ವಾಯತ್ತ ವ್ಯಕ್ತಿತ್ವದ ರಚನೆಯ ವಿನ್ಯಾಸ

ಈ ಮೂರು ವಿಭಾಗಗಳು ಕಾಲಕಾಲಕ್ಕೆ ಮಹಿಳಾಕಾವ್ಯ ತನ್ನ ಅಸ್ಮಿತೆಯನ್ನು ಕಂಡು ಕೊಂಡ ಬಗೆಯನ್ನೂ ಹಾಗೂ ಅದರ ಚಲನೆಯ ವಿಧಾನವನ್ನು ಮುಖ್ಯವಾಗಿ ಆಧಾರವಾಗಿಟ್ಟುಕೊಂಡಿದ್ದರೂ, ಕಾಲ ದೇಶಗಳನ್ನು ಮೀರಿ ಮಹಿಳಾ ಅಭಿವ್ಯಕ್ತಿ ವ್ಯಕ್ತಿಯಿಂದ ವ್ಯಕ್ತಿಗೆ ಭಿನ್ನತೆ ಹಾಗೂ ವಿಶಿಷ್ಟತೆಯಿಂದ ಕೂಡಿರುವುದನ್ನೂ ಕೂಡ ಅಲ್ಲಗಳೆಯುವಂತಿಲ್ಲ. ಆದುದರಿಂದಾಗಿ ಈ ವಿಭಾಗ ಕ್ರಮಗಳು ಅಧ್ಯಯನದ ಅನುಕೂಲಕ್ಕಾಗಿಯೇ ಹೊರತು ಮಹಿಳಾಕಾವ್ಯ ಅಧ್ಯಯನದ ಮಾನದಂಡಗಳಲ್ಲ. ೫೦ ರಿಂದ ೭೦ರ ದಶಕದ ಕಾವ್ಯವನ್ನು ಸ್ವಮರುಕ ಅಥವಾ ಪುರುಷಾಧಿಕಾರದ ಹಿಡಿತದ ನೆಲೆಯಲ್ಲಿಯೂ, ೭೦ ರಂದ ೮೦ ರ ದಶಕದ ಕಾವ್ಯವನ್ನು ಅಂತರಂಗದ ಹೊಯ್ದಾಟದ ನೆಲೆಯಲ್ಲಿಯೂ, ಅನಂತರದ ಕಾವ್ಯವನ್ನು ಸ್ವಾಯತ್ತನೆಲೆಯಲ್ಲಿಯೂ ಇಟ್ಟು ಚರ್ಚಿಸಲು ಪ್ರಯತ್ನಿಸಲಾಗಿದೆ.

## ೭.೧ ಸ್ವಮರುಕ ಮತ್ತು ಪುರುಷಾಧಿಕಾರದ ಹಿಡಿತದ ನೆಲೆ.

ಆರಂಭಘಟ್ಟದ ಮಹಿಳಾಕಾವ್ಯ ಮಹಿಳೆಯರಿಂದ ರಚನೆಗೊಂಡಿದ್ದು ಎಂಬುದನ್ನು ಬಿಟ್ಟರೆ ಬಹುಪಾಲು ಅವರ ಆಲೋಚನೆ, ಧೋರಣೆ, ಚಿಂತನೆಗಳೆಲ್ಲವೂ ಸಾಮಾನ್ಯವಾಗಿ ಮೌಲ್ಯವ್ಯವಸ್ಥೆಯ ಪರವಾಗಿ, ಪುರುಷಾಪೇಕ್ಷಿತ ಜೀವನ ವಿಧಾನದ ಸಮರ್ಥನೆಯಾಗಿ ಕಂಡುಬರುತ್ತವೆ. ಏಕೆಂದರೆ ಈ ಕಾಲದ ಮಹಿಳಾ ಅಭಿವ್ಯಕ್ತಿ ಎಲ್ಲವೂ ಪಿತೃ ಪ್ರಭುತ್ವದ ನಿರ್ದೇಶನ, ನಿಯಂತ್ರಣದಲ್ಲಿಯೇ ರೂಪುಗೊಂಡಿದ್ದು, ಅದಕ್ಕೆ ಅಂದಿನ ಸಾಮಾಜಿಕ, ರಾಜಕೀಯ ಅಂಶಗಳೂ ಕೂಡ ಮುಖ್ಯ ಕಾರಣವಾಗಿದ್ದವು. ಇದೆಲ್ಲದರ ನಡುವೆಯೂ ಈ ಲೇಖಕಿಯರಿಗೆ ಹೆಣ್ಣಿನ ಮೇಲೆ ನಡೆಯುತ್ತಿರುವ ದೌರ್ಜನ್ಯವನ್ನು ಕುರಿತಂತೆ, ಸ್ತ್ರೀ ಶೋಷಣೆಯನ್ನು ಕುರಿತಂತೆ ಅನುಕಂಪ ಹಾಗೂ ಮರುಕ ಇದೆ. ಆದುದರಿಂದಾಗಿ ಆರಂಭದ ಲೇಖಕಿಯರ ಕಾವ್ಯಾಭಿವ್ಯಕ್ತಿ ಸ್ತ್ರೀ ಪರವಾದ, ಪುರುಷ ಆಲೋಚನೆಯ ಕ್ರಮದಿಂದ ಕೂಡಿದ್ದರೂ ಕೂಡ ಅಂತರಂಗದ ನೋವಿನ ಧ್ವನಿಯೊಂದು, ವ್ಯವಸ್ಥೆ ಹೀಗೇಕೆ ಎಂಬ ಪ್ರಶ್ನಾರ್ಥಕ ಚಿಹ್ನೆಯೊಂದು ಇವರ ಆಂತರ್ಯದ ಬಹುಮುಖ್ಯ ತುಡಿತವಾಗಿದೆ. ಅದರೊಂದಿಗೆ

1. ತಾನು ಹೆಣ್ಣಾಗಿ ಹುಟ್ಟಿದುದರ ಬಗೆಗೆ, ವ್ಯವಸ್ಥೆ ತನ್ನನ್ನು ನಡೆಸಿಕೊಳ್ಳುತ್ತಿರುವುದರ ಬಗೆಗೆ, ವೈಧವ್ಯದಿಂದ ಬಂದೊದಗುವ ಅತಂತ್ರ ಸ್ಥಿತಿಯ ಬಗೆಗಿನ ನೋವು ಇವರ ಸಾಹಿತ್ಯದ ಕೇಂದ್ರವಾಗಿದೆ.
2. ಎಲ್ಲಕ್ಕೂ ದೈವವನ್ನು, ಹಣೆಬರಹವನ್ನು ಹೊಣೆ ಮಾಡುವುದು ಒಂದು ಕಡೆಯಾದರೆ, ತನ್ನ ಅವಸ್ಥೆಗೆ ಕಾರಣ ಯಾರು ಎಂಬುದನ್ನು ಗುರುತಿಸಲಾಗದ ಅಸಹಾಯಕತೆ ಮತ್ತೊಂದು ಬಗೆಯದ್ದು. ಇನ್ನೂ ಕೆಲ ಸಂದರ್ಭದಲ್ಲಿ ಗಂಡಿನ ವರ್ತನೆಯೇ ತನ್ನ ಈ ಸ್ಥಿತಿಗೆ ಕಾರಣ ಎಂಬ ಅರಿವು, ವಿರೋಧ ಇದ್ದಾಗ್ಯೂ ಅದನ್ನು ಮೀರಬಾರದ ಕರಾರಿನ ರೀತಿಯಲ್ಲಿ ಆಚರಿಸುವ ಬಧ್ಧತೆಯನ್ನು ಈ ಘಟ್ಟದ ಲೇಖಕಿಯರ ಬರಹಗಳಲ್ಲಿ ಗುರುತಿಸಬಹುದು.
3. ನಯವಾದ ತೆರೆಮರೆಯ ಪ್ರತಿಭಟನೆ ಇವರ ಕಾವ್ಯದ ಮುಖ್ಯ ಗುಣವಾಗಿದ್ದು ಗದ್ಯಕ್ಕಿಂತ ಭಿನ್ನಧ್ವನಿಯನ್ನು ಇವರ ಕಾವ್ಯದಲ್ಲಿ ಗುರುತಿಸಬಹುದು.

ಇದೆಲ್ಲದರ ನಡುವೆಯೂ ಗಮನಿಸಬೇಕಾದ ಬಹುಮುಖ್ಯ ಅಂಶವೆಂದರೆ ಈ ಲೇಖಕಿಯರು ತಮ್ಮ ಗದ್ಯಸಾಹಿತ್ಯ, ಹಾಗೂ ಪತ್ರಿಕೋದ್ಯಮದ ಬರವಣಿಗೆಗಳಲ್ಲಿ ಪಿತೃ ಪ್ರಭುತ್ವದ ಪರವಾಗಿ ಬರೆಯಲು ಪ್ರಯತ್ನಿಸಿದರೂ, ಕಾವ್ಯದ ಸಂದರ್ಭದಲ್ಲಿ ಅದನ್ನು ಮೀರಿ ಹೆಣ್ಣಿನ 'ಘನ ವ್ಯಕ್ತಿತ್ವ'ವೊಂದರ ನಿರ್ಮಾಣಕ್ಕೆ ಮುಂದಾಗಿದ್ದಾರೆ. ಆರಂಭ ಘಟ್ಟದ ಮಹಿಳಾ ಕಾವ್ಯದ ತಾತ್ವಿಕತೆಯ ಹಿಂದಿನ ಪ್ರೇರಣೆಗಳನ್ನು ಈ ರೀತಿಯಲ್ಲಿ ಗುರುತಿಸಬಹುದು.

**ತಾತ್ವಿಕತೆಯ ಹಿಂದಿನ ಪ್ರೇರಣೆಗಳು.**

1. ಈ ಹಂತದ ಲೇಖಕಿಯರು ಸುಧಾರಣಾವಾದಿಗಳ ಆಶಯದ ಫಲವಾಗಿ ಶಿಕ್ಷಣಾವಕಾಶಗಳನ್ನು ಪಡೆದುದ್ದರಿಂದಾಗಿ ಹಾಗೂ ಸುಧಾರಣಾವಾದಿಗಳು ತಮ್ಮನ್ನು ತಾವು 'ಸ್ತ್ರೀಉದ್ಧಾರಕರು', 'ಸ್ತ್ರೀಪರ'ವಾದಿಗಳು ಎಂದು ಬಿಂಬಿಸಿದ್ದರಿಂದ ಮಹಿಳೆಯರ ಆಲೋಚನೆ ಹಾಗೂ ಅಭಿವ್ಯಕ್ತಿ ಸುಧಾರಣಾವಾದಿ ಆಶಯದ ಮಾರ್ಗವನ್ನು ಮೀರಲು ಸಾಧ್ಯವಾಗಲಿಲ್ಲ. ಅಲ್ಲದೆ "ಒಂದು ವೇಳೆ ಒಬ್ಬ ಹೆಣ್ಣು ಕಲಿಯಲು ತೀವ್ರವಾಗಿ ಹಂಬಲಿಸಿದರೆ, ತಮ್ಮನ್ನು ನಿಯಂತ್ರಿಸುತ್ತಿರುವ ಗಂಡಸರ ಕಡೆಗೇ ಸಹಾಯಕ್ಕಾಗಿ ದೈನ್ಯದಿಂದ ನೋಡುವ ದಾರಿಯಲ್ಲದೆ ಬೇರೇನೂ ಅವರಿಗೆ ಸಾಧ್ಯವಾಗುತ್ತಿರಲಿಲ್ಲ".[೬೦] ಎನ್ನುವುದ ಹಾಗೂ ಚರಿತ್ರೆಕಾರ ಸುಮೀತ್ ಸರ್ಕಾರ್ ಹೇಳುವಂತೆ ಈ "ಸುಧಾರಣಾವಾದಿಗಳು ತಮ್ಮ ತಮ್ಮ ಕುಟುಂಬ ವಲಯಗಳೊಳಗೇ ಮಹಿಳೆಯರ ಸಂಬಂಧ ಸ್ವರೂಪಗಳನ್ನು ಒಂದಿಷ್ಟು ಪರಿವರ್ತಿಸಿ ಸುಗಮಗೊಳಿಸುವ ಉದ್ದೇಶದವರಾಗಿದ್ದರಷ್ಟೆ. ಹಾಗಾಗಿ ಮಹಿಳಾ ಸಮುದಾಯ ಉನ್ನತಗೊಳ್ಳಬೇಕು ಎನ್ನುವಾಗಲೂ ಹದವಾದ, ಮಿತವಾದ ನಿಯಂತ್ರಿತವಾದ ಉನ್ನತಿಯನ್ನಷ್ಟೇ ಅಪೇಕ್ಷಿಸಿದ್ದರೆ ಹೊರತು ವಿಮುಕ್ತಿಯ ಸ್ವರೂಪವನ್ನಲ್ಲ".[೬೧] ಎಂಬುದು ಮಹಿಳಾ ಸಾಹಿತ್ಯದ ತಾತ್ವಿಕತೆಯ ಹಿಂದಿನ ಸುಧಾರಣಾ ವಾದಿಗಳ ಪ್ರೇರಣೆಯನ್ನು ಸ್ಪಷ್ಟಪಡಿಸುತ್ತದೆ.

2. ಮಹಿಳೆ ಸಾಮಾಜಿಕ ಚಟುವಟಿಕೆಗಳಲ್ಲಿ ಭಾಗವಹಿಸುವ ಅವಕಾಶ ಮಾಡಿಕೊಟ್ಟ ಗಾಂಧಿ ನೇತೃತ್ವದ ರಾಷ್ಟ್ರೀಯ ಚಳುವಳಿ ಕೂಡ ಭಾರತೀಯ ಸ್ತ್ರೀಯ ಪರಂಪರಾಗತ ಮೌಲ್ಯ ಪ್ರತಿಪಾದನೆಗೆ ಒತ್ತು ನೀಡಿದ್ದರ ಪರಿಣಾಮದಿಂದಾಗಿ ಆರಂಭಘಟ್ಟದ ಲೇಖಕಿಯರು ಸನಾತನ ಮೌಲ್ಯ ಪ್ರತಿಪಾದನೆಯ ಮಾಧ್ಯಮವಾಗಿ ತಮ್ಮ ಸಾಹಿತ್ಯವನ್ನು ಬಳಸಿಕೊಂಡರು. "ಹಿಂದೂ ಮಹಿಳೆಯರು ರಾಜಕೀಯ ಚಳುವಳಿಯನ್ನು ಸೇರಬೇಕೆಂದು ಆಗ್ರಹ ಪಡಿಸುವಾಗಲೆಲ್ಲ ಗಾಂಧಿಯವರು ರಾಮಾಯಣದಂತಹ ಪುರಾಣ ಪುಣ್ಯಕತೆಗಳನ್ನು ನೆನಪು ಮಾಡಿಕೊಳ್ಳಲು ಹೇಳುತ್ತಿದ್ದರು".[೩೨]

3. ಈ ಸಂದರ್ಭದಲ್ಲಿ ರೂಪುಗೊಂಡ ರಾಷ್ಟ್ರಭಕ್ತಿ, ಭಾರತಾಂಬೆಯ ಪರಿಕಲ್ಪನೆಗಳು 'ಆದರ್ಶ ಸ್ತ್ರೀ ಮಾದರಿ'ಗೆ ಹೆಚ್ಚು ಒತ್ತು ನೀಡಿದ್ದರಿಂದ ಅಂದಿನ ಮಹಿಳೆಯರು ಪುರಾಣದ ಮಾದರಿ ಪಾತ್ರಗಳಾಗುವುದರ ಕಡೆಗೆ, 'ಆದರ್ಶ ಗೃಹಿಣಿ'ಯರಾಗುವುದರ ಕಡೆಗೆ ಗಮನ ಹರಿಸಿದರು. "ಸುಧಾರಣಾವಾದಿ ಆಶಯಗಳನ್ನು ಹೊಂದಿದ್ದ ಪುರುಷರು ಮಹಿಳೆಯರಿಗೆ ಸೂಕ್ತ ಉತ್ತೇಜನ ಮತ್ತು ಮಾರ್ಗದರ್ಶನಗಳನ್ನು ನೀಡುತ್ತಾ ಮಹಿಳೆಯರಿಗಾಗಿ ಹಲವಾರು ಸಂಘ ಸಂಸ್ಥೆಗಳನ್ನು ಹುಟ್ಟುಹಾಕುವಲ್ಲಿ ಶ್ರಮಿಸಿದರು. ಮಹಿಳೆಯರಿಗೆ ಶಿಕ್ಷಣಾವಕಾಶಗಳನ್ನು ಕಲ್ಪಿಸಿ ಅವರು ಸಾರ್ವಜನಿಕ ಕ್ಷೇತ್ರಗಳಿಗಿಳಿದು ಅನುಭವಗಳಿಸುವಂತೆಯೂ ಮಾಡಿದರು. ಆದರೆ ಇದರ ಜೊತೆಯಲ್ಲೇ ಅನೇಕ ಮಿತಿಗಳನ್ನೂ ಹೇರಿದರು. ಈ ಮಿತಿಗಳಲ್ಲಿ ಬಹುಮುಖ್ಯವಾದುದೆಂದರೆ ಈ ಪುರುಷರು ಮಹಿಳೆಯು ಎಷ್ಟೇ ಏನೇ ಸಾಧಿಸಿದರೂ ಅವಳ ಮುಖ್ಯ ಕಾರ್ಯಕ್ಷೇತ್ರ ಎಂದಿಗೂ ಮನೆಯೇ ಆಗಿರಬೇಕು. ಈ ವಲಯವೇ ಅವಳ ಜೀವನದ ಮುಖ್ಯ ಕೇಂದ್ರವಾಗಬೇಕು ಎಂದು ವಿಧಿಸಿದರು".[೩೩]

ಈ ಹಿನ್ನೆಲೆಯಲ್ಲಿ ತಮ್ಮ ಬದುಕನ್ನು ರೂಪಿಸಿಕೊಂಡ ಅನೇಕ ಮಹಿಳೆಯರು ಸಾಹಿತ್ಯದ ಜೊತೆಗೆ ಇತರೆ ಸೃಜನಶೀಲ ಚಟುವಟಿಕೆಗಳ ಮೂಲಕ ತಮ್ಮ ಅನುಭವ ಮತ್ತು ಆಲೋಚನೆಗೆ ಸ್ಪಷ್ಟ ರೂಪಕೊಡಲು ಪ್ರಯತ್ನಿಸಿದರು. ಈ ಲೇಖಕಿಯರಿಗೆ ಬರೆವಣಿಗೆ ಕೇವಲ ಅಭಿವ್ಯಕ್ತಿಯ ಮಾಧ್ಯಮವಷ್ಟೇ ಆಗಿರದೆ ಅದು ಸ್ತ್ರೀಯರ ಉದ್ಧಾರದ, ಸ್ತ್ರೀ ವ್ಯಕ್ತಿತ್ವ ವಿಕಸನಕ್ಕೆ ಮಾರ್ಗದರ್ಶನವನ್ನು ನೀಡುವ ಹಾಗೂ ಆ ಮೂಲಕ ತಮ್ಮ ಜೀವನವನ್ನೇ ಪ್ರಯೋಗಾತ್ಮಕವಾಗಿ ಸಾಹಿತ್ಯಿಕ ಹಾಗೂ ಸಾಂಸ್ಕೃತಿಕ ಕ್ಷೇತ್ರದಲ್ಲಿ ತೊಡಗಿಸಿಕೊಳ್ಳುವ ಸಮರ್ಪಣಾ ಮನೋಭಾವದ ಹಿನ್ನೆಲೆಯಲ್ಲಿ ರೂಪುಗೊಂಡಿರುವಂತದ್ದಾಗಿತ್ತು. ಈ ಕಾಲಘಟ್ಟದ ಬಹುತೇಕ ಬರಹಗಾರ್ತಿಯರು ಪತ್ರಿಕೆಗಳನ್ನು ಆರಂಭಿಸಿ ಅದರ ಮೂಲಕ ಸ್ತ್ರೀ ವಿಚಾರಗಳ ಚರ್ಚೆಗೆ ಅವಕಾಶ ಮಾಡಿಕೊಟ್ಟರು. ಅಲ್ಲದೆ ಸ್ತ್ರೀ ಪರವಾದ ತಮ್ಮ ಆಲೋಚನೆ, ಅನಿಸಿಕೆಗಳನ್ನು ಮುಕ್ತವಾಗಿ ಅಭಿವ್ಯಕ್ತಿಸಿದ್ದು ಮಾತ್ರವಲ್ಲದೆ ಇತರೆ ಮಹಿಳೆಯರ ಬರವಣಿಗೆಗೆ ಪ್ರೇರಣೆಯನ್ನೂ ನೀಡಿದರು. ಮೊದಲ ತಲೆಮಾರಿನ ಬರೆಹಗಾರ್ತಿಯರಾದ ತಿರುಮಲಾಂಬ, ಕಲ್ಯಾಣಮ್ಮ, ಸರಸ್ವತಿಬಾಯಿ ರಾಜವಾಡೆ, ಶ್ಯಾಮಲಾದೇವಿ, ಕೊಡಗಿನ ಗೌರಮ್ಮ ಮುಂತಾದವರು ಸ್ತ್ರೀ ಸಮುದಾಯದ ಉನ್ನತಿಗಾಗಿ ಶ್ರಮಿಸುವುದು ಹಾಗೂ ಆ ಮೂಲಕ ತಮ್ಮನ್ನು ತಾವು ಕಾರ್ಯ ಚಟುವಟಿಕೆಗಳಲ್ಲಿ ತೊಡಗಿಸಿಕೊಳ್ಳುವುದು ತಮ್ಮ ಜವಾಬ್ದಾರಿ ಎಂದು ನಂಬಿದ್ದವರು. ಈ ಹಿನ್ನೆಲೆಯಲ್ಲಿ ತಿರುಮಲಾಂಬ 'ಸತೀ ಹಿತೈಷಿಣಿ' ಗ್ರಂಥಮಾಲೆಯನ್ನೂ 'ಕರ್ನಾಟಕ ನಂದಿನಿ'

ಪತ್ರಿಕೆಯನ್ನೂ ಆರಂಭಿಸಿದರು. ಕಲ್ಯಾಣಮ್ಮನವರು 'ಶಾರದ ಸ್ತ್ರೀಸಮಾಜ' ಹಾಗೂ 'ಸರಸ್ವತಿ' ಎಂಬ ಪತ್ರಿಕೆಯ ಮೂಲಕ ಮಹಿಳೆ ಹಾಗೂ ಮಕ್ಕಳ ಅಭಿವೃದ್ಧಿಯ ಕಡೆಗೆ ಗಮನಹರಿಸಿದರು. ಸರಸ್ವತಿಬಾಯಿ ರಾಜವಾಡೆಯವರ 'ಸುಪ್ರಭಾತ', ಶ್ಯಾಮಲಾದೇವಿಯವರು ಕಾರ್ಯನಿರ್ವಹಿಸಿದ 'ಜಯ ಕರ್ನಾಟಕ' ಪತ್ರಿಕೆಗಳು ಮಹಿಳೆಯರಲ್ಲಿ ಜಾಗೃತಿಯನ್ನು ಮೂಡಿಸುವಲ್ಲಿ ಕಾರ್ಯ ಪ್ರವೃತ್ತವಾದವು. ಇದರಿಂದಾಗಿ ಮಹಿಳೆಯರು ಸಮಾಜಸೇವೆ ಹಾಗೂ ಸಾಹಿತ್ಯಿಕ ಕ್ಷೇತ್ರಗಳಲ್ಲಿ ತಮ್ಮನ್ನು ತಾವು ತೊಡಗಿಸಿಕೊಳ್ಳಲು ಸಹಾಯವಾಯಿತು ಹಾಗೂ ಮುಂದಿನ ಪೀಳಗೆಯ ಬರೆಹಗಾರ್ತಿಯರಿಗೆ ಸ್ಫೂರ್ತಿಯನ್ನು ನೀಡಿತು. ಇವರ ಬರವಣಿಗೆಯ ದೋರಣೆಗಳೇನೇ ಇದ್ದರೂ ಕೂಡ ಮುಂದಿನ ಪೀಳಗೆಯ ಬರಹಗಾರ್ತಿಯರಿಗೆ ಇವರು ಹಾಕಿಕೊಟ್ಟ ಹಾದಿ ಪ್ರಮುಖವಾದುದು.

ಮೊದಲ ತಲೆಮಾರಿನ ಲೇಖಕಿಯರ ಬರವಣಿಗೆಯಲ್ಲಿ ಮೂರು ವಿಧಾನವನ್ನು ಗುರುತಿಸಬಹುದೆಂದು ಎಲ್.ಜಿ.ಮೀರಾ ಅಭಿಪ್ರಾಯ ಪಡುತ್ತಾರೆ. "ಮನೆಯಲ್ಲಿನ ಧಾರ್ಮಿಕ ವಾತಾವರಣವನ್ನು ತಮ್ಮ ಸ್ಫೂರ್ತಿಯ ಸೆಲೆಯಾಗಿ ಸ್ವೀಕರಿಸಿದ್ದಾಗ ಭಗವಂತನ ನಾಮ ಸಂಕೀರ್ತನೆ ಮಾಡುವ ಭಕ್ತಿಕಾವ್ಯವನ್ನು ರಚಿಸಿದರು. ಹೊರ ಸಮಾಜದಲ್ಲಿ ನಡೆಯುತ್ತಿದ್ದ ಸುಧಾರಣಾವಾದಿ ಚಳುವಳ ರಾಷ್ಟ್ರೀಯ ಚಳುವಳಿಯ ಭಾಗವಾಗಿ ಸ್ಫೂರ್ತಿ ಪಡೆದಾಗ ಸ್ತ್ರೀ ಶಿಕ್ಷಣ, ಸ್ತ್ರೀ ಕಲ್ಯಾಣವನ್ನು ತಮ್ಮ ವಸ್ತುವಾಗಿ ಸ್ವೀಕರಿಸಿದರು. ಕೆಲವೊಮ್ಮೆ ಬದುಕಿನ ದುಃಖ ದುಮ್ಮಾನಗಳನ್ನು ಹೊರಚೆಲ್ಲುವ ಅಭಿವ್ಯಕ್ತಿ ಮಾಧ್ಯಮವನ್ನಾಗಿ ಸಾಹಿತ್ಯವನ್ನು ಕಂಡಾಗ ಆತ್ಮಕಥೆಗಳನ್ನು ಬರೆದರು. ಈ ಲೇಖಕಿಯರಲ್ಲಿ ಸಂಪ್ರದಾಯಿಕತೆ ಮತ್ತು ಪ್ರಗತಿಗಾಮಿತನದ ವಿಚಿತ್ರ ಸಂಯೋಜನೆಯೊಂದು ಕಾಣಿಸುತ್ತದೆ. ತಮ್ಮ ಸಾಹಿತ್ಯದ ಸಂದರ್ಭದಲ್ಲಿ ಕುಟುಂಬದ ಮೌಲ್ಯಕ್ಕೆ ಹೆಚ್ಚಿನ ಪ್ರಾಮುಖ್ಯತೆಯನ್ನು ನೀಡಿದ್ದಾರೆ. ಆದರೆ ಶಿಕ್ಷಣದ ವಿಷಯದಲ್ಲಿ ಹೆಚ್ಚು ಜಾಗೃತರಾಗಿದ್ದಾರೆ."[೩೪]

ಮೊದಲ ತಲೆಮಾರಿನ ಲೇಖಕಿ ನಂಜನಗೂಡು ತಿರುಮಲಾಂಬ ಹೊಸಗನ್ನಡ ಕಾಲದಲ್ಲಿ ವೈವಿಧ್ಯಮಯ ಸಾಹಿತ್ಯ ಸೃಷ್ಟಿಯಿಂದ ಹಾಗೂ ಮಹಿಳಾ ಸಾಹಿತ್ಯ ಬೆಳವಣಿಗೆಯಲ್ಲಿ ಸಕ್ರಿಯ ಪಾತ್ರವಹಿಸಿದುದರ ಪರಿಣಾಮದಿಂದ ಅತ್ಯಂತ ಪ್ರಮುಖರಾಗಿದ್ದಾರೆ. ಒಂದು ಸಂಸ್ಥೆ ಮಾಡಬೇಕಾದ ಕೆಲಸವನ್ನು ತಿರುಮಲಾಂಬ ಒಬ್ಬರೇ ಏಕಾಂಗಿಯಾಗಿ ಸಾಧಿಸಿದುದು ಅವಿಸ್ಮರಣೀಯ ಸಂಗತಿಯಾಗಿದೆ. ಇದರಿಂದಾಗಿ ಮಹಿಳಾ ಸಾಹಿತ್ಯಕ್ಕೆ ಒಂದು ಉತ್ತಮ ಮುನ್ನುಡಿ ದೊರೆಯಿತು ಎನ್ನಬಹುದು. ಅಲ್ಲದೆ ೨೦ನೇ ಶತಮಾನದ ಪ್ರಾರಂಭದಲ್ಲಿ ಕವನ ಸಂಕಲನವನ್ನು ಪ್ರಕಟಿಸಿದ ಮೊದಲ ಕವಯಿತ್ರಿ ತಿರುಮಲಾಂಬ ಭದ್ರ ಗೀತಾವಳಿ, ಭಕ್ತಿ ಗೀತಾವಳಿ ಮತ್ತು ಭಾವ ಗೀತಾವಳಿ ಎಂಬ ಕೀರ್ತನಾ ಕಾವ್ಯಗಳ ಮೂಲಕ ಆರಂಭದ ಮಹಿಳಾ ಕಾವ್ಯಕ್ಕೆ ನಾಂದಿ ಹಾಡಿದರು. ಶ್ರೀಪಾದರೇಣು ಎಂಬುದು ಇವರ ಕಾವ್ಯನಾಮ. ತಿರುಮಲಾಂಬ ಅವರು ನಾಟಕಗಳನ್ನು ರಚಿಸಿ, ನಿರ್ದೇಶಿಸಿ, ಪ್ರದರ್ಶಿಸಿದ ಮೊದಲ ಮಹಿಳಾ ನಾಟಕಕಾರ್ತಿಯೂ ಹೌದು.

ತಿರುಮಲಾಂಬ ತಮ್ಮ ಕಾವ್ಯದಲ್ಲಿ ಕವಿಗಳ ನಿರ್ಲಕ್ಷ್ಯಕ್ಕೆ ಪಾತ್ರವಾದ ನಾಯಕಿಯರನ್ನು ಕವಿತೆಯ ವಸ್ತುವಾಗಿಸಿಕೊಂಡು ಸೀತೆಗಿಂತ ಊರ್ಮಿಳೆಯ ತ್ಯಾಗ, ಸೀತೆಯನ್ನು ಪರೀಕ್ಷಿಸುವ ರಾಮನ ಮನಸ್ಥಿತಿಯ ಹಿಂದಿನ ಕ್ರೌರ್ಯ, ಪುರಾಣ ಪಾತ್ರಗಳ ಸ್ತ್ರೀ ವಿರೋಧಿ ದೋರಣೆಗಳನ್ನು ಪ್ರಶ್ನೆ ಮಾಡುತ್ತಾರೆ. ಸರಸ್ವತಿಬಾಯಿ ರಾಜವಾಡೆಯವರು ತಮ್ಮ ಕಥೆಗಳ ಮೂಲಕ ಮಹಿಳಾ ಬದುಕಿನ ಹಲವು ಸ್ಥರಗಳನ್ನು ವಿಮರ್ಶಾತ್ಮಕವಾಗಿ ಚರ್ಚೆಗೆ ಒಳಪಡಿಸುತ್ತಾರೆ. ಅಲ್ಪ ಪ್ರಮಾಣದಲ್ಲಿ ದೊರೆತಿರುವ ಬಿಡಿ ಕವನಗಳು ಸ್ತ್ರೀ ಸಂವೇದನೆಯ ದೃಷ್ಟಿಯಿಂದ ಅತ್ಯಂತ ಪ್ರಮುಖವಾದವಾಗಿವೆ. ಕಾವ್ಯವನ್ನು ಧ್ಯಾನವಾಗಿಸಿಕೊಂಡು ಎಂತಹ ಪರಿಸ್ಥಿತಿಯಲ್ಲಿಯೂ ಬಿಡದೆ ಕಾವ್ಯ ರಚನೆಯಲ್ಲಿ ತಮ್ಮನ್ನು ತೊಡಗಿಸಿಕೊಂಡ ಬೆಳಗೆರೆ ಜಾನಕಮ್ಮ ಅತ್ಯಾಧುನಿಕ ಎನ್ನಬಹುದಾದ ಆಲೋಚನೆಗಳಿಂದ ಕೂಡಿದ ಕವನಗಳನ್ನು ರಚಿಸಿದ್ದಾರೆ. ಇವರ ಕವನಗಳಲ್ಲಿ ಹೆಣ್ಣಿನ ಶೋಷಣೆಯಲ್ಲಿ ಗಂಡಿನ ಪಾತ್ರ, ಶ್ರೇಣೀಕರಣದಿಂದ ಉಂಟಾಗಿರುವ ತಾರತಮ್ಯ ಧೋರಣೆಗಳನ್ನು ಕಟುವಾಗಿ ಟೀಕಿಸುತ್ತಾರಾದರೂ ಅಂತಿಮವಾಗಿ ಮೌಲ್ಯವ್ಯವಸ್ಥೆಯನ್ನು ಹೆಣ್ಣು ಒಪ್ಪಿ ನಡೆಯಬೇಕಾದ ಅನಿವಾರ್ಯತೆಯನ್ನು ಎತ್ತಿಹಿಡಿಯುತ್ತಾರೆ. 'ಕಲ್ಯಾಣ' ಎಂಬ ಕವನ ಸಂಕಲನ ಅವರ ಸಮಗ್ರಕಾವ್ಯವನ್ನು ಒಳಗೊಂಡಿದೆ. ರಾಷ್ಟ್ರೀಯ ಚಳುವಳಿಯ ಪ್ರಭಾವಕ್ಕೆ ಒಳಗಾದ ಅನೇಕ ಲೇಖಕಿಯರಲ್ಲಿ ತಿರುಮಲೆ ರಾಜಮ್ಮ ಕೂಡ ಒಬ್ಬರು. ಇವರು 'ರಾಷ್ಟ್ರಶಕ್ತಿ', ಮತ್ತು 'ರಾಷ್ಟ್ರಭಕ್ತಿ' ಎಂಬ ಕವನ ಸಂಕಲನಗಳ ಮೂಲಕ ರಾಷ್ಟ್ರ ಸೇವೆಯ ಮಹತ್ವವನ್ನೂ, ಅದರಲ್ಲಿ ಮಹಿಳೆ ಭಾಗವಹಿಸಬೇಕಾದ ಅನಿವಾರ್ಯತೆಯನ್ನು ತಿಳಿಸಲು ಪ್ರಯತ್ನಿಸಿದ್ದಾರೆ.

ಈ ಕಾಲಘಟ್ಟದ ಮುಖ್ಯ ಲೇಖಕಿಯರಲ್ಲಿ ಒಬ್ಬರಾದ ಜಯದೇವಿ ತಾಯಿ ಲಿಗಾಡೆಯವರು ಜಯಗೀತ, ತಾಯಿಯ ಪದಗಳು, ತಾರಕತಂಬೂರಿ, ಸಿದ್ಧರಾಮೇಶ್ವರಪುರಾಣ ಮುಂತಾದ ಕೃತಿಗಳನ್ನು ತ್ರಿಪದಿ ಪ್ರಕಾರದಲ್ಲಿ ರಚಿಸಿದ್ದಾರೆ. ಸರೋಜಿನಿ ಮಹಿಷಿ, ಕುಂದಾಪುರದ ವಾಸಂತಿ ಚಂದ್ರ, ಸೊಲ್ಲಾಪುರದ ಇಂದುಮತಿ, ಹೇಮಲತಾ ಪರುಶುರಾಮ, ವಿಜಯಲಕ್ಷ್ಮಿ ಒಡೆಯರ್ ಆರಂಭದ ಬರಹಗಾರ್ತಿಯರಲ್ಲಿ ಗುರುತಿಸಬಹುದಾದ ಹೆಸರುಗಳು. ಇವರ ಕಾವ್ಯದಲ್ಲಿ ಸಾಮಾಜಿಕ ವ್ಯವಸ್ಥೆಯ ವಿರುದ್ಧದ ಪ್ರತಿಭಟನೆಗಿಂತ ಅವುಗಳ ಅಂಧಾನುಕರಣೆ ಹಾಗೂ ಮೌಲ್ಯವ್ಯವಸ್ಥೆಯ ಪ್ರತಿಪಾದನೆಗೆ ಹೆಚ್ಚಿನ ಗಮನ ನೀಡಿದ್ದಾರೆ. ಈ ಹಿನ್ನೆಲೆಯಲ್ಲಿ ೧೯೭೫ರ ವರೆಗಿನ ಮಹಿಳಾಕಾವ್ಯವನ್ನು ಆಧುನಿಕ ಕಾವ್ಯದ ಆರಂಭದ ಹೆಜ್ಜೆಗಳು ಭಾಗದಲ್ಲಿ ಸೇರಿಸಲಾಗಿದೆ. ೧೯೭೫ರ ನಂತರ ಬಂದ ಕಾವ್ಯಗಳಲ್ಲಿ ಪುರುಷ ಪ್ರಧಾನ ಸಮಾಜದ ರೀತಿ ನೀತಿ, ಸಂಪ್ರದಾಯಗಳನ್ನು ಧಿಕ್ಕರಿಸುವ, ಪುರುಷರಿಗಿಂತ ಭಿನ್ನವಾದ ಹಾಗೂ ಸ್ವತಂತ್ರವಾದ ಅಸ್ತಿತ್ವವನ್ನು ಸ್ಥಾಪಿಸುವ, ಪರ್ಯಾಯ ಮೌಲ್ಯಗಳನ್ನು ಕಟ್ಟಿಕೊಳ್ಳುವ ಮಾದರಿಗಳನ್ನು ಗುರುತಿಸಬಹುದು. ಈ ಅಂಶಗಳನ್ನು ಗಮನಿಸಿದಾಗ ಪುರುಷಪ್ರಧಾನ ವ್ಯವಸ್ಥೆ ಹೆಣ್ಣಿಗೆ ನೀಡಿದೆ ಎನ್ನಲಾಗುವ ಅವಕಾಶಗಳ ನಡುವೆಯೂ ಅವಳನ್ನು ನಿಯಂತ್ರಿಸುವ, ಅಪೇಕ್ಷಿತ ಚೌಕಟ್ಟಿನೊಳಗೆ ಬಂಧಿಸಿಡುವ, ತನ್ನ ಸ್ವಹಿತಾಸಕ್ತಿಯನ್ನು ಕಾಯ್ದುಕೊಳ್ಳುವ ಕಾರ್ಯತಂತ್ರಗಳನ್ನು ರೂಪಿಸಿ, ತನ್ನ ಪ್ರಭುತ್ವವನ್ನು ನಿರಂತರವಾಗಿ ಕಾಯ್ದುಕೊಂಡು ಬಂದಿದೆ ಎಂಬುದು ಸ್ಪಷ್ಟವಾಗುತ್ತದೆ.

ಈ ಹಿನ್ನೆಲೆಯಲ್ಲಿ ಆರಂಭ ಘಟ್ಟದಲ್ಲಿ ರೂಪುಗೊಂಡ ಮಹಿಳಾಕಾವ್ಯ ಒಂದು ಬಗೆಯಲ್ಲಿ ವೇದನೆಯ, ಸ್ವಮರುಕದ ದಾಟಿಯಲ್ಲಿದೆ. ಇದರ ನಡುವೆಯೂ ಸ್ತ್ರೀ ಶೋಷಣೆಗೆ ಕಾರಣವಾದ ಸಾಮಾಜಿಕ ಹಾಗೂ ಧಾರ್ಮಿಕ ಮೌಲ್ಯಗಳನ್ನು ಪ್ರಶ್ನಿಸುವ ಕೆಲಸವನ್ನು ಈ ಕಾಲದ ಲೇಖಕಿಯರು ಮಾಡಿದರು. ಬಾಲ್ಯವಿವಾಹ, ವಿಧವಾ ಸಮಸ್ಯೆ, ಸ್ತ್ರೀಶಿಕ್ಷಣ ಮುಂತಾದವು ಇವರ ಸಾಹಿತ್ಯದ ಪ್ರಧಾನ ವಸ್ತುಗಳಾಗಿದ್ದವು. ಅಲ್ಲದೆ ಮಧ್ಯಮ ವರ್ಗದ ಸ್ತ್ರೀಯರ ಸಮಸ್ಯೆಗಳೇ ಇವರ ಸಾಹಿತ್ಯದ ಕೇಂದ್ರ ಕಾಳಜಿಗಳಾಗಿದ್ದವು. ಆರಂಭದ ಬಹುಪಾಲು ಕವಿತೆಗಳು ನಿಟ್ಟುಸಿರಿನ, ನೋವಿನ, ಅಸಹಾಯಕತೆ, ಬೇಗುದಿ, ತಲ್ಲಣಗಳ ಅಭಿವ್ಯಕ್ತಿಯಾಗಿದೆ.

ಈ ಲೇಖಕಿಯರ ಬರವಣಿಗೆಯಲ್ಲಿ ತನ್ನ ಸ್ಥಿತಿಗೆ ಯಾರು ಕಾರಣ ಎಂಬುದನ್ನು ಸ್ಪಷ್ಟವಾಗಿ ಗುರುತಿಸಲಾರದ ಅಸಹಾಯಕತೆ, ಅರಿವಿನ ಕೊರತೆ ಪ್ರಮುಖವಾಗಿ ಕಂಡುಬರುತ್ತದೆ. ಇದರಿಂದಾಗಿ ತನ್ನ ಸ್ಥಿತಿಗೆ ತಾನೇ, ತನ್ನ ಹುಟ್ಟೇ ಕಾರಣ ಎಂಬ ನೋವಿನ ಧ್ವನಿ ಪ್ರಧಾನವಾಗಿ ಕೇಳಬರುತ್ತದೆ. ಹೆಣ್ಣಿನ ಸಮಸ್ಯೆಗಳನ್ನು ವೈಯಕ್ತಿಕ ನೆಲೆಯಲ್ಲಿ ಗುರುತಿಸುವ ಇವರ ಕಾವ್ಯ ಪುರಾಣದ ಮಾದರಿ ಸ್ತ್ರೀ ಪಾತ್ರಗಳಂತೆ ತಾನೂ ಕೂಡ 'ಪರೀಕ್ಷೆಗೆ' ಒಳಗಾಗಬೇಕಾದವಳು, ಲೋಕ ತನಗೆ ಒಡ್ಡುವ ಸಂಕಷ್ಟಗಳೆಲ್ಲವನ್ನೂ ಮೌಲ್ಯವ್ಯವಸ್ಥೆಯ ಚೌಕಟ್ಟಿನಲ್ಲಿಯೇ ಮೀರಿ 'ಒಪ್ಪಿತ ಸ್ತ್ರೀ', 'ಆದರ್ಶ ಸ್ತ್ರೀ'ಯಾಗುವ ಬಗೆಯದ್ದಾಗಿವೆ. ಇದರಿಂದಾಗಿ ಈ ಘಟ್ಟದ ಲೇಖಕಿಯರಿಗೆ ತಾನು ಇತರರಿಂದ ಶೋಷಣೆಗೊಳಗಾಗುತ್ತಿರುವುದರ ಬಗೆಗೆ ಸ್ಪಷ್ಟ ಅರಿವಿದೆಯಾದರೂ ಅದನ್ನು ಸಹಜ ಸ್ಥಿತಿ ಎಂದು ಸ್ವೀಕರಿಸಬೇಕೋ, ಇತರರಿಂದ ತನಗೆ ಒದಗಿದ ಸಂಕಷ್ಟ ಎಂದು ತಿಳಿಯಬೇಕೋ ಎಂಬ ಬಗ್ಗೆ ಗೊಂದಲಗಳಿವೆ. ಇದರಿಂದಾಗಿ ರೂಪುಗೊಂಡ ಇವರ ಮಾನಸಿಕತೆ ತನ್ನ ಸ್ಥಿತಿಯನ್ನು ಕುರಿತಂತೆ ವಿಧಿಬರಹ, ಪೂರ್ವಜನ್ಮದ ಫಲ, ಹೆಣ್ಣು ಜನ್ಮ ಎಂಬ ತೀರ್ಮಾನಕ್ಕೆ ಬರುವ ಮೂಲಕ ತನ್ನೆಲ್ಲಾ ನೋವು, ಸಂಕಷ್ಟಗಳಿಗೆ ತನ್ನನ್ನೇ ಗುರಿಯಾಗಿಸಿಕೊಂಡು 'ಸ್ವಮರುಕ' ದಾಟಿಯಲ್ಲಿ ರೂಪುಗೊಂಡಿವೆ. ಅದರೊಂದಿಗೆ ಅಂದಿನ ಸಾಮಾಜಿಕ ಸನ್ನಿವೇಶದಿಂದ ದತ್ತವಾದ ಅವಕಾಶಗಳು ಅವರನ್ನು ಮತ್ತಷ್ಟು ಗೊಂದಲಕ್ಕೀಡುಮಾಡಿರುವುದನ್ನು ಗುರುತಿಸಬಹುದು.

ಆಧುನಿಕ ಅವಕಾಶಗಳೊಂದಿಗೆ ಮುಖಾಮುಖಿಯಾಗುವ ಸಂದರ್ಭದಲ್ಲಿ ಸಾಂಪ್ರದಾಯಿಕ ಪ್ರಜ್ಞೆಯನ್ನು ಮೀರಲಾರದ, ಹಾಗೂ ಅದರಿಂದ ಹೊರಬರಲಾರದ ತನ್ನ ಸ್ಥಿತಿಯನ್ನು ಕುರಿತಂತೆ ತನ್ನೊಳಗಿನ ಮರುಕ ಮೊದಲ ತಲೆಮಾರಿನ ಲೇಖಕಿಯರ ಬರವಣಿಗೆಯಲ್ಲಿ ಪ್ರಮುಖವಾಗಿ ಕಂಡುಬರುತ್ತದೆ. ಹೆಚ್.ವಿ ಸಾವಿತ್ರಮ್ಮನವರ 'ಅಕ್ಕನಂತಿಲ್ಲ' ಕಥೆ ಅಶಿಕ್ಷಿತ ಗ್ರಾಮೀಣ ಮಹಿಳೆ ನಗರ ಪ್ರದೇಶದಲ್ಲಿ ಅನುಭವಿಸುವ ಏಕಾಕಿತನ, ಹಾಗೂ ಕೀಳರಿಮೆಯ ಮನೋಭಾವವನ್ನು ತಿಳಿಸುತ್ತದೆ. ಜೊತೆಗೆ ಕಲ್ಯಾಣಮ್ಮನವರ ಆಲೋಚನೆ, ಆಧುನಿಕತೆಯ ಬಗೆಗಿನ ಅವರ ಚಿಂತನೆಯನ್ನು ಕುರಿತಂತೆ 'ಆಧುನಿಕ ಮಹಿಳೆಯರ ಬದುಕುಗಳಲ್ಲಿ ಹಿಂದಿನ ಆ ಆರ್ಯ ಮಹಿಳೆಯರಲ್ಲಿದ್ದ ಚೈತನ್ಯ, ಕಾರ್ಯದಕ್ಷತೆ ಯಾವುದೂ ಕಾಣಿಸದು. ಇವರು ಥಳುಕಿನ ವಿಲಾಸದ ಬದುಕಿಗೆ ಮಾರುಹೋಗಿ ತಮ್ಮ ಘನತೆಯನ್ನು ಕಳೆದುಕೊಂಡು ಪುರುಷರ ದಾಸ್ಯಕ್ಕೆ ಒಳಗಾಗಿದ್ದಾರೆ ಎಂಬುದನ್ನು ಸ್ತ್ರೀಯರೂ ಮತ್ತು

ಸಮಾಜಸೇವೆಯೂ ಎಂಬ ಸಂಪಾದಕೀಯದಲ್ಲಿ ವಿವರಿಸುತ್ತಾರೆ'[೩೫] ಎನ್ನುವ ಬಿ.ಎನ್. ಸುಮಿತ್ರಾಬಾಯಿಯವರ ಮಾತು ಈ ಘಟ್ಟದ ಲೇಖಕಿಯರಿಗೆ ಆಧುನಿಕತೆ ಏಕಕಾಲಕ್ಕೆ ತಂದೊಡ್ಡಿದ ಅವಕಾಶ ಹಾಗೂ ಮಿತಿಗಳನ್ನು ತಿಳಿಸುತ್ತದೆ.

ಕುಟುಂಬ ಮತ್ತು ದಾಂಪತ್ಯ ಗಂಡು ಹೆಣ್ಣು ಇಬ್ಬರಿಗೂ ಅನಿವಾರ್ಯವಾಗಿರುವ ಸಂದರ್ಭದಲ್ಲಿ ವಿವಾಹದ ನಂತರ ಹೆಣ್ಣನ್ನು ಕಾಡುವ ಏಕಾಂಗಿತನ, ಅನಾಥಪ್ರಜ್ಞೆ ಹೆಣ್ಣಿನ ನೋವಿಗೆ, ಮರುಕಕ್ಕೆ ಕಾರಣವಾಗಿರುವುದನ್ನು ಮೊದಲ ಘಟ್ಟದ ಲೇಖಕಿಯರ ಬರಹಗಳು ಸಮರ್ಥವಾಗಿ ಚರ್ಚಿಸುತ್ತವೆ. ವಿವಾಹದ ನಂತರ ತನ್ನೆಲ್ಲಾ ಸಂಬಂಧಗಳನ್ನು ಕಳೆದುಕೊಂಡು, ಗಂಡ, ಮನೆ, ಮಕ್ಕಳೆಲ್ಲರಿಗೂ ಅಪರಿಚಿತವಾಗಿಬಿಡುವ, ಸದಾ ಭಯ, ಅವಮಾನದ ನೆರಳಿನಲ್ಲಿ ಬದುಕುವ ಹೆಣ್ಣಿನ ಸ್ಥಿತಿಯನ್ನು ಸರಸ್ವತಿಬಾಯಿ ರಾಜವಾಡೆಯವರ 'ಆಹುತಿ' ಕಥೆ ಬಿಚ್ಚಿಡುತ್ತದೆ. ಅದೇರೀತಿ ಗಂಡನ ವಿಭಿನ್ನ ಮುಖವಾಡಗಳನ್ನೂ, ಅವನು ಹೆಂಡತಿಯನ್ನು ನಡೆಸಿಕೊಳ್ಳುವ ಬಗೆಯನ್ನು ಬೆಳಗೆರೆ ಜಾನಕಮ್ಮನವರ 'ಗಂಡ' ಕವನ ಚರ್ಚಿಸುವ ಬಗೆ ವಿಶಿಷ್ಟವಾದದ್ದು.

ಗಂಡನೆಂದರೆ ಪ್ರಾಣ ಗಂಡ-ಹೆಣ್ಣೆ ನೀ ಗಂಡನ ಕೂಡಿಕೊಂಡ್ಯ
ನೋಡು ಮಂಡೂಕ ಸರ್ಪದ ನೆಳಲಿಗೆ ಹೋದಂತೆ
ಬಂಡೀಗ ಬಸವನು ಶಿರಬಾಗಿಕೊಂಡಂತೆ!

ಗಂಡನ ಮನೆ ಸಗ್ಗ ನಿನಗೆ-ಮನಿಯೆ ಗಂಡನೆ ಯಮರಾಯ ಕೊನೆಗೆ
ನಿನ್ನ ಮುಳುಗಿಪ ತೇಲಿಪ ಶಕ್ತಿಯುಂಟಾತಗೆ
ನೀನೊಂದು ವಿಕ್ರಯದೊಸ್ತುವು ಪುರುಷಗೆ!

ಅಧಿಕಾರಿ ನಿನಗವನೊಬ್ಬ ನಿರುತ ದುಡಿದರೆ ಅಶನದ ಹಬ್ಬ
ತಪ್ಪಿ ಬೇನೆ ಬೇಸರವಾಗಿ ಉಶ್ಯೆನ್ನಲಬ್ಬಬ್ಬ
ಏನಾಯ್ತು ಎಂದು ಗಂಟ್ಹಾಕುವ ಹುಬ್ಬ![೩೬]

ಬೆಳಗೆರೆ ಜಾನಕಮ್ಮನವರ ಈ ಕವನ ಹೆಣ್ಣಿನ ಜೀವನದಲ್ಲಿ ಗಂಡಿನ ಪಾತ್ರಗಳನ್ನು ಕುರಿತಂತೆ ಹೇಳುತ್ತಲೇ ವಿವಾಹ, ಕುಟುಂಬ, ದಾಂಪತ್ಯದ ಸಾಧಕ ಬಾಧಕಗಳನ್ನು ಚರ್ಚಿಸುತ್ತದೆ. 'ಗಂಡ'ನ ಪಾತ್ರದಲ್ಲಿನ ವೈರುಧ್ಯಗಳನ್ನು ಸಮರ್ಥವಾಗಿ ಹಿಡಿದಿಡುವ ಈ ಕವನ ಹೆಣ್ಣಿನ ಜೀವನದಲ್ಲಿ ಗಂಡನ ಮಹತ್ವವನ್ನು ವ್ಯಂಗ್ಯದ ಧ್ವನಿಯಲ್ಲಿ ಬಿಚ್ಚಿಡುತ್ತದೆ. ಹೆಣ್ಣಿಗೆ ಗಂಡಿನಂತೆ, ಗಂಡಿಗೆ ಹೆಣ್ಣೂ ಕೂಡ ಅನಿವಾರ್ಯವಾಗಿರುವ ಸಂದರ್ಭದಲ್ಲಿ ಗಂಡು ಹೆಣ್ಣಿನೊಂದಿಗೆ ನಡೆದುಕೊಳ್ಳುವ ರೀತಿ ಮಾತ್ರ ಅವಳ ಮೇಲೆ ತನ್ನ ಹಿಡಿತವನ್ನು ಸಾಧಿಸುವ ಬಗೆಯದ್ದು. ಮಂಡೂಕ ಸರ್ಪನ ನೆಳಲಿಗೆ ಹೋದಂತೆ, ಬಂಡೀಗೆ ಬಸವನು ಶಿರಬಾಗಿಕೊಂಬಂತೆ ಎನ್ನುವ ಉಪಮೆಗಳು ಹೆಣ್ಣಿನ ಅಸಹಾಯಕತೆಯನ್ನೂ, ಅನಿವಾರ್ಯತೆಯನ್ನು ಧ್ವನಿಸುತ್ತವೆ. ಈ ನಡುವೆಯೂ ಹೆಣ್ಣಿಗೆ ಗಂಡನ ಮನೆಯೇ ಸ್ವರ್ಗ ಎಂಬ ವ್ಯವಸ್ಥೆಯ ನಿಯಮಗಳನ್ನು ಮೀರಲಾರದ, ಮೀರಬಾರದ ಕಟ್ಟಳೆಗಳು ಅವಳನ್ನು ವಿಕ್ರಯದ ವಸ್ತುವಾಗಿಸಿವೆ. ಇದರಿಂದ ಹೆಣ್ಣಿಗೇನು ಆನಂದ ಇಲ್ಲದಿದ್ದರೂ ಅದರಿಂದ ಬಿಡುಗಡೆ ಸಾಧ್ಯವಿಲ್ಲ. ಇಲ್ಲಿ ಗಂಡ ಹೆಣ್ಣಿನ ಮೇಲೆ ಪ್ರಭುತ್ವವನ್ನು ಸಾಧಿಸುವ ಅಧಿಕಾರಿಯಾಗಿ, ಅವಳನ್ನು ನಿಯಂತ್ರಿಸುವ, ಶಿಕ್ಷಿಸುವ

ಯಮಸ್ವರೂಪಿಯಾಗಿ ಕಾರ್ಯನಿರ್ವಹಿಸುತ್ತಿರುವುದನ್ನು ಈ ಕವನ ಬಿಚ್ಚಿಡುತ್ತದೆ. ಕಲ್ಯಾಣ ಕವನದಲ್ಲಿ ದಾಂಪತ್ಯಕ್ಕೆ ಆಧ್ಯಾತ್ಮದ ನಂಟನ್ನು ಬೆಸೆದು ಸಮಾನತೆಯ ಆಶಯವನ್ನು ಬಯಸುವ ಲೇಖಕಿಗೆ 'ಗಂಡನ' ಈ ಬಗೆಯ ವರ್ತನೆ ಕಾಲ, ದೇಶ, ಸಮುದಾಯಗಳನ್ನು ಮೀರಿ ಸರ್ವವ್ಯಾಪಿಯಾಗಿರುವ ಅರಿವಿದೆ. ಇಲ್ಲಿ ನೀನು, ನಾನು ಎಂಬ ಬೇಧವಳಿದು 'ಗಂಡ' 'ಹೆಂಡತಿ'ಯ ಸಂಬಂಧದಲ್ಲಿನ ಅಸಮಾನತೆ, ಪ್ರಧಾನ–ಅಧೀನ ಭಾವ ಕಾರ್ಯ ನಿರ್ವಹಿಸುತ್ತಿರುವುದನ್ನು ಗುರುತಿಸುತ್ತಾರೆ. ಅಲ್ಲದೆ ಕುಟುಂಬದಲ್ಲಿ ಹೆಣ್ಣಿನ ಸ್ಥಾನ ನಿರಂತರವಾಗಿ ಗಂಡ, ಮಕ್ಕಳ ಸೇವೆಗೆ ಸೀಮಿತವಾಗಿದ್ದು, ಅನಿವಾರ್ಯ ಸಂದರ್ಭದಲ್ಲೂ 'ಗಂಡನ ನಡವಳಿಕೆಗಳಿಂದಾಗಿ' ಅದನ್ನು ಮೀರಲಾಗದ ಹೆಣ್ಣಿನ ಸ್ಥಿತಿಯ ಬಗೆಗೆ ಮರುಕವಿದೆ. ದಾಂಪತ್ಯ ಅನುಭವದ ಸಂದರ್ಭದಲ್ಲಿ ಪುರುಷನ ದರ್ಪ, ದೌರ್ಜನ್ಯ, ಅಜ್ಞಾನ ಅಹಂಕಾರಗಳಿಂದಾಗಿ ಹೆಣ್ಣಿನ ಕನಸುಗಳು ಬಾಡಿಹೋಗುತ್ತಿರುವ, ಹೆಣ್ಣಿನ ನಿರೀಕ್ಷೆಗಳನ್ನು ಗಂಡು ಹೊಸಕಿಹಾಕುತ್ತಿರುವ ಬಗೆಗಿನ ಬೇಸರದ ಧ್ವನಿಯನ್ನು ಗುರುತಿಸಬಹುದು. ಹೆಣ್ಣಿನ ಜೀವನವನ್ನು ಉದ್ಧರಿಸುವ, ಮತ್ತು ಹಾಳುಮಾಡುವ ಎರಡೂ 'ಶಕ್ತಿ' ಗಂಡಿಗಿದೆ ಎಂಬ ಅಂಶವನ್ನು ತಿಳಿಸುವುದರೊಂದಿಗೆ ಹೆಣ್ಣು ಗಂಡನ್ನು ಅನುಸರಿಸಿ ನಡೆಯಬೇಕಾದ ಅನಿವಾರ್ಯತೆಯನ್ನೂ, ಹೊಂದಾಣಿಕೆಯ ಅವಶ್ಯಕತೆಯನ್ನೂ ಎತ್ತಿಹಿಡಿಯುತ್ತಾರೆ. ಕಡೆಗೆ 'ಧರ್ಮವ ಬಿಡದಿರು ಎಂಬಳು ಜನಕಜೆ' ಎಂಬುದು ಪುರುಷ ಪ್ರಧಾನ ವ್ಯವಸ್ಥೆಯನ್ನು ಎದುರಿಸಲು ಬೇಕಾದ 'ಶಕ್ತಿ' ತನ್ನಲ್ಲಿಲ್ಲ ಎಂಬ ಅಸಹಾಯಕ ಸ್ಥಿತಿಯ ನೋವಿನ ಧ್ವನಿಯೇ ಆಗಿದೆ.

ಹೆಣ್ಣಿಗೆ ಶಿಕ್ಷಣಾವಕಾಶಗಳು ಅತ್ಯಂತ ಅವಶ್ಯಕ ಹಾಗೂ ಶಿಕ್ಷಣದಿಂದ ಮಾತ್ರ ಹೆಣ್ಣಿನ ಸಾಮಾಜಿಕ ಮತ್ತು ಆರ್ಥಿಕ ಸನ್ನಿವೇಶಗಳು ಬದಲಾಗಲು ಸಾಧ್ಯ ಎಂಬುದನ್ನು ಪ್ರಬಲವಾಗಿ ನಂಬಿದ್ದ ಮೊದಲ ತಲೆಮಾರಿನ ಮಹಿಳೆಯರಿಗೆ ಶಿಕ್ಷಣವನ್ನು ಪಡೆಯುವುದು ಅತ್ಯಂತ ಸುಲಭದ ದಾರಿಯೇನೂ ಆಗಿರಲಿಲ್ಲ. ಸ್ತ್ರೀ ಶಿಕ್ಷಣಕ್ಕೆ ಯಾವುದೇ ರೀತಿಯ ಮಾನ್ಯತೆ ಇಲ್ಲದಿದ್ದ ಸಂದರ್ಭದಲ್ಲಿ ಹೆಣ್ಣಿಗೆ ಶಿಕ್ಷಣಾವಕಾಶಗಳ ಬಾಗಿಲು ತೆರೆದದ್ದು ಅವಳ ವೈಧವ್ಯದ ಹಿಂಸೆಯನ್ನು ಸ್ವಲ್ಪಮಟ್ಟಿಗೆ ಕಡಿಮೆ ಮಾಡಲು ಮಾತ್ರ. ಇದರಿಂದಾಗಿ ಆರಂಭದ ಸ್ತ್ರೀ ಶಿಕ್ಷಣ ಸಾಮಾನ್ಯವಾಗಿ ಬಾಲವಿಧವೆಯರಿಗೆ ಮಾತ್ರ ಸೀಮಿತವಾಗಿತ್ತು. ಅದೂ ಪ್ರಾಥಮಿಕ ಹಂತದವರೆಗೆ ಮಾತ್ರ. ಉಳಿದಂತೆ ಅನೇಕ ಲೇಖಕಿಯರಿಗೆ ಶಿಕ್ಷಣವನ್ನು ಪಡೆಯಬೇಕೆಂಬ ಹಂಬಲ, ಇನ್ನೂ ಹೆಚ್ಚು ಕಲಿಯಬೇಕೆಂಬ ಆಸೆ ಇದ್ದಿತ್ತಾದರೂ ಅದಕ್ಕೆ ಸೂಕ್ತ ಅವಕಾಶಗಳಾಗಲೀ, ಆದ್ಯತೆಯಾಗಲೀ ಇರಲಿಲ್ಲ. ಇದರಿಂದಾಗಿ ಈ ಕಾಲಘಟ್ಟದ ಮಹಿಳೆಯರಿಗೆ ಶಿಕ್ಷಣವನ್ನು ಪಡೆಯಬೇಕು, ಕಲೆ ಸಾಹಿತ್ಯಗಳಲ್ಲಿ ತಮ್ಮನ್ನು ತೊಡಗಿಸಿಕೊಳ್ಳಬೇಕು ಎಂಬ ತೀವ್ರವಾದ ಹಂಬಲ, ಅದು ಈಡೇರದಿದ್ದ ಸಂದರ್ಭದಲ್ಲಿ ಸ್ವಮರುಕಕ್ಕೆ ಕಾರಣವಾಗಿದೆ. ಹೆಣ್ಣಿನ ಶಿಕ್ಷಣಾಪೇಕ್ಷೆಯನ್ನು ನೇರವಾಗಿ ವ್ಯಕ್ತಪಡಿಸಲಾರದ ಕವಯತ್ರಿ

ನಿಸ್ಪೃಹ ಮನಸಿನ
ನಮ್ಮೀ ಸೀತೆಗೆ
ಓದುವುದೆಂದರೆ
ಹಿರಿಯಾಸೆ

ಹೇಳಲು ಬಾರದ
ಸುಖವನು ನೀಡುವ
ಕಲೆಗಳ ಕಂಡರೆ
ಬಹುಪ್ರೀತೆ
-------
ಹೇಳಲು ಬಾರದ
ಸುಖವನು ನೀಡುವ
ಕಲೆಗಳ ಬಯಸುವ
ಓ ಸೀತೇ
ಸುಖ ಸ್ವಾತಂತ್ರ್ಯದ
ಗೈಮೆಯ ಫಲವನು
ಸೃಷ್ಟಿಕರ್ತನೆ
ಉಣುತಿರಲಿ[೩೭]

ಎನ್ನುವ ಮೂಲಕ ತನ್ನ ಶಿಕ್ಷಣದ ಅಪೇಕ್ಷೆಯನ್ನು ಮುಂದಿಡುತ್ತಾಳಾದರೂ ಈ ಬಯಕೆಗಳನ್ನು ಪುರುಷ ಪ್ರಭುತ್ವದ ಅಡಿಯಲ್ಲಿ ಸುಲಭವಾಗಿ ಈಡೇರಿಸಿಕೊಳ್ಳಲು ಸಾಧ್ಯವಿಲ್ಲ ಎಂಬ ಅರಿವು 'ಸುಖ ಸ್ವಾತಂತ್ರ್ಯದ ಗೈಮೆಯ ಫಲವನು ಸೃಷ್ಟಿಕರ್ತನೆ ಉಣುತಿರಲಿ' ಎಂದು ಮುಕ್ತಾಯ ಮಾಡುವ ಮೂಲಕ ಹೆಣ್ಣನ್ನು ಅಸಹಾಯಕ ಸ್ಥಿತಿಗೆ ತಳ್ಳಿರುವ ಪುರುಷ ಪ್ರಧಾನ ವ್ಯವಸ್ಥೆಯ ಬಗೆಗೆ ಬೇಸರವನ್ನು ವ್ಯಕ್ತಪಡಿಸುತ್ತಾಳೆ. ಅನಂತರದ ಘಟ್ಟದಲ್ಲಿ ಬಹುಸಂಖ್ಯಾತ ಮಹಿಳೆಯರಿಗೆ ಶಿಕ್ಷಣಾವಕಾಶಗಳು ದೊರೆಯಿತಾದರೂ ಅದು 'ಸುಶಿಕ್ಷಿತ ಆಧುನಿಕ ಯುವಕ'ರಿಗೆ ತಕ್ಕ ಪತ್ನಿಯರನ್ನು 'ಸಿದ್ಧಗೊಳಸುವ' ಉದ್ದೇಶವನ್ನು ಹೊಂದಿತ್ತು. ಆದರೆ "ಮಹಿಳೆಯರಿಗೆ ಶಿಕ್ಷಣಾವಕಾಶವನ್ನು ನೀಡುವ ಪ್ರಭುತ್ವದ ಉದ್ದೇಶ ಎಷ್ಟೇ ಸ್ವಹಿತಾಸಕ್ತಿಯಿಂದ ಕೂಡಿದ್ದರೂ ಆ ಅನುಕೂಲಗಳನ್ನು ಪಡೆದುಕೊಂಡ ಸ್ತ್ರೀಯರು ಮಾತ್ರ ಅವುಗಳನ್ನು ಸ್ತ್ರೀ ಸಮುದಾಯಕ್ಕೆ ಅನುಕೂಲಕರವಾಗುವಂತೆ, ತಮ್ಮ ವ್ಯಕ್ತಿತ್ವದ ಅನಾವರಣಕ್ಕೆ ಯಶಸ್ವಿಯಾಗಿ ಬಳಸಿಕೊಂಡರು."[೩೮]ಎಂಬುದು ಮಾತ್ರ ವಿಶೇಷ.

ಮೊದಲ ತಲೆಮಾರಿನ ಲೇಖಕಿಯರು ಎದುರಿಸಿದ ಬಹುದೊಡ್ಡ ಸಮಸ್ಯೆ ತಮ್ಮ ಅಭಿವ್ಯಕ್ತಿಗೆ ಸಂಬಂಧಿಸಿದ್ದು. ಪುರುಷ ಪ್ರಭುತ್ವದ ವಿರೋಧ ಹಾಗೂ ಮಿತಿಗಳ ನಡುವೆಯೂ ತನ್ನ ಅಭಿವ್ಯಕ್ತಿ ಸ್ವಾತಂತ್ರ್ಯವನ್ನು ಉಳಿಸಿಕೊಳ್ಳುವುದು ಹೇಗೆ ಎಂಬುದು ಒಂದು ಬಗೆಯ ಸಮಸ್ಯೆಯಾದರೆ, ಮತ್ತೊಂದೆಡೆ ತನ್ನ ಅಭಿವ್ಯಕ್ತಿ ಮಾಧ್ಯಮ ಯಾವುದಾಗಿರಬೇಕು? ಹೇಗಿರಬೇಕು ಎಂಬ ಗೊಂದಲ. ಜೊತೆಗೆ ಪುರುಷ ನಿಯಂತ್ರಣದಲ್ಲಿಯೇ ತನ್ನ ಇರವನ್ನು, ಆಂತರ್ಯದ ಅಳಲನ್ನು ಹೊರಹಾಕುವ ಸವಾಲು. ಇವೆಲ್ಲದರ ನಡುವೆಯೂ ಸಾಹಿತ್ಯ ರಚನೆಯಲ್ಲಿ ತಮ್ಮನ್ನು ತಾವು ತೊಡಗಿಸಿಕೊಂಡ ಮಾತ್ರಕ್ಕೆ ಅವರಿಗೆ ಹೆಚ್ಚಿನ ಗೌರವವನ್ನಾಗಲೀ, ಗೃಹಕಾರ್ಯಗಳಿಂದ ಬಿಡುಗಡೆಯನ್ನಾಗಲೀ ನಿರೀಕ್ಷಿಸುವಂತಿರಲಿಲ್ಲ. ಜಾನಕಮ್ಮನವರ ಸಾಹಿತ್ಯ ರಚನೆಯನ್ನು ಕುರಿತಂತೆ " ಜಾನಕಮ್ಮ ಕಲಿತು ಬರೆದವರಲ್ಲ, ಕುಳಿತು ಪುರುಸೊತ್ತಾಗಿ ಹೊಸೆದವರಲ್ಲ. ಜೀವನ ಜೋಕಾಲಿ ಜೀಕುತ್ತಲೇ ಹಾಡಿದರು. ಬರೆದಿಟ್ಟರು".[೩೯] ಎಂಬುದಾಗಲೀ, "ಪಾತ್ರೆ ತೊಳೆಯುತ್ತ ಒಮ್ಮೊಮ್ಮೆ ಇದ್ದಕ್ಕಿದಂತೆ ಚಮಚವೊಂದನ್ನು ಎತ್ತಿ ಹಿಡಿದು 'ನೋಡು ಇದೇ ನನ್ನ ಲೇಖನಿ' ಎಂದು ತೋರಿಸುತ್ತಿದ್ದ".[೪೦] ಕಲ್ಯಾಣಮ್ಮನವರ

ವರ್ತನೆಯಾಗಲೀ ಗೃಹಕೃತ್ಯಗಳ ಭಾರದಿಂದ ನಲುಗುತ್ತಿರುವ ತಮ್ಮ ಕಾವ್ಯಕೃಷಿಯ ಬಗೆಗಿನ ಅಸಹಾಯಕತೆಯೇ ಆಗಿದೆ. ಇದರಿಂದಾಗಿ ತಮ್ಮ ಅಭಿವ್ಯಕ್ತಿಗೆ ಇರುವ ತೊಡಕುಗಳನ್ನು ಕುರಿತಂತೆ ಇವರಿಗೆ ಮರುಕವಿದೆ. ಬೆಳಗೆರೆ ಜಾನಕಮ್ಮ ತಮ್ಮ ಕಾವ್ಯ ರಚನೆಯನ್ನು ಕುರಿತಂತೆ

ಮನಬಂದ ವಾಕ್ಯದಿಂ
ಚೀರಿಡುತ ಕುಣಿಯುತಿಹ
ಮಂದಮತಿಗಳ ಗೃಹದಿ
ನಿನ್ನ ಜನನವೆ ಕವಿತೆ?[೬೦] ಎಂದು ತನ್ನ ಕವಿತೆಯ ಹುಟ್ಟನ್ನು ಕುರಿತೇ ಪ್ರಶ್ನೆ ಮಾಡುತ್ತಾರೆ.

ಮುಂದುವರಿದು

ಹೊಸದಾದ ಪೆಸರಿಟ್ಟು
ಅಕ್ಕರೆಯ ಸಕ್ಕರೆಯ
ಮೆಚ್ಚುಗೆ ಪುತ್ತಳಿಯೆ
ಬಾರೆಂದು ಕರೆಯುವರು
ಆರು ಇಲ್ಲಿಲ್ಲ.[೬೧]

ಎನ್ನುವ ಮೂಲಕ ಪುರುಷ ಪ್ರಧಾನ ವ್ಯವಸ್ಥೆ ಹೆಣ್ಣಿನ ಅಭಿವ್ಯಕ್ತಿಯನ್ನು ನಿಯಂತ್ರಿಸುತ್ತಿರುವ, ನಿರ್ಬಂಧಕ್ಕೊಳಪಡಿಸುತ್ತಿರುವ ವಿಧಾನವನ್ನು ಕುರಿತಂತೆ ಈ ಘಟ್ಟದ ಲೇಖಕಿಯರಿಗೆ ಬೇಸರವಿದೆ. ಅಭಿವ್ಯಕ್ತಿಯ ನಿಯಂತ್ರಣ ಒಂದೆಡೆಯಾದರೆ, (ಮಾಸ್ತಿಯವರು ತಿರುಮಲಾಂಬರವರ ಸುಶೀಲೆ ಕಾದಂಬರಿ ಕುರಿತು ಮಾಡಿರುವ ಟೀಕೆ ಇದಕ್ಕೊಂದು ಉತ್ತಮ ಉದಾಹರಣೆ) ಅವರ ಅಭಿವ್ಯಕ್ತಿಯ ಅನನ್ಯತೆಯನ್ನೂ, ಇರುವಿಕೆಯ ಅಸ್ತಿತ್ವವನ್ನು ಸಂಪೂರ್ಣ ನಿರ್ಲಕ್ಷ್ಯಕ್ಕೊಳಪಡಿಸುವುದು ಮತ್ತೊಂದು ಬಗೆಯದು. ( ಈ ಘಟ್ಟದ ಶ್ರೇಷ್ಠ ಬರಹಗಾರ್ತಿಯರಾದ ತಿರುಮಲಾಂಬ ಹಾಗೂ ಸರಸ್ವತಿಬಾಯಿ ರಾಜವಾಡೆಯವರು ಬದುಕಿದ್ದ ಸಂದರ್ಭದಲ್ಲೇ ಹಲವು ಅನುಮಾನಗಳಿಗೆ ಕಾರಣವಾಗಿದ್ದದ್ದು. ತಿರುಮಲಾಂಬ ಬದುಕಿದ್ದಾಗಲೇ ಸತ್ತಿದ್ದಾರೆ ಎಂದು ಪ್ರಕಟಿಸಿದ್ದು, ರಾಜವಾಡೆಯವರು ಬದುಕಿದ್ದಾಗಲೇ ಅವರ ಇರುವಿಕೆಯನ್ನು ಕುರಿತ ಹಿರಿಯ ಲೇಖಕರೋರ್ವರು ಆ ಹೆಂಗಸು ಇನ್ನೂ ಬದುಕಿದೆಯೇ? ಎಂದು ಕೇಳಿದ ಪ್ರಶ್ನೆ. ಈ ಕಾರಣದಿಂದಾಗಿ ಈ ಲೇಖಕಿಯರೀರ್ವರೂ ತಮ್ಮೊಳಗಿನ ಲೇಖಕಿಯರನ್ನು ತಾವೇ ಸ್ವತಃ ಮರೆಮಾಚಲು ಪ್ರಯತ್ನಿಸುತ್ತಿದ್ದದ್ದು). ಜೊತೆಗೆ ಸ್ವಾತಂತ್ರದ ಕೊರತೆ ಮತ್ತೊಂದಡೆ ಇವರ ಮರುಕಕ್ಕೆ ಕಾರಣವಾಗಿದೆ. ಲೋಕದ ಇತರೆ ಜೀವಿಗಳ ಗಿರುವಷ್ಟು ಸ್ವಾತಂತ್ರ್ಯವಾಗಲೀ, ಸ್ವಚ್ಛಂದ ಬದುಕಾಗಲೀ ಹೆಣ್ಣಿಗೆ ಇಲ್ಲ. ಇದರ ಬಗೆಗಿನ ನೋವು ಕೂಡ ಮಹಿಳಾ ಕಾವ್ಯದಲ್ಲಿ ಅಭಿವ್ಯಕ್ತಿಗೊಂಡಿದೆ.

ಬಂಧನದ ಬಲೆಯೊಳಗೆ ಸಿಲುಕಿ ನರಳದೆ
ಸುಳಿವ ಪಕ್ಷಿಕೂಟವೆ! ನಿಮ್ಮ ಬಾಳ್ವೆ ಲೇಸು
ಮೃಗ ಕೀಟಗಳ ಜನರ ಬಾಧೆ ನಿಮಗಿಲ್ಲ
ಲೋಹನಿರ್ಮಿತದಿಚ್ಛೆಗಳಿಗೆ ಸಿಲುಕದೆಯೆ
ಬಗೆಬಗೆಯ ನೋಟಗಳ ನೋಡಿ ನಲಿಯುವಿರಿ
ಜನಕಜೆಗೆ ನಿಮ್ಮ ಜೀವನವೆ ಬಹು ಸೊಗಸು.[೬೨]

ಎನ್ನುವ ಮೂಲಕ ಹೆಣ್ಣುಜನ್ಮ ಹಲವು ರೀತಿಯ ಸಂಕಷ್ಟಗಳಿಗೆ ಅನಿವಾರ್ಯವಾಗಿ ಸಿಲುಕಬೇಕಾದ ಸ್ಥಿತಿಯನ್ನು ಪರಿಚಯಿಸುತ್ತದೆ. ಜೊತೆಗೆ ಹೆಣ್ಣಿನ ದುಡಿಮೆಯ ನಿರರ್ಥಕತೆ ಹಾಗೂ ಅವಳ ದುಡಿಮೆಯನ್ನು ಎಲ್ಲಾ ಹಂತದಲ್ಲಿಯೂ ಎರಡನೆಯ ದರ್ಜೆಗಿಳಿಸಿ, ಮಾನ್ಯ ಮಾಡದಿರುವ ವ್ಯವಸ್ಥೆಯ

ಹುನ್ನಾರದ ಬಗೆಗೆ ಕೂಡ ಮೊದಲಘಟ್ಟದ ಲೇಖಕಿಯರಿಗೆ ಮರುಕವಿದೆ. ಇದರೊಂದಿಗೆ ಹೆಣ್ಣು ಅನುಭವಿಸುವ ಬಸಿರು, ಬಾಣಂತನಗಳ ಹೊರೆ ಕೂಡ ಅವರಿಗೆ ಬಂಧನದ, ಹಿಂಸೆಯ ನೆಲೆಗಳಾಗಿರುವುದರಿಂದ ಅವುಗಳನ್ನು ಮೀರಲಾರದ ಅಸಹಾಯಕತೆ ಇವರಲ್ಲಿ ನೋವಿಗೆ ಕಾರಣವಾಗಿರುವುದನ್ನು ಕಾಣಬಹುದು. ಜೊತೆಗೆ ಅಂದಿನ ಸಾಮಾಜಿಕ ಸನ್ನಿವೇಶ ಕೂಡ ಅವರ ಬದುಕಿನ ಅಧೀನ ಸ್ಥಿತಿಗೆ ಅವರ ಹೆಣ್ತನವನ್ನೇ ಗುರಿಯಾಗಿಸಿದ್ದದ್ದು ಕೂಡ ಸ್ವಮರುಕಕ್ಕೆ ಕಾರಣವಾಗಿದೆ. ಹೆಣ್ಣಿನ ಇಡೀ ಬದುಕಿನ ಸ್ವಾತಂತ್ರಹೀನ ಸ್ಥಿತಿಯನ್ನು ಸೂಕ್ಷ್ಮವಾಗಿ ಗಮನಿಸುವ ಜಾನಕಮ್ಮ ಅದರ ನಿರರ್ಥಕತೆಯನ್ನು ಕುರಿತಂತೆ

ಗೂಡಿನೊಳಗೇನಿಹುದು
ಕಾಡ ಹಾಗಲಕಾಯಿ
ತಿರುಳಿಲ್ಲ ಸಿಹಿಯಿಲ್ಲ
ಸವಿಗಂಧವಿಲ್ಲ
ಕೋಗಿಲೆಯ ಕೂಗಿಲ್ಲ
ಪರಿಮಳದ ಹುರುಪಿಲ್ಲ
ಆನಂದ ಸುಳಿವಿಲ್ಲ
ಸುಖಲೇಶವಿಲ್ಲ[ಆಕಿ] ಎಂದು ಮರುಗುತ್ತಾರೆ.

ನಂಜನಗೂಡು ತಿರುಮಲಾಂಬ ಪಿತೃಪ್ರಧಾನ ಮೌಲ್ಯವ್ಯವಸ್ಥೆಗೆ ಮುಖಾಮುಖಿಯಾಗುವ ಬಗೆ ವಿಶಿಷ್ಟವಾದದ್ದು. ಅವರ ಗದ್ಯ ಬರಹ ಮೌಲ್ಯವ್ಯವಸ್ಥೆಯ ಪ್ರತಿಪಾದನೆಯಂತೆ ಕಂಡುಬಂದರೂ ಕಾವ್ಯ ಅದಕ್ಕೆ ತದ್ವಿರುದ್ಧವಾಗಿ ಹೆಣ್ಣಿನ ಅಸ್ಮಿತೆಯ ಹುಡುಕಾಟಕ್ಕೆ ಮುಂದಾಗುವುದನ್ನು ಗುರುತಿಸಬಹುದು. ಪುರಾಣದ ಸ್ತ್ರೀಪಾತ್ರಗಳ ನೋವಿನ ಧ್ವನಿಯನ್ನು ಹಿಡಿಯುವುದರ ಮೂಲಕ ವ್ಯವಸ್ಥೆ ಹೆಣ್ಣನ್ನು ನಡೆಯಿಸಿಕೊಂಡಿರುವುದರ ಬಗೆಗೆ ಬೇಸರವನ್ನು ವ್ಯಕ್ತಪಡಿಸುತ್ತಾರೆ. ಅಲ್ಲದೆ ಪುರಾಣದ 'ಶ್ರೇಷ್ಠ ಪಾತ್ರಗಳ', 'ಮಾದರಿ ಪಾತ್ರ'ಗಳ ಶ್ರೇಷ್ಠತೆಯ ಪರಿಕಲ್ಪನೆಯನ್ನು 'ದಶಾವತಾರ ಗೀತೆ'ಗಳ ಮೂಲಕ ವ್ಯಂಗ್ಯ, ಹಾಸ್ಯ, ಹಾಗೂ ಅದರ ಅವಾಸ್ತವ ಕಲ್ಪನೆಯನ್ನು ಬಯಲಿಗೆಳೆಯುವುದರೊಂದಿಗೆ ಅಂದಿನ ಸಾಮಾಜಿಕ ವ್ಯವಸ್ಥೆಗೆ ಮುಖಾಮುಖಿಯಾಗುತ್ತಾರೆ.

ಸೀತೆಯ ಪಾತ್ರದ ಮೂಲಕ ಸ್ತ್ರೀ ಶೋಷಣೆಯ, ಹೆಣ್ಣಿನ ಅಸಹಾಯಕತೆಯ, ಅಧೀನತೆಯ ವಿವರಗಳನ್ನು ಚರ್ಚಿಸುವ, ಅದಕ್ಕೆ ಕಾರಣರಾದವರನ್ನು ಕಟು ಟೀಕೆಗೆ ಒಳಪಡಿಸುವ ತಿರುಮಲಾಂಬ ಪುರಾಣದ 'ಪುರುಷ ಶ್ರೇಷ್ಟ' ರಾಮನ ವ್ಯಕ್ತಿತ್ವವನ್ನು, ಅವನ ಶ್ರೇಷ್ಠತೆಯ ಬಗೆಗಿನ ಸಾಮಾಜಿಕ ನಂಬಿಕೆಯನ್ನು ಅಲ್ಲಗಳೆಯುತ್ತಾರೆ.

ಜನವಾರ್ತೆಯನು ಕೇಳಿ ವನಿತೆಯೊಳು ಖತಿತಾಳಿ
ಇನಿತು ಕಾಡಿದ ಚಾಳಿಯೊರೆವೆ ಕೇಳಿ
ಮಡಿವಳನ ನುಡಿಗಾಗಿ ಕಡುಮೂರ್ಖ ತಾನಾಗಿ
ಅಡವಿಗಟ್ಟುವರೇನೆ ಮಡದಿಯನ್ನೆ
ಧರ್ಮಪತ್ನಿಯುಮಂತು ಪೂರ್ಣಗರ್ಭವನಾಂತ
ಅರ್ಧಾಂಗಿಯನ್ನುಳಿದ ನಿರ್ದಯಾತ್ಮ[ಆಳ] ಎಂದು ವಿರೋಧಿಸಿದರೂ ಕೂಡ

ಮೀನಾಕ್ಷಿ ಯೀ ಚಿಂತೆ ನಿನಾಂತುದೇಕಾಂತೆ
ಮೌನವೇ ಮತಿವಂತೆ ಬಿರುಸದೆನಿತೆ
ಕುಹಕರುಕ್ತಿಯ ಕೇಳಿ ಕಡುಕೋಪವನು ತಾಳಿ
ಬಹುವಿಧದಿ ಬಳಲಿಸುವೆ ವಿಹಿತವೇನೆ
ಹೆಬ್ಬುಲಿಯ ತೆರದಿಂದ ಬೊಬ್ಬಿರಿದು ಮತಿಯುಳಿದು
ಅಬ್ಬರಿಸಿ ಕೂಗುವರೆ ಅಬ್ಜನೇತ್ರೆ
ಕೈಪಿಡಿದ ರಮಣನೊಳುಮುನಿಸೆ ತರುಣಿ
ತಾಪಶಮನವ ಮಾಡು ನೋಡು ರಮಣಿ
ಓಪನೆಂದೊಲಿದಾಡು ಕರವನೀಡು
ಭೂಪಶೇಷಾದ್ರೀಶನತ್ತ ನೋಡು[೬೫]

ಎನ್ನುವ ಮೂಲಕ ಪುರುಷ ಪ್ರಭುತ್ವದೊಂದಿಗೆ ಅನುಸಂಧಾನಕ್ಕೆ ಮುಂದಾಗುತ್ತಾರೆ. ಇಲ್ಲಿ ಹೆಣ್ಣಿನ ಮರುಕಕ್ಕೆ ಸಮಾಜದ ಬಗೆಗಿನ ಅಂಜಿಕೆ, ಭಯ ಕೂಡ ಕಾರಣವಾಗಿರುವುದನ್ನು ಗುರುತಿಸಬಹುದು. ಸಮಾಜದ ಸ್ಥಾಪಿತ ನಂಬಿಕೆಗಳನ್ನು ಮೀರುವ ಬಗೆಗಿನ ಆತಂಕವೇ ಮೌಲ್ಯವ್ಯವಸ್ಥೆಯನ್ನು ಒಪ್ಪಿ ನಡೆಯುವುದಕ್ಕೆ ಪ್ರೇರೇಪಣೆಯನ್ನು ನೀಡಿದೆ. 'ಹೆಬ್ಬುಲಿಯ ತೆರದಿಂದ ಬೊಬ್ಬಿರಿದು ಮತಿಯುಳಿದು ಅಬ್ಬರಿಸಿ ಕೂಗುವರೆ ಅಬ್ಜನೇತ್ರೆ' ಎಂಬುವಲ್ಲಿಯೇ ಗಂಡಿನ ಕೋಪಾಟೋಪಗಳು, ರೋಷಾವೇಶಗಳು ಹೆಣ್ಣನ್ನು ಅಧೀನವಾಗಿಸಿಕೊಂಡಿರುವ ಬಗೆಯನ್ನೂ, ಹೆಣ್ಣು ಗಂಡಿನಂತೆ ಕೋಪಿಸಬಾರದ, ಕೂಗಬಾರದ ವ್ಯವಸ್ಥೆಯ ಅಪೇಕ್ಷಿತ ನಡವಳಿಕೆಗಳನ್ನೂ ಎತ್ತಿಹಿಡಿಯಲಾಗುತ್ತಿದೆ. ಆದರೂ ಹೆಣ್ಣಿನ ಮೇಲೆ ನಿರಂತರವಾಗಿ ನಡೆಯುತ್ತಿರುವ ದೌರ್ಜನ್ಯದ ಬಗೆಗೆ ಮಾತ್ರ ಬೇಸರ ಇದೆಯಾದರೂ ಯಾರನ್ನೂ ದೂಷಿಸಲಾರದ, ವಿಧಿಯನ್ನೇ ಹೊಣೆಗಾರನಾಗಿಸುವ ಒತ್ತಡ ಈ ಕಾಲದ ಲೇಖಕಿಯರದ್ದಾಗಿದೆ. ತಿರುಮಲಾಂಬರವರ ಗದ್ಯ ಬರಹಗಳಲ್ಲಿ ಇದನ್ನು ಸ್ಪಷ್ಟವಾಗಿ ಗುರುತಿಸಬಹುದು. ಅವರ ಕಾದಂಬರಿಗಳ ಸ್ತ್ರೀ ಪಾತ್ರಗಳು ಮೇಲ್ನೋಟಕ್ಕೆ ಮೌಲ್ಯವ್ಯವಸ್ಥೆಯ ಪ್ರಬಲ ಪ್ರತಿಪಾದಕಿಯರಾಗಿ ಕಂಡುಬರುತ್ತಾರೆ. ಏಕೆಂದರೆ ಒಂದೆಡೆ ಸಾಂಪ್ರದಾಯಿಕ ಮೌಲ್ಯವ್ಯವಸ್ಥೆಯ ಬಗೆಗಿನ ಅಪಾರ ಗೌರವ ಹಾಗೂ ನಂಬಿಕೆಗಳು ಇವರು ಮೌಲ್ಯವ್ಯವಸ್ಥೆಯನ್ನು ಮೀರದಂತೆ ಕಾರ್ಯ ನಿರ್ವಹಿಸುತ್ತಿದ್ದರೆ, ಮತ್ತೊಂದೆಡೆ ಪಿತೃಪ್ರಧಾನ ಮೌಲ್ಯವ್ಯವಸ್ಥೆ ಹಣ್ಣಿನ ಜೀವನದ ಅವಿಭಾಜ್ಯ ಅಂಗ ಎಂಬಂತೆ ಗುರುತಿಸಲ್ಪಟ್ಟಿರುವುದರಿಂದ ಅದನ್ನು ಮೀರುವಿಕೆಯ ಬಗೆಗಿನ ಆಲೋಚನೆ ಈ ಘಟ್ಟದ ಲೇಖಕಿಯರಿಗೆ ಒಂದು ಬಗೆಯ ಸವಾಲಿನ ಸಂಗತಿಯಾಗಿದೆ. ಇವೆರಡರ ನಡುವಿನ ದ್ವಂದ್ವ ಗೊಂದಲಗಳಿಂದಾಗಿ ತಿರುಮಲಾಂಬರವರ ಕಾದಂಬರಿಯ ನಾಯಕಿಯರು ಮೌಲ್ಯವ್ಯವಸ್ಥೆಯ ಪ್ರತಿಪಾದಕಿಯರಂತೆ ಕಂಡುಬರುತ್ತಾರೆ. ಆದರೆ ಸ್ತ್ರೀ ವಿಮೋಚನೆಯ, ಶೋಷಣೆಯಿಂದ ಮುಕ್ತಗೊಳಿಸುವ, ಬಂಧನದಿಂದ ಬಿಡುಗಡೆಗೊಳಿಸುವ, ಹೆಣ್ಣಿನ ಅಸ್ತಿತ್ವವನ್ನು ಗುರುತಿಸುವ ಪ್ರಯತ್ನ ತಿರುಮಲಾಂಬರವರ ಜೀವನ ಹಾಗೂ ಅವರ ಕಾದಂಬರಿಗಳ ನಾಯಕಿಯರ ಪ್ರಮುಖ ಧ್ಯೇಯವಾಗಿದೆ. ಇದನ್ನು ಕಾವ್ಯದಲ್ಲಿ ಸ್ಪಷ್ಟವಾಗಿ ಗುರುತಿಸಬಹುದು.

ಸರಸ್ವತಿಬಾಯಿ ರಾಜವಾಡೆಯವರು ಪುರುಷ ಪ್ರಧಾನ ವ್ಯವಸ್ಥೆಯ ಶ್ರೇಣೀಕರಣ ಧೋರಣೆಯನ್ನು ತೀವ್ರವಾಗಿ ವಿರೋಧಿಸುತ್ತಾರೆ. ಅವರ ಕಥೆಗಳಲ್ಲಿ ಹೆಣ್ಣಿನ ಸ್ಥಿತಿಯ ಬಗೆಗೆ ಮರುಕ,

ವ್ಯವಸ್ಥೆಯ ಬಗೆಗೆ ವ್ಯಂಗ್ಯ ಇದೆಯಾದರೂ, ಅವರ ಕಾವ್ಯದಲ್ಲಿ ಹೆಣ್ಣಿನ ಅಧೀನ ಸ್ಥಿತಿಗೆ ಕಾರಣರಾದವರಿಗೆ ಎಚ್ಚರಿಕೆಯನ್ನು ನೀಡುವ, ಸ್ತ್ರೀ ಸಬಲೀಕರಣಕ್ಕೆ ಪ್ರಾಧಾನ್ಯತೆಯನ್ನು ನೀಡುವ ಧ್ವನಿ ಪ್ರಮುಖವಾಗಿ ಕಂಡುಬರುತ್ತದೆ. ಹೆಣ್ಣಿನ ಶಕ್ತಿ ಮತ್ತು ಮಿತಿ ಎರಡನ್ನೂ ಕೂಡ ಗುರುತಿಸುವ ಇವರು ಪುರುಷ ಪ್ರಧಾನ ವ್ಯವಸ್ಥೆಯ ಹುನ್ನಾರದಿಂದಾಗಿ ಹೆಣ್ಣು ತನ್ನ ಶಕ್ತಿ, ಸಾಮರ್ಥ್ಯಗಳನ್ನು ತಾನೇ ಅರಿಯದಂತಾಗಿದ್ದಾಳೆ. ಅದನ್ನು ಅರಿತು ಮುನ್ನೆಡೆದಾಗ ಮಾತ್ರ ಹೆಣ್ಣು ನೆಮ್ಮದಿಯಿಂದ ಬದುಕಲು ಸಾಧ್ಯ ಎಂಬುದನ್ನು ತಿಳಿಸುತ್ತಾರೆ.

ಹೆಣ್ಣು ಹೆಣ್ಣು ಹೆಣ್ಣು ಎಂಬ
ಸಣ್ಣ ಮಾತು ಬರಿದೆ ಏಕೆ
ಹೆಣ್ಣಿನಿಂದ ಜಗದ ಇರವು
ಹೆಣ್ಣ ಹಳಿಯೆ ತರವು ಇರದು
ನಿನಗೆ ಜಗದಿ ಜನುಮವಿತ್ತ
ಹೆಣ್ಣ ನೀನು ಕನಸಿನಲ್ಲು
ಹಳಿಯಬೇಡ, ತುಳಿಯಬೇಡ
ಇರಲಿ ಎಚ್ಚರ [೪೬]

ಎಂದು ಹೆಣ್ಣಿನ ಅನನ್ಯತೆಯ ನೆಲೆಗಳ ಹುಡುಕಾಟವನ್ನು ಸಾರುತ್ತಾರೆ. ಅಲ್ಲದೆ ಹೆಣ್ಣು ಶಿಕ್ಷಣವನ್ನು ಪಡೆಯುವುದರ ಮೂಲಕ ಮಾತ್ರ ಅವಳು ತನ್ನೆಲ್ಲಾ ಬಂಧನಗಳನ್ನು ಮೀರಿ ಹೊರಬರಲು ಸಾಧ್ಯ ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾರೆ. ಜೊತೆಗೆ ಹೆಣ್ಣೂ ಕೂಡ ತನ್ನ ಶಕ್ತಿ, ಸಾಮರ್ಥ್ಯ, ಹೊಣೆಗಾರಿಕೆಗಳನ್ನು ಅರಿತು ಕಾರ್ಯನಿರ್ವಹಿಸಬೇಕು, ದಾಸ್ಯದ ಸಂಕೋಲೆಯನ್ನು ಕಡಿದು ಹೊರಬರಬೇಕು, ಎಂದು ಮಹಿಳೆಯರಿಗೆ ಕರೆ ನೀಡುತ್ತಾರೆ.

ಎದ್ದೇಳು ಅರಿ ನಿನ್ನ
ಮಾತೃತ್ವ ಶಕ್ತಿಯನು
ಮರೆಯದಿರು ಆ ಉಲಿಯ
ನೆಂದೆಂದಿಗೂ
ಚೇತರಿಸಿ ಭಗಿನಿಯರೆ!
ಸಾಕಿನ್ನು ತೂಕಡಿಕೆ,
ಕ್ರಿತದಾಸಿಯರಾಗಿ,
ಬಾಳದುದು ಸಾಕಾಯ್ತು.[೪೭]

ರಾಜವಾಡೆಯವರ ಕಾವ್ಯದಲ್ಲಿ ಪಿತೃಪ್ರಭುತ್ವದ ತಾರತಮ್ಯ ಧೋರಣೆಯ ಅರಿವಿನ ಪ್ರಕ್ರಿಯೆ ಆರಂಭವಾಗಿದ್ದು, ಅದಕ್ಕೆ ಕಾರಣವಾದ ವ್ಯವಸ್ಥೆಯನ್ನು ತೀಕ್ಷ್ಣವಾಗಿ ವಿರೋಧಿಸುತ್ತಾರೆ. ಜೊತೆಗೆ ಈ ಸಮಸ್ಯೆ ಪರಿಹಾರವಾಗಬೇಕೆಂದರೆ ಹೆಣ್ಣು ತನ್ನ ಶಕ್ತಿ ಸಾಮರ್ಥ್ಯಗಳನ್ನು ಅರಿಯುವುದು ಹಾಗೂ ಅದರಂತೆ ನಡೆಯುವುದು ಮುಖ್ಯ. ಇದುವರೆಗೂ ಪುರುಷ ಪ್ರಧಾನ ಆಲೋಚನೆಯ ಚೌಕಟ್ಟಿನೊಳಗೇ ತನ್ನ ಬದುಕನ್ನು ರೂಪಿಸಿಕೊಂಡ ಹೆಣ್ಣು ಇನ್ನಾದರೂ ತನ್ನ ಶಕ್ತಿಯನ್ನು ಅರಿಯಬೇಕಾಗಿದೆ. ಅದು ಅವಳ ಜೈವಿಕ ಮಿತಿಯಿಂದ ರೂಪುಗೊಂಡಿರುವ ತಾಯ್ತನದ ಮೂಲಕವೇ.

ಹೆಣ್ಣಿನ ವೈಧವ್ಯವನ್ನು ಕುರಿತಂತೆ, ಅದರಿಂದಾಗುವ ಸಂಕಷ್ಟಗಳನ್ನು ತಮ್ಮ ಬರಹಗಳಲ್ಲಿ ಚರ್ಚಿಸುವ ಈ ಲೇಖಕಿಯರು ವೈಧವ್ಯದ ಕಾರಣಗಳನ್ನು ಪುರುಷ ಪ್ರಭುತ್ವದ ರಾಜಕಾರಣ ಎಂದು

ಗುರುತಿಸದೆ ಹೆಣ್ಣಿನ ದುರ್ದೈವವೆಂದೇ ಭಾವಿಸುತ್ತಾರೆ. ಸುಧಾರಣಾವಾದಿಗಳು ವಿಧವಾ ವಿವಾಹಕ್ಕೆ ಉತ್ತೇಜನವನ್ನು ನೀಡಿದರೆ ಈ ಕಾಲಘಟ್ಟದ ಮಹಿಳೆಯರು ವಿಧವಾ ವಿವಾಹವನ್ನು ಒಂದು ಹಂತದಲ್ಲಿ ಪ್ರಬಲವಾಗಿ ವಿರೋಧಿಸಿ, ಮತ್ತೊಂದು ಹಂತದಲ್ಲಿ ಅದನ್ನು ಹೆಣ್ಣಿನ ಆಯ್ಕೆ ಎಂದು ಗುರುತಿಸುತ್ತಾರೆ. ಆದರೆ ತಿರುಮಲಾಂಬರವರ ಸಂಪೂರ್ಣ ಗಮನ ಇರುವುದು ವಿಧವೆಯರು ಮರುವಿವಾಹವಾಗುವುದಕ್ಕಿಂತ ಅಂದಿನ ಸಾಮಾಜಿಕ ವ್ಯವಸ್ಥೆಯನ್ನು ಹೆಣ್ಣು ಎದುರಿಸಬೇಕಾದ ಬಗೆ ಹೇಗೆ ಹಾಗೂ ವೈಧವ್ಯವನ್ನು ಶೋಷಣೆಮುಕ್ತವಾಗಿ ಕಳೆಯುವುದು ಹೇಗೆ ಎಂಬುದರ ಕಡೆಗೆ. ಆದರೆ ಸರಸ್ವತಿಬಾಯಿ ರಾಜವಾಡೆಯವರು ವಿಧವೆಯರು ತಮ್ಮ ಕತ್ತಲ ಕೂಪದಿಂದ ಹೊರಬಂದು ಹೊಸ ಬೆಳಕಿನಿಂದ ಹೊಸ ಬದುಕನ್ನು ಕಟ್ಟಿಕೊಳ್ಳುವುದಕ್ಕೆ ಪ್ರೋತ್ಸಾಹಿಸುವುದರ ಜೊತೆಗೆ ವೈಧವ್ಯ ಪಾಲನೆಯ ಹಿಂದಿನ ಹುನ್ನಾರಗಳನ್ನು ಸೂಕ್ಷ್ಮವಾಗಿ ಗುರುತಿಸುತ್ತಾರೆ.

> ಕತ್ತಲಿನ ಗವಿಯೊಳಗೆ
> ಕತ್ತಲ ಕೂಪದಲ್ಲಿ ಬೈತಿಟ್ಟ ವಿಧವೆಯರು
> ಒಗ್ಗೂಡಿ ಮುಂದಾಗಿ
> ಇನ್ನಾದರೂ ದುಡಿದು
> ಹಿಗ್ಗಿ ಹಿರಿದಾಗಿ ಮಿಗೆ
> ನಲಿಯೋಣ ಕಲೆಯೋಣ ![೬೮]

ಎನ್ನುವ ಮೂಲಕ ವಿಧವೆಯರೂ ಕೂಡ ಒಂದಾಗಿ ತಮ್ಮ ಸಾಮರ್ಥ್ಯವನ್ನು ಪ್ರದರ್ಶಿಸಬೇಕಿದೆ. ಕತ್ತಲಿನ ಕೂಪದಿಂದ ಹೊರಬಂದು ತನ್ನೆಲ್ಲಾ ಬಂಧನದ ಕೊಂಡಿಗಳನ್ನು ತಾನೇ ಕಳಚಿಕೊಳ್ಳಬೇಕಿದೆ. ಇದರಿಂದ ಹೆಣ್ಣಿಗೆ ಎಲ್ಲಕ್ಕಿಂತ ಮಿಗಿಲಾದ ಸುಖ ಸಂತೋಷ ಸಾಧ್ಯ ಎನ್ನುತ್ತಾರೆ. ಇಲ್ಲಿ ಲೇಖಕಿಗೆ ವೈಧವ್ಯ ಎನ್ನುವುದು ಪುರುಷಪ್ರಧಾನ ವ್ಯವಸ್ಥೆ ಹೆಣ್ಣಿನ ಮೇಲೆ ಹೇರಿರುವ ಒತ್ತಾಯ ಪೂರ್ವಕ ಮೌಲ್ಯ ಎಂಬ ಅರಿವಿದೆ. ಅದರಿಂದಾಗಿಯೇ ಒಗ್ಗೂಡುವ, ದುಡಿಯುವ ಮೂಲಕ ವಿಧವೆಯರು ತಮ್ಮ ಬದುಕನ್ನು ತಾವೇ ರೂಪಿಸಿಕೊಳ್ಳಬೇಕು, ಆ ಮೂಲಕ ಪುರುಷ ಪ್ರಭುತ್ವದ ಹಿಡಿತದಿಂದ ಹೊರಬರಬೇಕು ಎಂದು ಕರೆ ನೀಡುತ್ತಾರೆ.

ಈ ಕಾಲಘಟ್ಟದ ಲೇಖಕಿಯರ ಬಹುಮುಖ್ಯವಾದ ಶಕ್ತಿ ಎಂದರೆ ಪುರುಷಪ್ರಧಾನ ಮೌಲ್ಯವ್ಯವಸ್ಥೆಯನ್ನು ಮೇಲ್ನೋಟಕ್ಕೆ ಒಪ್ಪಿದಂತೆ ಕಂಡುಬಂದರೂ ಆ ಚೌಕಟ್ಟಿನಲ್ಲಿದ್ದುಕೊಂಡೇ ತನ್ನ ಅಸ್ಮಿತೆಯನ್ನು ಕಂಡುಕೊಳ್ಳುವ ವಿಧಾನ ಹೇಗೆ ಎಂಬುದರ ಕಡೆಗೆ ಇವರ ಸಂಪೂರ್ಣ ಗಮನವಿದೆ. ಆದರೂ ತಾನು ಹೆಣ್ಣಾಗಿ ಹುಟ್ಟಿದುದರ ಬಗೆಗೆ, ವ್ಯವಸ್ಥೆ ತನ್ನನ್ನು ನಡೆಸಿಕೊಳ್ಳುತ್ತಿರುವುದರ ಬಗೆಗೆ ಇವರಿಗೆ ಪ್ರತಿರೋಧವಂತೂ ಇದ್ದೇ ಇದೆ. ಆದರೆ ಅದನ್ನು ವಿರೋಧಿಸುವ, ಪರ್ಯಾಯವನ್ನು ಚಿಂತಿಸುವ, ಅದನ್ನು ಕಾರ್ಯರೂಪಕ್ಕೆ ತರಲು ಸಾಧ್ಯವಾಗದ ಪರಿಣಾಮ ಇವರ ಆಲೋಚನೆ, ಅಭಿವ್ಯಕ್ತಿ ಎಲ್ಲವೂ ಸ್ವಮರುಕದ ದಾಟಿಯಲ್ಲಿವೆ. ಹೆಣ್ಣಿನ ಸ್ವಮರುಕಕ್ಕೆ ಕಾರಣಗಳನ್ನು ಓಲ್ಗಾ ಈ ರೀತಿಯಲ್ಲಿ ಗುರುತಿಸುತ್ತಾರೆ.

೧. "ನಮ್ಮ ಕುಟುಂಬ ವ್ಯವಸ್ಥೆಯಲ್ಲಿನ ಲೋಪಗಳ ಬಗ್ಗೆ, ದೌರ್ಬಲ್ಯಗಳ ಬಗ್ಗೆ ನಮಗೆ ಪೂರ್ತಿಯಾಗಿ ತಿಳಿಯದೆ ಇರುವುದು.

೨. ಸಮಾಜಕ್ಕೂ ಕುಟುಂಬಕ್ಕೂ ಸಾಮಾಜಿಕ ಉತ್ಪಾದನಾ ವಿಧಾನಕ್ಕೂ ಕುಟುಂಬ ವ್ಯವಸ್ಥೆಗಿರುವ ಸಂಬಂಧ ಸ್ಪಷ್ಟವಾಗಿ ತಿಳಿಯದೆ ಇರುವುದು.

೩. ಕುಟುಂಬದಲ್ಲಿ ಮಹಿಳೆಯರ ಶೋಷಣೆಯಲ್ಲಿರುವ ಕ್ರೂರತ್ವ ನಮಗೆ ಅಭ್ಯಾಸವಾಗಿ ಹೋಗಿರುವುದು."[೬೯] ಈ ಅಂಶಗಳೇ ಆರಂಭದ ಮಹಿಳಾಕಾವ್ಯದ ನಿಯಂತ್ರಕ ಕೇಂದ್ರಗಳಾಗಿದ್ದವೂ ಕೂಡ. ಇದರಿಂದಾಗಿಯೇ ಈ ಕಾಲಘಟ್ಟದ ಲೇಖಕಿಯರ ಬಹುತೇಕ ಬರವಣಿಗೆ ಸ್ವಮರುಕದ, ಆತ್ಮದ ನಿವೇದನೆಯ ದಾಟಿಯಲ್ಲಿದೆ.

೧೯೭೦ರ ದಶಕದಿಂದೀಚೆಗೆ ಅದರಲ್ಲೂ ದಲಿತ ಬಂಡಾಯ ಸಾಹಿತ್ಯ ಚಳುವಳಿಗಳು ಪ್ರಾರಂಭವಾದ ನಂತರದಲ್ಲಿ ಮಹಿಳೆಯರು ಕಾವ್ಯ ಪ್ರಕಾರದ ಕಡೆಗೆ ಹೆಚ್ಚಿನ ಗಮನಹರಿಸಿರುವುದನ್ನು ಗುರುತಿಸಬಹುದು. ಮತ್ತು ಈ ಹಂತದಲ್ಲಿ ಪುರುಷ ಪ್ರಧಾನ ವ್ಯವಸ್ಥೆಯಿಂದ ಹೆಣ್ಣು ಅನುಭವಿಸುತ್ತಿರುವ ಸಂಕಷ್ಟಗಳ ಕಡೆಗೆ ಗಮನಹರಿಸಲಾಯಿತು. ಈ ಕಾಲಘಟ್ಟದಲ್ಲಿ ಬರವಣಿಗೆಯಲ್ಲಿ ತೊಡಗಿಸಿಕೊಂಡ ಲೇಖಕಿಯರು ವಿಭಿನ್ನ ವರ್ಗ, ಸಮುದಾಯಗಳಿಗೆ ಸೇರಿದವರಾಗಿದ್ದ ಕಾರಣ ಮಹಿಳಾ ಕಾವ್ಯದ ಅಭಿವ್ಯಕ್ತಿಯಲ್ಲಿ ಹೊಸ ಹೊಸ ವಿನ್ಯಾಸಗಳು ರೂಪುಗೊಳ್ಳತೊಡಗಿದವು. ಈ ಮೂಲಕ ಮಹಿಳಾ ಕಾವ್ಯ ಸಾಹಿತ್ಯಿಕ ದೃಷ್ಟಿಯಿಂದ ವೈವಿಧ್ಯತೆಯನ್ನೂ, ನಾವಿನ್ಯತೆಯನ್ನೂ ಪಡೆದುಕೊಳ್ಳಲು ಸಾಧ್ಯವಾಯಿತು.

## ೭.೨ ಅಂತರಂಗದ ದ್ವಂದ್ವಗಳ ವಿನ್ಯಾಸ

ಮಹಿಳಾ ಕಾವ್ಯದ ಎರಡನೇ ಘಟ್ಟ ತನ್ನೆಲ್ಲಾ ಸಮಸ್ಯೆಗಳಿಗೆ ಹೆಣ್ಣಾಗಿ ಹುಟ್ಟಿದುದೇ ಕಾರಣ ಎಂಬ ಸ್ವಮರುಕದ ಹಂತವನ್ನು ದಾಟಿ ಹೆಣ್ಣಿನ ಸಮಸ್ಯೆಗಳಿಗೆ ಕಾರಣಗಳನ್ನು ಹುಡುಕುವ, ಅದಕ್ಕೆ ನಿವಾರಣೋಪಾಯಗಳನ್ನು ಕಂಡುಕೊಳ್ಳುವ ಪ್ರಕ್ರಿಯೆಯಲ್ಲಿ ತೊಡಗಿರುವುದನ್ನು ಕಾಣಬಹುದು. ಇದುವರೆಗೂ ನಂಬಿಕೊಂಡು ಬಂದಿದ್ದ ಸಾಂಪ್ರದಾಯಿಕ ಮೌಲ್ಯವ್ಯವಸ್ಥೆ ಹಾಗೂ ಹೆಣ್ಣಿನ 'ರಕ್ಷಕ'ರೆಂದು ನಂಬಲಾಗಿದ್ದ ಪುರುಷಪ್ರಧಾನ ವ್ಯವಸ್ಥೆಯೇ ಹೆಣ್ಣಿನ ಅಧೀನ ಸ್ಥಿತಿಗೆ ಕಾರಣ ಎಂಬ ಅರಿವು ಇವರಲ್ಲಿ ದ್ವಂದ್ವ ಗೊಂದಲಗಳನ್ನು ಹುಟ್ಟುಹಾಕಿತು. ಇದರ ಜೊತೆಗೆ "ವ್ಯವಸ್ಥೆಯನ್ನು ಮನಃಪೂರ್ವಕವಾಗಿ ಒಪ್ಪಲಾರದ ವ್ಯಗ್ರತೆಯಲ್ಲಿ, ಆದರೆ ವ್ಯವಸ್ಥೆಯನ್ನು ಮುರಿದುಕಟ್ಟಲಾಗದ ಅಸಹಾಯಕತೆಯಲ್ಲಿ ಬದುಕಿನ ಆರಂಭದಿಂದ ಕೊನೆಯವರೆಗೆ ಚಟಪಡಿಸುತ್ತಲೇ ಹೋಗುತ್ತಾರೆ"[೭೦] ಎಂದು ಸಾರಾ ಅಬೂಬಕರ್‌ರವರ ಕಾದಂಬರಿ ಪಾತ್ರಗಳನ್ನು ಕುರಿತಂತೆ ಹೇಳುವ ಮಾತು ಎರಡನೇ ಘಟ್ಟದ ಮಹಿಳಾ ಕಾವ್ಯದ ಒಟ್ಟಾರೆ ಆತಂಕಗಳನ್ನೂ ಕೂಡ ಪ್ರತಿಬಿಂಬಿಸುತ್ತದೆ. ಒಂದು ಕಡೆ ತನ್ನ ವ್ಯಕ್ತಿತ್ವವನ್ನು ಕಂಡುಕೊಳ್ಳುವುದು, ಕಟ್ಟಿಕೊಳ್ಳುವುದು ಹೇಗೆ ಎಂಬುದು ಸಮಸ್ಯೆಯಾದರೆ ಮತ್ತೊಂದೆಡೆ ಇದಕ್ಕೆ ತಡೆಯಾಗಿರುವ ಪಿತೃಪ್ರಧಾನ ಮೌಲ್ಯವ್ಯವಸ್ಥೆಯನ್ನು ಎದುರಿಸುವುದು ಹೇಗೆ ಎಂಬುದು. ಜೊತೆಗೆ ಈ ಮೌಲ್ಯವ್ಯವಸ್ಥೆಯನ್ನು ಮೀರಬೇಕೆ? ಅಥವಾ ಅದರೊಳಗಿದ್ದೇ ತನ್ನ ಅಸ್ತಿತ್ವವನ್ನು ಗುರುತಿಸಿಕೊಳ್ಳಬೇಕೆ ಎಂಬ ಗೊಂದಲ ಈ ಲೇಖಕಿಯರ ಕಾವ್ಯದಲ್ಲಿ ಪ್ರಧಾನವಾಗಿ ಕಂಡುಬರುತ್ತದೆ. ಒಂದು ವೇಳೆ ಪಿತೃಪ್ರಧಾನ ಮೌಲ್ಯವ್ಯವಸ್ಥೆಯೇ ತನ್ನ ಸ್ಥಿತಿಗೆ ಕಾರಣವಾಗಿದ್ದಲ್ಲಿ ಅದನ್ನು ಮೀರುವುದು

ಹಾಗೂ ಅದಕ್ಕೆ ಪರ್ಯಾಯಗಳನ್ನು ಕಟ್ಟಿಕೊಳ್ಳುವುದು ಇವರಿಗೆ ಬಹುದೊಡ್ಡ ಸಮಸ್ಯೆಯಾಗಿರುವುದರಿಂದ ಈ ಹಂತದ ಮಹಿಳಾಕಾವ್ಯ ಒಮ್ಮೆ ಮೌಲ್ಯವ್ಯವಸ್ಥೆಯನ್ನು ಪ್ರಬಲವಾಗಿ ವಿರೋಧಿಸಿದರೆ ಮತ್ತೊಂದು ಹಂತದಲ್ಲಿ ಅದನ್ನು ಮೀರಲಾಗದ ಅಸಹಾಯಕ ಸ್ಥಿತಿಯನ್ನು ತಲುಪಿಬಿಡುತ್ತದೆ. ಇವರ ಕಾವ್ಯದಲ್ಲಿ ಪಿತೃಪ್ರಭುತ್ವವನ್ನು ಕುರಿತಂತೆ, ಆಧುನಿಕ ಅವಕಾಶಗಳನ್ನು ಕುರಿತಂತೆ, ಬದಲಾಗಬೇಕಾದ ತನ್ನ ಸ್ಥಿತಿಯನ್ನು ಕುರಿತಂತೆ ಸ್ಪಷ್ಟವಾದ ನಿಲುವುಗಳಾಗಲೀ, ದೃಢ ನಿರ್ಧಾರಗಳಾಗಲೀ ಕಂಡುಬರುವುದಿಲ್ಲ. ಆದ್ದರಿಂದ ಈ ಘಟ್ಟದ ಮಹಿಳಾಕಾವ್ಯವನ್ನು 'ಅಂತರಂಗದ ಹೊಯ್ದಾಟ' ಎಂದು ಗುರುತಿಸಬಹುದಾಗಿದೆ.

ಈ ಕಾಲಘಟ್ಟದಲ್ಲಿ ರಚನೆಯಾದ ಮಹಿಳಾಕಾವ್ಯದಲ್ಲಿ ಆಯ್ಕೆ, ಅಭಿವ್ಯಕ್ತಿ, ಸ್ವಾತಂತ್ರ್ಯ, ಸಮಾನತೆಯನ್ನು ಕುರಿತಂತೆ ಹಲಬಗೆಯ ಗೊಂದಲಗಳನ್ನು ಗುರುತಿಸಬಹುದಾಗಿದೆ. "೧೯೫೦-೭೫ರ ಅವಧಿಯಲ್ಲಿ ಬಂದ ಮಹಿಳಾಕಾವ್ಯದಲ್ಲಿ ಅಂತಹ ತಾಂತ್ರಿಕ ನೈಪುಣ್ಯತೆ ಇಲ್ಲ. ಇಲ್ಲಿಯ ಕವಯತ್ರಿಯರಲ್ಲಿ ಮೌಲ್ಯ ಸಂಘರ್ಷವಿಲ್ಲ. ಪ್ರಶ್ನಿಸುವ ಪರಿಪಾಠವಂತೂ ಇಲ್ಲವೇ ಇಲ್ಲ. ಕಾವ್ಯದ ಅಭಿವ್ಯಕ್ತಿಯಲ್ಲಿ ದೈವಿಕ ಅನ್ವೇಷಣೆಗಳು, ಹುಡುಕಾಟಗಳು ಇರಬೇಕೆಂಬ ತಿಳಿವಳಿಕೆ ಇದೆ. ಆದ್ದರಿಂದಲೇ ಇವರ ಕಾವ್ಯದ ವಸ್ತು ದೇವರು, ಭಕ್ತಿ, ನಿಸರ್ಗ ಇವೇ ಮುಖ್ಯವಾಗುತ್ತವೆ. ಸಾಮಾಜಿಕ ಬದುಕಿನ ನಿತ್ಯ ಸಂಘರ್ಷಗಳು, ತಾಕಲಾಟಗಳು ಕಾವ್ಯದಲ್ಲಿ ಕಾಣಿಸಬೇಕೆಂಬ ಗಮನವಿಲ್ಲ. ಅದರಲ್ಲಿ ಆಸಕ್ತಿಯೂ ಇಲ್ಲ."[೫೧] ಎಂಬುದು ಸ್ವಲ್ಪ ಮಟ್ಟಿಗೆ ನಿಜವಾದರೂ ಅದಕ್ಕೆ ಅಂದಿನ ಸಾಮಾಜಿಕ ಮತ್ತು ಸಾಂಸ್ಕೃತಿಕ ಪರಿಸರ ಕೂಡ ಕಾರಣವಾಗಿರುವುದನ್ನು ಗುರುತಿಸಬಹುದು. ಸಮುದಾಯದ ರಚನೆಯಲ್ಲಿಯೇ ಹೆಣ್ಣಿನ ಅಧೀನತೆಯ ನೆಲೆಗಳು ಅಡಕವಾಗಿದ್ದು ಅದನ್ನು ಎದುರಿಸುವ ಸಂದರ್ಭದಲ್ಲಿ ಇಡೀ ಸಾಮಾಜಿಕ ವ್ಯವಸ್ಥೆಯಲ್ಲಿಯೇ ಆತಂಕಗಳು ಸೃಷ್ಟಿಯಾಗಿಬಿಡುತ್ತವೆ. ಇದರಿಂದಾಗಿ ಮಹಿಳೆ ಸ್ಥಾಪಿತ ವ್ಯವಸ್ಥೆಯನ್ನು ಎದುರಿಸುವುದು ಹಾಗೂ ಅದಕ್ಕೆ ಮುಖಾಮುಖಿಯಾಗುವುದು ಅತ್ಯಂತ ಸಂಕೀರ್ಣವಾದ ವಿಧಾನ. ಇದರ ನಡೆವೆಯೂ ಎರಡನೆಯ ಘಟ್ಟದ ಲೇಖಕಿಯರಲ್ಲಿ ಬೆರಳೆಣಿಕೆಯಷ್ಟು ಮಂದಿಯಾದರೂ ಪ್ರಧಾನ ವ್ಯವಸ್ಥೆಯ ವಿರುದ್ಧ ಸಾಹಿತ್ಯದ ಮೂಲಕ ತಮ್ಮ ಪ್ರತಿಭಟನೆಯನ್ನು ತೋರಿದರು ಎಂಬುದು ವಿಶೇಷ. ಅದುದರಿಂದಾಗಿ ಈ ಘಟ್ಟದ ಮಹಿಳಾಕಾವ್ಯ ಹೆಣ್ಣಿನ ಅಸ್ಮಿತೆಯನ್ನು, ಅವಳ ವ್ಯಕ್ತಿತ್ವಕ್ಕೊಂದು ಅಧಿಕೃತತೆಯನ್ನು ತಂದುಕೊಡುವ ಸಲುವಾಗಿ ಶ್ರಮವಹಿಸಿದೆ ಎಂಬುದನ್ನು ಗುರುತಿಸಬಹುದು.

೭೦ ರಿಂದ ೮೦ ದಶಕದ ಆಸುಪಾಸಿನಲ್ಲಿ ರಚನೆಯಾದ ಮಹಿಳಾಕಾವ್ಯ ಮೌಲ್ಯ ವ್ಯವಸ್ಥೆಯನ್ನು ಕುರಿತಂತೆ ತನ್ನ ಆಂತರ್ಯದಲ್ಲಿಯೇ ಹಲವು ಸಂಘರ್ಷಾತ್ಮಕ ಅಂಶಗಳನ್ನು ಒಳಗೊಂಡಿದ್ದು, ಅವೆಲ್ಲವೂ ಮಹಿಳಾ ಅಭಿವ್ಯಕ್ತಿಯ ಸಂದರ್ಭದಲ್ಲಿ ನಿಚ್ಚಳವಾಗಿ ಕಂಡುಬರುತ್ತವೆ. ಈ ಕಾಲಘಟ್ಟದ ಪ್ರಮುಖ ಲೇಖಕಿಯರಾದ ಎಲ್.ಜಿ ಸುಮಿತ್ರಾ, ಶೈಲಜಾ ಉಡಚಣ, ಕುಲಶೇಖರಿ, ಎನ್.ವಿ.ಭಾಗ್ಯಲಕ್ಷ್ಮೀ, ಮಾಲತಿ ಪಟ್ಟಣಶೆಟ್ಟಿ, ವಿಜಯಾದಬ್ಬೆ, ಸುಕನ್ಯಾಮಾರುತಿ, ವಿಜಯಶ್ರೀ ಸಬರದ, ಶಶಿಕಲಾ ವೀರಯ್ಯಸ್ವಾಮಿ, ಸ.ಉಷಾ ಮುಂತಾದವರ ಕಾವ್ಯ ಈ ಅಂಶವನ್ನು ಪ್ರಮುಖವಾಗಿ ಗುರುತಿಸಬಹುದು. ಇವರಲ್ಲಿ ವಿಜಯಾದಬ್ಬೆ, ಶೈಲಜಾ ಉಡಚಣ, ಎನ್.ವಿ ಭಾಗ್ಯಲಕ್ಷ್ಮೀ ಹಾಗೂ

ಎಲ್.ಜಿ. ಸುಮಿತ್ರಾ ಮುಂತಾದವರು ಬಹಳ ಬೇಗ ಈ ಹೊಯ್ದಾಟದಿಂದ ಹೊರಬಂದು ಹೆಣ್ಣಿನ ಅಸ್ಮಿತೆಯನ್ನು ಕಂಡುಕೊಳ್ಳಲು ಪ್ರಯತ್ನಿಸಿದರೆ ಉಳಿದವರು ಹೆಚ್ಚಿನ ಸಂದರ್ಭದವರೆಗೂ ಪುರುಷ ಪ್ರಭುತ್ವವನ್ನು ತನ್ನ ವಿರೋಧಿ ಸ್ಥಾನದಲ್ಲಿ ನಿಲ್ಲಿಸಿ, ಅದನ್ನು ಒಪ್ಪಲೂ ಆಗದ ನಿರಾಕರಿಸಲೂ ಆಗದ ಗೊಂದಲದಲ್ಲಿ ಸಿಲುಕಿರುವುದನ್ನು ಗುರುತಿಸಬಹುದು.

ಎರಡನೇ ಘಟ್ಟದ ಲೇಖಕಿಯರ ಬರವಣಿಗೆಯಲ್ಲಿ ಎರಡು ಬಗೆಗಳನ್ನು ಗುರಿತಿಸಬಹುದು. ಮೊದಲ ಗುಂಪಿನವರು ಹೆಣ್ಣಿನ ಸಮಸ್ಯೆಗಳ ಬಗ್ಗೆ, ಸಮಾಜದ ದ್ವಿಸ್ತರ ನ್ಯಾಯದ ಬಗ್ಗೆ ಧ್ವನಿ ಎತ್ತಿದರೆ ಮತ್ತೊಂದು ಗುಂಪಿನವರು ಹೆಣ್ಣಿನ ಕಷ್ಟ, ನೋವು, ಬವಣೆಗಳನ್ನು ಸಮಾಜದ ಗಮನಕ್ಕೆ ತಂದು ವಾಸ್ತವ ಪ್ರಪಂಚದ ಆಗುಹೋಗುಗಳನ್ನು ಪರಿಚಯಿಸುವ ಕೆಲಸವನ್ನಷ್ಟೇ ಮಾಡಲು ಪ್ರಯತ್ನಿಸಿದ್ದಾರೆ. ಒಟ್ಟಾರೆ ಎರಡನೇ ಘಟ್ಟದ ಲೇಖಕಿಯರ ಕಾವ್ಯದಲ್ಲಿ ದಲಿತ ಹಾಗೂ ಸ್ತ್ರೀವಾದಿ ಚಳುವಳಿಗಳ ಪ್ರಭಾವ, ಪುರುಷ ಪ್ರಧಾನ ವ್ಯವಸ್ಥೆಯ ಧೋರಣೆಯೇ ತನ್ನ ಈ ಸ್ಥಿತಿಗೆ ಕಾರಣ ಎಂಬ ಅರಿವು. ಯಾವುದನ್ನು ಏನನ್ನು, ಹೇಗೆ, ಏಕೆ ವಿರೋಧಿಸಬೇಕು ಎಂಬ ಗೊಂದಲ. ಪರ್ಯಾಯದ ನಿರೀಕ್ಷೆ, ಹತಾಶೆ, ಸೋಲಿನ ಅನುಭವ, ಪ್ರತಿಭಟನೆ ಇದ್ದಾಗ್ಯೂ ಅಂತಿಮ ಫಲ ಸೋಲೇ ಎಂಬ ನೋವು ಪ್ರಮುಖವಾಗಿದೆ. ಈ ಅಂಶಗಳೇ ಅವರ ಅಂತರಂಗದ ದ್ವಂದ್ವ, ಗೊಂದಲ, ತಾಕಲಾಟಗಳಿಗೆ ಕಾರಣವಾಗಿರುವುದನ್ನು ಮಹಿಳಾ ಕಾವ್ಯದ ಅಧ್ಯಯನದ ಸಂದರ್ಭದಲ್ಲಿ ಕಾಣಬಹುದು.

ಈ ಕಾಲಘಟ್ಟದ ಮಹಿಳಾ ಕಾವ್ಯದ ತಾತ್ವಿಕತೆಯ ಹಿಂದಿನ ಪ್ರೇರಣೆಗಳನ್ನು ಈ ರೀತಿಯಲ್ಲಿ ಗುರುತಿಸಬಹುದು.

೧. ಆಧುನಿಕ ಶಿಕ್ಷಣದ ಪ್ರಭಾವದಿಂದ ಮೂಡಿದ ಹೊಸ ಜ್ಞಾನ ಮತ್ತು ಅರಿವು ವ್ಯವಸ್ಥೆಯನ್ನು ಪ್ರಶ್ನಿಸುವ, ಅದರ ಲೋಪದೋಷಗಳನ್ನು ಎತ್ತಿಹಿಡಿಯುವ ದಿಟ್ಟ ಮನೋಭಾವವನ್ನು ರೂಪಿಸಿತು. ಇದರಿಂದಾಗಿ ಮಹಿಳಾಕಾವ್ಯ ಪಿತೃಪ್ರಧಾನ ಮೌಲ್ಯವ್ಯವಸ್ಥೆಯ ಬಗೆಗೆ ತೀವ್ರವಾದ ಪ್ರತಿರೋಧವನ್ನು ವ್ಯಕ್ತಪಡಿಸಲು ಸಾಧ್ಯವಾಯಿತು. ಆದರೆ ಸಮುದಾಯ ಸಂರಚನೆ ಹಾಗೂ ಸಾಮಾಜಿಕ ವ್ಯವಸ್ಥೆ ಗಂಡಿನ ಪರವಾಗಿಯೇ ಇರುವುದರಿಂದಾಗಿ ಮತ್ತು ಹೆಣ್ಣಿನ ಶಕ್ತಿಯನ್ನು ಮೌಲ್ಯ ವ್ಯವಸ್ಥೆಯ ಹೆಸರಿನಲ್ಲಿ ಸದಾ ನಿಯಂತ್ರಿಸುತ್ತಿರುವ ಸಲುವಾಗಿ, ಹೆಣ್ಣು ಮೌಲ್ಯವ್ಯವಸ್ಥೆಯನ್ನು ಒಪ್ಪಿ ನಡೆಯುವುದು ಅನಿವಾರ್ಯ ಹಾಗೂ ಅವಶ್ಯಕವಾಗಿತ್ತು. ಆದುದರಿಂದಾಗಿ ಈ ಹಂತದಲ್ಲಿ ರಚನೆಗೊಂಡ ಮಹಿಳಾಕಾವ್ಯ ಪಿತೃಪ್ರಭುತ್ವವನ್ನು, ಮೌಲ್ಯವ್ಯವಸ್ಥೆಯನ್ನು ತೀವ್ರವಾಗಿ ವಿರೋಧಿಸಿದರೂ ಕೂಡ ಕಡೆಗೆ ಮೌಲ್ಯವ್ಯವಸ್ಥೆಯ ಚೌಕಟ್ಟಿಗೆ ಬಂದು ನಿಂತುಬಿಡುತ್ತದೆ. ಇದರಿಂದಾಗಿ ಈ ಕಾಲಘಟ್ಟದ ಮಹಿಳಾಕಾವ್ಯದಲ್ಲಿ ದ್ವಂದ್ವ ಗೊಂದಲಗಳು ಸ್ಪಷ್ಟವಾಗಿ ಕಂಡುಬರುತ್ತವೆ. ಜೊತೆಗೆ ಅರಿವಿನ ಪ್ರಕ್ರಿಯೆಯೊಂದಿಗೆ ಆರಂಭವಾದ ವೈಚಾರಿಕ ಮನೋಭಾವ ಕೂಡ ಇವರೊಳಗಿನ ಸಂಘರ್ಷಕ್ಕೆ ಕಾರಣವಾಗಿದೆ.

೨. ಆಧುನಿಕ ಪ್ರಜ್ಞೆ ಹಾಗೂ ಸಾಂಪ್ರದಾಯಿಕ ಒಲವು ಎರಡೂ ಕೂಡ ಈ ಕಾಲಘಟ್ಟದ ಲೇಖಕಿಯರ ಮುಖ್ಯ ಕಾಳಜಿಗಳಾಗಿದ್ದುದ್ದರಿಂದಾಗಿ ಆಧುನಿಕ ಜೀವನ ವಿಧಾನ ಹೆಣ್ಣಿನ 'ಬಿಡುಗಡೆ'ಯ

ದೃಷ್ಟಿಯಿಂದ ಅತ್ಯಂತ ಮುಖ್ಯವಾದದ್ದು ಎನಿಸುತು. ಆದರೆ ಹಿಂದಿನಿಂದ ಒಪ್ಪಿ ಬಂದ ಸಾಂಪ್ರದಾಯಿಕ ಜೀವನಕ್ರಮವನ್ನು ಮೀರುವುದು ಇವರಿಗೆ ಸುಲಭವಾಗಿರಲಿಲ್ಲ. ಆ ಕಾರಣದಿಂದಾಗಿ ಆಧುನಿಕ ಜೀವನದ ಕಡೆಗೆ ಒಲವಿದೆಯಾದರೂ ಅದನ್ನು ಸಾಂಪ್ರದಾಯಿಕ ಮೌಲ್ಯವ್ಯವಸ್ಥೆಯ ಬುನಾದಿಯಲ್ಲಿಯೇ ಕಟ್ಟಲು ಪ್ರಯತ್ನಿಸಿದ್ದರಿಂದ ಮೌಲ್ಯವ್ಯವಸ್ಥೆಯನ್ನು ಬಿಡಲೂ ಆಗದ, ಮೀರಲೂ ಆಗದ ಸಂಧಿಗ್ಧತೆ ಈ ಕಾಲಘಟ್ಟದ ಕಾವ್ಯದಲ್ಲಿ ಮುಖ್ಯವಾಗಿ ಕಂಡುಬರುತ್ತದೆ.

೩. ಆಧುನಿಕತೆ ತಂದೊಡ್ಡಿದ ಹೊಸ ಅವಕಾಶಗಳಿಂದಾಗಿ ಹೆಣ್ಣಿಗೆ ಸ್ವಾವಲಂಬನೆಯ ಕಡೆಗೆ ಪಯಣ ಸಾಧ್ಯವಾದರೂ ಅದರೊಂದಿಗೆ ಅವಳು ಹಲವು ಸವಾಲುಗಳನ್ನು ಎದುರಿಸಬೇಕಾಯಿತು. ಹೆಣ್ಣು ಉದ್ಯೋಗ, ಶಿಕ್ಷಣಗಳನ್ನು ಪಡೆದ ಸಂದರ್ಭದಲ್ಲಿಯೂ ಕೂಡ ಗೃಹ ನಿರ್ವಹಣೆ, ಮಕ್ಕಳ ಪಾಲನೆ, ಪೋಷಣೆ, ಮುಂತಾದ ಸಾಮಾಜಿಕ ಜವಾಬ್ದಾರಿಗಳಿಂದ ಹೊರಬರಲು ಸಾಧ್ಯವಾಗಲಿಲ್ಲ. ಜೊತೆಗೆ ನಗರೀಕರಣದಿಂದ ಉಂಟಾದ ಏಕಾಂಗಿತನ, ಇವರ ಸಮಸ್ಯೆಗಳನ್ನು ಮತ್ತಷ್ಟು ಹೆಚ್ಚಿಸಿದವು. ಇದರಿಂದಾಗಿ ಈ ಹಂತದ ಮಹಿಳಾಕಾವ್ಯ ಪ್ರತಿ ಹಂತದಲ್ಲಿಯೂ ತನ್ನೊಳಗೇ ವೈರುಧ್ಯವನ್ನು, ಸಂಘರ್ಷವನ್ನು ರೂಪಿಸಿಕೊಂಡಿದೆ.

ಈ ಸಂದರ್ಭದಲ್ಲಿ ರೂಪುಗೊಂಡ ದಲಿತ ಹಾಗೂ ಸ್ತ್ರೀವಾದಿ ಚಳುವಳಿಗಳು ಮಹಿಳಾ ಬದುಕನ್ನು ಪ್ರವೇಶಿದ ಪರಿಣಾಮದಿಂದಾಗಿ ಅವರ ಜೀವನ ವಿಧಾನದಲ್ಲಿ ಕೆಲ ಬದಲಾವಣೆಗಳಾದರೂ ಇದು ತಂದೊಡ್ಡಿದ ಸವಾಲುಗಳು ಅದಕ್ಕಿಂತ ಹೆಚ್ಚು ಪ್ರಬಲವಾಗಿದ್ದವು. ಇದರ ಜೊತೆಗೆ ಅಧಿಕಾರ, ಶಕ್ತಿ, ಆರ್ಥಿಕ ಹಿಡಿತವನ್ನು ಹೊಂದಿರುವ ಪಿತೃಪ್ರಭುತ್ವವನ್ನು ಗೆಲ್ಲಲಾರದ ನಿರಾಶಾಭಾವ ಇವರ ಕಾವ್ಯಗಳಲ್ಲಿ ಮುಖ್ಯವಾಗಿ ಕಂಡುಬರುತ್ತದೆ.

ಈ ಹಿನ್ನೆಲೆಯಲ್ಲಿ ಎರಡನೇ ಘಟ್ಟದ ಮಹಿಳಾ ಕಾವ್ಯದಲ್ಲಿ ಕಂಡುಬರುವ ಅಂತರಂಗದ ಹೊಯ್ದಾಟದ ನೆಲೆಗಳನ್ನು ಎರಡು ರೀತಿಯಲ್ಲಿ ಗುರುತಿಸಬಹುದು.

೧. ಹೆಣ್ಣಿನ ಅಸ್ತಿತ್ವಕ್ಕೆ ಸಂಬಂಧಿಸಿದಂತೆ ಮಹಿಳಾ ಕಾವ್ಯದಲ್ಲಿ ಕಂಡುಬರುವ ಆಂತರಿಕ ಸಂಘರ್ಷ ಹಾಗೂ ತುಮುಲಗಳು.

೨. ಮಹಿಳಾ ಅಭಿವ್ಯಕ್ತಿಗೆ ಸಂಬಂಧಿಸಿದಂತೆ ಅವರ ಆಯ್ಕೆ, ಅಭಿವ್ಯಕ್ತಿ ಕ್ರಮ, ಭಾಷೆ, ಭಾವಗಳ ತಾಕಲಾಟದಲ್ಲಿ ಕಂಡುಬರುವ ವೈರುಧ್ಯಗಳು.

ಮಹಿಳಾ ಕಾವ್ಯದ ಎರಡನೆಯ ಘಟ್ಟ ಎಂದು ಗುರುತಿಸಲಾಗಿರುವ ೬೦ ರಿಂದ ೮೦ನೇ ದಶಕ ಕನ್ನಡ ಸಾಹಿತ್ಯ ಸಂದರ್ಭ ದಲಿತ ಹಾಗೂ ಸ್ತ್ರೀವಾದಿ ಚಳುವಳಿಯ ಪ್ರಭಾವವನ್ನು ಒಳಗೊಂಡಿದ್ದು, ಅದರೊಂದಿಗೆ ಸ್ವಾತಂತ್ರ್ಯದ ಭ್ರಮನಿರಸನ, ನವೋದಯಕ್ಕಿಂತ ಭಿನ್ನವಾದ ಪ್ರಗತಿಶೀಲ ಸಾಹಿತ್ಯದ ಸಂದರ್ಭವನ್ನು ಒಳಗೊಂಡಿದ್ದಂತಹ ಕಾಲಘಟ್ಟ. ಈ ಸಂದರ್ಭದಲ್ಲಿ ಬರೆದ "ನವೋದಯ ಲೇಖಕರು ಶುದ್ಧ ಮಡಿವಂತಿಕೆಯಿಂದ ಭಾರತೀಯ ಪರಂಪರೆ ಹಾಗೂ ಹೊಸದಾಗಿ ಕಾಣಿಸಿಕೊಂಡಿದ್ದ ಪಾಶ್ಚಾತ್ಯ ಸಂವೇದನೆ ಇವೆರಡರ ಮಿಶ್ರಭಾವದಲ್ಲಿ ಸಿಲುಕಿದ್ದರಿಂದ ಅವರ ಚಿಂತನೆಯ ಹಿಂದೆ ನವ

ಮಾನವತಾವಾದದ ಪ್ರಜ್ಞೆಯೊಂದು ಕಾಣಿಸಿಕೊಂಡರೂ ನಮ್ಮ ಪರಂಪರೆಯ ಬೇರುಗಳನ್ನು, ನಂಬಿಕೆಗಳನ್ನು ಅಲುಗಾಡಿಸುವಷ್ಟು ಶಕ್ತಿಶಾಲಿಯಾಗಿರಲಿಲ್ಲ. ಅವರ ಪ್ರಯತ್ನಗಳು ಹೆಣ್ಣಿನ ಬದುಕು, ಭಾವನೆಗಳನ್ನು ದೃಢವಾಸ್ತವತೆಯ ನೆಲೆಗಳಿಂದ ಗ್ರಹಿಸುವುದಕ್ಕಿಂತ ಹೆಚ್ಚಾಗಿ ಸಿದ್ಧ ಪೌರಾಣಿಕ ಮಾದರಿಗಳ ಮೂಲಕ ಗ್ರಹಿಸುವುದರಲ್ಲೇ ನಿಂತುಬಿಡುತ್ತವೆ. ಅವರ ಸ್ತ್ರೀ ಮಾದರಿಗಳು ಕರುಣೆ ಅನುಕಂಪಗಳಿಂದ ಹೊರಬರದೆ ಅಲ್ಲೇ ಗಿರಕಿ ಹೊಡೆಯುವ ಮಾದರಿಗಳಾಗಿದ್ದವು."೫೨ ಎಂಬ ಮಾತು ಈ ಕಾಲಘಟ್ಟದ ಲೇಖಕಿಯರ ಬರವಣಿಗೆಗೂ ಕೂಡ ಅನ್ವಯಿಸುತ್ತದೆ. ಶಿಕ್ಷಣ ಮತ್ತು ಉದ್ಯೋಗವಕಾಶ, ಆರ್ಥಿಕ ಸ್ವಾವಲಂಬನೆ, ಮಾಧ್ಯಮಗಳ ಬೆಳವಣಿಗೆ ಮುಂತಾದವುಗಳ ಅನುಕೂಲಗಳಿಂದಾಗಿ ಬರೆಯುವವರ ಸಂಖ್ಯೆ ಈ ಹಂತದಲ್ಲಿ ಹೆಚ್ಚಾಯಿತು. ಈ ಅವಧಿಯ ಪ್ರಧಾನ ಕಾಳಜಿ ಹೆಣ್ಣೇ ಆಗಿದ್ದರೂ ಅದು ಪ್ರಜ್ಞಾಪೂರ್ವಕವಾದ ಕಾಳಜಿಯಾಗಿರಲಿಲ್ಲ. ಈ ಕಾಲಘಟ್ಟದ ಲೇಖಕಿಯರು ಪುರುಷಪ್ರಧಾನ ಸಮಾಜದ ನಯವಂಚನೆ, ದ್ವಿಮುಖ ನೀತಿಯನ್ನು ಅರಿಯುವ ಸೂಕ್ಷ್ಮತೆ ಇಲ್ಲದ ಕಾರಣ ಇವರು ತಾವು ಯಾವುದನ್ನು ಪ್ರಶ್ನಿಸಬೇಕೆಂದಿದ್ದರೋ, ಅದನ್ನೇ ತಮ್ಮ ಸಾಹಿತ್ಯದಲ್ಲಿ ಪೋಷಿಸಿಕೊಂಡು ಬಂದರು. ಹೆಣ್ಣಿನ ಶೀಲ, ಪಾತಿವ್ರತ್ಯ, ತಾಯ್ತನಗಳನ್ನು ವೈಭವೀಕರಿಸುವ ಪಾತ್ರಗಳೇ ಇವರ ಸಾಹಿತ್ಯದಲ್ಲಿ ಹೆಚ್ಚಿನ ಸ್ಥಾನ ಪಡೆದವು. ಆದರೆ ಸಾಂಪ್ರದಾಯಿಕತೆಯನ್ನೂ, ಸಾಮಾಜಿಕ ಮೌಲ್ಯಗಳನ್ನು ಒಂದೇ ಬಾರಿಗೆ ಕೊಡಹಿ ಮೇಲೇಳುವುದು ಸುಲಭವೂ ಅಲ್ಲ. ಅದರ ಪರಿಣಾಮ, ಪ್ರಭಾವಗಳ ದೃಷ್ಟಿಯಿಂದ ಸಾಧುವೂ ಅಲ್ಲ. ಬದಲಾವಣೆಯ ಗತಿ ಕ್ರಮೇಣ ಆದಾಗಲೇ ಆಳ ಮತ್ತು ಸ್ಥಿರತೆ ಸಾಧ್ಯ. ಆದುದರಿಂದಾಗಿ ಈ ಕಾಲಘಟ್ಟದ ಬರಹಗಾರ್ತಿಯರು ಸಾಂಪ್ರದಾಯಿಕ ಮೌಲ್ಯವ್ಯವಸ್ಥೆಯ ಚೌಕಟ್ಟಿನೊಳಗೇ ಸ್ತ್ರೀ ಸುಧಾರಣೆಯ ದಾರಿಗಳನ್ನು ಆಲೋಚಿಸಿರುವುದು ಕಂಡುಬರುತ್ತದೆ.

ಮಹಿಳಾ ಅಸ್ತಿತ್ವದ ಪ್ರಶ್ನೆ ಈ ಕಾಲಘಟ್ಟದ ಲೇಖಕಿಯರಿಗೆ ಮುಖ್ಯವಾದ ಸವಾಲಾಗಿದ್ದು ಅದನ್ನು ಕಂಡುಕೊಳ್ಳುವ ಹಾಗೂ ಗುರುತಿಸಿಕೊಳ್ಳುವ ಸಂದರ್ಭದಲ್ಲಿ ಹಲಬಗೆಯ ದ್ವಂದ್ವ ಗೊಂದಲಗಳಿಗೆ ಒಳಗಾಗಿದ್ದಾರೆ. ಏಕೆಂದರೆ ಪುರುಷಪ್ರಧಾನ ವ್ಯವಸ್ಥೆ ಹೆಣ್ಣಿನ ಅಸ್ತಿತ್ವವನ್ನು ಗುರುತಿಸುವಿಕೆಯಲ್ಲಿಯೇ ಹಲಬಗೆಯ ದ್ವಂದ್ವ, ಗೊಂದಲಗಳನ್ನು ಸೃಷ್ಟಿಸಿದ್ದು, ಹೆಣ್ಣಿನ ಜೀವನದ ಪ್ರತಿ ಹಂತವನ್ನೂ ಗಂಡಿನ ಸಂಬಂಧಗಳೊಂದಿಗೆ ಗುರುತಿಸುವುದರಿಂದಾಗಿ ಹೆಣ್ಣು ತನ್ನ ಸ್ವತಂತ್ರ ಅಸ್ತಿತ್ವವನ್ನು ಕಳೆದುಕೊಂಡು ಪರಾಧೀನವಾಗಿ ಬದುಕುವ ಅತಂತ್ರ ಸ್ಥಿತಿ ನಿರ್ಮಾಣವಾಗಿದೆ. ತಾನು ಸ್ವತಂತ್ರವಾಗಿ ಬದುಕಬಲ್ಲೆ ತನ್ನಲ್ಲಿ ಆ ಶಕ್ತಿ ಇದೆ ಎಂದು ದೃಢವಾಗಿ ನಂಬುವ ಸಂದರ್ಭದಲ್ಲಿಯೂ ಕೂಡ ಪುರುಷಪ್ರಧಾನ ವ್ಯವಸ್ಥೆ ಹೆಣ್ಣನ್ನು 'ಗುರುತಿಸು'ವ ನೆಲೆಗಳು ಅಧೀನ ಸ್ಥರದವೇ ಆಗಿರುತ್ತವೆ. ಹೆಣ್ಣೂ ಕೂಡ ಇದೇ ಭ್ರಮೆಗೆ ಒಳಗಾಗಿರುವುದನ್ನು ಗುರುತಿಸಬಹುದು. ಇದರಿಂದಾಗಿ ಮಹಿಳಾ ಕಾವ್ಯದಲ್ಲಿ ಒಮ್ಮೆ ತನ್ನ ವಿಕಾಸವನ್ನು ತಡೆಯುವ ಶಕ್ತಿ ಯಾರಲ್ಲೂ ಇಲ್ಲ ಎಂಬ ಆತ್ಮವಿಶ್ವಾಸದ ಧ್ವನಿ ಕಂಡುಬಂದರೆ ಮತ್ತೊಮ್ಮೆ ನಾನೂ ಮನುಷ್ಯ, ನನಗೂ ಬಯಕೆಗಳಿವೆ, ನನ್ನನ್ನೂ ನಿಮ್ಮಂತೆ ಬದುಕಲು ಬಿಡಿ ಎಂಬ ಮೊರೆ ಕೇಳಬರುತ್ತದೆ. ಹೆಣ್ಣಿಗೆ ಸ್ವಾತಂತ್ರ್ಯ ಮತ್ತು ಸಮಾನತೆ ಎಂಬುದು

ಪಡೆಯಬೇಕಾದದ್ದೋ, ಕೊಡಬೇಕಾದದ್ದೋ, ಅಥವಾ ತನ್ನಲ್ಲೇ ಅಂತಸ್ಥವಾಗಿರುವ ಸ್ಥಿತಿಯೋ ಎಂಬುದರ ಬಗ್ಗೆಯೇ ಈ ಕಾಲಘಟ್ಟದ ಲೇಖಕಿಯರಲ್ಲಿ ಗೊಂದಲಗಳಿವೆ. ಶೈಲಜಾ ಉಡಚಣ ಈ ಕಾಲಘಟ್ಟದ ಮಹತ್ವದ ಲೇಖಕಿಯರಲ್ಲಿ ಒಬ್ಬರು ಅವರ ಆರಂಭದ ಕವನಗಳಲ್ಲಿ ಈ ಬಗೆಯ ಗೊಂದಲ ವ್ಯಕ್ತವಾಗಿರುವುದನ್ನು ಗುರುತಿಸಬಹುದು.

ಸ್ವಚ್ಛಂದದಲಿ ಹುಟ್ಟಿದ ನನಗೆ
(ನಿರ್)ಬಂಧ ಸಾಗದು.
ಒಂದು ಗಳಿಗೆಯಾದರೂ ಸರಿಯೇ
ಸ್ವಾನಂದದಲಿ ಮೆರೆಯದೆ
ಈ ಜೀವಕೆ ಆಗದು.
ಬೇಡ ನನಗೆ ನೀತಿ, ನಿಯತಿಗಳ
ಮುಳ್ಳು ಬೇಲಿ,
ತುಸು ಬಿಟ್ಟು ನೋಡು, ಬೇಕಾದರೆ
ನಿನ್ನೆಡೆಗೂ ಬೀಸೀತು ಆ
ಮಧುಮಾಸದ ತಂಗಾಳಿ. [88]

ಇಲ್ಲಿ ಲೇಖಕಿ ಹುಟ್ಟು ಮತ್ತು ನಂತರದ ಪ್ರಕ್ರಿಯೆಯಲ್ಲಿ ಹೆಣ್ಣನ್ನು ಸಾಮಾಜೀಕರಣದ ಹೆಸರಿನಲ್ಲಿ ನಿರ್ಬಂಧಕ್ಕೆ ಒಳಪಡಿಸುವುದನ್ನು ತಿಳಿಸುತ್ತಲೇ ಪ್ರತಿ ಜೀವಿಯ ಸಹಜ ಬಯಕೆಯಾದ ಸ್ವಚಂದದ ಹಂಬಲ ತನಗೂ ಇದೆ. ಇಲ್ಲಿ ಸ್ವಾನಂದದಲಿ ಬದುಕುವ ಅಪೇಕ್ಷೆ ಲೇಖಕಿಯ ಇರುವಿಕೆಯನ್ನು, ಅಸ್ಮಿತೆಯನ್ನು ಗುರುತಿಸಿಕೊಳ್ಳುವ ತುಡಿತ ಕೂಡ ಆಗಿದೆ. ಆದರೆ ತನ್ನ ತನದ ಅರಿವಿಗಾಗಿ ತುಡಿಯುವ ಪ್ರಯತ್ನ, ಅದನ್ನು ಪಡೆಯುವ ಹಂಬಲ, ಆ ಶಕ್ತಿ ತನ್ನಲ್ಲಿರುವ ಅರಿವು ಎಲ್ಲಾ ಇದ್ದ ಸಂದರ್ಭದಲ್ಲಿಯೂ 'ತುಸು ಬಿಟ್ಟು ನೋಡು' ಎನ್ನುವ ನಿರೀಕ್ಷೆ ತಾನು ಇನ್ನೊಬ್ಬರ ಹಿಡಿತದಲ್ಲಿರುವುದನ್ನೂ, ಅವರಿಂದ ಬಿಡುಗಡೆ ಪಡೆಯಬೇಕಾದ ಅನಿವಾರ್ಯತೆಯನ್ನೂ ಎತ್ತಿಹಿಡಿಯುತ್ತದೆ. ಅದರ ಜೊತೆ ಜೊತೆಗೆ ಜೀವನದ ಸವಿ ಸವಿಯಬೇಕಾದರೆ ಸಮಾನತೆಯ ಮೇಲೆ ರೂಪುಗೊಳ್ಳುವ ದಾಂಪತ್ಯದಿಂದ ಮಾತ್ರ ಸಾಧ್ಯ ಎಂಬ ದೃಢ ನಂಬಿಕೆ ಇದೆ. ಇದರಿಂದಾಗಿಯೇ 'ನಿನ್ನೆಡೆಗೂ ಬೀಸೀತು ಆ ಮಧುಮಾಸದ ಗಾಳಿ' ಎಂಬ ಆತ್ಮವಿಶ್ವಾಸದ ಸಾಲುಗಳು ಮೂಡಿಬಂದಿವೆ. ಇವರ 'ನನ್ನಲೀಲೆ' ಕವನ ಹೆಣ್ಣಿನ ಶಕ್ತಿ ಸಾಮರ್ಥ್ಯಗಳನ್ನು ಮತ್ತೊಂದು ಬಗೆಯಲ್ಲಿ ಹಿಡಿದಿಡಲು ಪ್ರಯತ್ನಿಸುತ್ತದೆ. ಹೆಣ್ಣಿಗೂ ಕೂಡ ಗಂಡಿನಂತೆಯೇ ಪ್ರಕೃತಿ ಸಹಜವಾದ ಶಕ್ತಿ, ಸಾಮರ್ಥ್ಯ ಹೆಣ್ಣಿನಲ್ಲಿ ಅಂತರ್ಗತವಾಗಿವೆ. ಆದರೆ ಪುರುಷ ಪ್ರಧಾನ ವ್ಯವಸ್ಥೆ ಸದಾ ಅವಳ ಶಕ್ತಿಯನ್ನು ನಿಯಂತ್ರಿಸಲು ಪ್ರಯತ್ನಿಸುತ್ತಿರುತ್ತದೆ. ಆದರೆ ಹೆಣ್ಣಿಗೆ ಅದನ್ನು ಮೀರಿ ಬೆಳೆಯುವ ಸಾಮರ್ಥ್ಯ ಕೂಡ ಇದೆ. ಹೆಣ್ಣು ಹುನ್ನಾರಗಳನ್ನು ಅರಿತು ಸ್ವಸಾಮರ್ಥ್ಯದಿಂದ ಅದೆಲ್ಲವನ್ನು ಮೆಟ್ಟಿನಿಲ್ಲುವ ಆತ್ಮವಿಶ್ವಾಸ ಈ ಕವನದಲ್ಲಿ ವ್ಯಕ್ತವಾಗಿದೆ.

ನೀ ನನ್ನ ಇರಿಯಬಯಸಿದೆ
ನಿನ್ನ ದರ್ಪದಿಂದ ತಿರಸ್ಕಾರದಿಂದ
ನಾನಾದರೂ ಮತ್ತೆ ಮತ್ತೆ
ಬದುಕಿದೆ ನೀ ಸವಿದು ಬಿಟ್ಟ
ಅಮೃತ ಹನಿಯಿಂದ

ನೀ ತುಳಿದು ತಣಿದೆ ನಿನ್ನ
ಅವಜ್ಞೆಯ ಕಾಲುಗಳಿಂದ
ನಾ ಬೆಳೆದು ನಿಂತೆ ಹಾಲು ಚೀಪಿ
ನಿನ್ನ ಅಕ್ಷಯದುಂಗುಟದಿಂದ
. . . . . . . . . . . . . . . .

ನಿನ್ನ ಕಂಬನಿಯ ಮುತ್ತುಕೋದು
ನಲಿದು ಮಾಡುವೆ ಪುಷ್ಪಮಾಲೆ
ಆಗಲಿ ಆಗಲಿ ಮಿಲನದ ಸವಿ
ಬೆಳೆಸುವುದೇ ನನ್ನ ಸಹಜ ಲೀಲೆ [೫೪]

ಎಂದು ಗಂಡಿನ ಶಕ್ತಿ ಕೇಂದ್ರಗಳಾದ ಇರಿಯುವ, ಕೊಲ್ಲುವ, ಅವಜ್ಞೆಯ ಕಾಲುಗಳಿಂದ ತುಳಿಯುವ ಗುಣಗಳು ಹೆಣ್ಣನ್ನು ನಿಯಂತ್ರಣದಲ್ಲಿಡಲು ಪ್ರಯತ್ನಿಸುತ್ತಿದ್ದರೆ, ಹೆಣ್ಣು ಅದರ ನಡುವೆಯೂ ತನ್ನ ಇರುವಿಕೆಯನ್ನು ಸ್ಪಷ್ಟಪಡಿಸುವ, ಗಂಡಿನ ಈ ಗುಣಗಳನ್ನೇ ತನ್ನ ಬೆಳವಣಿಗೆಯ ಕೇಂದ್ರಗಳಾಗಿಸಿಕೊಳ್ಳುವ ಬಗೆಗಳನ್ನು ಲೇಖಕಿ ಗುರುತಿಸುತ್ತಾರೆ. ಈ ಕವನ ಹೆಣ್ಣಿನ ಅಗಾಧ ಶಕ್ತಿಯ, ಗಂಡಿನಿಂದ ಅದನ್ನು ನಿರ್ಬಂಧಿಸಲಾಗದ, ಪ್ರಕೃತಿ ಸಹಜವಾದ ಬೆಳವಣಿಗೆಯ, ವಿಕಾಸದ, ಒಳವಿವರಗಳನ್ನು ನೀಡುತ್ತದೆ. ಇದೆಲ್ಲದರ ನಡುವೆಯೂ ಪುರುಷ ಪ್ರಧಾನ ವ್ಯವಸ್ಥೆ ಹೆಣ್ಣನ್ನು ಅಧೀನವಾಗಿರಿಸಿಕೊಳ್ಳಲು ನಿರಂತರವಾಗಿ ನಡೆಸುವ ಕಾರ್ಯತಂತ್ರಗಳ, ಹುನ್ನಾರಗಳ ಅರಿವು ಲೇಖಕಿಗಿದೆ. ಅದುದರಿಂದಲೇ ಅವರ 'ನಾನು ಮನುಷ್ಯ' ಕವನ ಇದಕ್ಕೆ ವಿರುದ್ಧವಾಗಿ ಅಸಹಾಯಕತೆ, ನೋವು, ನಿರಾಸೆಯಿಂದ ಕೂಡಿದ ಹೆಣ್ಣಿನ ಮೊರೆಯಾಗಿ, ಆರ್ತನಾದವಾಗಿ ಮೂಡಿಬಂದಿದೆ.

ಅಡ್ಡ ಉದ್ದ ಪಟ್ಟಿ
ಬೆಳೆದು ನನ್ನನ್ನು
ವಿಕಾರ ಮಾಡಬೇಡಿ
ಗಂಟಲಿಗೆ ನೇಣು ಬಿಗಿದು
ಕಲ್ಲು ಗುಂಡಿಲೆ ಹೊಡೆಯಬೇಡಿ
ಒಮ್ಮೆ ಮೇಲೆ, ಒಮ್ಮೆ ಕೆಳಗೆ
ಒಮ್ಮೆ ಆದಿ ಒಮ್ಮೆ ಅನಾದಿ
ನಾಮ ಹಚ್ಚಿ ನಿಮ್ಮ ಕೆಸರಿನ
ಹುದುಗಲಲ್ಲಿ ನನ್ನನ್ನು
ತಳ್ಳಬೇಡಿ
. . . . . . . . . . . .
ನಾನು ಬಾಳಲು ಬಂದಿದ್ದೇನೆ
ಮನುಷ್ಯ ನಾನು
ದುಃಖ ಸುಖಗಳ ನಂಜಿನಲ್ಲಿ
ತುಸು ಜೀವನದ
ಗಳಿಗೆಗಳನ್ನು
ಚಪ್ಪರಿಸಬೇಕೆಂದಿರುವೆ
ದಮ್ಮಯ್ಯ ದಯವಿಟ್ಟು
ಅರ್ಥ ಮಾಡಿಕೊಳ್ಳಿ
ನಾನು ಶುದ್ಧ ಮನುಷ್ಯ [೫೫]

ಹೆಣ್ಣಿನ ಅಸ್ತಿತ್ವದ ಪ್ರಶ್ನೆಯನ್ನು ಅತ್ಯಂತ ಸಮರ್ಥವಾಗಿ ಚರ್ಚಿಸುವ ವಿಜಯಾದಬ್ಬೆಯವರು ಹೆಣ್ಣಿಗೆ ಶಕ್ತಿ ಸಾಮರ್ಥ್ಯಗಳಿರುವ ಸಂದರ್ಭದಲ್ಲಿಯೂ ಕೂಡ ಅದೆಲ್ಲವನ್ನು ಪುರುಷಪ್ರಧಾನ ವ್ಯವಸ್ಥೆ ತನ್ನ ಅನುಕೂಲಕ್ಕಾಗಿ ಬಳಸಿಕೊಂಡಿರುವ ಬಗೆಗೆ ತಮ್ಮ ಕಾವ್ಯದ ಮೂಲಕ ಪ್ರತಿರೋಧವನ್ನು ವ್ಯಕ್ತಪಡಿಸುತ್ತಾರೆ. ಕುಟುಂಬ ಹಾಗೂ ಸಾಮಾಜಿಕ ಸಂದರ್ಭದಲ್ಲಿ ಹೆಣ್ಣಿನ ಪಾತ್ರ ಏನು? ಅವಳ ಶಕ್ತಿ ಸಾಮರ್ಥ್ಯಗಳೇನು? ಪುರುಷಪ್ರಧಾನ ವ್ಯವಸ್ಥೆ ಅದನ್ನು ಬಳಸಿಕೊಳ್ಳುತ್ತಿರುವ ಬಗೆ ಹೇಗೆ ಎಂಬುದನ್ನು ಅವರ 'ಇಷ್ಟಕೆ ಹುಟ್ಟೇ' ಕವನ ಸಮರ್ಥವಾಗಿ ಚರ್ಚಿಸುತ್ತದೆ.

ಗೂಡನು ಕಟ್ಟಿ ಗುಟುಕನು ಇಕ್ಕಿ
ಹಾರಲು ಬಿಡಲೇ ಹುಟ್ಟಿದೆವೆ?
ಮಡಿಕೆ ಕುಡಿಕೆಗಳ ಒಡೆತನದುಬ್ಬಲಿ
ಮಣ್ಣಲಿ ಹೊರಳಲೆ ಹುಟ್ಟಿದೆವೆ?
ದೈತಾದ್ವೈಕೆ ಹಾರುವ ಭೂಪರ
ಕಾಲೊತ್ತಲಿಕಷ್ಟೇ ಹುಟ್ಟಿದೆವೆ?
ಶೇಷಶಾಯಿಯ ಕಾಲಬುಡದಲ್ಲಿ
ಕೂರಲಿಕಷ್ಟೇ ಹುಟ್ಟಿದೆವೆ? [೫೧]

ಎಂಬ ಪ್ರಶ್ನೆ ಪುರುಷಪ್ರಧಾನ ವ್ಯವಸ್ಥೆ ಮೌಲ್ಯವ್ಯವಸ್ಥೆಯ ಹೆಸರಿನಲ್ಲಿ, ಕುಟುಂಬ, ದಾಂಪತ್ಯ, ತಾಯ್ತನ, ಮಡದಿ, ದಾಸಿ, ಸಖಿ ಮುಂತಾದ ಪಾತ್ರಗಳಿಗೆ ಸೀಮಿತಗೊಳಿಸಿರುವ ಬಗೆಯನ್ನೂ, ಹೆಣ್ಣಿನ ಹುಟ್ಟು, ವ್ಯಕ್ತಿತ್ವ ಅಷ್ಟಕ್ಕೆ ಮಾತ್ರ ಸೀಮಿತವಲ್ಲ, ಅದನ್ನೂ ಮೀರಿದ ಶಕ್ತಿ ಸಾಮರ್ಥ್ಯಗಳು ಹೆಣ್ಣಿನಲ್ಲಿವೆ ಎಂಬ ಆಶಾಭಾವವನ್ನೂ ಹೊಂದಿವೆ. ಇಷ್ಟೆಲ್ಲಾ ಶಕ್ತಿ ಸಾಮರ್ಥ್ಯಗಳು ಹೆಣ್ಣಿನಲ್ಲಿವೆ ಎಂಬ ಅರಿವಿದ್ದಾಗ್ಯೂ ಕೂಡ ಹೆಣ್ಣಿಗೆ ಅದನ್ನು ಮೀರಲು ಏಕೆ ಸಾಧ್ಯವಾಗುತ್ತಿಲ್ಲ ಎಂಬುದೇ ಬಹುದೊಡ್ಡ ಸಮಸ್ಯೆಯಾಗಿ ಕಾಡಿದೆ. ತನ್ನ ಜೀವನದ, ಬದುಕಿನ ಸಾರ್ಥಕ್ಯದ ಗುರಿ ಇಷ್ಟೇ ಅಲ್ಲ ಎಂಬ ಅರಿವು ಸ್ಪಷ್ಟವಾಗಿರುವ ಸಂದರ್ಭದಲ್ಲಿಯೂ ಕೂಡ ಅದನ್ನು ಮೀರಲಾಗದ ಅಸಹಾಯಕ ಸ್ಥಿತಿ ತನ್ನೊಬ್ಬಳದೇ ಅಲ್ಲ, ಶೇಷಶಾಯಿಯ ಪತ್ನಿಯದೂ ಕೂಡ ಹೌದು ಎಂಬುದನ್ನು ತಿಳಿಸುತ್ತಲ್ಲೇ ಹೆಣ್ಣನ್ನು ನಿಯಂತ್ರಿಸುತ್ತಿರುವ ಪುರುಷಶಾಹಿಯ ಅಧಿಕಾರ ವ್ಯಾಪ್ತಿಯನ್ನು ತಿಳಿಸುತ್ತದೆ. ಇವರ 'ಸಂಜೀವಿನಿ' ಕವನ ಮೌಲ್ಯವ್ಯವಸ್ಥೆಯಿಂದಾಗಿ ರೂಪುಗೊಂಡಿರುವ ಹೆಣ್ಣಿನ ಮಿತಿಯನ್ನು ಈ ರೀತಿಯಲ್ಲಿ ಹಿಡಿದಿಡುತ್ತದೆ.

ನಮ್ಮೂರ ಗುಡ್ಡವನೂ ಹತ್ತಲಾರದ
ಕಣ್ಣಗಂಗೆಯ ಮಾತ್ರ ಹರಿಸಬಲ್ಲ
ನಾನು ಬರಿ ಬೆಂಕಿಯ ಹುಳ.[೫೨]

ಇಲ್ಲಿ ಬೆಂಕಿಯ ಹುಳುವಿನ ರೂಪಕ ತನ್ನನ್ನು ತಾನೇ ಸುಟ್ಟುಕೊಳ್ಳುವ, ಇಲ್ಲವಾಗಿಸಿಕೊಳ್ಳುವ ಬಗೆಯದ್ದು. ಆದರೆ ಇಲ್ಲಿ 'ಗುಡ್ಡವನೂ ಹತ್ತಲಾರದ' ಎನ್ನುವುದು 'ಹತ್ತಬಾರದ' ಪುರುಷಪ್ರಧಾನ ನಿರೀಕ್ಷೆಯನ್ನೇ ಧ್ವನಿಸುತ್ತದೆ. ಏಕೆಂದರೆ ಪುರುಷಪ್ರಧಾನ ವ್ಯವಸ್ಥೆ ಹೆಣ್ಣನ್ನು ನಿಯಂತ್ರಿಸುವ ವಿಧಾನ ಅಷ್ಟು ಬಿಗಿಯಾದದ್ದು. ಆದುದರಿಂದಲೆ ಹತ್ತುವ ಪ್ರಯತ್ನ, ಅದರಲ್ಲುಂಟಾದ ಸೋಲು, ಕಣ್ಣಗಂಗೆಗೆ ಕಾರಣವಾಗಿದೆ. ಇದರಿಂದಾಗಿಯೇ ಹತ್ತುವ ಹಂಬಲ ಮತ್ತು ಹತ್ತಲಾಗದ ಅಸಹಾಯಕತೆಯ ಪ್ರತೀಕವಾಗಿ ಕಣ್ಣಗಂಗೆ ಮತ್ತು ಬೆಂಕಿಯ ಹುಳುವಿನ ರೂಪಕಗಳು ಮೂಡಿಬಂದಿವೆ.

ಪ್ರಧಾನ ವ್ಯವಸ್ಥೆಯಿಂದ ರೂಪುಗೊಂಡ ಹೆಣ್ಣಿನ ಮನಸ್ಥಿತಿ ಹೇಗೆ ಪುರುಷ ಪ್ರಧಾನ ವ್ಯವಸ್ಥೆಯನ್ನು ಎದುರಿಸುವ ಸಂದರ್ಭದಲ್ಲಿ ಸವಾಲುಗಳನ್ನು ಎದುರಿಸುತ್ತದೆ ಎಂಬುದನ್ನು ಮಹಿಳಾಕಾವ್ಯ ಸ್ಪಷ್ಟವಾಗಿ ತೆರೆದಿಡುತ್ತದೆ. ತನ್ನೆಲ್ಲಾ ಶಕ್ತಿ ಸಾಮರ್ಥ್ಯಗಳನ್ನು ಇಲ್ಲವಾಗಿಸುವ, ಅದನ್ನು ನಾಶಪಡಿಸುವ ಹುನ್ನಾರಗಳನ್ನು ಪುರುಷ ಪ್ರಭುತ್ವ ಎಷ್ಟು ಸಮರ್ಥವಾಗಿ ರೂಪಿಸುತ್ತದೆ, ಹಾಗೂ ಹೆಣ್ಣನ್ನೂ ಕೂಡ ಆ ರೀತಿಯ ಮಿತ್ಯಗಳಿಗೆ ಹೇಗೆ ಒಳಪಡಿಸುತ್ತದೆ ಎಂಬುದನ್ನು ಈ ಘಟ್ಟದ ಮಹಿಳಾ ಕಾವ್ಯದಲ್ಲಿ ಗುರುತಿಸಬಹುದು.

ಶೈಲಜ ಉಡಚಣರವರ ದಾಂಪತ್ಯ ಕವನ ಕುಟುಂಬದ ಒಳತಿನ ದೃಷ್ಟಿಯಿಂದ ಹೆಣ್ಣಿನ ವ್ಯಕ್ತಿತ್ವ ಪುರುಷಪ್ರಧಾನ ವ್ಯವಸ್ಥೆಯಲ್ಲಿ ಪುರುಷ ಅಪೇಕ್ಷಿತ ಮಾದರಿಯಲ್ಲಿಯೇ ಹೇಗೆ ಮತ್ತು ಏಕೆ ರೂಪುಗೊಳ್ಳುತ್ತದೆ ಎಂಬುದನ್ನು ತಿಳಿಸಲು ಪ್ರಯತ್ನಿಸುತ್ತದೆ.

ಹಾಲಿಗಾಗಿ ಹಾಲಾಗಿ, ನೀರಿಗಾಗಿ ನೀರಾಗಿ
ನಾನು ಅಮೃತಳಾಗುತ್ತೇನೆ, ನಾನು ಅಮೃತವಾಗುತ್ತೇನೆ. [೫೮]

ಎನ್ನುತ್ತಲೇ ಪುರುಷಪ್ರಧಾನ ಕುಟುಂಬ ವ್ಯವಸ್ಥೆಯಲ್ಲಿ ಹೆಣ್ಣು 'ಅಮೃತ'ವಾಗುವ ಪ್ರಕ್ರಿಯೆಯನ್ನು ತೆರೆದಿಡುತ್ತದೆ. ಇಲ್ಲಿ ಅಮೃತಳಾಗುವುದು ಅಥವಾ ಅಮೃತವಾಗುವುದು ಲೇಖಕಿ ಅಪೇಕ್ಷೆಯಲ್ಲ ಬದಲಿಗೆ ವ್ಯವಸ್ಥೆಯ ಇಚ್ಛಾಶಕ್ತಿಗೆ ಅನುಗುಣವಾಗಿ, ಅಪೇಕ್ಷೆಗೆ ತಕ್ಕಂತೆ ಬದಲಾಗುವ, ಬದಲಾಗಬೇಕಾದ ಅನಿವಾರ್ಯತೆಯನ್ನು ಎತ್ತಿಹಿಡಿಯುತ್ತದೆ. ಆದರೆ ಕುಟುಂಬ ವ್ಯವಸ್ಥೆ ಸಾಮಾಜಿಕ ಸ್ವಾಸ್ಥ್ಯದ ದೃಷ್ಟಿಯಿಂದ ಹಾಗೂ ಸಂಬಂಧಗಳ ಹಿತದೃಷ್ಟಿಯಿಂದ ಗಂಡು ಹೆಣ್ಣು ಇಬ್ಬರಿಗೂ ಕೂಡ ಭದ್ರ ನೆಲೆ. ಇದನ್ನು ಕಾಪಾಡಿಕೊಳ್ಳುವುದು ಹಂಡು ಹೆಣ್ಣು ಇಬ್ಬರಿಗೂ ಕೂಡ ಅನಿವಾರ್ಯ ಅಂತಹ ಸಂದರ್ಭದಲ್ಲಿ ಹೆಣ್ಣು ತನ್ನೆಲ್ಲಾ ಆಸೆ, ಆಕಾಂಕ್ಷೆ, ರೋಷ, ದೋಷಗಳನ್ನು ಬದಿಗಿಟ್ಟು ಅದರ ಒಳತಿಗಾಗಿ ಶ್ರಮಿಸುವುದು ಅನಿವಾರ್ಯವಾಗಿಬಿಡುತ್ತದೆ. ತನ್ನ ವ್ಯಕ್ತಿತ್ವದ ಘನತೆಯನ್ನು ಪಕ್ಕಕ್ಕಿಟ್ಟು ಕುಟುಂಬದ ಹಿತಕ್ಕೆ ಶ್ರಮಿಸುವ ಹೆಣ್ಣಿನ ಕರ್ತವ್ಯದ ಹಿಂದಿನ ಉದ್ದೇಶ ಈ ಕವನದಲ್ಲಿ ಸ್ಪಷ್ಟವಾಗುತ್ತದೆ.

ಮಾಯ್ದ ಹುಣ್ಣಿನ ಹಕ್ಕಳೆ ಕಿತ್ತು
ಗಾಯ ದೊಡ್ಡದು ಮಾಡಿಕೊಳ್ಳುವುದು
ಬಹುಶಃ ಇಬ್ಬರಿಗೂ ಇಷ್ಟವಿಲ್ಲ. [೫೯]

ಈ ಕಾರಣದಿಂದಾಗಿಯೇ ಆರಂಭದಿಂದ ಹಿಡಿದು ಇಂದಿನ ಸಂದರ್ಭದವರೆಗಿನ ಮಹಿಳಾಕಾವ್ಯದ ಪ್ರಧಾನ ಕಾಳಜಿ ಅನುಸಂಧಾನ ಮಾದರಿಯದ್ದಾಗಿರುವುದು.

ಈ ಕಾಲಘಟ್ಟದ ಲೇಖಕಿಯರ ಕವನಗಳಲ್ಲಿ ಕಂಡು ಬರುವ ಮತ್ತೊಂದು ಸಂದಿಗ್ಧತೆ ಆಶಾವಾದ ಮತ್ತು ನಿರಾಶಾವಾದಿ ಮನೋಭಾವನೆಗೆ ಸಂಬಂಧಿಸಿದ್ದು. ಒಂದು ಹಂತದಲ್ಲಿ ಎಲ್ಲವನ್ನೂ ಗೆಲ್ಲಬಲ್ಲೆ, ಎಲ್ಲವೂ ಸರಿಯಾಗಿದೆ, ಚೆನ್ನಾಗಿದೆ ಎಂಬ ಆತ್ಮವಿಶ್ವಾಸ ಕಂಡುಬಂದರೆ ಮತ್ತೊಂದೆಡೆ ತನ್ನಿಂದ ಏನನ್ನೂ ಸಾಧಿಸಲು ಸಾಧ್ಯವಿಲ್ಲವೆಂಬ ನಿರಾಶಾಭಾವನೆ ಎದ್ದು ಕಾಣುತ್ತದೆ. ತನ್ನೆಲ್ಲಾ ಶಕ್ತಿ ಸಾಮರ್ಥ್ಯಗಳನ್ನು ಕಾಲಕಾಲಕ್ಕೆ ತಕ್ಕಂತೆ ಮಣಿಸುವ, ಇಲ್ಲವಾಗಿಸುವ, ಪಿತೃಪ್ರಧಾನ ವ್ಯವಸ್ಥೆಯ

ಹುನ್ನಾರಗಳು ಅವರ ಆಶಾಭಾವವನ್ನೂ, ಉತ್ಸಾಹವನ್ನು ಇಲ್ಲವಾಗಿಸಿಬಿಡುತ್ತವೆ. ಆರಂಭದ ಹಿಗ್ಗು ಉತ್ಸಾಹಗಳು ಕ್ರಮೇಣ ಇಲ್ಲವಾಗಿ ನಿರಾಶಾಭಾವನೆ ಇವರ ಕವನಗಳ ಕೇಂದ್ರವಾಗಿರುವುದನ್ನು ಕಾಣಬಹುದು.

ಹಿತವಾಗಿ ಗಾಳಿ ಬೀಸುತ್ತಿರುವಾಗಲೂ
ಬದುಕು ಬೆಳೆಯದೆಂಬ ಭ್ರಮೆ [೬೦]

ಹೆಣ್ಣು ಏನನ್ನಾದರೂ ಸಾಧಿಸಿದ್ದೇನೆ ಎಂಬ ಆಶಾಭಾವದಿಂದ ಕೂಡಿರುವ ಸಂದರ್ಭದಲ್ಲಿ ಪುರುಷ ಪ್ರಭುತ್ವ ಹಲವು ಭ್ರಮೆಗಳನ್ನು ಹುಟ್ಟಿಸಿ ಅದು ಸಾಧನೆಯಲ್ಲ ಮಿತಿ ಎಂದೋ, ಅದರಿಂದಾಗಿ ಏನೂ ಪ್ರಯೋಜನವಿಲ್ಲ ಎಂಥಲೋ ಭ್ರಮೆಗಳನ್ನು ಹುಟ್ಟಿಸುತ್ತದೆ. ಈ ಸಂದರ್ಭದಲ್ಲಿ ಮಹಿಳಾಕಾವ್ಯ ಸಹಜವಾಗಿ ತನ್ನ ಸ್ಥಿತಿಯ ಬಗೆಗೆ ಗೊಂದಲಗೊಳ್ಳುವುದನ್ನು ಕಾಣಬಹುದು. ಶೈಲಜ ಉಡಚಣರವರ 'ಕೃತಾರ್ಥ' ಕವನ ಪಿತೃ ಸಂಸ್ಕೃತಿ ಹುಟ್ಟಿಸಿರುವ ಭ್ರಮೆ, ನಿರಾಶಾಭಾವದ ನೆಲೆಗಳನ್ನು ಸಮರ್ಥವಾಗಿ ಹಿಡಿದಿಡುತ್ತದೆ.

ಇದೇ ಕಾಲಘಟ್ಟದ ಲೇಖಕಿಯರಾದ ಶಶಿಕಲಾ ವೀರಯ್ಯಸ್ವಾಮಿ, ವಿಜಯಶ್ರೀ ಸಬರದ ಹಾಗೂ ಮಾಲತಿ ಪಟ್ಟಣಶೆಟ್ಟಿಯವರು ಹೆಣ್ಣಿನ ನೋವು ಸಂಕಟ ಶೋಷಣೆಗಳಿಗೆ ಪುರುಷ ಪ್ರಧಾನ ವ್ಯವಸ್ಥೆಯೇ ಕಾರಣ ಎಂಬುದನ್ನು ತಮ್ಮ ಕಾವ್ಯದ ಮೂಲಕ ಪ್ರತಿಪಾದಿಸಿದರು. ಹೆಣ್ಣಿನ ಶೋಷಣೆಯ ಕೇಂದ್ರಗಳನ್ನು ಗುರುತಿಸುವುದರ ಮೂಲಕ, ಪುರುಷ ಪ್ರಭುತ್ವವನ್ನು ಪ್ರಶ್ನಿಸುವುದರ ಮೂಲಕ, ಮಹಿಳಾ ಕಾವ್ಯದಲ್ಲಿ ನೇರವಾದ ಪ್ರತಿಭಟನೆಯ ಧ್ವನಿಯನ್ನು, ಪುರುಷ ಪ್ರಭುತ್ವದ ವಿರುದ್ಧ ತೀವ್ರವಾದ ಪ್ರತಿರೋಧವನ್ನು ತೋರಿದರು. ಪುರುಷಪ್ರಧಾನ ವ್ಯವಸ್ಥೆಯನ್ನು ನೇರವಾಗಿ ವಿರೋಧಿಸುವ, ಪ್ರತಿಭಟಿಸುವ ಸಂದರ್ಭದಲ್ಲಿಯೂ ಕೂಡ ಹೆಣ್ಣಿನ ಅಸ್ತಿತ್ವದ ಪ್ರಶ್ನೆ ಇವರನ್ನು ಬಹುವಾಗಿ ಕಾಡಿದೆ. ಪುರುಷ ಪ್ರಭುತ್ವವನ್ನು ನೇರವಾಗಿ ವಿರೋಧಿಸುವ ಸಂದರ್ಭದಲ್ಲಿಯೂ ಕೂಡ ಅದರಿಂದ ಹೊರಬರಲಾರದ, ಪರ್ಯಾಯವನ್ನು ಕಟ್ಟಲಾಗದ ಅಸಹಾಯಕತೆ, ಅನಿವಾರ್ಯತೆ ಇವರ ಕಾವ್ಯದಲ್ಲಿ ಮುಖ್ಯವಾಗಿ ಕಂಡುಬರುತ್ತದೆ. ಮಾಲತಿ ಪಟ್ಟಣಶೆಟ್ಟಿಯವರು ಪುರುಷ ಪ್ರಭುತ್ವದ ಶ್ರೇಣೀಕರಣ ನೀತಿಯನ್ನು ತೀವ್ರವಾಗಿ ವಿರೋಧಿಸುವ ಸಂದರ್ಭದಲ್ಲಿಯೂ ಕೂಡ ಗಂಡು ಹೆಣ್ಣು ಇಬ್ಬರೂ ಪರಸ್ಪರ ಅರಿತು, ಒಂದಾಗಿ ಬಾಳುವ ಸುಖದ ಹಾದಿಯನ್ನು ಕುರಿತು

ಉಲಿಯೊಮ್ಮೆ ಒಲವಿನ ಮಾತು
ಉರುಳಿ ಹೋಗುವುದಿಲ್ಲ ನಿನ್ನ ಅಂತಸ್ತು, . . . .
ಅಪ್ಪೊಮ್ಮೆ ಬಂದು ಛಲವ ಸೋತು
ಕಂದಿ ಹೋಗುವುದಿಲ್ಲ ನಿನ್ನ ತಾಕತ್ತು,
ನಿರಾಶೆ ಪ್ರಳಯ
ಕೂತು
ನನ್ನನ್ನೆ ಸಂತೈಸಿ ಹಾಯಾಗಿ ಸತ್ತೇನು! [೬೧]

ಎಂದು ಗಂಡು ಸ್ವಾರ್ಥ, ಅಹಂಮಿಕೆಯನ್ನು ಮರೆತು ಸಮಾನ ಮನೋಭಾವದಿಂದ ಒಂದಾಗಿ ಬಾಳುವ, ಅದರಿಂದ ಹೆಣ್ಣಿಗೂ ಕೂಡ ನೆಮ್ಮದಿಯ ಜೀವನವನ್ನೊದಗಿಸುವ ಕಡೆಗೆ ಗಮನ

ಸೆಳೆಯುತ್ತಾರೆ. ಆದರೆ ಪುರುಷ ಪ್ರಭುತ್ವದ ಏಕಮುಖವಾದ ಆಲೋಚನೆ, ತನ್ನದೇ ಪ್ರಾಧಾನ್ಯತೆಯನ್ನು ಮೆರೆಯುವ ಧೋರಣೆ, ಹೆಣ್ಣನ್ನು ತನ್ನ ಅಪೇಕ್ಷೆಯ ರೀತಿಯಲ್ಲಿಯೇ ನಡೆಸಿಕೊಳ್ಳುವ ಬಗೆ ಹಲವು ಸಂದರ್ಭಗಳಲ್ಲಿ ಹೆಣ್ಣಿನ ತೊಳಲಾಟ ಹಾಗೂ ತನ್ನ ಸ್ವಂತಿಕೆಯನ್ನು ಗುರುತಿಸಿಕೊಳ್ಳುವಿಕೆಯಲ್ಲಿ ತೊಡಕಾಗಿರುವುದನ್ನು ಶಶಿಕಲಾ ವೀರಯ್ಯಸ್ವಾಮಿಯವರು ತಮ್ಮ ಕವನದ ಮೂಲಕ ತಿಳಿಸುತ್ತಾರೆ.

ಹೆಜ್ಜೆ ಹಾಕಿ ಹಾಡಿ ಕುಣಿವಾಗ
ಗೆಜ್ಜೆ ಚುಚ್ಚಿ ಕಾಲು ನೋವಾದರೂ
ನಗಲೇಬೇಕಾಗಿ ಬಂದಾಗಲೆಲ್ಲ
ನನಗೊಂದು ಸಣ್ಣ ಅನುಮಾನ
ದೊಡ್ಡದಾಗಿ ಕಾಡುತ್ತದೆ.
ನನಗೆ ಉಸಿರಿದೆಯೇ ಎಂದು![31]

ಇಲ್ಲಿ ಹೆಣ್ಣಿನ ಅಸ್ತಿತ್ವದ ಪ್ರಶ್ನೆಯೇ ಗೊಂದಲಕ್ಕೀಡಾಗಿದೆ. ಪುರುಷ ಪ್ರಧಾನ ಮೌಲ್ಯವ್ಯವಸ್ಥೆ ತಂದೊಡ್ಡಿರುವ ಸವಾಲು ತನ್ನ ಕಷ್ಟ, ಸಂಕಟಗಳನ್ನೂ ಕೂಡ ಕುಟುಂಬದ ಹಿತ, ಸೌಖ್ಯದ ದೃಷ್ಟಿಯಿಂದ ಸಹಿಸಿಕೊಳ್ಳಬೇಕು ಎನ್ನುವುದು. ಇದರಿಂದಾಗಿ ತನ್ನೆಲ್ಲಾ ದುಖ, ದುಮ್ಮಾನಗಳ ನಡುವೆಯೂ ಅದನ್ನೆಲ್ಲಾ ನುಂಗಿಕೊಂಡು ನಗುವ ಮುಖವಾಡವನ್ನು ಧರಿಸಿ ಬದುಕುವುದು. ಇದು ಹೆಣ್ಣಿನ ನಿಜ ಅಸ್ತಿತ್ವವನ್ನೇ ಮರೆಮಾಚಿಬಿಡುತ್ತದೆ. ಇಂತಹ ಸಂದಿಗ್ಧ ಸ್ಥಿತಿಯಲ್ಲಿಯೂ ಕೂಡ ವ್ಯವಸ್ಥೆಯನ್ನು ವಿರೋಧಿಸಲಾಗದ ಸ್ಥಿತಿ ಹೆಣ್ಣಿನದು. ಕುಟುಂಬದ ಹಿತ, ಮಕ್ಕಳ ಸಂತೋಷ ಮುಂತಾದ ಕಾರಣಗಳಿಂದಾಗಿ ಅನಿವಾರ್ಯವಾಗಿ ಹೊಂದಾಣಿಕೆ ಮಾಡಿಕೊಳ್ಳಬೇಕಾಗಿದೆ. ಇದು ಕೆಲವೊಮ್ಮೆ ತನ್ನ ಅಸ್ತಿತ್ವವನ್ನು ಕುರಿತಾದ ದ್ವಂದ್ವ ಗೊಂದಲಗಳಿಗೆ ಕಾರಣವಾಗಿದೆ. ಸುಕನ್ಯಾ ಮಾರುತಿ ಮತ್ತು ಎನ್.ವಿ ಭಾಗ್ಯಲಕ್ಷ್ಮಿಯವರ ಕವನಗಳು ಪುರುಷ ಪ್ರಭುತ್ವದಿಂದಾಗಿ ಹೆಣ್ಣಿನ ಅಸ್ತಿತ್ವ ಗೊಂದಲಕ್ಕೆ ಸಿಲುಕಿ ತನ್ನ ವ್ಯಕ್ತಿತವನ್ನು ಕಂಡುಕೊಳ್ಳುವಲ್ಲಿ ಎದುರಿಸುತ್ತಿರುವ ಸಮಸ್ಯೆಗಳನ್ನು ಸಮರ್ಥವಾಗಿ ಚಿತ್ರಿಸುತ್ತವೆ.

ಆಧುನಿಕತೆ ಹೆಣ್ಣಿಗೆ ತಂದೊಡ್ಡಿದ ಸವಾಲುಗಳು ಬಹುಮುಖಿಯಾದದ್ದು. ಒಂದು ಕಡೆ ಹೆಣ್ಣಿಗೆ ದೊರೆತ ಹೊಸ ಅವಕಾಶಗಳು, ನಗರೀಕರಣ, ವಿಭಕ್ತ ಕುಟುಂಬ, ಉದ್ಯೋಗಾವಕಾಶಗಳು, ಸಾಮಾಜಿಕ ಚಟುವಟಿಕೆಗಳಲ್ಲಿ ಭಾಗವಹಿಸುವಿಕೆ ಅವಳ ಜೀವನ ಸುಧಾರಣೆಗೊಳ್ಳುತ್ತಿದೆ ಎಂಬ ಅಂಶವನ್ನು ಪ್ರತಿಬಿಂಬಿಸುತ್ತಿದ್ದರೆ ಮತ್ತೊಂದೆಡೆ ಈ ಹೊಸ ಅವಕಾಶಗಳೇ ಹೆಣ್ಣಿನ ಶೋಷಣೆಯ ನೆಲೆಗಳನ್ನು ಮತ್ತಷ್ಟು ಸಂಕೀರ್ಣಗೊಳಿಸುತ್ತಿದ್ದವು ಎಂಬುದು ಸಮಾಜಿಕ ಅಧ್ಯಯನದಿಂದ ಸ್ಪಷ್ಟವಾಗುತ್ತದೆ. ಶಿಕ್ಷಣ ಉದ್ಯೋಗವನ್ನು ಪಡೆದ ಸಂದರ್ಭದಲ್ಲಿಯೂ ಕೂಡ ಹೆಣ್ಣಿಗೆ ಕೌಟುಂಬಿಕ ಹೊಣೆಗಾರಿಕೆಯಿಂದಾಗಲೀ, ಅವಳ ಸಾಮಾಜಿಕ ಸ್ಥಾನಮಾನದಲ್ಲಾಗಲೀ ಹೆಚ್ಚಿನ ಬದಲಾವಣೆಗಳೇನೂ ಸಂಭವಿಸಲಿಲ್ಲ. ಹಿಂದಿನಂತೆಯೇ ಆಧುನಿಕ ಹೆಣ್ಣಿನ ಎಲ್ಲಾ ಚಟುವಟಿಕೆಗಳೂ ಕೂಡ ಪುರುಷ ಪಾರಮ್ಯವನ್ನು ಎತ್ತಿಹಿಡಿಯಲು ಸಹಾಯಕಾರಿಯಾದವೇ ವಿನಃ ಹೆಣ್ಣಿನ ಬಿಡುಗಡೆಯ ಅಥವಾ ಸಮಾನತೆಯ ಆಶಯಕ್ಕೆ ಪೂರಕವಾಗುವಂತೇನೂ ಇರಲಿಲ್ಲ. ಆದರೆ ಈ ಆಧುನಿಕ ಅವಕಾಶಗಳು ಹಿಂದಿನಿಂದ ಹೆಣ್ಣಿಗಿದ್ದ ಕೆಲ ಸೌಲಭ್ಯಗಳನ್ನೂ ಕೂಡ ಇಲ್ಲವಾಗಿಸಿವೆ. ವಿಜಯಾದಬ್ಬೆಯವರ ಗವಾಕ್ಷಿ

ಕವನ ಆಧುನಿಕತೆಯಿಂದ ಹೆಣ್ಣಿನ ಜೀವನದಲ್ಲಿ ಉಂಟಾಗಿರುವ ಬಂಧನದ ನೆಲೆಗಳನ್ನೂ, ಮಾನಸಿಕ ತಳಮಳ, ತಲ್ಲಣಗಳನ್ನೂ ಹಿಡಿದಿಡಲು ಪ್ರಯತ್ನಿಸುತ್ತದೆ.

ನಮ್ಮಜ್ಜಿಯ ಎಲ್ಲ ಕಥೆಗಳಲ್ಲೂ
ರಾಜಕುಮಾರಿಯರ ಮನೆಗೆ ಗವಾಕ್ಷಿಗಳಿದ್ದವು.
ರಾಜಕುಮಾರರೆಲ್ಲ ಬಂದದ್ದು ಅಲ್ಲಿಂದಲೇ.
. . . . . . . . . . . . . . . . . . .
ಗವಾಕ್ಷಿಗಳಿಲ್ಲದ ಮನೆಯಲ್ಲಿ
ರಾಜಕುಮಾರರೆಲ್ಲ ಹೊರಗೆ ನಿಂತು
ನಿಟ್ಟುಸಿರಿಡುವಾಗ ಹೇಗೆ ನಿದ್ರಿಸಲಿ?
ಬಿಕ್ಕುವ ಕನಸುಗಳ ಹೇಗೆ ಸಂತೈಸಲಿ? [೬೩]

ಇಲ್ಲಿ ಆಧುನಿಕತೆ ತಂದೊಡ್ಡಿರುವ ಅವಕಾಶಗಳನ್ನು ಎದುರಿಸುವುದೇ ಬಹುದೊಡ್ಡ ಸಮಸ್ಯೆಯಾಗಿರುವುದನ್ನು ವಿಜಯಾದಬ್ಬೆಯವರು ಗುರುತಿಸುತ್ತಾರೆ. ವೈದೇಹಿಯವರ 'ಅಡುಗೆ ಮನೆಯ ಹುಡುಗಿ' ತನ್ನ ರಾಜಕುಮಾರನ, ತನ್ನನ್ನು ಬಿಡುಗಡೆ ಮಾಡುವವನ ಬರುವಿಕೆಯನ್ನು ನಿರೀಕ್ಷಿಸುವುದು ಕೂಡ ಗವಾಕ್ಷಿಯ ಮೂಲಕವೇ. ಆದರೆ ಆಧುನಿಕತೆ 'ಗವಾಕ್ಷಿ'ಗಳೇ ಇಲ್ಲದಂತೆ ಮಾಡಿ ಹೆಣ್ಣನ್ನು ಮತ್ತಷ್ಟು ನಿರ್ಬಂಧಿಸಿವೆ. ಅವಕಾಶಗಳ ಹೆಸರಿನಲ್ಲಿ ಇದ್ದ ಅಲ್ಪ ಸ್ವಲ್ಪ ಬಿಡುಗಡೆಯ ಹಾದಿಗಳನ್ನೂ ಜಟಿಲಗೊಳಿಸಿವೆ. ಇಲ್ಲವಾಗಿಸಿವೆ. ಈ ಎಲ್ಲಾ ಸವಾಲುಗಳನ್ನೂ ಇಂದಿನ ಆಧುನಿಕ ಮಹಿಳೆ ಎದುರಿಸಬೇಕಾಗಿದೆ.

ಆಧುನಿಕ ಮಹಿಳಾಕಾವ್ಯ ಎದುರಿಸಬೇಕಾದ ಮತ್ತೊಂದು ಸವಾಲು ಅಭಿವ್ಯಕ್ತಿಗೆ ಸಂಬಂಧಿಸಿದ್ದು. ಅದರಲ್ಲೂ ಕಾವ್ಯಾಭಿವ್ಯಕ್ತಿಯ ಸಂದರ್ಭದಲ್ಲಿ ಭಾಷೆ, ಶೈಲಿ, ವಸ್ತುವಿನ ಆಯ್ಕೆಯಲ್ಲಿನ ಗೊಂದಲ ಈ ಕಾಲಘಟ್ಟದ ಮಹಿಳೆಯರನ್ನು ಬಹುವಾಗಿ ಕಾಡಿದೆ. ಒಂದು ಕಡೆ ವಸ್ತು, ವಿಷಯದ ಆಯ್ಕೆಯ ಸಮಸ್ಯೆಯಾದರೆ ಮತ್ತೊಂದೆಡೆ ಇವುಗಳ ನಿರ್ವಹಣೆ ಹೇಗೆ ಎಂಬುದೇ ಸಮಸ್ಯೆಯಾಗಿದೆ. ಜೊತೆಗೆ ಪುರುಷ ಪ್ರಧಾನ್ಯದ ಅಡಿಯಲ್ಲಿ ರಚನೆಯಾದ ಭಾಷೆಯನ್ನು ಮಹಿಳೆ ತನ್ನ ಭಾವಾಭಿವ್ಯಕ್ತಿಗೆ ಒಗ್ಗಿಸಿಕೊಳ್ಳುವಲ್ಲಿಯೂ ಕೂಡ ಹಲಬಗೆಯ ಸವಾಲುಗಳನ್ನು ಎದುರಿಸಬೇಕಾಗಿದೆ. ಎಲ್ಲಕ್ಕಿಂತ ಮುಖ್ಯವಾಗಿ ಪ್ರಧಾನ ವ್ಯವಸ್ಥೆ ಮಹಿಳಾ ಸಾಹಿತ್ಯವನ್ನು ನಿರ್ಲಕ್ಷ್ಯಕ್ಕೆ ಗುರಿಮಾಡಿ, ಲೇಖಕಿಯರ ಬರವಣಿಗೆಯನ್ನು ಸಮರ್ಪಕ ಓದಿಗೆ ಒಳಪಡಿಸದೇ ಹೋದದ್ದು ಈ ಕಾಲಘಟ್ಟದ ಲೇಖಕಿಯರು ತಾವು ಮುಂದೆ ಸಾಗಬೇಕಾದ ಹಾದಿಯನ್ನು ಕಂಡುಕೊಳ್ಳಲು ತೊಡಕಾಯಿತು. ಸುಕನ್ಯಾ ಮಾರುತಿಯವರ ಕವನ ಮಹಿಳಾ ಅಭಿವ್ಯಕ್ತಿ ಎದುರಿಸುತ್ತಿರುವ ಸವಾಲುಗಳನ್ನು ಈ ರೀತಿ ತೆರೆದಿಡುತ್ತದೆ.

ಬರೆದದ್ದನ್ನು ಒರೆದದ್ದನ್ನು
ಪುನಃ ನನ್ನಲ್ಲೇ ಕಾದಿರಿಸಿ
ಸೀಲುಹಾಕಿ ಸ್ಟಾಂಪು ಒತ್ತಿಬಿಡುವ
ಬರ ಹಿಡಿದಿದೆ. [೬೪]

ಈ ಬಗೆಯ ಧೋರಣೆಗೆ ಒಂದೆಡೆ ಆತ್ಮವಿಶ್ವಾಸದ ಕೊರತೆ ಕಾರಣವಾದರೆ, ಮತ್ತೊಂದೆಡೆ 'ಪ್ರಧಾನ ಸಾಹಿತ್ಯಧಾರೆ' ಮಹಿಳಾ ಕಾವ್ಯದ ಬಗೆಗೆ ಹೊಂದಿರುವ ಮನೋಭಾವ ಕಾರಣವಾಗಿದೆ. ಹೆಣ್ಣಿನ ಆತ್ಮವಿಶ್ವಾಸದ ಕೊರತೆಗೂ ಕೂಡ ಈ ಬಗೆಯ ಮನೋಭಾವವೇ ಕಾರಣ ಎಂದು ಪ್ರತ್ಯೇಕವಾಗಿ ಹೇಳಬೇಕಿಲ್ಲ.

ಹೆಣ್ಣಿನ ಅಭಿವ್ಯಕ್ತಿ ಕ್ಷೇತ್ರ ಕೂಡ ಪುರುಷಪ್ರಧಾನ ವ್ಯವಸ್ಥೆಯ ನಿರೀಕ್ಷೆಯಂತೆಯೇ ರೂಪುಗೊಳ್ಳುತ್ತಿದ್ದ ಕಾರಣ ಹೆಣ್ಣಿನ ಅಭಿವ್ಯಕ್ತಿ ಸಂಸಾರ, ದಾಂಪತ್ಯದ ಚೌಕಟ್ಟನ್ನು ಮೀರುವುದು ನಿಶಿದ್ಧವಾಗಿತ್ತು. ಅದನ್ನು ಮೀರಿದ ಸಂದರ್ಭದಲ್ಲಿ ಹೆಣ್ಣು ಎದುರಿಸಬೇಕಾದ ಸಮಾಜದ ದೃಷ್ಟಿಕೋನವನ್ನು ಕುರಿತೂ ಕೂಡ ಮಹಿಳಾಕಾವ್ಯ ಚರ್ಚಿಸುತ್ತದೆ. ಎನ್ ವಿ. ಭಾಗ್ಯಲಕ್ಷ್ಮಿಯವರ 'ಪ್ರತಿ – ಕ್ರಿಯೆ' ಕವನ 'ಹುಡುಗಿಯೊಬ್ಬಳು ಕಾಮದ ಬಗ್ಗೆ ಪದ್ಯ ಬರೆದರೆ' ಸಮಾಜದ ವಿವಿಧ ಸ್ಥರಗಳಿಂದ ವ್ಯಕ್ತವಾಗುವ ಅಭಿಪ್ರಾಯಗಳನ್ನು ಹಿಡಿದಿಡುತ್ತಲೇ ಮಹಿಳಾ ಅಭಿವ್ಯಕ್ತಿಯ ಮುಖ್ಯ ಸವಾಲುಗಳನ್ನು ಕುರಿತು ಚರ್ಚಿಸುತ್ತದೆ. "ಉತ್ಕಟ ಪ್ರಣಯಾಭಿವ್ಯಕ್ತಿಯ ವಯಸ್ಸಿನಲ್ಲೂ ನಾನು ಕೆಲವು ಕವಿತೆಗಳನ್ನು ಬರೆದರೂ ಅವುಗಳನ್ನು ಪ್ರಕಟಿಸಲು ಈಗಲೂ ನನ್ನ ಮನಸ್ಸು ಮುಂದಾಗಲಾರದು".[೭೫] ಎನ್ನುವ ಅಂಶ ಕೂಡ ಮಹಿಳಾಕಾವ್ಯ ವಸ್ತುನಿರ್ವಹಣೆಯ ಸಂದರ್ಭದಲ್ಲಿ ಮತ್ತೆ ಮತ್ತೆ ದ್ವಂದ್ವ ಗೊಂದಲಗಳಿಗೆ ಗುರಿಯಾಗುವ, ಪ್ರೇಮ, ಕಾಮದ ಅಭಿವ್ಯಕ್ತಿಯ ಸಂದರ್ಭದಲ್ಲಿ ಸಾಂಪ್ರದಾಯಿಕ ಮೌಲ್ಯವ್ಯವಸ್ಥೆಯ ಕಡೆಗೆ ಜಾರುವ ಹಿಂದಿನ ರಹಸ್ಯವನ್ನು ಬಿಚ್ಚಿಡುತ್ತದೆ. ವ್ಯವಸ್ಥೆಯ ಬಗೆಗೆ ಈ ಲೇಖಕಿಯರಿಗೆ ತೀವ್ರವಾದ ಪ್ರತಿಭಟನೆ, ಆಕ್ರೋಶ ಇದ್ದಾಗ್ಯೂ ಕೂಡ ಪಿತೃಪ್ರಭುತ್ವದ ಹಿಡಿತದ ಸಂಪೂರ್ಣ ಅರಿವು ಹಾಗೂ ಪರ್ಯಾಯದ ಆಲೋಚನೆಗಳು ಸಮರ್ಪಕವಾದ ರೀತಿಯಲ್ಲಿ ಇಲ್ಲದ ಕಾರಣದಿಂದಾಗಿ ಇವರ ಕಾವ್ಯದಲ್ಲಿ ವ್ಯವಸ್ಥೆಯ ಬಗೆಗಿನ ಹೋರಾಟಕ್ಕಿಂತ ತನ್ನೊಳಗಿನ, ತನ್ನ ಅಂತರಂಗದ, ಅಭಿವ್ಯಕ್ತಿಯ ಬಗೆಗಿನ ಹೋರಾಟಗಳೇ ಮುಖ್ಯವಾಗಿರುವುದು ಕಂಡುಬರುತ್ತದೆ.

ಇದೇ ಕಾಲಘಟ್ಟದ ಲೇಖಕಿಯರಾದ ಸರೋಜಿನಿ ಮಹಿಷಿ, ವಸಂತಿ ಚಂದ್ರ, ಇಂದುಮತಿ ವಿಭೂತಿ, ಚಂದ್ರಕಲಾ ಬಿ.ಎಸ್., ವಿಮಲಾ ಚನ್ನಬಸಪ್ಪ, ಶಾರದಾ ಗೋಕಾಕ, ಕಮಲಾ ಹಂಪನಾ, ಬೆಳಗೆರೆ ಪಾರ್ವತಮ್ಮ, ಮಲ್ಲಿಕಾ ಕಡಿದಾಳ್, ತೇಜಸ್ವಿನಿ ನಿರಂಜನ, ಭಾರತಿ ಕೆ.ಪಾಟೀಲ ಮುಂತಾದ ಲೇಖಕಿಯರು ಕವನ ಸಂಕಲನಗಳನ್ನು ಪ್ರಕಟಿಸಿದ್ದು ಮಹಿಳೆ, ಸಾಮಾಜಿಕತೆ, ದೇಶಭಕ್ತಿ, ಹಾಗೂ ಆಧ್ಯಾತ್ಮಿಕತೆಗೆ ಸಂಬಂಧಿಸಿದಂತೆ ಕವನಗಳನ್ನು ರಚಿಸಿದ್ದಾರೆ. ಸರೋಜಿನಿ ಮಹಿಷಿ ಸಾಹಿತ್ಯ ಮತ್ತು ಸಾಮಾಜಿಕ ಕ್ಷೇತ್ರಗಳೆರಡರಲ್ಲೂ ಕೃಷಿಯನ್ನು ಕೈಗೊಂಡವರು. ಅಲ್ಲದೆ ಕಾವ್ಯದ ಮೂಲಕ ಮಹಿಳೆಯರು ಸಾಮಾಜಿಕ, ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ಭಾಗವಹಿಸಲು ಕರೆ ನೀಡುವ ಮೂಲಕ ಮಹಿಳೆಯರು ಜಾಗೃತರಾಗಲು ಪ್ರೇರೇಪಿಸಿದರು. ತಮ್ಮ ಸಮಕಾಲೀನ ಸಂದರ್ಭದಲ್ಲಿ ಭಾರತ ಚೀನಾ ದೇಶಗಳ ಯುದ್ಧ ನಡೆಯುತ್ತಿದ್ದಾಗ ತಣ್ಣಗೆ ಪ್ರಕೃತಿ, ಪ್ರೇಮ, ಸಂಸಾರಗಳ ವರ್ಣನೆಯಲ್ಲಿಯೇ ಮುಳುಗಿರುವ ಲೇಖಕರಿಗೆ

'ಲಾಲಿಪದಗಳ ಹಾಡಿ ಮಲಗಿಸಲು ಕಾಲವಿದೆಯೆ ತಾಯಿ?
ವೀರಗೀತವ ಹಾಡು ಕೇಳಲಿ, ಪುಟಿದೇಳ ವೀರ ಅಭಿಮನ್ಯು ಸಂತತಿ'

ಎಂದು ಕರೆ ನೀಡಿದವರು. ಇವರು 'ಸ್ವಾತಂತ್ರ್ಯ ಕಹಳೆ', 'ಹಿಮಾಲಯದಿಂ ರಾಮೇಶ್ವರ', 'ಮುಳ್ಳು ಗುಲಾಬಿ', ಮತ್ತು 'ನವಿಲು ಇಂಚರ' ಎಂಬ ಕವನಸಂಕಲನಗಳ ಮೂಲಕ ಸಾಹಿತ್ಯ ಕ್ಷೇತ್ರದಲ್ಲಿ ಪ್ರಮುಖರಾಗಿದ್ದಾರೆ. ಇವರು ಕೇವಲ ರಾಷ್ಟ್ರಭಕ್ತಿ, ದೇಶಸೇವೆ, ಪ್ರಕೃತಿ ವರ್ಣನೆ, ಸಾಮಾಜಿಕ ಸಮಸ್ಯೆಗಳನ್ನಷ್ಟೇ ಅಲ್ಲದೆ ಮಕ್ಕಳಿಗೆ ಮುದ ನೀಡುವ ಶಿಶುಗೀತೆಗಳನ್ನೂ ಕೂಡ ರಚಿಸಿದ್ದಾರೆ.

ಈ ಕಾಲಘಟ್ಟದ ಇತರೆ ಲೇಖಕಿಯರಾದ ವಸಂತಿ ಚಂದ್ರ, ಇಂದುಮತಿ ವಿಭೂತಿ, ವಿಮಲಾ ಚೆನ್ನಬಸಪ್ಪ, ಶಾರದಾ ಗೋಕಾಕ್, ಬೆಳಗೆರೆ ಪಾರ್ವತಮ್ಮ ಮುಂತಾದವರು ಭಕ್ತಿ, ಪ್ರೀತಿ, ಆತ್ಮ, ಪರಮಾತ್ಮಗಳನ್ನು ಕುರಿತಂತೆ, ನೀತಿಪ್ರಧಾನ ಸ್ತ್ರೀಚಿಂತನೆಯನ್ನು ಕುರಿತಂತೆ, ದಾಂಪತ್ಯ, ಕುಟುಂಬ, ಸತೀತ್ವವನ್ನು ಕುರಿತಂತೆ ಸಾಂಪ್ರದಾಯಿಕ ಮೌಲ್ಯವ್ಯವಸ್ಥೆಯನ್ನು ತಮ್ಮ ಕಾವ್ಯದ ಪ್ರಧಾನ ವಸ್ತುವನ್ನಾಗಿಸಿಕೊಂಡವರು. ಡಾ. ಶೈಲಜಾ ಉಡಚಣ ಈ ಕಾಲಘಟ್ಟದ ಮಹತ್ವದ ಲೇಖಕಿಯರಲ್ಲಿ ಒಬ್ಬರು. ಸಂಘರ್ಷಮಯ ಬದುಕು, ಕಾವ್ಯಾಸಕ್ತಿ, ಮೌನವಾದ ಪ್ರತಿಭಟನೆಯನ್ನು ಕಾವ್ಯಗುಣವಾಗಿಸಿ ಕೊಂಡ ಇವರು **ಒಂದುಗಳಿಗೆ, ಕಾದುನೋಡು, ಸ್ವಗತ, ಕಪ್ಪುನೆಲ ಸೊಕ್ಕಿದ ಸೂರ್ಯ, ತುಂತುರು ಹನಿಗಳು, ನನಂಥವರು, ಕೇಳುಮಗಾ** ಎಂಬ ಕವನ ಸಂಕಲನಗಳ ಮೂಲಕ ವಸ್ತು, ಭಾವ, ಭಾಷೆಗಳ ದೃಷ್ಟಿಯಿಂದ ಕನ್ನಡ ಲೇಖಕಿಯರ ಸಾಲಿನಲ್ಲಿ ಅನನ್ಯರಾಗಿ ನಿಲ್ಲುತ್ತಾರೆ. **ಬೆರಳ ಸಂದಿಯ ಬದುಕು** ಎಂಬ ಕವನ ಸಂಕಲನವನ್ನು ರಚಿಸಿದ ಎನ್.ವಿ.ಭಾಗ್ಯಲಕ್ಷ್ಮಿಯವರದು ಒಂದೇ ಸಂಕಲನವಾದರೂ 'ಸೀಮಿತ ಅನುಭವಕ್ಕೆ,ಸೂಕ್ಷ್ಮ ಮನಸ್ಸೊಂದು ತೋರಿರುವ ಪ್ರತಿಕ್ರಿಯೆ' ಎನ್ನುತ್ತಾರೆ ಹೆಚ್.ಎಸ್.ರಾಘವೇಂದ್ರರಾವ್ ತಮ್ಮ ಮುನ್ನುಡಿಯಲ್ಲಿ.

ವಿಜಯಾದಬ್ಬೆ ಈ ಕಾಲಘಟ್ಟದ ಪ್ರಮುಖ ಲೇಖಕಿ ಮಾತ್ರವಲ್ಲದೆ ಮಹಿಳಾ ಸಾಹಿತ್ಯವನ್ನು ಬೆಳಕಿಗೆ ತರುವ ನಿಟ್ಟಿನಲ್ಲಿ ಹಾಗೂ ಪ್ರಧಾನವಾಹಿನಿಯೊಂದಿಗೆ ಗುರುತಿಸುವ ನಿಟ್ಟಿನಲ್ಲಿ ಮುಖ್ಯಪಾತ್ರವನ್ನು ವಹಿಸಿದವರು. ಸಾಹಿತ್ಯದ ಅನನ್ಯತೆಯ ದೃಷ್ಟಿಯಿಂದ ಹಾಗೂ ಮೌಲ್ಯದ ದೃಷ್ಟಿಯಿಂದ ಕನ್ನಡ ಸಾಹಿತ್ಯಕ್ಕೆ ಇವರು ನೀಡಿರುವ ಕೊಡುಗೆ ಅಪಾರ. ಸಮಾಜ, ಸಂಸ್ಕೃತಿಗೆ ಸಂಬಂಧಿಸಿದಂತೆ ತಮ್ಮ ಕಾವ್ಯದ ಮೂಲಕ ಪುರುಷ ಶ್ರೇಣೀಕರಣವನ್ನೂ, ಅದರ ಶೋಷಣೆಯ ನೆಲೆಗಳನ್ನೂ, ಅದರಿಂದ ಹೊರಬರಬಹುದಾದ ಹಾದಿಗಳನ್ನೂ ಮನೋಜ್ಞವಾಗಿ ಕಾವ್ಯದ ಮೂಲಕ ಪ್ರಚುರಪಡಿಸಿದ್ದಾರೆ. ಕುಲಶೇಖರಿ, ಶಶಿಕಲಾ ವೀರಯ್ಯಸ್ವಾಮಿ, ವಿಜಯಶ್ರೀ ಸಬರದ, ಸುಕನ್ಯಾ ಮಾರುತಿ, ಮುಂತಾದವರು ತಮ್ಮ ಕಾವ್ಯದ ಮೂಲಕ ಪುರುಷ ಪ್ರಧಾನ ಮೌಲ್ಯವ್ಯವಸ್ಥೆ, ಹಾಗೂ ಶ್ರೇಣೀಕರಣವನ್ನು ತೀವ್ರವಾಗಿ ವಿರೋಧಿಸಿರುವುದನ್ನು ಗುರುತಿಸಬಹುದು. ಒಟ್ಟಾರೆ ಈ ಘಟ್ಟದ ಮಹಿಳಾಕಾವ್ಯ ಹಲವು ದ್ವಂದ್ವ ಗೊಂದಲಗಳ ನಡುವೆಯೂ ಹೆಣ್ಣಿನ ಅಸ್ಮಿತೆಯ ಹುಡುಕಾಟಕ್ಕೆ, ಅನನ್ಯತೆಯ ಶೋಧಕ್ಕೆ ಆರಂಭಿಸಿರುವುದನ್ನು ಕಾಣಬಹುದಾಗಿದೆ.

### ೭.೩ ಸ್ವಾಯತ್ತ ವ್ಯಕ್ತಿತ್ವದ ರಚನೆಯ ವಿನ್ಯಾಸ :

ಎಂಭತ್ತರ ದಶಕದ ನಂತರ ರಚನೆಯಾದ ಮಹಿಳಾಕಾವ್ಯ ಹಲವಾರು ವಿಶೇಷತೆಗಳನ್ನೊಳಗೊಂಡಿದ್ದು ಬಹು ವಿಸ್ತಾರ ಹಾಗೂ ವಿಭಿನ್ನತೆಯಿಂದ ಕೂಡಿದೆ. ಅಲ್ಲದೆ ಈ ಕಾಲಘಟ್ಟದ ಕನ್ನಡ ಮಹಿಳಾ ಸಾಹಿತ್ಯ ಹಿಂದಿನ ಎರಡು ಅವಧಿಗಳಿಗಿಂತ ಭಿನ್ನವಾದ ಹಾಗೂ ವಿಶಿಷ್ಟವಾದ ಹೊರಳುಹಾದಿಯತ್ತ ತಿರುಗಿರುವುದನ್ನು ಈ ಕಾಲಘಟ್ಟದಲ್ಲಿ ಸ್ಪಷ್ಟವಾಗಿ ಗುರುತಿಸಬಹುದು. ಭಾಷೆ, ವಸ್ತು, ಶೈಲಿ ಹಾಗೂ ಅಭಿವ್ಯಕ್ತಿ ಕ್ರಮದಲ್ಲಿ ವೈವಿಧ್ಯತೆಗಳಿದ್ದು, ಭಿನ್ನ ಭಿನ್ನ ಸಮುದಾಯಗಳಿಂದ ಬಂದ ಮಹಿಳೆಯರು ಪ್ರಪ್ರಥಮ ಬಾರಿಗೆ ಸಾಹಿತ್ಯವನ್ನು ತಮ್ಮ ಅಭಿವ್ಯಕ್ತಿ ಮಾಧ್ಯಮವಾಗಿಸಿಕೊಂಡದ್ದು ಈ ಕಾಲಘಟ್ಟದ ವಿಶೇಷ. ಸಾಮಾಜಿಕ ಚಳುವಳಿಗಳು, ನವ್ಯ-ದಲಿತ-ಬಂಡಾಯ ಸಾಹಿತ್ಯ ಚಳುವಳಿಗಳ ಪ್ರಭಾವ, ಆಧುನಿಕತೆಯಿಂದ ಆದ ಬದಲಾವಣೆಗಳು, ಸ್ತ್ರೀಯರಿಗೆ ದೊರೆತ ಉನ್ನತ ಶಿಕ್ಷಣ ಹಾಗೂ ಉದ್ಯೋಗಾವಕಾಶಗಳು, ಎಲ್ಲಕಿಂತ ಮುಖ್ಯವಾಗಿ ಪಾಶ್ಚಾತ್ಯ ದೇಶಗಳಲ್ಲಿ ಹುಟ್ಟಿ, ಜಗತ್ತಿನ ಎಲ್ಲೆಡೆ ಹಬ್ಬಿದ ಸ್ತ್ರೀವಾದಿ ಅಧ್ಯಯನಗಳ ಪ್ರಭಾವ ಈ ಕಾಲಘಟ್ಟದ ಮಹಿಳಾ ಸಾಹಿತ್ಯ ಹಾಗೂ ಮಹಿಳಾ ಸಾಮಾಜಿಕತೆಯ ಮೇಲೆ ಪ್ರಭಾವ ಬೀರಿರುವುದನ್ನು ಗುರುತಿಸಬಹುದು. ಇದರಿಂದಾಗಿ ಈ ಕಾಲಘಟ್ಟದ ಮಹಿಳಾ ಕಾವ್ಯ ಪುರುಷ ಪ್ರಧಾನ ವ್ಯವಸ್ಥೆಗೆ ಮುಖಾಮುಖಿಯಾಗುವ ಸಂದರ್ಭದಲ್ಲಿ ಹತ್ತು ಹಲವು ವಿನ್ಯಾಸಗಳನ್ನು ಪಡೆದುಕೊಂಡು ತನ್ನ ಸ್ವಾಯತ್ತ ನೆಲೆಯನ್ನು ಕಂಡುಕೊಳ್ಳುವ ನಿರಂತರವಾದ ಪ್ರಯತ್ನದಲ್ಲಿ ತೊಡಗಿದೆ.

ಈಗಾಗಲೇ ಗುರುತಿಸಿರುವಂತೆ ಈ ಕಾಲಘಟ್ಟದಲ್ಲಿ ರಚನೆಗೊಂಡ ಮಹಿಳಾಕಾವ್ಯ ಹಲವು ವಿನ್ಯಾಸಗಳಲ್ಲಿ ಪಿತೃ ಪ್ರಭುತ್ವಕ್ಕೆ ಮುಖಾಮುಖಿಯಾಗುವುದರ ಮೂಲಕ ತನ್ನ ಬದುಕಿನ ಸ್ವಾಯತ್ತ ನೆಲೆಯನ್ನು ಕಂಡುಕೊಳ್ಳುವ ಪ್ರಯತ್ನದಲ್ಲಿ ತೊಡಗಿದೆ. ಶಿಕ್ಷಣ ಹಾಗೂ ಆಧುನಿಕ ಜ್ಞಾನದ ಪ್ರಭಾವದಿಂದಾಗಿ ಹಿಂದಿನ ಸ್ವಮರುಕ ಹಾಗೂ ತನ್ನ ಸ್ಥಿತಿಗೆ ಕಾರಣ ಯಾರು? ಎಂಬ ದ್ವಂದ್ವ ಗೊಂದಲಗಳಿಂದ ಹೊರಬಂದು ತನ್ನ ಅಸ್ತಿತ್ವವನ್ನು ಕಂಡುಕೊಳ್ಳುವ, ಕುಟುಂಬ, ಸಮಾಜ ಹಾಗೂ ದಾಂಪತ್ಯ ಬದುಕಿನಲ್ಲಿ ತನ್ನ ಸ್ಥಾನವನ್ನು ಗುರುತಿಸಿಕೊಳ್ಳುವ ಪ್ರಯತ್ನದಲ್ಲಿ ತೊಡಗಿರುವುದನ್ನು ಗುರುತಿಸಬಹುದು. ಆದುದರಿಂದಾಗಿ ಈ ಕಾಲಘಟ್ಟದ ಮಹಿಳಾ ಕಾವ್ಯದಲ್ಲಿ ಹೆಣ್ಣಿಗೆ ತನ್ನತನದ, ತನ್ನ ಶಕ್ತಿಯ ಬಗೆಗೆ ಸಂಪೂರ್ಣ ಅರಿವಿದ್ದು, ತನ್ನ ವ್ಯಕ್ತಿತ್ವವನ್ನು ಕುಟುಂಬ, ದಾಂಪತ್ಯ, ವಿವಾಹ, ಆಧುನಿಕತೆಯಿಂದ ದತ್ತವಾದ ಉದ್ಯೋಗ, ಸಾಮಾಜಿಕ ಚಟುವಟಿಕೆಗಳಲ್ಲಿ ಪಾಲ್ಗೊಳ್ಳುವಿಕೆ ಮುಂತಾದ ವ್ಯವಸ್ಥೆಯ ಸಂಘಟನೆಗಳೊಂದಿಗೆ ಸರಿದೂಗಿಸುವ, ಸಮತೋಲನವನ್ನು ಕಾಯ್ದುಕೊಂಡು ತನ್ನ ವ್ಯಕ್ತಿತ್ವವನ್ನು ನಿರ್ಮಿಸಿಕೊಳ್ಳುವ ಪ್ರಯತ್ನದಲ್ಲಿ ತನ್ನನ್ನು ತಾನು ತೊಡಗಿಸಿಕೊಂಡಿರುವುದು ಕಂಡುಬರುತ್ತದೆ. ಜೊತೆಗೆ ಇಲ್ಲಿ ವ್ಯವಸ್ಥೆಯ ಬಗೆಗೆ ಸಿಟ್ಟಿಗಿಂತ ಮರುಕವಿದೆ. ಮುಂದುವರಿದ ಹಂತದಲ್ಲಿ ಪುರುಷಾಧಿಕಾರದ ಬೆಂಬಲವಿಲ್ಲದೆ ತನ್ನ ಅಸ್ಥಿತ್ವವನ್ನು ಪ್ರತಿಪಾದಿಸುವ, ತನ್ನ ವ್ಯಕ್ತಿತ್ವ, ಶಕ್ತಿ, ಸಾಮರ್ಥ್ಯಗಳನ್ನು ಗುರುತಿಸಿಕೊಳ್ಳುವ, ಅದಕ್ಕಾಗಿ ಮಹಿಳೆ ನಿರಂತರ ಒಂದಲ್ಲಾ ಒಂದು ರೀತಿಯಲ್ಲಿ ತನ್ನನ್ನು ತೊಡಗಿಸಿಕೊಂಡಿರುವ ಪ್ರಯತ್ನಗಳು ಈ ಕಾಲದ ಮಹಿಳಾ ಅಭಿವ್ಯಕ್ತಿಯ ಪ್ರಧಾನ

ಕಾಳಜಿಯಾಗಿದೆ. ಜೊತೆಗೆ ಹೆಣ್ಣಿನ ವ್ಯಕ್ತಿತ್ವದ ಅನಾವರಣಕ್ಕೆ ಅವಶ್ಯಕವಾದ ಧಾತುಗಳೆಲ್ಲ ತಮ್ಮಲ್ಲೇ ಇವೆ ಎಂಬ ದೃಢವಿಶ್ವಾಸ ಇವರ ಕಾವ್ಯದಲ್ಲಿ ಕಂಡುಬರುತ್ತದೆ. ಎಲ್ಲಕ್ಕಿಂತ ಮುಖ್ಯವಾಗಿ ಪುರುಷ ಪ್ರಧಾನ ವ್ಯವಸ್ಥೆಯ ಅನುಕಂಪ, ಅನುರಾಗಗಳ ನಯವಾದ ನಿರಾಕರಣೆಯ ಮೂಲಕ ಗಂಡಿಗೆ ಸಮನಾದ ಚಿಂತನೆ, ಆಲೋಚನೆ, ಶಕ್ತಿ ತನ್ನಲ್ಲೂ ಇದೆ ಎಂಬ ಮನೋಭಾವ ಈ ಕಾಲಘಟ್ಟದ ಕಾವ್ಯದ ವಿಶೇಷ.

ಈ ಕಾಲಘಟ್ಟದಲ್ಲಿ ಗಮನಿಸಬೇಕಾದ ಪ್ರಮುಖ ವಿಶೇಷತೆ ಎಂದರೆ ಆರಂಭದಲ್ಲಿ ರಚನೆಯಾದ ಮಹಿಳಾ ಕಾವ್ಯದಲ್ಲಿ ಗಂಡು ಹೆಣ್ಣಿನ ಸಮಾನತೆಯ ಹಂಬಲ ಅತ್ಯಂತ ತೀವ್ರವಾಗಿದ್ದು, ಗಂಡು, ಗಂಡ, ಗಂಡಿನ ಮನಸ್ಥಿತಿ ಬದಲಾಗಬೇಕೆಂಬ ನಿರೀಕ್ಷೆ ಪ್ರಬಲವಾಗಿದೆ. ಪುರುಷ ಪ್ರಭುತ್ವದ ಶ್ರೇಣೀಕರಣ ಧೋರಣೆ ಬದಲಾಗದ ಹೊರತು ಹೆಣ್ಣಿನ ಸ್ಥಿತಿಯಲ್ಲಿ ಬದಲಾವಣೆ ಸಾಧ್ಯವಿಲ್ಲ ಎಂಬ ಅಂಶ ಕಂಡುಬರುತ್ತದೆ. ಮಾಲತಿ ಪಟ್ಟಣಶೆಟ್ಟಿ, ಶಶಿಕಲಾ ವೀರಯ್ಯ ಸ್ವಾಮಿ, ವಿಜಯಶ್ರೀ ಸಬರದರವರ ಕವನಗಳು ಹಾಗೂ ವಿಜಯಾದಬ್ಬೆ, ಶೈಲಜಾ ಉಡಚಣ, ಸ.ಉಷಾ, ಮುಂತಾದವರ ಆರಂಭದ ಕವನಗಳು ಈ ಬಗೆಯ ನಿರೀಕ್ಷೆಯಿಂದ ಕೂಡಿವೆ. ಆದರೆ ನಂತರದಲ್ಲಿ ಪುರುಷ ಪ್ರಭುತ್ವದ ಅಧಿಕಾರದಾಹಿ ಧೋರಣೆ, ಅದರ ವಿಸ್ತಾರ, ಹರಹು ಹಾಗೂ ಅದನ್ನು ಸುಲಭವಾಗಿ ಬದಲಾಯಿಸಲು ಸಾಧ್ಯವಿಲ್ಲ ಎಂಬ ಅರಿವು ಹೆಣ್ಣು ತನ್ನ ಬದುಕಿನ ಸ್ವಾಯತ್ತ ನೆಲೆಗಳನ್ನು ತಾನೇ ಕಂಡುಕೊಳ್ಳುವ ಆಶಯದ ಕಡೆಗೆ ತಿರುಗಿರುವುದನ್ನು ಮಹಿಳಾ ಕಾವ್ಯ ದಾಖಲಿಸುತ್ತದೆ.

ಎಂಭತ್ತರ ದಶಕದ ನಂತರ ಕಾವ್ಯ ಕೃಷಿಯಲ್ಲಿ ತೊಡಗಿಸಿಕೊಂಡ ಮಹಿಳೆಯರು ಅಸಂಖ್ಯವಾದರೂ ಪ್ರತಿಭಾ ನಂದಕುಮಾರ್, ಸವಿತಾ ನಾಗಭೂಷಣ್, ವೈದೇಹಿ, ಸ.ಉಷಾ ಬಿ.ಟಿ.ಲಲಿತಾನಾಯಕ್, ಎಂ.ಆರ್.ಕಮಲಾ, ಹೆಚ್.ಎಲ್.ಪುಷ್ಪಾ, ಡಿ.ಬಿ.ರಜಿಯಾ, ಕೆ.ಶರೀಫಾ, ಮಮತಾ ಸಾಗರ್, ಮುಂತಾದವರ ಕಾವ್ಯ ಹೆಣ್ಣಿನ ಸ್ವಾಯತ್ತ ನೆಲೆಗಳ ಶೋಧದ ದೃಷ್ಟಿಯಿಂದ ಪ್ರಮುಖವಾದದ್ದು. ನಂತರದ ದಶಕಗಳಲ್ಲಿ ಬರೆಯುತ್ತಿರುವ ಕವಿತಾ ರೈ, ರೂಪಾ ಹಾಸನ, ಜ.ನಾ.ತೇಜಶ್ರೀ, ಅಕ್ಷತಾ ಹುಂಚದಕಟ್ಟೆ ಮುಂತಾದವರ ಕವನಗಳಲ್ಲೂ ಕೂಡ ಹೆಣ್ಣಿನ ಅನನ್ಯತೆಯ ಶೋಧದ ವಿಭಿನ್ನ ಮಾದರಿಗಳನ್ನು ಗುರುತಿಸಬಹುದು.

ಹೆಣ್ಣಿಗೆ ಸಂಬಂಧಿಸಿದಂತೆ ಸ್ವಾಯತ್ತ ಬದುಕಿನ ಆಶಯ ನಿರಂತರವಾದ ಪ್ರಕ್ರಿಯೆಯಾಗಿದ್ದು, ಆರಂಭದ ಹಂತದಲ್ಲಿ ಅದನ್ನು ಸ್ಪಷ್ಟವಾಗಿ ಗುರುತಿಸುವುದು ಕಷ್ಟವಾಗುತ್ತದೆ. ತಿರುಮಲಾಂಬ ಬಯಸುವ 'ಗೃಹವಾದಿನಿ' ಪರಿಕಲ್ಪನೆ ಕೂಡ ಹೆಣ್ಣಿನ ಬದುಕನ್ನು ಸ್ವಾಯತ್ತಗೊಳಿಸುವ ನೆಲೆಯದ್ದೇ ಆಗಿದೆ. ಆದರೆ ಎಂಭತ್ತರ ದಶಕದ ನಂತರ ಉಂಟಾದ ಅರಿವು ಹೆಣ್ಣು ತನ್ನ ಬದುಕನ್ನು ತಾನು 'ರೂಪಿಸಿಕೊಳ್ಳಲು', ತನ್ನ ಆಯ್ಕೆಗಳೇನು, ಬಯಕೆಗಳೇನು ಎಂಬುದನ್ನು ಸ್ವತಂತ್ರವಾಗಿ ಗುರುತಿಸಿಕೊಳ್ಳುವಷ್ಟು ಸಮರ್ಥಳಾದಳು ಎಂಬುದೇ ವಿಶೇಷ. ಹೆಣ್ಣಿನ ಈ ಮನೋಭಾವ ರೂಪುಗಳ್ಳಲು ಪ್ರೇರಕವಾದ ಸಾಮಾಜಿಕ, ಸಾಂಸ್ಕೃತಿಕ ಒತ್ತಡಗಳನ್ನು ಈ ರೀತಿಯಲ್ಲಿ ಗುರುತಿಸಬಹುದು.

**ತಾತ್ವಿಕತೆಯ ಹಿಂದಿನ ಪ್ರೇರಣೆಗಳು :**

೧. ಆಧುನಿಕ ಶಿಕ್ಷಣ ಹಾಗೂ ಉದ್ಯೋಗಾವಕಾಶದಿಂದ ದೊರೆತ ಆರ್ಥಿಕ ಸ್ವಾವಲಂಬನೆ ಹಾಗೂ ಆತ್ಮವಿಶ್ವಾಸ ಹೆಣ್ಣಿಗೆ ತನ್ನ ಜೀವನವನ್ನು ತನ್ನ ಆಯ್ಕೆಯಂತೆ ರೂಪಿಸಿಕೊಳ್ಳುವ ಹೊಸ ಭರವಸೆಯನ್ನು ನೀಡಿತು. ಇದರಿಂದಾಗಿ ಈ ಕಾಲಘಟ್ಟದ ಮಹಿಳಾ ಕಾವ್ಯದಲ್ಲಿ ತನ್ನ ಬದುಕಿನ ಸ್ವಾಯತ್ತ ನೆಲೆಗಳ ಶೋಧವೇ ಪ್ರಧಾನವಾಗಿ ಕಂಡುಬರುತ್ತದೆ.

೨. ಗಂಡಿನ ಜೊತೆಗೂಡಿ ತನ್ನ ಬದುಕನ್ನು ಪರಿಪೂರ್ಣಗೊಳಿಸಿಕೊಳ್ಳುತ್ತೇನೆಂಬ ಹೆಣ್ಣಿನ ಹಂಬಲ ಹಾಗೂ ಗಂಡನ್ನು ಬದಲಾಯಿಸುವ ಬಯಕೆ ಕೇವಲ ಭ್ರಮೆ ಎಂಬ ಅರಿವು ಹೆಣ್ಣು ತನ್ನ ಬದುಕನ್ನು ಬೇರೆ ರೀತಿಯಲ್ಲಿ ಕಾಣಲು ಸಾಧ್ಯವಾಯಿತು. ಪುರುಷ ಪ್ರಭುತ್ವದ ಓಲೈಕೆಗಾಗಿ ಕಾಯುವ ಬದಲು ತನ್ನ ಬದುಕನ್ನು ತಾನೆ ಕಟ್ಟಿಕೊಳ್ಳುವುದು ಮೇಲು ಎಂಬ ಚಿಂತನೆಯ ಕಾರಣದಿಂದಾಗಿ ಈ ಕಾಲಘಟ್ಟದ ಮಹಿಳಾ ಕಾವ್ಯದಲ್ಲಿ ಸ್ವಾಯತ್ತ ಬದುಕನ್ನು ತಾನೇ ಕಟ್ಟಿಕೊಳ್ಳುವ, ಪ್ರತಿ ಕೆಲಸದಲ್ಲಿಯೂ ತನ್ನ ವಿಶಿಷ್ಟತೆಯನ್ನು ಮೆರೆಯುವ ವಿಧಾನ ಕಂಡುಬರುತ್ತದೆ.

೩. ಸಮುದಾಯದ ಸಂರಚನೆಯಲ್ಲಿಯೇ ಲಿಂಗ ಶ್ರೇಣೀಕರಣದ ನೆಲೆಗಳು ಅಡಕವಾಗಿರುವುದರಿಂದ ಅದನ್ನು ಬದಲಾಯಿಸುವುದು ಸುಲಭವಲ್ಲ. ಹಾಗೂ ಪ್ರಭುತ್ವ, ಅಧಿಕಾರವನ್ನು ತನ್ನ ಹಿಡಿತದಿಂದ ಬಿಟ್ಟುಕೊಡಲು ಪುರುಷಶಾಹಿ ಸಿದ್ಧರಿಲ್ಲ ಎಂಬ ವಾಸ್ತವದ ಅರಿವು ಕೂಡ ಮಹಿಳಾ ಕಾವ್ಯ ಹೊಸ ದಿಕ್ಕಿನತ್ತ ನೋಡಲು ಪ್ರೇರೇಪಿಸಿತು.

೪. ಪುರುಷ ಪ್ರಭುತ್ವ ಹೊಸ ಹೊಸ ಅವಕಾಶಗಳ ಮೂಲಕ ಹೆಣ್ಣನ್ನು ನಿಯಂತ್ರಿಸಲು ಪ್ರಯತ್ನಿಸುತ್ತಿದ್ದರೆ, ಹೆಣ್ಣು ಈ ಅವಕಾಶಗಳನ್ನು ತನ್ನ ಬದುಕಿನ ಸ್ವಯಂಪೂರ್ಣತೆಗೆ ಸಹಕಾರಿಯಾಗುವಂತೆ ಬಳಸಿಕೊಳ್ಳುತ್ತಿರುವುದೂ ಕೂಡ ಮಹಿಳಾ ಕಾವ್ಯಕ್ಕೆ ಪ್ರೇರೇಪಣೆಯನ್ನು ನೀಡಿದೆ.

ಈ ಹಿನ್ನೆಲೆಯಲ್ಲಿ ರೂಪುಗೊಂಡ ಹೆಣ್ಣಿನ ಸ್ವಾಯತ್ತ ಬದುಕಿನ ಆಶಯಗಳು ಪುರುಷ ಹಿತಾಸಕ್ತಿಗಳನ್ನು ತನ್ನ ಸ್ವಹಿತಾಸಕ್ತಿಗಳಾಗಿ ಮಾರ್ಪಡಿಸಿಕೊಳ್ಳುವ, ಕುಟುಂಬದ ಪ್ರತಿ ಕಾರ್ಯದಲ್ಲಿಯೂ ತನ್ನ ಸ್ವಂತಿಕೆಯನ್ನು ಮೆರೆಯುವ, ತನ್ನ ಆಯ್ಕೆಯ ಬದುಕನ್ನು ರೂಪಿಸಿಕೊಳ್ಳುವ ಹೆಣ್ಣಿನ ಅಂತಶಕ್ತಿ ಮಹಿಳಾ ಕಾವ್ಯದಲ್ಲಿ ಧ್ವನಿಪೂರ್ಣವಾಗಿ ಅಭಿವ್ಯಕ್ತಗೊಂಡಿದೆ.

ಇದುವರೆಗೂ ಪುರುಷ ಪ್ರಧಾನ ವ್ಯವಸ್ಥೆ ಹೆಣ್ಣನ್ನು ನಿಯಂತ್ರಿಸುವ ಸಾಧನಗಳಾಗಿ, ಅವಳ ಮಿತಿಗಳಾಗಿ ಯಾವುದನ್ನು ಗುರುತಿಸಿತ್ತೊ ಅದೇ ಅಂಶಗಳ ಮೂಲಕವೇ ಹೆಣ್ಣು ತನ್ನ ಅಸ್ಮಿತೆಯನ್ನು ಕಂಡುಕೊಳ್ಳುವ, ಸ್ವ ಅಸ್ತಿತ್ವವನ್ನು ರೂಪಿಸಿಕೊಳ್ಳುವ ಕ್ರಿಯೆಯಲ್ಲಿ ತೊಡಗಿರುವುದನ್ನು ಮೂರನೇ ಘಟ್ಟದ ಮಹಿಳಾ ಕಾವ್ಯ ದಾಖಲಿಸುತ್ತದೆ. ಅಡುಗೆ ಮನೆ, ಗೃಹಿಣಿತ್ವ, ತಾಯ್ತನ ಮುಂತಾದ ಮೌಲ್ಯಗಳನ್ನು ಹೇರುವ ಮೂಲಕ ಹೆಣ್ಣನ್ನು ಕೇವಲ ಗೃಹ ನಿರ್ವಹಣೆಗೆ ಸೀಮಿತಗೊಳಿಸಲಾಗಿತ್ತು. ಆದರೆ ಇವುಗಳ ಮೂಲಕವೇ ಹೆಣ್ಣು ತನ್ನ ಸ್ವಾಯತ್ತ ನೆಲೆಗಳನ್ನು ಗುರುತಿಸಿಕೊಳ್ಳುವುದನ್ನು ಮಹಿಳಾ ಕಾವ್ಯ ಅತ್ಯಂತ ಯಶಸ್ವಿಯಾಗಿ ದಾಖಲಿಸುತ್ತದೆ. ಅಡುಗೆ ಮನೆಯ ರೂಪಕ ಮಹಿಳಾ ಕಾವ್ಯದಲ್ಲಿ

ಮತ್ತೆ ಮತ್ತೆ ಚರ್ಚಿತವಾಗುವುದರ ಮೂಲಕ ಮಹಿಳಾ ಬದುಕಿನ ಸ್ವಾಯತ್ತ ನೆಲೆಗಳನ್ನು ಕಟ್ಟಿಕೊಳ್ಳುವಲ್ಲಿ ಇವುಗಳ ಮಹತ್ವ, ಗಂಡಿಗಿಂತ ಹೆಣ್ಣಿನ ಅಭಿವ್ಯಕ್ತಿ ಭಿನ್ನತೆಗೆ ಕಾರಣ ಏನು ಎಂಬುದನ್ನು ತಿಳಿಸಲು ಪ್ರಯತ್ನಿಸುತ್ತವೆ. ಏಕೆಂದರೆ ಇದುವರೆಗಿನ ಆಲೋಚನೆಗಳು ಅಡುಗೆಮನೆಯನ್ನು ಹೆಣ್ಣಿನ ಬಂಧನದ ಕ್ಷೇತ್ರವೆಂದೇ ಗುರುತಿಸಿದ್ದವು. ಅಂತಹ ಸಂದರ್ಭದಲ್ಲಿ ಅಡುಗೆ ಮನೆಯ ಮೂಲಕ ಹೆಣ್ಣಿನ ಜೀವನದಲ್ಲಿ ಏನೆಲ್ಲಾ ಹೊಸ ಹೊಸ ಸಾಧ್ಯತೆಗಳು ಸಾಧ್ಯ ಎಂಬುದನ್ನು ಈ ಕಾಲಘಟ್ಟದ ಮಹಿಳಾ ಕಾವ್ಯ ದಾಖಲಿಸುತ್ತದೆ. ವೈದೇಹಿಯವರ **ಅಡುಗೆ ಮನೆಯ ಹುಡುಗಿಗೆ** ತನ್ನ ಕನಸುಗಳನ್ನು ಕಟ್ಟಲು ಸಾಧ್ಯವಾಗುವುದೂ ಕೂಡ **ಕಿಟಕಿ,** ಬಾಗಿಲುಗಳಿಲ್ಲದ, ಹೊಗೆನಳಿಕೆಯೂ ಇಲ್ಲದ ಅಡುಗೆಮನೆಯಲ್ಲಿಯೇ ಎಂಬುದು ವಿಶೇಷ. ಕವಿತಾ ರೈ ಅವರ **ಅಡುಗೆ ಮನೆಯ ಆಧ್ಯಾತ್ಮ,** ಪ್ರತಿಭಾ ನಂದಕುಮಾರ್ ಅವರ **ಅಡುಗೆ ಮಾಡುತ್ತಿದ್ದೇನೆ – ೧, ಅಡಗೆ ಮಾಡುತ್ತಿದ್ದೇನೆ – ೨** ವೈದೇಹಿಯ **ತಿಳಿದವರೆ ಹೇಳಿ,** ಲಲಿತಾ ಸಿದ್ಧಬಸವಯ್ಯ ಅವರ **ಲವಾ ಜಮೆ** ಮುಂತಾದ ಕವನಗಳು ಅಡುಗೆ ಮಾಡುವುದರ ಮೂಲಕ ವ್ಯವಸ್ಥೆಗೆ ಮುಖಾಮುಖಿಯಾಗುವ, ತನ್ನೆಲ್ಲಾ ಕೋಪ, ತಾಪ, ಆಲೋಚನೆ, ಅಭಿರುಚಿಗಳನ್ನು ಹೊರಹಾಕುವ, ತನ್ನ ಅನುಭವಗಳಿಗೊಂದು ವಿಶೇಷ ಮಹತ್ವವನ್ನು ತಂದುಕೊಡುವ ವಿಧಾನವೇ ಆಗಿದೆ.

> ಅಡುಗೆ ಮಾಡುವುದೆಂದರೆ ಬಹಳ ಇಷ್ಟ ನನಗೆ
> ಹೊರ ದಾರಿ ಅದು ನನ್ನೆಲ್ಲ ಆಕ್ರೋಶಗಳಿಗೆ
> ತೊಳೆದು ಸಿಪ್ಪೆ ಸುಲಿದು ಕತ್ತರಿಸಿ ಜಜ್ಜಿ ಕುಟ್ಟಿ
> ಹುರಿದು ಅರೆದು ರುಬ್ಬಿ ನುರಿದು ಬಾಡಿಸಿ
> ಬೇಯಿಸಿ ಹಿಚಿಕಿ ಮಸೆದು ಕೊಟ್ಟಿ ಕಲೆಸಿ
> ಗಸಗಸನೆ ಕಡೆದು ಎತ್ತಿ ಹಾಕಿದರೆ ತಟ್ಟೆಗೆ
> ರುಚಿರುಚಿ ಅಂತ ತಿನ್ನುತ್ತಾರೆ! [೬೭]

ಇಲ್ಲಿ ಲೇಖಕಿಗೆ ಅಡುಗೆಮಾಡುವುದು ಅವಳೆಲ್ಲಾ ಆಕ್ರೋಶಗಳ ಹೊರದಾರಿಯೂ ಹೌದು, ಅವಳು ತನ್ನ ಸ್ವಂತಿಕೆಯನ್ನು ಮೆರೆಯುವ ವಿಶಿಷ್ಟತೆಯೂ ಹೌದು. ವೈದೇಹಿಯವರ **'ತಿಳಿದವರೇ ಹೇಳಿ'** ಕವನ ತಿಳಿಸಾರಿನ ರೂಪಕದ ಮೂಲಕ ಮಹಿಳಾ ಅಸ್ಮಿತೆಯನ್ನು ಕಟ್ಟಿಕೊಡಲು ಪ್ರಯತ್ನಿಸುತ್ತದೆ. ಇಲ್ಲಿ ಅಡುಗೆ, ಅಡುಗೆ ಮನೆ, ತಿಳಿಸಾರು, ಕಾವ್ಯ ಎಲ್ಲ ಒಂದರೊಡನೊಂದು ಸಾವಯವ ಸಂಬಂಧವನ್ನು ಹೊಂದಿದ್ದು ತಾಳಿಕೆ ಹಾಗೂ ಬಾಳಿಕೆಯ ದೃಷ್ಟಿಯಿಂದ ಇವೆಲ್ಲವೂ ಅತ್ಯಂತ ಅನಿವಾರ್ಯವೂ, ಅಗತ್ಯವೂ, ಮೌಲ್ಯಯುತವಾದವೂ ಆಗಿವೆ. ತಿಳಿದವರೇ ಹೇಳಿ ಕಾವ್ಯ ಗೊತ್ತಿಲ್ಲ ನನಗೆ ಎನ್ನುವಾಗಿನ ಒಳಧ್ವನಿ ಕಾವ್ಯದ ಬಗೆಗೆ ತಿಳಿಯಬೇಕಾದ ಅಗತ್ಯತೆಯಾಗಲೀ, ಅನಿವಾರ್ಯತೆಯಾಗಲೀ ತನಗಿಲ್ಲ ಎಂಬ ಆತ್ಮವಿಶ್ವಾಸದೊಂದಿಗೆ ತಿಳಿಸಾರಿನ ಮೂಲಕವೇ ತನ್ನ ಅಸ್ತಿತ್ವದ ಅಧಿಕೃತತೆಯನ್ನೂ, ಅದಕ್ಕೆ ಸಾಟಿಯಾಗಲಾರದ ಗಂಡಿನ ಅನುಭವವನ್ನು ಒಟ್ಟಿಗೆ ಹಿಡಿದಿಡುತ್ತದೆ. ಒಟ್ಟಾರೆ ತಿಳಿಸಾರಿನ ರೂಪಕದ ಮೂಲಕ ಹೆಣ್ಣು ತಾನು ಮಾಡುವ ಪ್ರತಿ ಕೆಲಸದಲ್ಲಿಯೂ ತನ್ನ ಬದುಕಿನ ವಿಶೇಷತೆಯನ್ನೂ, ಅನನ್ಯತೆಯ ನೆಲೆಗಳನ್ನೂ ಕಂಡು ಕೊಳ್ಳಲು ಸಾಧ್ಯ ಎಂಬುದನ್ನು ಈ ಕವನ ಪ್ರಸ್ತುತಪಡಿಸುತ್ತದೆ. ಮುಂದುವರೆದು

ತಿಳಿಸಾರು ಎಂದರೆ ಏನೆಂದುಕೊಂಡಿರಿ?
ಅದಕ್ಕೂ ಬೇಕು ಒಳಗೊಂದು
ಜಲತತ್ವ – ಗಂಧತತ್ವ –
ಕುದಿದು ಹದಗೊಂಡ ಸಾರತತ್ವ . . .
ಕಾವ್ಯದ ಬಗ್ಗೆ ದೊಡ್ಡಕ್ಕೆ ತಿಳಿದವರೇ
ಹೇಳಿ. ಗೊತ್ತೇ ತಿಳಿಸಾರು ನಿಮಗೆ?
ಕ್ಷಮಿಸಿ, ಗೊತ್ತಿಲ್ಲ ಕಾವ್ಯ ನನಗೆ. [೭೮]

ಎನ್ನುವ ಮೂಲಕ ಅಡುಗೆ ಮಾಡುವುದೂ ಕೂಡ ಒಂದು ವಿಶಿಷ್ಟ ಕಲೆ, ಅದಕ್ಕೂ ಒಂದು ಜಲತತ್ವ, ಗಂಧತತ್ವ, ಸಾರತತ್ವದ ಅರಿವಿನ ಅವಶ್ಯಕತೆ ಇದೆ ಎಂಬುದನ್ನು ತಿಳಿಸುತ್ತದೆ. ಜೊತೆಗೆ ಹೆಣ್ಣಿನ ಪ್ರತಿ ಕ್ರಿಯೆಯೂ ಕೂಡ ಕಾವ್ಯವಾಗುವ, ಸಹಜ ಲಯದಲ್ಲಿ ಹೊರಹೊಮ್ಮುವ ಮಹಿಳಾ ಕಾವ್ಯದ ವಿಶೇಷತೆಯನ್ನೂ ಕೂಡ ಎತ್ತಿಹಿಡಿಯುತ್ತದೆ. ವ್ಯಂಗ್ಯ, ವಿಡಂಬನೆಯ ಜೊತೆಗೆ ತನ್ನ ಕಾರ್ಯದ ಬಗೆಗೆ ಅಪ್ರತಿಮ ಪ್ರೀತಿ, ಆತ್ಮವಿಶ್ವಾಸ ವ್ಯಕ್ತಗೊಂಡಿದೆ. ಪ್ರತಿಭಾ ನಂದಕುಮಾರ್ ಕೂಡ 'ಹೆಣ್ಣಿನ ಜೀವನವೇ ಸಹಜ ಲಯಗಳ ಕಾವ್ಯ' ಎಂಬುದನ್ನು ತಮ್ಮ ಕವನಗಳ ಮೂಲಕ ಸ್ಪಷ್ಟಪಡಿಸುತ್ತಾರೆ.

ಕವಿಗೋಷ್ಠಿಗೊಂದು ಹೊಸ ಕವನ ಬರೆಯಲು
ನಿರ್ಧರಿಸಿ ಮನದೊಳಗೆ ತಡಕಾಡುತ್ತಿದ್ದಾಗ
ಮನೆತುಂಬ ಕವನಗಳು ಇಟ್ಟಾಡುತ್ತಿದ್ದವು. [೭೯]

ಮುಂದುವರಿದು ಅಡುಗೆ ಮನೆ, ಚಪಾತಿ ಮಣೆ, ಮನೆಯ ಸಂದುಗೊಂದುಗಳಲ್ಲಿ, ಹಜಾರ ಕುರ್ಚಿ, ಟೇಬಲ್, ಮೇಜುಗಳ ಮೇಲೆಲ್ಲಾ ಕವನಗಳದ್ದೇ ಕಾರುಬಾರು ಎನ್ನುವ ಪ್ರತಿಭಾ ತನ್ನ ನಿತ್ಯದ ಕೆಲಸಗಳೇ ಕವನಗಳಾಗಿ ಮಾರ್ಪಡುವ ವಿಧಾನವನ್ನು ಕಟ್ಟಿಕೊಡುತ್ತಾರೆ. ವೈದೇಹಿಯವರ 'ಹಾಡುವುದೆಂದರೆ' ಕವನ ಮಹಿಳಾ ಕಾವ್ಯದ ವಿಶೇಷತೆಯನ್ನು ಮತ್ತಷ್ಟು ಸ್ಪಷ್ಟಪಡಿಸುತ್ತದೆ.

ಹಾಡಿಗೆಲ್ಲದೆ ಕೊರತೆ ನಮಗೆ ನಾರಿಯರಿಗೆ
ಬೀಸಿ ತೂಗಲು, ಪುಟ್ಟ ಕೂಸುಮರಿಯ ತೊದಲು
ನುಡಿಯೊಂದೆ ಸಾಲದೆ, ಕಡೆವಾಯಿ ನಗೆಯೊಂದೆ ಸಾಲದೆ
ಹಾಡು ಹೊಮ್ಮುವ ಸಣ್ಣ ಉದಾಹರಣೆಗೆ? [೮೦]

ಈ ಮೂಲಕ ಮಹಿಳಾ ಸಾಹಿತ್ಯವನ್ನು ಕುರಿತ ಪುರುಷ ನಿಷ್ಠ ಆಲೋಚನಾ ಕ್ರಮ ಹಾಗೂ ಧೋರಣೆಗಳನ್ನು ಸಾರಾಸಗಟಾಗಿ ತಳ್ಳಿಹಾಕಿ ಸಾಹಿತ್ಯ ಕ್ಷೇತ್ರದಲ್ಲಿ ಹೆಣ್ಣು ತನ್ನ ನೆಲೆಯನ್ನು ಕಂಡುಕೊಳ್ಳುವ, ಮಹಿಳಾ ಸಾಹಿತ್ಯದ ಸ್ವಾಯತ್ತತೆಯನ್ನು ಬಿಂಬಿಸುವ ನೆಲೆಗಳನ್ನು ಅನಾವರಣಗೊಳಿಸುತ್ತಾರೆ.

ತಾಯ್ತನ, ಮಕ್ಕಳ ಲಾಲನೆ, ಪಾಲನೆ ಇವುಗಳನ್ನೂ ಕೂಡ ಹೆಣ್ಣಿನ ಮಿತಿಗಳೆಂದೇ ಕರೆಯುತ್ತಿದ್ದ ಸಂದರ್ಭದಲ್ಲಿ ತಾಯ್ತನವನ್ನು ಸಂಭ್ರಮಿಸುವ ಮೂಲಕ, ಅದು ಹೆಣ್ಣು ಮಾತ್ರವೇ ಪಡೆಯಬಹುದಾದ ವಿಶೇಷಾನುಭವ ಎಂದು ಗುರುತಿಸುವುದರ ಮೂಲಕ ತಾಯ್ತನವನ್ನು ಹೆಣ್ಣಿನ ಶಕ್ತಿ ಎಂದೇ ಈ ಕಾಲಘಟ್ಟದ ಲೇಖಕಿಯರು ಗುರುತಿಸುತ್ತಾರೆ. ಈ ಮೂಲಕ ಹೆಣ್ಣಿನ ಮೇಲೆ ಹೇರಲಾಗಿದ್ದ ಜೈವಿಕ ಮಿತಿಯೇ ಅವಳ ಸಾಮಾಜಿಕ, ಸಾಂಸ್ಕೃತಿಕ ಮಿತಿ ಎಂಬ ಅಂಶವನ್ನು ಅಲ್ಲಗಳೆದು ತಾಯ್ತನವನ್ನು

ತನ್ನ ಬದುಕಿನ 'ಸ್ವಾಯತ್ತ ನೆಲೆ' ಎಂದೇ ಗುರುತಿಸುವ ವಿಧಾನ ಮಹಿಳಾ ಕಾವ್ಯದಲ್ಲಿ ಮುಖ್ಯವಾಗಿ ಕಂಡುಬರುತ್ತದೆ. ತಾಯಿ, ತಾಯ್ತನದ ಶಕ್ತಿ, ಅವಳ ಸಹನೆ, ಅನುಕಂಪ, ಕರುಣೆ ಮುಂತಾದ ಗುಣಗಳನ್ನು ಅವಳ ಶಕ್ತಿಕೇಂದ್ರಗಳೆಂದು ಗುರುತಿಸಲಾಗುತ್ತಿದೆ. ತಾಯಿ ಹೆಣ್ಣಿನ ಶಕ್ತಿಯ, ಪುರುಷ ಪ್ರಭುತ್ವದ ಎಲ್ಲಾ ಹುನ್ನಾರಗಳನ್ನೂ ಮೆಟ್ಟಿನಿಲ್ಲುವ ಪ್ರತಿಮೆಯಾಗಿ ಮಹಿಳಾ ಕಾವ್ಯದಲ್ಲಿ ಕಂಡುಬರುತ್ತಾಳೆ.

ಪೀಚು ದೇಹ, ಎಲುಬು ಕಾಣುವ ಕೈ,
ಕಣ್ಣ ಕೆಳಗೆ ಹರಡಿದ ಕಪ್ಪು
ಒಳಗೆ ಹೊರೆ ಹೊರೆ ದುಃಖ
ಹೊತ್ತ ಎದೆ ಭಾರ
ಹೊರಲಾರದ ಚಿಂತೆ ಮನಸ್ಸಿಗೆ
ಮೇಲೊಂದು ಮುಗುಳ್ನಗೆ.[೨೧]

ನನ್ನಮ್ಮ ಹೆಣೆದ ಕನಸುಗಳನ್ನು ಒಟ್ಟಾಗಿ ಕಟ್ಟಿದಲ್ಲಿ
ನೆಲವೆಲ್ಲ ಆವರಿಸಿ ಮುಗಿಸು ಹೊದಿಸಬಹುದು
ನನಸಾದ ಕನಸುಗಳು ಮಾತ್ರ ಅಡಿಗೆಮನೆ ತುಂಬುವಷ್ಟು,
ಇಲ್ಲ ಮನೆಯಂಗಳ ಮುಚ್ಚುವಷ್ಟು.. . . .
ಬಿಳಿಕೂದಲ ಪುಟ್ಟ ಗಂಟಿಗೂ
ಏಳು ಸುತ್ತಿನ ಮಲ್ಲಿಗೆ ಮುಡಿವ
ಕನಸಿನರಮನೆಯ ರಾಜಕುಮಾರಿಯ
ಕಣ್ಣಲ್ಲಿ ಎಂದಿಗೂ ಹನಿ ತುಂಬಿರಲಿಲ್ಲ.
ನಗೆ ಮಾಸಿರಲಿಲ್ಲ . . . . . . .
ನಗುವುದ ಮರೆಯದೆ ಮಾತ್ರೆ ಮುಲಾಮುಗಳ
ಜೊತೆಗೆ ತನ್ನ ಸೀರೆಯ ಕಂಪು ಹಸಿರು ವಿನ್ಯಾಸ ಮೆಚ್ಚುತ್ತ
ಮಾಗದ ಕಾಲ ಗಾಯದ ನೋವಿನಲ್ಲಿ
ಜೀವನೋತ್ಸಾಹಕ್ಕೆ ಎಳ್ಳಷ್ಟು ಕಂದಿಲ್ಲದೆ
ಜವರಾಯನ ಹಾಸ್ಯ ಮಾಡುತ್ತ
ಏನೊಂದೂ ತಕರಾರಿದಲ್ಲದೆ ಮಿನುಗುತ್ತಿದ್ದಾಳೆ
ನನ್ನಂತರಂಗ ತೆರೆದಿದ್ದಾಳೆ.[೨೨]

ಈ ಇಬ್ಬರೂ ಲೇಖಕಿಯರು ತಾಯಿಯ, ತಾಯ್ತನದ ವಿಶೇಷತೆಯನ್ನು ಅವಳ ನೋವನ್ನು ನುಂಗಿ ನಗುವ ಶಕ್ತಿಯಿಂದಲೇ ಗುರುತಿಸುತ್ತಾರೆ. ಇಲ್ಲಿ ತಾಯಿಯ ಎಲ್ಲಾ ನೋವನ್ನೂ ತಡೆಯಬಲ್ಲ ಗುಣ ಅವಳ ಅಸಹಾಯಕತೆಯಲ್ಲ, ಬದಲಾಗಿ ಅವಳಲ್ಲಿ ಮಾತ್ರ ಕಂಡುಬರುವ, ಯಾರಿಂದಲೂ ಅದನ್ನು ತಡೆಹಿಡಿಯಲಾರದ ಅಂತರ್ಗತ ಸಾಮರ್ಥ್ಯ. ಶಶಿಕಲಾ ವೀರಯ್ಯಸ್ವಾಮಿ, ಸವಿತಾ ನಾಗಭೂಷಣ್ ಮುಂತಾದವರ ಕವನಗಳೂ ಕೂಡ ತಾಯಿಯ ಶಕ್ತಿಯನ್ನು ಅವಳ ಬದುಕಿನ ಸ್ವಾಯತ್ತ ನೆಲೆ ಎಂದೇ ಹಿಡಿದಿಡುತ್ತವೆ. ತಾಯ್ತನದ ಜೊತೆಗೆ ಮಕ್ಕಳನ್ನು ತನ್ನ ಅಸ್ತಿತ್ವದ ಕುರುಹುಗಳಾಗಿ, ತನ್ನೆಲ್ಲಾ ಕನಸುಗಳ ಸಾಕಾರ ರೂಪವಾಗಿ ಗುರುತಿಸುವುದು ಮಹಿಳಾ ಕಾವ್ಯದ ಮತ್ತೊಂದು ವಿಶೇಷತೆ. ತಾಯಿ, ತಾನು, ಮಗಳು ಈ ಮೂರೂ ಚಿತ್ರಣಗಳು ಒಂದರೊಡನೊಂದು ಸೇರಿ ಹೆಣ್ಣಿನ ಅಸ್ಮಿತೆಯನ್ನು ಕಟ್ಟಿಕೊಡುವಲ್ಲಿ ಸಹಾಯಕವಾಗಿವೆ. ಪ್ರತಿಭಾ ನಂದಕುಮಾರ್ ರವರ

ಮಗು ೧, ಮಗು ೨, ವೈದೇಹಿಯವರ ಜೋಗೀತೆ, ಸವಿತಾನಾಗಭೂಷಣ್ ರವರ ತಂಗಿ ಹುಟ್ಟಿದಳು, ಮುಂತಾದ ಕವನಗಳು ಈ ಹಿನ್ನೆಲೆಯಲ್ಲಿ ಅತ್ಯಂತ ಪ್ರಮುಖವಾದವುಗಳಾಗಿವೆ.

'ಸ್ವಶೋಧದ' ನೆಲೆಯಿಂದಲೇ ಆರಂಭವಾಗುವ ಮೂರನೇ ಘಟ್ಟದ ಮಹಿಳಾ ಕಾವ್ಯ ನಗರೀಕರಣ, ಜಾಗತೀಕರಣ, ಆಧುನೀಕರಣದ ಸಂದರ್ಭದಲ್ಲಿಯೂ ಹೆಣ್ಣು ಪದೇ ಪದೇ ಶೋಷಣೆಗೆ ಒಳಗಾಗುತ್ತಿರುವಲ್ಲಿ ತನ್ನ ಪಾಲೆಷ್ಟು, ವ್ಯವಸ್ಥೆಯ ಪಾಲೆಷ್ಟು ಎಂಬುದನ್ನು ಮರು ಚಿಂತನೆಗೆ ಒಳಪಡಿಸುತ್ತದೆ. ಪ್ರತಿಭಾ ನಂದಕುಮಾರ್‌ರವರ ಬಹುತೇಕ ಕವನಗಳು 'ತನ್ನೊಳಗಿನ ಹಿಡಿತದಿಂದ ಹೊರಬರದ ಹೊರತು, ಹೊರಗಿನ ಹಿಡಿತದಿಂದ ಬಿಡುಗಡೆ ಸಾಧ್ಯವಿಲ್ಲ' ಎಂಬುದನ್ನು ಮುಖ್ಯವಾಗಿ ಚರ್ಚಿಸುತ್ತವೆ. ಅದು ಸ್ತ್ರೀತ್ವದ ಸ್ವೀಕಾರದ ಸಂದರ್ಭವಿರಬಹುದು ಅಥವಾ ವ್ಯವಸ್ಥೆಯೊಂದಿಗಿನ ಮುಖಾಮುಖಿಯ ಸಂದರ್ಭವಿರಬಹುದು. ಎಲ್ಲ ಹಂತದಲ್ಲಿಯೂ ಸ್ವಶೋಧದ ಮೂಲಕವೇ ಸಾಮಾಜಿಕ ವಾಸ್ತವಕ್ಕೆ ಎದುರಾಗುವುದನ್ನು ಈ ಕಾಲಘಟ್ಟದ ಮುಖ್ಯ ಬರಹಗಾರ್ತಿಯರ ಕವನಗಳಲ್ಲಿ ಗುರುತಿಸಬಹುದು. ಜೊತೆಗೆ ಸ್ವಘನತೆ, ಸ್ವಗೌರವ, 'ಸ್ವ'ದ ಬಗೆಗಿನ ಚಿಂತನೆ ಈ ಕಾಲಘಟ್ಟದ ಲೇಖಕಿಯರ ಪ್ರಮುಖ ಕಾಳಜಿಯಾಗಿದೆ.

ಕೇಳ ಕೇಳ ಸೋದರಿಯರೇ
ನಮ್ಮ ಕಣ್ಣಪಟ್ಟಿ ನಾವೇ ಬಿಚ್ಚಬೇಕಿದೆ
ಕೇಳ ಕೇಳ ಮಾನಿನಿಯರೇ
ನಮ್ಮ ಕೈಯ್ಯ ಬೇಡಿ ನಾವೆ ಕಳಚಬೇಕಿದೆ
ತುಳತದಲ್ಲಿ ಸಿಲುಕಿ ನಾವು
ಹಲವು ತೆರದಿ, ಬವಣೆಯನ್ನು ಪಡುತಲಿರಲು
ಕಷ್ಟನಷ್ಟ ಹೀನತನವು
ನಮ್ಮ ಮುತ್ತಿ ಕಾಡುತಿರಲು
ನಮ್ಮ ಸಲುಹಲಿಕ್ಕೆ ಬೇರೆ
ಯಾರು ಬರರು ಕೇಳ ನಿಜದಿ
. . . . . . . . . . . . . . . .
ಶೋಷಣೆಯ ಮೂಲ ರೂಪ ತಿಳಿಯ ಬೇಕೆಲೆ [೮೩]

ಎನ್ನುವ ಬಿ.ಟಿ.ಲಲಿತಾನಾಯಕ್‌ರವರ ಕವನ ಕೂಡ ತನ್ನ ತನದ ಬಗೆಗಿನ, ತನ್ನ ಸ್ಥಿತಿಯ ಬಗೆಗಿನ ಸಂಪೂರ್ಣ ಅರಿವು ಹೆಣ್ಣಿಗೆ ಅವಶ್ಯಕ ಎಂಬುದನ್ನು ಚರ್ಚಿಸುವುದರೊಂದಿಗೆ ಹೆಣ್ಣಿನ ವೈಯಕ್ತಿಕ ಸಮಸ್ಯೆಗಳೊಂದಿಗೆ ಅದರ ಸಾಮಾಜಿಕವಾದ ಭಿತ್ತಿಯನ್ನು ಕಟ್ಟಿಕೊಡಲು ಪ್ರಯತ್ನಿಸುತ್ತವೆ. ಪುರುಷ ಪ್ರಧಾನ ವ್ಯವಸ್ಥೆಯಿಂದ ದಮನಕ್ಕೆ, ಶೋಷಣೆಗೆ ಒಳಗಾಗುತ್ತಿರುವವಳು ತಾನೊಬ್ಬಳೇ ಅಲ್ಲ. ಎಲ್ಲಾ ಸ್ತರದ ಹೆಣ್ಣಿನ ಬದುಕೂ ಕೂಡ ಅಧೀನತೆಗೆ ಒಳಪಟ್ಟಿದೆ ಎಂಬುದನ್ನು ಹೊರಗೆಳೆಯಲು ಪ್ರಯತ್ನಿಸುತ್ತದೆ. ಈ ಶೋಷಣೆಯ ಸ್ವರೂಪ ಕಾಲದಿಂದ ಕಾಲಕ್ಕೆ, ಸಮುದಾಯದಿಂದ ಸಮುದಾಯಕ್ಕೆ ಹೇಗೆ ಭಿನ್ನವಾಗಿದೆ ಎಂಬುದನ್ನು ಗುರುತಿಸುವ ಮೂಲಕವೇ ಅದರಿಂದ ಬಿಡುಗಡೆ ಪಡೆಯುವ ಹಾದಿಗಳನ್ನು ಕಂಡುಕೊಳ್ಳುವ ಪ್ರಯತ್ನ ಕೂಡ ಇಲ್ಲಿದೆ. ಈ ಮೂಲಕ ಮಹಿಳಾ ಸಮುದಾಯಕ್ಕೆ ಮಾರ್ಗದರ್ಶನ ನೀಡುವ, ಅವರನ್ನು ತಮ್ಮ ಬಂಧನಗಳಿಂದ ಹೊರತರುವ ಪ್ರಯತ್ನ ಮಹಿಳಾ ಕಾವ್ಯದ ಸ್ವಾಯತ್ತ ನೆಡೆಯನ್ನು ದಾಖಲಿಸುತ್ತದೆ.

ಹಾಸ್ಯ, ವ್ಯಂಗ್ಯ, ವಿಡಂಬನೆ, ಮೊನಚು ಮಾತು ಈ ಕಾಲದ ಕಾವ್ಯದ ಪ್ರಮುಖ ಶಕ್ತಿಯಾಗಿರುವುದನ್ನು ಗುರುತಿಸಬಹುದು. ಇದುವರೆಗೂ ಯಾವುದನ್ನು ಅತ್ಯಂತ ಶ್ರೇಷ್ಟವಾದ ಮೌಲ್ಯ ಎಂದು ನಂಬಿಸುತ್ತಾ ಬರಲಾಗಿದೆಯೋ ಅವು ಮೌಲ್ಯಗಳೇ ಅಲ್ಲ. ಪುರುಷ ಪ್ರಭುತ್ವ ಹೆಣ್ಣಿನ ಮೇಲೆ ಹೇರಿರುವ ಜೀವನ ವಿಧಾನ ಅಥವಾ ಕರಾರು ಎಂಬುದನ್ನು ಬಯಲಿಗೆಳೆಯುವುದರ ಮೂಲಕ ಹೆಣ್ಣು ತನ್ನ ಜೀವನದಲ್ಲಿ ಈ ಮೌಲ್ಯಗಳನ್ನು ಆಚರಿಸಲೇಬೇಕಾದ ಅನಿವಾರ್ಯತೆ ಎಷ್ಟು ಎಂಬುದನ್ನು ಕುರಿತು ಈ ಕಾಲಘಟ್ಟದ ಮಹಿಳಾ ಕಾವ್ಯ ಮತ್ತೆ ಮತ್ತೆ ಪುನರ್ ವಿಮರ್ಶೆಗೆ ಒಳಪಡಿಸುತ್ತದೆ. ಪ್ರತಿಭಾ ನಂದಕುಮಾರ್ ರವರ ಕವನಗಳು ಅತ್ಯಂತ ಸಮರ್ಥವಾಗಿ ಈ ಅಂಶಗಳನ್ನು ಚರ್ಚೆಗೆ ಒಳಪಡಿಸುತ್ತವೆ. ಜೊತೆಗೆ ಇವರ ಕವನಗಳಲ್ಲಿ ಕಂಡು ಬರುವ ಮತ್ತೊಂದು ವಿಶೇಷತೆ ಎಂದರೆ ಮೌಲ್ಯ ವ್ಯವಸ್ಥೆಯ ಹಿರಿಮೆಯನ್ನೂ, ಅವುಗಳನ್ನು ಆಚರಿಸಲೇಬೇಕಾದ ಅನಿವಾರ್ಯತೆಯನ್ನು ಸಾರಾಸಗಟಾಗಿ ನಿರಾಕರಿಸುವ ಇವರ ಕಾವ್ಯ ಮೌಲ್ಯವ್ಯವಸ್ಥೆಯ ಪೊಳ್ಳುತನವನ್ನು, ಅದರ ಏಕಪಕ್ಷೀಯ ಧೋರಣೆಯನ್ನು, ಮೌಲ್ಯ ವ್ಯವಸ್ಥೆಯ ಬಂಧಗಳ ಒಳಗಿನಿಂದಲೇ ಒಡೆಯುವ ಹಾಗೂ ಅದರ ಮೂಲಕವೇ ತನ್ನ ಬದುಕಿನ ಅನನ್ಯತೆಯ ಹಾದಿಗಳನ್ನು ಕಂಡುಕೊಳ್ಳುವ ಪ್ರಯತ್ನದಲ್ಲಿ ತೊಡಗಿವೆ. ಪ್ರತಿಭಾ ನಂದಕುಮಾರ್ ರವರ ಪತಿವ್ರತೆ ಅಲ್ಲ, ಅವರು ಪುರಾವೆಗಳನ್ನು ಕೇಳುತ್ತಾರೆ ಮುಂತಾದ ಕವನಗಳು ಪಾತಿವ್ರತ್ಯ, ಶೀಲ,ಇವು ಆಚರಿಸಲೇಬೇಕಾದ ಮೌಲ್ಯಗಳಲ್ಲ ಎಂಬುದನ್ನು ಬಯಲಿಗೆಳೆಯಲು ಪ್ರಯತ್ನಿಸುತ್ತವೆ. ಹೆಚ್.ಎಲ್. ಪುಷ್ಪರವರ ಅಮೃತಮತಿಯ ಸ್ವಗತ ಕವನ ಈ ಮೌಲ್ಯಗಳನ್ನು ಮೈಮೇಲೆ ಹೇರಿಕೊಂಡು ಬದುಕಬೇಕೆನ್ನುವ ಜೀವನ ವಿಧಾನವನ್ನು ಸಾರಾಸಗಟಾಗಿ ನಿರಾಕರಿಸುತ್ತದೆ.

> ಹಸಿವಿದ್ದೂ ಒಡಲ ಮುಚ್ಚುವ
> ಕಾತರವಿದ್ದೂ ತಣ್ಣಗೆ ನಗುವ
> ಈ ಹೂವುಗಳು
> ಒಳಗೊಳಗೇ ಉಕ್ಕಿ ಜ್ವಲಿಸುವುದ ಕಂಡು
> ಸಿಟ್ಟಿಗೆದ್ದಿದ್ದೇನೆ. [೭೫]

ಹೆಣ್ಣು ತನ್ನ ಸ್ವಾಯತ್ತ ನೆಲೆಗಳನ್ನು ಕಂಡುಕೊಳ್ಳುವ ಪ್ರಯತ್ನದಲ್ಲಿ ಪುರಾಣ, ಇತಿಹಾಸಗಳಲ್ಲಿ ರೂಪುಗೊಂಡಿರುವ ಸ್ತ್ರೀ ಪಾತ್ರಗಳ ಅಸ್ಮಿತೆಯ ಮೂಲಕ ತನ್ನ ಅಸ್ತಿತ್ವವನ್ನು ಕಂಡುಕೊಳ್ಳುವ ವಿಧಾನ ಒಂದು ಮಾದರಿಯದ್ದು. ಅದಕ್ಕೆ ವಿರುದ್ಧವಾಗಿ ಎಂಬಂತೆ ಆರ್ಯಸ್ತ್ರೀ ಪ್ರತಿಮೆಯ ಮೂಲಕ 'ಉದಾತ್ತಾ ಸ್ತ್ರೀ ವ್ಯಕ್ತಿತ್ವದ' ಚಿತ್ರಣವನ್ನು ಕೊಟ್ಟ ಪುರುಷ ಪ್ರಭುತ್ವಕ್ಕೆ ಅದರ ಪೊಳ್ಳುತನವನ್ನೂ, 'ಸ್ತ್ರೀ ಮಾದರಿ'ಯಲ್ಲಿನ ಸಂದಿಗ್ಧತೆಗಳನ್ನು ತಮ್ಮ ಕಾವ್ಯದಲ್ಲಿ ಚರ್ಚೆಗೆ ಒಳಪಡಿಸುವುದರ ಮೂಲಕ ಸಮಾಜದ ದ್ವಿಸ್ತರ ನ್ಯಾಯಕ್ಕೆ ಮುಖಾಮುಖಿಯಾಗುವುದು ಮತ್ತೊಂದು ಬಗೆಯದ್ದು. ಈ ಕಾಲಘಟ್ಟದ ಮಹಿಳಾ ಕಾವ್ಯ ಪ್ರಧಾನವಾಗಿ ಎರಡನೇ ಮಾದರಿಯ ಮೂಲಕ ಪುರಾಣದ 'ಆರ್ಯ ಸ್ತ್ರೀ ಪ್ರತಿಮೆ'ಗಳಿಗೆ ಮುಖಾಮುಖೀಯಾಗುತ್ತವೆ. ಆದುದರಿಂದಾಗಿ ಆಧುನಿಕ ಮಹಿಳಾಕಾವ್ಯ ಹಿಂದಿನಿಂದ ಹೆಣ್ಣಿನ ಅಸ್ಮಿತೆಯ ಮಾದರಿಗಳೆಂದು ಗುರಿತಿಸಲಾಗುತ್ತಿರುವ 'ಮಾದರಿ ಸ್ತ್ರೀ' ಮತ್ತು 'ಆದರ್ಶ ಸ್ತ್ರೀ' ಎಂದು

ಕರೆಯಲ್ಪಡುವ ಪಾತ್ರಗಳ ಹಿಂದಿನ ಪುರುಷ ಹಿತಾಸಕ್ತಿಯ ಧೋರಣೆಗಳನ್ನು, ಹೆಣ್ಣಿನ ಅಧೀನತೆಯ ನೆಲೆಗಳನ್ನು ಬಯಲಿಗೆಳೆಯುವುದರ ಮೂಲಕ ಹೆಣ್ಣಿನ ಸ್ವಾಯತ್ತ ಬದುಕಿನ ಹಾದಿಗೆ ಮುನ್ನುಡಿಯನ್ನು ಬರೆಯುತ್ತವೆ. ಸೀತೆ, ಸಾವಿತ್ರಿ, ಅಹಲ್ಯೆ, ದುರ್ಗೆ, ಚಾಮುಂಡಿ, ಮುಂತಾದ ಮಾದರಿ ಪಾತ್ರಗಳು ಮಹಿಳಾ ಕಾವ್ಯದಲ್ಲಿ ಮತ್ತೆ ಮತ್ತೆ ಚರ್ಚಿತವಾಗುವುದರ ಮೂಲಕ ಅವುಗಳ ಅಧಿಕೃತತೆ ಹಾಗೂ ಪ್ರಸ್ತುತತೆಯನ್ನು ಪುನರ್‌ವಿಮರ್ಶೆಗೆ ಒಳಪಡಿಸುತ್ತವೆ. ಬಿ.ಟಿ.ಲಲಿತಾನಾಯಕ್‌ರವರ 'ಸಖಿಯರ ಸಂವಾದ', ವೈದೇಹಿಯವರ 'ಸ್ವಯಂವರಗೀತೆ' ಮುಂತಾದ ಕವನಗಳು ಮಾದರಿ ವ್ಯಕ್ತಿತ್ವಗಳನ್ನು ಪಾಲಿಸುವುದಕ್ಕಿಂತ ತಾನು ತಾನಾಗಿ ಬದುಕುವ ಅಗತ್ಯತೆಯನ್ನು ಎತ್ತಿಹಿಡಿಯುತ್ತವೆ.

ಏನಾದರೂ ಆಗದಿರೋಣ ಕೇಳೆ
ದಶಕಂಠ ಪಂಚಪತಿಗಳ ದೂರವಿರಿಸೋಣ
ಒಂದೇ ತಲೆಯವನ
ಒಂದೇ ನೆಲೆಯವನ
ಒಂದೇ ಹೆಣ್ಣಿಗೊಲಿವವನ ಕೈ ಹಿಡಿಯೋಣ
ನಾವು ನಾವೇ ಆಗಿ ಉಳಿಯೋಣ [೭೯]

ಎಂದು ಪುರಾಣ ಪಾತ್ರ ಮಾದರಿಗಳ ಅನುಕರಣೆಗಿಂತ ತನ್ನತನವನ್ನು ತನ್ನ ಶಕ್ತಿ ಸಾಮರ್ಥ್ಯಗಳಿಂದಲೇ ಕಟ್ಟಿಕೊಳ್ಳುವ ಹಾಗೂ ತನಗಾಗಿಯೇ ತನ್ನ ಬದುಕನ್ನು ರೂಪಿಸಿಕೊಳ್ಳಬೇಕೆಂಬ ಆಶಯವೇ ಪ್ರಧಾನವಾಗಿ ಕಂಡುಬರುತ್ತದೆ. ಮಾದರಿ ಪಾತ್ರಗಳ ಹಿಂದೆ ಪುರುಷ ಪ್ರಧಾನ ಆಲೋಚನೆ ಹೇಗೆ ಕೆಲಸ ಮಾಡುತ್ತಿರುತ್ತದೆ ಎಂಬುದನ್ನು ಈ ಕಾಲಘಟ್ಟದ ಕವನಗಳು ಸಮರ್ಥವಾಗಿ ಚರ್ಚಿಸುತ್ತವೆ. ಹೆಣ್ಣು ತನ್ನ ಅಸ್ತಿತ್ವವನ್ನು ಗುರುತಿಸಿಕೊಳ್ಳಬೇಕಾದ ನೆಲೆಗಳನ್ನೂ, ಪುರುಷ ಪ್ರಭುತ್ವದ ಹಿಡಿತದಿಂದ ಹೊರಬರಬಹುದಾದ ಹಾದಿಗಳನ್ನು ಚರ್ಚಿಸುತ್ತಲೇ ಹೆಣ್ಣಿನ ಮುಂದಿನ ಹಾದಿ ಯಾವುದಾಗಿರಬೇಕು ಎಂಬುದನ್ನು ಈ ಕವನ ಎತ್ತಿ ಹಿಡಿಯುತ್ತದೆ. ಸ.ಉಷಾ ರವರ ಕವನಗಳೂ ಕೂಡ ಪುರುಷನಿಷ್ಟ ಮಾದರಿ ಪಾತ್ರಗಳು ಅವಶ್ಯಕವಿಲ್ಲ ಎಂಬುದನ್ನೇ ಸೀತೆಯ ಪಾತ್ರದ ಮೂಲಕ ತಿಳಿಸುತ್ತವೆ.

ಯಾಕೆಂದರೆ ಈ ನೆಲದಲ್ಲಿನ್ನು
ಸೀತೆಯರು ಹುಟ್ಟುವುದಿಲ್ಲ
ಹುಟ್ಟುವುದೂ ಬೇಡ ಬಿಡಿ [೮೦]

ಇಲ್ಲಿ ಸೀತೆ ಹೆಣ್ಣಿಗೆ ಆದರ್ಶವಾಗಬೇಕಿಲ್ಲ ಎಂಬುದರ ಜೊತೆಗೆ ಇನ್ನು ಮುಂದೆ ಪುರುಷ ಪ್ರಭುತ್ವದ ಹುನ್ನಾರಗಳು ನಡೆಯುವುದಿಲ್ಲ ಎಂಬ ಆಶಾವಾದ ಕಂಡುಬರುತ್ತದೆ.

ಆಧುನಿಕತೆ, ವಸಾಹತುಶಾಹಿ, ಪುರೋಹಿತಶಾಹಿ ಹಾಗೂ ಪ್ರಭುತ್ವಕ್ಕೆ ಮುಖಾಮುಖಿಯಾಗುತ್ತಲೇ ಮಹಿಳಾಕಾವ್ಯ ಹೆಣ್ಣಿನ ಸ್ವಾಯತ್ತ ನೆಲೆಗಳನ್ನು ಕಟ್ಟಿಕೊಳ್ಳುವ ಪ್ರಯತ್ನದಲ್ಲಿ ನಿರಂತರವಾಗಿ ತೊಡಗಿರುವುದನ್ನು ಗುರುತಿಸಬಹುದು. ಆಧುನಿಕತೆಗೆ ತೆರೆದು ಕೊಳ್ಳುತ್ತಲೇ ಕುಟುಂಬದ ಹಿತ ಕಾಯುವ, ಎಲ್ಲರಿಂದ ಮೆಚ್ಚುಗೆ ಪಡೆಯುವ, ಸ್ತ್ರೀ ಪ್ರತಿಮೆಯ ಮೂಲಕ ಆಧುನಿಕ ಸ್ತ್ರೀಯ ಅಸ್ಮಿತೆಯ ಹುಡುಕಾಟದ ಹಾದಿಗಳನ್ನು ಕಾಣಬಹುದು. ವೈದೇಹಿಯವರ 'ಗೃಹಿಣಿ ಗೀತೆ', ಪ್ರತಿಭಾ ನಂದಕುಮಾರ್‌ರವರ 'ಕೇರ್ ಫ್ರೀ ಮಹಿಳೆಯರು', 'ಮಧ್ಯಂತರ', 'ಮಿನಿಕಾಯ್ ಮಹಿಳೆ',

'ಬಳೆಗಳ ಸೇಲ್ಸಮೆನ್', ಸ.ಉಷಾರವರ 'ಉದ್ಯೋಗಸ್ಥ ತಾಯಿ ಮಕ್ಕಳಿಗೆ ಹೇಳಿದ್ದು', ಮುಂತಾದ ಕವನಗಳು ಆಧುನಿಕ ಅವಕಾಶಗಳು ಹೆಣ್ಣಿಗೆ ತಂದೊಡ್ಡಿರುವ ಸವಾಲುಗಳನ್ನೂ, ಹೆಣ್ಣು ಅವುಗಳನ್ನು ನಿಭಾಯಿಸುವ ಬಗೆಗಳನ್ನೂ ತೆರೆದಿಡುತ್ತವೆ. ಈ ಸಂದರ್ಭದಲ್ಲಿ ಹೆಣ್ಣು ಆಯ್ಕೆ, ಅಭಿವ್ಯಕ್ತಿಗಳಲ್ಲಿ ವಿಶೇಷತೆಯನ್ನೂ, ಕುಟುಂಬದ ಎಲ್ಲರಿಗೂ ಅನುಕೂಲಕರವಾದ, ಆರೋಗ್ಯಕರವಾದ ವಸ್ತುಗಳನ್ನು ಆಯ್ಕೆ ಮಾಡಿಕೊಳ್ಳುವಲ್ಲಿ, ಕಡಿಮೆ ಖರ್ಚಿನಲ್ಲಿ ತನ್ನನ್ನು, ತನ್ನ ಕುಟುಂಬವನ್ನು ಒಪ್ಪವಾಗಿಟ್ಟುಕೊಳ್ಳುವಲ್ಲಿ ತನ್ನ ವಿಶಿಷ್ಟತೆಯನ್ನು ಮೆರೆಯುತ್ತಾಳೆ. ಈ ಮೂಲಕ ಆಧುನಿಕ ಅವಕಾಶಗಳನ್ನು ಬಳಸಿಕೊಳ್ಳುವ ಸಂದರ್ಭದಲ್ಲಿಯೂ ಹೆಣ್ಣು ತನ್ನ ಸ್ವಂತಿಕೆಯನ್ನು ಕಾಯ್ದುಕೊಳ್ಳುವ ಜಾಣ್ಮೆಯನ್ನು ಮಹಿಳಾಕಾವ್ಯ ಎತ್ತಿಹಿಡಿಯುತ್ತದೆ. ಜೊತೆಗೆ ವ್ಯವಸ್ಥೆಯಲ್ಲಾಗುತ್ತಿರುವ ಸ್ಥಿತ್ಯಂತರದ ದಾಖಲೆ ಕೂಡ ಮಹಿಳಾಕಾವ್ಯದಲ್ಲಿ ದೊರೆಯುತ್ತದೆ. ಸಂಸಾರದಲ್ಲಿ ಗಂಡು ಹೆಣ್ಣಿನ ಸಹಬಾಳ್ವೆಯ ಅನಿವಾರ್ಯತೆಯನ್ನು ಈ ಕವನಗಳು ಎತ್ತಿಹಿಡಿಯುತ್ತವೆ. ಹೆಣ್ಣಿಗೆ ಗಂಡಿನ ಅವಶ್ಯಕತೆ ಎಷ್ಟು ಮುಖ್ಯವೋ ಗಂಡಿಗೆ ಹೆಣ್ಣಿನ ಅವಶ್ಯಕತೆ ಕೂಡ ಮುಖ್ಯ ಎಂಬುದನ್ನು ತಿಳಿಸುವುದರ ಮೂಲಕ ಪುರುಷ ಅಹಂ ಅನ್ನು ಮಹಿಳಾಕಾವ್ಯ ಪ್ರಶ್ನೆ ಮಾಡುತ್ತದೆ ಮತ್ತು ಮರು ವಿಮರ್ಶೆಗೆ ಒಳಪಡಿಸುತ್ತದೆ.

ನನಗೆ ಗೊತ್ತು. ನೀನು ಸಿಡಿದ ನನ್ನ
ಚೂರು ಚೂರುಗಳನ್ನು ಕೂಡಿಸಿ ಜೋಡಿಸುತ್ತೀಯೆಂದು! [32]

ಎನ್ನುವ ಸಂಧ್ಯಾದೇವಿಯವರ ಸಾಲುಗಳು ಮೊನಚು ಪ್ರತಿಭಟನೆಯ ಜೊತೆಗೆ ಗಂಡಿನ ಜೀವನದಲ್ಲಿ ಹೆಣ್ಣಿನ ಅನಿವಾರ್ಯತೆಯನ್ನೂ, ಅಗತ್ಯತೆಯನ್ನೂ ಎತ್ತಿಹಿಡಿಯುತ್ತದೆ. ಸ. ಉಷಾ, ದು.ಸರಸ್ವತಿ, ಪ್ರತಿಭಾ ನಂದಕುಮಾರ್, ವೈದೇಹಿ, ಸವಿತಾ ನಾಗಭೂಷಣ್, ಹೆಚ್.ಎಲ್.ಪುಷ್ಪ ಮುಂತಾದವರ ಕವನಗಳು ಗಂಡು ಹೆಣ್ಣು ಇಬ್ಬರೂ ಒಬ್ಬರನ್ನೊಬ್ಬರು ಅರಿತು ಬಾಳಬೇಕಾದ, ಪರಸ್ಪರ ಪ್ರೀತಿ, ಗೌರವಗಳಿಂದ ಜೀವನ ನಡೆಸಬೇಕಾದ, ಜೀವ ವಿಕಾಸದ ಮುಂದುವರಿಕೆಗೆ ಗಂಡು ಹೆಣ್ಣು ಇಬ್ಬರು ಒಂದಾಗಿ, ಸಮಾನತೆಯ ಆಶಯದೊಂದಿಗೆ ಸಾಗಬೇಕಾದ ಹಾದಿಯ ಹುಡುಕಾಟಕ್ಕೆ ದಾರಿಮಾಡಿಕೊಡುತ್ತವೆ. ಸವಿತಾ ನಾಗಭೂಷಣ್‌ರವರು ಸ್ತ್ರೀ ಪರವಾದ ಆಲೋಚನೆಯ ಸಂದರ್ಭದಲ್ಲಿಯೂ ಕೂಡ ಎಲ್ಲಿಯೂ ಅತಿಯಾದ ಭಾವೋದ್ವೇಗಕ್ಕೆ, ಈರ್ಶೆಗೆ ಗುರಿಯಾಗದೆ ಮಾನವ ಸಹಜ ಸಂಬಂಧಗಳ ನೆಲೆಯಿಂದಲೇ ಗಂಡು ಹೆಣ್ಣಿನ ಸಂಬಂಧದ ಸ್ವರೂಪವನ್ನು ವಿಶ್ಲೇಷಣೆಗೆ ಒಳಪಡಿಸುತ್ತಾರೆ. ಕೊಂಡ ಹಾಯುವವಳು ಕವನ 'ಸ್ವಾಯತ್ತ ಬದುಕಿನೆಡೆಗೆ ಸಾಗುತ್ತಿರುವ ಹೆಣ್ಣಿಗೆ ಒಂದು ಉತ್ತಮ ನಿದರ್ಶನ'. ಇಲ್ಲಿ ಹೆಣ್ಣಿನ ಶಕ್ತಿ, ಸಾಮರ್ಥ್ಯ ಅವಳ ಕ್ರಿಯಾಶೀಲತೆಯನ್ನು ಕುರಿತು ಗಂಡಿನ ಬೆರಗು, ಅಚ್ಚರಿ ಹಾಗೂ ಅಸಹಾಯಕ ಸ್ಥಿತಿಯನ್ನು ವಿವರಿಸುತ್ತಾರೆ. ಆದರೆ ಈ ಸಂದರ್ಭದಲ್ಲಿಯೂ ಕೂಡ ಮಾನವ ಸಂಬಂಧಗಳು ಪ್ರೀತಿಯ ಹಾದಿಯನ್ನು ಮೀರಿ ದ್ವೇಷದ ಕಡೆಗೆ ಚಲಿಸುವುದಿಲ್ಲ. ಗಂಡು ಹೆಣ್ಣಿನ ಸಂಬಂಧದಲ್ಲಿ ಸಮಾನತೆಯಿಂದ ಬಾಳುವ ಸಹಜ ಪ್ರೀತಿಯ ಅನಿವಾರ್ಯತೆ ಇವರ ಎಲ್ಲಾ ಕವನಗಳ ಮುಖ್ಯ ಕಾಳಜಿಯಾಗಿದೆ.

ಶುದ್ಧ ಮಾನವೀಯ ಪ್ರೀತಿ ಅನುಕಂಪದ ನೆಲೆಯಿಂದ ಕೂಡಿರುವ ಸವಿತಾ ನಾಗಭೂಷಣ್‌ರವರ ಕವನಗಳು ಗಂಡು, ಹೆಣ್ಣು, ಮೇಲು, ಕೀಳು, ಶ್ರೇಷ್ಟ, ಕನಿಷ್ಟ, ಹಿಂದು,ಮುಸ್ಲಿಂ ಎಂಬ ಯಾವುದೇ ತಾರತಮ್ಯವಿಲ್ಲದೆ ಶುದ್ಧ ಮಾನವ ಸಂಬಂಧಗಳ ಅಭಿವ್ಯಕ್ತಿಯಾಗಿದೆ. ಎಂತಹ ಸಂದರ್ಭದಲ್ಲಿಯೂ ಕೂಡ ಮಾನವ ಸಹಜ ಮಿಡಿತಗಳನ್ನು ಮೀರಿ ಸಿಟ್ಟು, ಆಕ್ರೋಶ, ಹಿಂಸೆಗಳಿಗೆ ಇಲ್ಲಿ ಆಸ್ಪದವೇ ಇಲ್ಲ. 'ತಾಯಿ ಪ್ರೀತಿಯ' ಮೂಲಕವೇ ಜಗತ್ತನ್ನು ನೋಡುವ, ವ್ಯವಸ್ಥೆಯೊಂದಿಗೆ ಮುಖಾ ಮುಖಿಯಾಗುವ ವಿಧಾನ ಅರ್ಥಪೂರ್ಣವಾಗಿದೆ. ಆರ್ಭಟ, ಆಕ್ರೋಶಗಳಿಲ್ಲದ ನಯವಾದ ಮಾತಿನ ಚಾಟಿಯೇಟಿನ ಮೂಲಕವೇ ವ್ಯವಸ್ಥೆಯನ್ನು ಬೆಚ್ಚಿಬೀಳಿಸುವ ದಿಟ್ಟತನ ಇವರ ಕಾವ್ಯಗುಣ. ಗಂಡು ಹೆಣ್ಣಿನ ಸಂಬಂಧದಂತೆಯೇ ಸಾಮಾಜಿಕ ಸಂಬಂಧಗಳೂ ಕೂಡ ಶ್ರೇಣೀಕರಣಕ್ಕೆ ಒಳಪಟ್ಟು ಒಬ್ಬರು ಇನ್ನೊಬ್ಬರ ಮೇಲೆ ಕತ್ತಿಮಸೆಯುವ, ದ್ವೇಷಕಾರುವ ವಾತಾವರಣದಲ್ಲಿ ಸವಿತಾ ನಾಗಭೂಷಣ್ ಹಿಂದು ಮುಸ್ಲಿಂ ಬಾಂಧವ್ಯವನ್ನು ಅತ್ಯಂತ ಸಹಜ ಎಂಬಂತೆ ಪ್ರತಿಪಾದಿಸುತ್ತಾರೆ. ಸಮಾಜದ ಪ್ರತಿಯೊಂದು ವಿಷಯಗಳಿಗೂ ಅತ್ಯಂತ ಸೂಕ್ಷ್ಮವಾಗಿ ತಮ್ಮ ಕಾವ್ಯದ ಮೂಲಕ ಪ್ರತಿಕ್ರಿಯಿಸುವ ಸವಿತಾ ಎಲ್ಲಿಯೂ 'ಮಾನವೀಯ ಪ್ರೀತಿಯ' ಗಡಿಯನ್ನು ದಾಟುವುದಿಲ್ಲ. ಭಯೋತ್ಪಾದಕರನ್ನು ಕುರಿತು ಬರೆಯುವ ಸಂದರ್ಭದಲ್ಲಿಯೂ ಕೂಡ ಅವನ ಕೌಟುಂಬಿಕ ಸಂಬಂಧಗಳ ಮೂಲಕವೇ ಅವನ ವ್ಯಕ್ತಿತ್ವವನ್ನು ಕಟ್ಟಿಕೊಡಲು ಪ್ರಯತ್ನಿಸುತ್ತಾರೆ. ಧರ್ಮದ ಹೆಸರಿನಲ್ಲಿ, ರಾಜಕಾರಣದ ಹೆಸರಿನಲ್ಲಿ ಮನುಷ್ಯನನ್ನು ಅಪರಾಧಿ ಸ್ಥಾನದಲ್ಲಿ ನಿಲ್ಲಿಸುವ ವ್ಯವಸ್ಥೆಗೆ ನೀಡಿದ ಅತ್ಯಂತ ತೀಕ್ಷ್ಣ ಪ್ರತಿಕ್ರಿಯೆ ಇದಾಗಿದೆ.

ಈ ಕಾಲಘಟ್ಟದಲ್ಲಿ ಬರೆದ ಲೇಖಕಿಯರು ಭಿನ್ನ ಸಮುದಾಯ, ವರ್ಗ, ಜನಾಂಗಕ್ಕೆ ಸೇರಿದವರಾಗಿದ್ದುದ್ದರಿಂದ ಇವರ ಬದುಕಿನ ಅನುಭವಗಳು ಅವರ ಆಲೋಚನೆ ಹಾಗೂ ಅಭಿವ್ಯಕ್ತಿಯಲ್ಲಿ ಸ್ಥಾನ ಪಡೆದಿವೆ. ಈ ಕಾಲದಲ್ಲಿ ಬರೆದ ತಳಸಮುದಾಯದ ಬರಹಗಾರ್ತಿಯರಲ್ಲಿ ಆಕ್ರೋಶ, ಕಿಚ್ಚು ಮನೆಮಾಡಿದೆ. ಹೆಣ್ಣಿನ ಸಮಸ್ಯೆಗಳು ಎಷ್ಟು ಮುಖ್ಯವೋ ಸಾಮಾಜಿಕ ಶ್ರೇಣೀಕರಣದಿಂದ ಉಂಟಾಗಿರುವ ಅಸಮಾನತೆಯೂ ಅಷ್ಟೇ ಚರ್ಚಿಸಬೇಕಾದ ವಿಷಯ ಎಂಬುದನ್ನು ತಮ್ಮ ಕಾವ್ಯಗಳ ಮೂಲಕ ಸಮಾಜದ ಗಮನಕ್ಕೆ ತರಲು ಪ್ರಯತ್ನಿಸುತ್ತಾರೆ. ಸ್ತ್ರೀಪರವಾದ ಹೋರಾಟದ ಜೊತೆಗೆ ಸಾಮಾಜಿಕ ನ್ಯಾಯದ ಆಶಯ ಈ ಲೇಖಕಿಯರ ಕಾವ್ಯದ ಮುಖ್ಯ ಕಾಳಜಿಯಾಗಿದೆ. ಬಿ.ಟಿ.ಲಲಿತಾನಾಯಕ್, ಸರಸ್ವತಿ ಗೌಡ, ಧರಣೀದೇವಿ ಮಾಲಗತ್ತಿ, ದು.ಸರಸ್ವತಿ, ಡಿ.ಬಿ.ರಜಿಯಾ, ಕೆ.ಶರೀಫಾ. ಮುಂತಾದವರ ಕಾವ್ಯ ಸಾಮಾಜಿಕ ಸಮಾನತೆಗೆ ಒತ್ತುನೀಡುತ್ತವೆ. ಜೊತೆಗೆ ಪುರುಷ ಪ್ರಧಾನ ವ್ಯವಸ್ಥೆಯ ಎದುರು ತನ್ನ ದಿಟ್ಟತನವನ್ನು ಪ್ರದರ್ಶಿಸುವುದರ ಮೂಲಕ ತನ್ನ ಅಸ್ಮಿತೆಯನ್ನು, ಸ್ವಾಯತ್ತ ನೆಲೆಗಳ ಬಗೆಗಿನ ಹೋರಾಟವನ್ನು ಏಕಕಾಲಕ್ಕೆ ಪ್ರಕಟಪಡಿಸುತ್ತವೆ.

ನನಗೇನು ಒಂದಿಂಚು ಸೋಂಕು ತಗುಲಲಿಲ್ಲ
ನನ್ನ ಪ್ರಖರತೆಯು ಸೊರಗಲಿಲ್ಲ
ನಾನು ಇದ್ದಂತೆ ಇದ್ದು ಎಲ್ಲವನು
ಗೆದ್ದು ಬದುಕುವೆ. [೬೮]

ಎನ್ನುವ ಆತ್ಮವಿಶ್ವಾಸ ಈ ಲೇಖಕಿಯರ ಬಹುದೊಡ್ಡ ಶಕ್ತಿ. ತಳ ಸಮುದಾಯದ ಬರಹಗಾರ್ತಿಯರು ಹೆಣ್ಣಿನ ಶೋಷಣೆಯ ಜೊತೆಗೆ ಬಡವರ, ದಲಿತರ, ಹಿಂದುಳಿದವರ, ತುಳಿತಕ್ಕೊಳಗಾದವರ, ತಳಸಮುದಾಯದವರ ಶೋಷಣೆಯ ವಿರುದ್ಧ ಕೂಡ ಧ್ವನಿ ಎತ್ತಿದ್ದಾರೆ. ಪುರುಷ ಪ್ರಭುತ್ವದ ಹುನ್ನಾರಗಳನ್ನೂ, ಸಮಕಾಲೀನ ಸಾಮಾಜಿಕ, ರಾಜಕೀಯ, ಆರ್ಥಿಕ ಪರಿಸ್ಥಿತಿಗಳು ಹೆಣ್ಣಿನ ಬದುಕನ್ನು ಆವರಿಸಿರುವ ಬಗೆಯನ್ನು ಅರಿತು ಮುಂದೆ ಹೆಜ್ಜೆ ಇಡುವ ವಿಧಾನವನ್ನು ಇವರ ಕವನಗಳಲ್ಲಿ ಕಾಣಬಹುದು. ಮಹಿಳಾ ಹೋರಾಟ ಸಮುದಾಯದ ನೆಲೆಯಲ್ಲಿ, ಸಮಾನತೆಯ ಆಶಯದಿಂದ ಮುನ್ನೆಡೆಯಬೇಕು ಎಂಬ ಆಶಯ ಇವರದು. ಹೆಣ್ಣಿನ ಶೋಷಣೆಯ ಮೂಲರೂಪವನ್ನು ಸಮರ್ಥವಾಗಿ ಅರ್ಥೈಸಿಕೊಂಡು ನಮ್ಮ ನಡುವಿನ ಭಿನ್ನತೆಯನ್ನು ನಿವಾರಿಸಿಕೊಂಡು ಪರುಷಪ್ರಭುತ್ವದ ಒಡೆದು ಆಳುವ ಕಾರ್ಯಮಾದರಿಗಳನ್ನು ಭೇದಿಸಿ ನಾವೆಲ್ಲಾ ಒಂದಾಗಿ ಬಾಳಬೇಕೆಂಬ ಆಶಯವನ್ನು ಈ ಕಾಲಘಟ್ಟದ ಮಹಿಳಾಕಾವ್ಯ ಪ್ರಮುಖವಾಗಿ ಪ್ರಸ್ತಾಪಿಸುತ್ತದೆ.

**ಕೊನೆ ಟಿಪ್ಪಣಿ**

೧. ಸಂವಾದ ; ಮಹಿಳಾ ವಿಶೇಷಾಂಕ, ಲಕ್ಷ್ಮೀಶ ತೋಳ್ಪಾಡಿ, ಪು.ಸಂ.೫೬
೨. ಸಾಹಿತ್ಯ ನಿರೂಪಣೆಗಳು, ಸಬಿತಾ ಬನ್ನಾಡಿ, ಪು.ಸಂ.೩೭
೩. ಶಿವಶರಣೆಯರ ವಚನ ಸಂಪುಟ, ೦೫, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ,ವಚನ ಸಂ.೮೭, ಪು.ಸಂ.೩೧
೪. ಸಾಹಿತ್ಯ ನಿರೂಪಣೆಗಳು, ಸಬಿತಾ ಬನ್ನಾಡಿ, ಪು.ಸಂ.೩೮
೫. ಸಂವಾದ ; ಮಹಿಳಾ ವಿಶೇಷಾಂಕ ಜಿ. ರಾಜಶೇಖರ, ಪು.ಸಂ.೬೭
೬. ಶಿವಶರಣೆಯರ ವಚನ ಸಂಪುಟ, ೦೫, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ವಚನ ಸಂ.೮೪೮, ಪು.ಸಂ.೨೬೯
೭. ಅದೇ,ವಚನ ಸಂ.೮೫೦, ಪು.ಸಂ.೨೭೦
೮. ಅದೇ,ವಚನ ಸಂ.೧೦೫೩, ಪು.ಸಂ.೩೪೨
೯. ಅದೇ,ವಚನ ಸಂ.೫೬೧, ಪು.ಸಂ.೧೮೧
೧೦. ಅದೇ,ವಚನ ಸಂ.೫೯೭, ಪು.ಸಂ.೧೯೧
೧೧. ಅದೇ,ವಚನ ಸಂ.೫೬೫, ಪು.ಸಂ.೧೮೨
೧೨. ಅದೇ,ವಚನ ಸಂ.೯೨, ಪು.ಸಂ.೩೨
೧೩. ಅದೇ,ವಚನ ಸಂ.೮೧೭, ಪು.ಸಂ.೨೬೦
೧೪. ಅದೇ,ವಚನ ಸಂ.೬೯೩, ಪು.ಸಂ.೨೨೬
೧೫. ಅದೇ,ವಚನ ಸಂ.೯೮೫, ಪು.ಸಂ.೩೧೭
೧೬. ಅದೇ,,ವಚನ ಸಂ.೩೮೦, ಪು.ಸಂ.೧೨೦
೧೭. ಅದೇ,ವಚನ ಸಂ.೬೬೪, ಪು.ಸಂ.೨೧೧
೧೮. ಅದೇ,ವಚನ ಸಂ.೬೩೦, ಪು.ಸಂ.೨೦೦
೧೯. ಸಂಚಿಯ ಹೊನ್ನಮ್ಮನ ಹದಿಬದೆಯ ಧರ್ಮ,ಸಂ.ಬಿ.ಎಂ.ಶ್ರೀಕಂಠಯ್ಯ ಮೈಸೂರು ವಿವಿ.,೧೯೬೯ ಮೊದಲನೇ ಸಂಧಿ ಪದ್ಯ೫೧
೨೦. ಅದೇ,ಆರನೇ ಸಂಧಿ, ೩ನೇ ಪದ್ಯ
೨೧. ಅದೇ,ಆರನೇ ಸಂಧಿ ೪ನೇ ಪದ್ಯ
೨೨. ಅದೇ,ಆರನೇ ಸಂಧಿ, ೧೩ನೇ ಪದ್ಯ
೨೩. ಕನ್ನಡ ಮಹಿಳಾ ಸಾಹಿತ್ಯ ಚರಿತ್ರೆ, ಸಂ. ಡಾ. ಎಚ್.ಎಸ್.ಶ್ರೀಮತಿ, ಪು.ಸಂ. ೧೭೫
೨೪. ಕನ್ನಡ ಲೇಖಕಿಯರ ನೆಲೆ-ಬೆಲೆ, ಬಿ.ಎನ್.ವೆಂಕಟಲಕ್ಷ್ಮಿ, ಪು.ಸಂ.೪೫
೨೫. ಅದೇ, ಪು.ಸಂ.೪೪
೨೬. ಕನ್ನಡ ಮಹಿಳಾ ಸಾಹಿತ್ಯ ಚರಿತ್ರೆ, ಸಂ. ಡಾ. ಎಚ್.ಎಸ್.ಶ್ರೀಮತಿ, ಪು.ಸಂ. ೧೯೪
೨೭. ಎರಡು ದಶಕಗಳ ಮಹಿಳಾ ಕಾವ್ಯದ ಪರಿವರ್ತನೆಗಳು, ಕೆ.ಎಂ.ನಾಗಲಕ್ಷ್ಮಿ ವೀರೇಶ್, ಪು.ಸಂ.೩೩
೨೮. ಕನ್ನಡ ಮಹಿಳಾ ಸಾಹಿತ್ಯ ಚರಿತ್ರೆ, ಸಂ. ಡಾ. ಎಚ್.ಎಸ್.ಶ್ರೀಮತಿ, ಪು.ಸಂ. ೧೯೮
೨೯. ಅದೇ, ಪು.ಸಂ. ೧೫೦
೩೦. ಆಧುನಿಕ ಭಾರತದಲ್ಲಿ ಮಹಿಳೆ, ಮೂಲ: ಜೆರಾಲ್ಡಿನ್ ಫೋರ್ಬ್ಸ್ ಅನು: ಎಚ್.ಎಸ್.ಶ್ರೀಮತಿ ಪು.ಸಂ.೪೯
೩೧. ಅದೇ, ಪು.ಸಂ೩೬
೩೨. ಅದೇ, ಪು.ಸಂ೧೬೭
೩೩. ಅದೇ, ಪು.ಸಂ. ೯೧
೩೪. ಕನ್ನಡ ಮಹಿಳಾ ಸಾಹಿತ್ಯ ಚರಿತ್ರೆ, ಸಂ. ಡಾ. ಎಚ್.ಎಸ್.ಶ್ರೀಮತಿ, ಪು.ಸಂ. ೧೯೮
೩೫. ಕಲ್ಯಾಣ ಸರಸ್ವತಿ, ಡಾ.ಬಿ.ಎನ್.ಸುಮಿತ್ರಾಬಾಯಿ, ಪು.ಸಂ.೫೬
೩೬. ಬೆಳಗೆರೆ ಜಾನಕಮ್ಮ ಬದುಕು – ಬರಹ, ಸಂ. ನೇಮಿಚಂದ್ರ, ಪು.ಸಂ. ೭೭
೩೭. ಅದೇ, ಪು.ಸಂ. ೫೯
೩೮. ಕನ್ನಡ ಮಹಿಳಾ ಸಾಹಿತ್ಯ ಚರಿತ್ರೆ, ಸಂ. ಡಾ. ಎಚ್.ಎಸ್.ಶ್ರೀಮತಿ, ಪು.ಸಂ. ೧೯೬
೩೯. ಬೆಳಗೆರೆ ಜಾನಕಮ್ಮ ಬದುಕು – ಬರಹ, ಸಂ. ನೇಮಿಚಂದ್ರ, ಪು.ಸಂ. ೦೬
೪೦. ಕಲ್ಯಾಣ ಸರಸ್ವತಿ, ಡಾ.ಬಿ.ಎನ್.ಸುಮಿತ್ರಾಬಾಯಿ, ಪು.ಸಂ.೧೨
೪೧. ಬೆಳಗೆರೆ ಜಾನಕಮ್ಮ ಬದುಕು – ಬರಹ, ಸಂ. ನೇಮಿಚಂದ್ರ, ಪು.ಸಂ. ೧೩೬

೪೨. ಅದೇ, ಪು.ಸಂ. ೪೬
೪೩. ಅದೇ, ಪು.ಸಂ. ೧೨೦
೪೪. ಸಮಗ್ರ ದಾಸ ಸಾಹಿತ್ಯ ಸಂಪುಟ ೧೮ ಭಾಗ ೪, ನಂಜನಗೂಡು ತಿರುಮಲಾಂಬ ಮತ್ತು ಇತರ ಮಹಿಳಾ ಹರಿದಾಸರ ಕೀರ್ತನೆಗಳು, ಪು.ಸಂ.೪೦೯
೪೫. ಅದೇ, ಪು.ಸಂ. ೪೧೩,
೪೬. ಮುಂತಾದ ಕೆಲ ಪುಟಗಳು ಸರಸ್ವತಿಬಾಯಿ ರಾಜವಾಡೆ ಅವರ ಬದುಕು ಮತ್ತು ಬರಹ, ವೈದೇಹಿ, (ಸಂ. ನಿ.) ಪು.ಸಂ.೭೬
೪೭. ಅದೇ, ಪು.ಸಂ.೧೪೪
೪೮. ಅದೇ, ಪು.ಸಂ. ೧೫೧
೪೯. ಕುಟುಂಬ ವ್ಯವಸ್ಥೆ ಮಾರ್ಕ್ಸವಾದ:ಸ್ತ್ರೀವಾದ, ಓಲ್ಗಾ , ಅನು: ಸುಜ್ಞಾನ ಮೂರ್ತಿ, ಪು.ಸಂ.೧೧
೫೦. ನಡುವೆ ಸುಳಿವ ಆತ್ಮ, ಡಾ. ಎಂ.ಎಸ್.ಆಶಾದೇವಿ, ಪು.ಸಂ.೮೬
೫೧. ಕನ್ನಡ ಮಹಿಳಾ ಸಾಹಿತ್ಯ ಚರಿತ್ರೆ. ಸಂ.ಡಾ.ಹೆಚ್.ಎಸ್.ಶ್ರೀಮತಿ, ಪು.ಸಂ.೩೧೨
೫೨. ಅದೇ, ಪು.ಸಂ.೩೦೦
೫೩. ಶೈಲಜಾ ಸಮಗ್ರ ಕಾವ್ಯ, ಶೈಲಜಾ ಉಡಚಣ, ಪು.ಸಂ. ೩
೫೪. ಅದೇ, ಪು.ಸಂ. ೧೮
೫೫. ಅದೇ, ಪು.ಸಂ. ೨೦
೫೬. ಇತಿಗೀತಿಕೆ, ವಿಜಯಾದಬ್ಬೆ, ಪು.ಸಂ.೦೬
೫೭. ಅದೇ, ಪು.ಸಂ.೧೯
೫೮. ಶೈಲಜಾ ಸಮಗ್ರ ಕಾವ್ಯ, ಶೈಲಜಾ ಉಡಚಣ, ಪು.ಸಂ. ೪೧
೫೯. ಅದೇ, ಪು.ಸಂ ೧೨೦
೬೦. ಅದೇ, ಪು.ಸಂ.೪೦
೬೧. ಬಾ ಪರೀಕ್ಷೆಗೆ, ಮಾಲತಿ ಪಟ್ಟಣಶೆಟ್ಟಿ, ಪು.ಸಂ.೩೧
೬೨. ಗುಬ್ಬಿಮನಿ, ಶಶಿಕಲಾ ವಸ್ತ್ರದ, ಪು.ಸಂ.೨೮
೬೩. ಇತಿಗೀತಿಕೆ, ವಿಜಯಾದಬ್ಬೆ, ಪು.ಸಂ.೧೦
೬೪. ನಾನೆಂಬ ಮಾಯೆ, ಸುಕನ್ಯಾಮಾರುತಿ, ಪು.ಸಂ ೬೯
೬೫. ಶೈಲಜಾ ಸಮಗ್ರ ಕಾವ್ಯ, ಶೈಲಜಾ ಉಡಚಣ, ಮುನ್ನುಡಿಯಿಂದ, ಪು.ಸಂ ೧೨
೬೬. ಕನ್ನಡ ಮಹಿಳಾ ಸಾಹಿತ್ಯ ಚರಿತ್ರೆ. ಸಂ.ಡಾ.ಹೆಚ್.ಎಸ್.ಶ್ರೀಮತಿ, ಪು.ಸಂ.೩೦೮
೬೭. ಮುನ್ನುಡಿ ಬೆನ್ನುಡಿಗಳ ನಡುವೆ, ಪ್ರತಿಭಾ ನಂದಕುಮಾರ್, ಪು.ಸಂ.೪೫೦
೬೮. ಬಿಂದು ಬಿಂದಿಗೆ, ವೈದೇಹಿ, ಪು.ಸಂ. ೧೮
೬೯. ಮುನ್ನುಡಿ ಬೆನ್ನುಡಿಗಳ ನಡುವೆ, ಪ್ರತಿಭಾ ನಂದಕುಮಾರ್, ಪು.ಸಂ.೭೯
೭೦. ಪಾರಿಜಾತ, ವೈದೇಹಿ,ಪು.ಸಂ.೪೧
೭೧. ಹೀಗೆ ಹಾಳೆಯ ಮೇಲೆ ಹಾಡು, ಮಮತಾ ಜಿ.ಸಾಗರ ಪು.ಸಂ.೨೧
೭೨. ಮುನ್ನುಡಿ ಬೆನ್ನುಡಿಗಳ ನಡುವೆ, ಪ್ರತಿಭಾ ನಂದಕುಮಾರ್, ಪು.ಸಂ.೭೧
೭೩. ಬಿದಿರು ಮೆಳೆ ಕಂಟಿಯಲಿ, ಬಿ.ಟಿ.ಲಲಿತಾನಾಯಕ್, ಅಂಕಿತ ಪು.ಸಂ.೪೫
೭೪. ಅಮೃತಮತಿಯ ಸ್ವಗತ, ಹೆಚ್.ಎಲ್.ಪುಷ್ಪ ಪು.ಸಂ.೨
೭೫. ಬಿದಿರು ಮೆಳೆ ಕಂಟಿಯಲಿ, ಬಿ.ಟಿ.ಲಲಿತಾನಾಯಕ್, ಪು.ಸಂ.೭೨
೭೬. ಹವಳ ಹಾರಿದ ಹೊತ್ತು. ಸ.ಉಷಾ. ಪು.ಸಂ.೫೭
೭೭. ಮಾತು – ಚಿಟ್ಟೆ, ಬೆಂಕಿ – ಬೆರಳು, ಮುರಿದ ಮುಳ್ಳನಂತೆ ಜ್ಞಾನ – ಸಂಧ್ಯಾದೇವಿ, ಪು.ಸಂ.೪೧
೭೮. ದ್ರೌಪದಿಯ ಸ್ವಗತ, ಸರಸ್ವತಿ ಗೌಡ, ಪು.ಸಂ. ೮

# ಅಧ್ಯಾಯ ೮

## ಮಹಿಳಾ ಕಾವ್ಯದ ಅನನ್ಯತೆ ; ಕೆಲವು ಮುಖ್ಯ ಕವಯಿತ್ರಿಯರು

೮.೧ ಬೆಳಗೆರೆ ಜಾನಕಮ್ಮ

೮.೨ ವಿಜಯಾದಬ್ಬೆ

೮.೩ ಪ್ರತಿಭಾ ನಂದಕುಮಾರ್

೮.೪ ವೈದೇಹಿ

## ಅಧ್ಯಾಯ ೮

## ಮಹಿಳಾ ಕಾವ್ಯದ ಅನನ್ಯತೆ

ಕಲಾಭಿವ್ಯಕ್ತಿಯಲ್ಲಿ ಸಾಹಿತ್ಯದ ಪಾತ್ರ ಅನನ್ಯವಾದದ್ದು. ಸದಾ ಸತ್ಯದ ಪರವಾದ ಅಪರಿಚಿತ, ಅನೂಹ್ಯ ಭಾವನೆಗಳಿಗೆ ರೂಪಕೊಡುವ ಈ ಮಾಧ್ಯಮ ಮುಚ್ಚಿದ ಬದುಕಿನ ಅನಾವರಣದ ಹಾದಿಯಾಗಿದೆ. ಯಾವ ಭೇದಭಾವವಿಲ್ಲದೆ ಅನುಭವದ ಸೌಂದರ್ಯಾತ್ಮಕ ಅಭಿವ್ಯಕ್ತಿಯಾದ ಸಾಹಿತ್ಯ ಕೂಡ ಸ್ಥಾನೀಕರಣದ ಸಂದರ್ಭದಲ್ಲಿ ಅಸಮಾನತೆಯನ್ನು ಎದುರಿಸಬೇಕಾಗಿದೆ. ಈ ವಾಕ್ಯವನ್ನು ಎಲ್ಲ ಬಗೆಯ ಅಲಕ್ಷಿತ ಸುಮುದಾಯದ ಅಭಿವ್ಯಕ್ತಿಯನ್ನು ಅನುಲಕ್ಷಿಸಿ ಹೇಳಬಹುದಾದರೂ ಮಹಿಳಾ ಸಾಹಿತ್ಯದ ಸಂದರ್ಭದಲ್ಲಿ ಇದು ಇನ್ನೂ ಹೆಚ್ಚು ಆಳ ಹಾಗೂ ಸಂಕೀರ್ಣ ನೆಲೆಗಳಿಂದ ಕೂಡಿದೆ. ಏಕೆಂದರೆ ಹೆಚ್ಚಿನ ಸಂದರ್ಭದಲ್ಲಿ ಮಹಿಳಾ ಸಾಹಿತ್ಯವನ್ನು ಒಪ್ಪಿ ಮಾನ್ಯಮಾಡುತ್ತಿರುವಾಗಲೂ ಅದನ್ನು ಪರಿಶೀಲಿಸುವ ವಿಧಾನ ಸಾಂಪ್ರದಾಯಿಕ ವಿಧಾನವನ್ನೇ ಅನುಸರಿಸಿ ಮುಂದೆ ಸಾಗುತ್ತಿದೆ. ಬಿ.ಎನ್.ಸುಮಿತ್ರಾಬಾಯಿ ಗುರುತಿಸುವಂತೆ "ಮಹಿಳೆಯರ ಕಾವ್ಯಕ್ಷೇತ್ರ ಪ್ರವೇಶವನ್ನು ಸಾಹಿತ್ಯ ಲೋಕವೂ ಆಸಕ್ತಿಯಿಂದ ಸ್ವಾಗತಿಸಿದೆ ಎಂಬುದಕ್ಕೆ ಮಹಿಳೆಯರ ಹಲವು ಕವನಸಂಕಲನಗಳಲ್ಲಿನ ಮುನ್ನುಡಿಕಾರರ ನುಡಿಗಳು ಸಾಕ್ಷಿಯೊದಗಿಸಬಲ್ಲವು. ಈ ಮಹಿಳಾ ಕವಿಗಳು ಈಗಾಗಲೇ ಸಮೃದ್ಧವಾಗಿರುವ ಕನ್ನಡ ಕಾವ್ಯಪರಂಪರೆಗೆ ಹೊಸದೇನನ್ನು ನೀಡಬಲ್ಲರು ಎಂಬುದು ಸಾಕಷ್ಟು ಗಮನ ಸೆಳೆದಿರುವ ಪ್ರಶ್ನೆಯಾಗಿದೆ. ಆದರೆ ಈವರೆಗೆ ಪ್ರಕಟವಾಗಿರುವ ಮಹಿಳಾ ಕಾವ್ಯದ ಗಂಭೀರ ವಿಮರ್ಶೆಯು ಅಷ್ಟಾಗಿ ನೆಡೆದಂತಿಲ್ಲ."[1] ಎನ್ನುವ ಮಾತು ಇಂದಿಗೂ ಪ್ರಸ್ತುತ. ಬೆರಳೆಣಿಕೆಯ ವಿಮರ್ಶೆಗಳನ್ನು ಬಿಟ್ಟರೆ ಹಿಂದಿನಿಂದಲೂ ಮಹಿಳಾ ಸಾಹಿತ್ಯವನ್ನು ಕುರಿಂತಂತೆ ಸರಿಯಾದ ಚರ್ಚೆ, ವಿಮರ್ಶೆ, ಸ್ಥಾನ ನಿರ್ದೇಶನಗಳಿಲ್ಲದೆ ಸೂಕ್ತ ಮಾನ್ಯತೆ ದೊರೆತಿಲ್ಲದಿರುವುದು ಮಹಿಳಾ ಸಾಹಿತ್ಯಾಧ್ಯಯನದಿಂದ ಸ್ಪಷ್ಟವಾಗುತ್ತದೆ. ಆರಂಭದ ಹಂತದಲ್ಲಿ ಮಹಿಳಾ ಅಭಿವ್ಯಕ್ತಿಯ ಬಗೆಗಿನ ಅವಜ್ಞೆ, ಅಜ್ಞಾನ ತೊಡಕಾಗಿದ್ದರೆ ನಂತರದ ಹಂತದಲ್ಲಿ ಲಿಂಗರಾಜಕಾರಣದ ಪೂರ್ವ ಗ್ರಹೀತಗಳು ಮಹಿಳಾ ಅಭಿವ್ಯಕ್ತಿಯ ಸ್ಥಾನ ನಿರ್ದೇಶನದಲ್ಲಿ ಅಡ್ಡಿಯನ್ನುಂಟುಮಾಡಿವೆ. ಆ ಕಾರಣದಿಂದಾಗಿ ಇಂದು ಮಹಿಳಾ ಸಾಹಿತ್ಯವನ್ನು ಕುರಿತಂತೆ ಹೆಚ್ಚು ಹೆಚ್ಚು ಅಧ್ಯಯನಗಳು ನಡೆಯುತ್ತಿವೆ. ಪ್ರಸ್ತುತ ಅಧ್ಯಯನದಲ್ಲಿ ಕನ್ನಡ ಮಹಿಳಾ ಸಾಹಿತ್ಯ 'ಮಹಿಳಾ ಸಾಹಿತ್ಯ' ಎಂಬ ಹಣೆಪಟ್ಟಿಯಿಂದ ಹೊರಬರಬಹುದಾದ ಎಲ್ಲಾ ಲಕ್ಷಣಗಳನ್ನು ಹೊಂದಿದೆ ಎಂಬುದರ ಕಡೆಗೆ ಗಮನ ಸೆಳೆಯಲಾಗಿದೆ.

ಏಕೆಂದರೆ ಅಭಿವ್ಯಕ್ತಿಯ ಸಂದರ್ಭದಲ್ಲಿ 'ಪುರುಷಾಭಿವ್ಯಕ್ತಿ' ಎಂಬ ಪ್ರತ್ಯೇಕೀಕರಣ ಎಷ್ಟು ಹಾಸ್ಯಾಸ್ಪದವೋ, 'ಮಹಿಳಾ ಅಭಿವ್ಯಕ್ತಿ' ಎಂಬ ಭಿನ್ನತೆಯೂ ಕೂಡ ಅಷ್ಟೇ ಹಾಸ್ಯಾಸ್ಪದವಾದದ್ದು. ಒಂದು ವೇಳೆ ಗಂಡಿನ ಅಭಿವ್ಯಕ್ತಿ ಸಾರ್ವಕಾಲಿಕ ಹಾಗೂ ಸಾರ್ವತ್ರಿಕವಾದದ್ದು ಎನ್ನುವುದಾದರೆ ಮಹಿಳಾ ಅಭಿವ್ಯಕ್ತಿ ಕೂಡ ಅಷ್ಟೇ ಶಕ್ತವಾದದ್ದು ಎಂಬುದನ್ನು ನಿಸ್ಸಂದೇಹವಾಗಿ ಒಪ್ಪಬೇಕು. ಈ ಹಿನ್ನೆಲೆಯಲ್ಲಿ ಕನ್ನಡ ಸಾಹಿತ್ಯದ ಶ್ರೇಷ್ಠ, ಬಹುಮುಖ್ಯ ಎನ್ನಬಹುದಾದ ಸಾಹಿತ್ಯ ರಚನೆಯ ಹಾದಿಯಲ್ಲಿ ಲೇಖಕಿಯರ ಬರವಣಿಗೆ ಕೂಡ ಸಾಗಿದೆ. ಆ ನಿಟ್ಟಿನಲ್ಲಿ ಕಾವ್ಯಾತ್ಮಕ ನೆಲೆ ಹಾಗೂ ಮೌಲ್ಯವ್ಯವಸ್ಥೆಗೆ ಮುಖಾಮುಖಿಯಾಗುವ ಬಗೆ ಎರಡೂ ಆಯಾಮಗಳಲ್ಲಿಯೂ ಕೂಡ ಬಹುಮುಖ್ಯ ಎನಿಸಬಹುದಾದ ಲೇಖಕಿಯರ ಕಾವ್ಯವನ್ನು ಇಲ್ಲಿ ಸಂಕ್ಷಿಪ್ತವಾಗಿ ಚರ್ಚೆಗೆ ಒಳಪಡಿಸಲಾಗಿದೆ.

ಮಹಿಳಾ ಕಾವ್ಯದ ಅಧ್ಯಯನದ ಸಂದರ್ಭದಲ್ಲಿ ಕಾವ್ಯದ ಭಾಷೆ, ಬಂಧ, ಅಭಿವ್ಯಕ್ತಿಯಲ್ಲಿನ ಭಿನ್ನತೆ ಮತ್ತು ವೈವಿಧ್ಯತೆಯನ್ನು ಗುರುತಿಸುವುದು ಮುಖ್ಯ. ಮಹಿಳಾ ಕಾವ್ಯವನ್ನು ಕುರಿತಂತೆ ನಡೆದಿರುವ ಹೆಚ್ಚಿನ ವಿಮರ್ಶೆಗಳು "ಹೆಣ್ಣಿನ ಸ್ವಾತಂತ್ರ್ಯದ ಹಂಬಲವನ್ನು 'ಕೀಳರಿಮೆ' 'ಅಹಂನಿಷ್ಠೆ' 'ಗಂಡಿನ ಜೊತೆಗಿನ ಸ್ಪರ್ಧೆ' ಇತ್ಯಾದಿಯಾಗಿ ಹೆಸರಿಸಿವೆ".[೨] ಇದು ಮಹಿಳಾ ಸಾಹಿತ್ಯವನ್ನು ನೋಡುವಲ್ಲಿ ವ್ಯವಸ್ಥೆ ತೋರುವ ಮುಜುಗರ ಹಾಗೂ ಪೂರ್ವಗ್ರಹೀತ ಮನಸ್ಥಿತಿಯ ಸಂಕೇತ. ಬಿ.ಎನ್.ಸುಮಿತ್ರಾಬಾಯಿ ಮಹಿಳಾ ಸಾಹಿತ್ಯದ ಅಧ್ಯಯನ ಕ್ರಮವನ್ನು ಕುರಿತಂತೆ "ಹೆಣ್ಣು ತನ್ನ ಸ್ಥಿತಿಯು ಇತರರದ್ದಕ್ಕಿಂತ ಹೀನವೂ, ಸೀಮಿತವೂ, ಬದ್ಧವೂ ಆಗಿರುವುದಕ್ಕೆ ತನ್ನ ತಪ್ಪೇನೂ ಇಲ್ಲದಿದ್ದರೂ ಸಾಮಾಜಿಕ, ಸಾಂಸ್ಕೃತಿಕ ಕಾರಣಗಳವೆ ಎಂಬ ಅರಿವು ಮೊದಲಿಗೆ ಉಂಟಾದಾಗ ಅದು ವಿರೋಧ, ಪ್ರತಿಭಟನೆ, ಆಕ್ರೋಶದ ನೋವಾಗಿ ವ್ಯಕ್ತವಾಗುವುದು ಸಹಜ. ಹಾಗೆಯೇ ಅನುಭವದ ಹರವು ಹೆಚ್ಚಿದಂತೆಲ್ಲ, ವಾಸ್ತವವನ್ನು ಗ್ರಹಿಸಬಲ್ಲ ನೋಟ ವಿಸ್ತರಿಸುವುದರಿಂದ ವ್ಯಕ್ತಿಗತ ಆವೇಶವೇ ಉದಾತ್ತರೂಪಧರಿಸಿ, ಇಡೀ ಮಾನವತೆಯ ಸಮಾನತೆ ಕುರಿತ ವಿಶ್ವಮಾನವೀಯ ಚಿಂತನೆಯಾಗಿಯೂ ಸಾಹಿತ್ಯದಲ್ಲಿ ರೂಪ ತಳೆಯಬಹುದು"[೩] ಎನ್ನುವ ಮಾತು ಲೇಖಕಿಯರ ಪ್ರಜ್ಞಾವಿನ್ಯಾಸದಲ್ಲಿ ಆದ ಸ್ಥಿತ್ಯಂತರಗಳನ್ನೂ, ಮಹಿಳಾ ಕಾವ್ಯದ ಅನನ್ಯತೆಯನ್ನೂ ಎತ್ತಿ ಹಿಡಿಯುತ್ತದೆ. ಮುಂದಿವರಿದು "ನಮ್ಮ ಮಹಿಳಾ ಕವಿಗಳು ಯಾವ ಪಕ್ಷ ವಹಿಸುತ್ತಿದ್ದಾರೆ ಎಂಬುದಕ್ಕಿಂತ ತಮ್ಮ ಭಾವ-ವಿಚಾರ, ಅನುಭವಗಳಿಗೆ ಎಷ್ಟರ ಮಟ್ಟಿಗೆ ಕಲಾತ್ಮಕ ಅಭಿವ್ಯಕ್ತಿ ನೀಡಲು ಸಮರ್ಥರಾಗಿದ್ದಾರೆ ಎಂಬುದು ಹೆಚ್ಚು ಅರ್ಥಪೂರ್ಣ ಪ್ರಶ್ನೆಯಾಗುತ್ತದೆ"[೪] ಎನ್ನುತ್ತಾರೆ. ಮಹಿಳಾ ಸಾಹಿತ್ಯವನ್ನು ಕುರಿತಾದ ಇಂದಿನ ವಿಮರ್ಶೆ ಕೂಡ ಈ ನಿಟ್ಟಿನಲ್ಲಿ ಸಾಗಬೇಕಾಗಿದೆ. ಅದರ ಒಂದು ಪುಟ್ಟ ಪ್ರಯತ್ನವನ್ನು **ಮಹಿಳಾ ಕಾವ್ಯದ ಅನನ್ಯತೆಯ ವಿನ್ಯಾಸ** ಎಂಬ ಅಧ್ಯಾಯದಲ್ಲಿ ಮಾಡಲಾಗಿದೆ.

ತಿರುಮಲಾಂಬ ಅವರಿಂದ ಇಂದಿನವರೆಗೂ ಬರವಣಿಗೆಯಲ್ಲಿ ತೊಡಗಿರುವ ಲೇಖಕಿಯರ ಕಾವ್ಯದ ವಸ್ತು, ಸ್ವರೂಪ ಮತ್ತು ಆಶಯಗಳನ್ನು ಆಧರಿಸಿ ಪ್ರಾತಿನಿಧಿಕ ಲೇಖಕಿಯರ ಕಾವ್ಯವನ್ನು ಇಲ್ಲಿ ಚರ್ಚೆಗೆ

ಒಳಪಡಿಸಲಾಗಿದೆ. ಕಾಲಕಾಲಕ್ಕೆ ಬದಲಾಗುತ್ತಿರುವ ವಸ್ತು, ಸ್ವರೂಪ, ತಂತ್ರಗಾರಿಕೆ, ಅಭಿವ್ಯಕ್ತಿಯ ಕ್ರಮ ಎಲ್ಲದರಲ್ಲಿಯೂ ವಿಶಿಷ್ಟ ಹಾಗೂ ಬಹುಮುಖ್ಯ ಎನಿಸಬಹುದಾದ ಲೇಖಕಿಯರಾದ ಬೆಳಗೆರೆ ಜಾನಕಮ್ಮ, ವಿಜಯಾದಬ್ಬೆ, ಪ್ರತಿಭಾನಂದಕುಮಾರ್ ಹಾಗೂ ವೈದೇಹಿ ಇವರ ಕಾವ್ಯವನ್ನು ಅಧ್ಯಯನಕ್ಕೆ ಆಯ್ದುಕೊಳ್ಳಲಾಗಿದೆ.

**೮.೧ ಬೆಳಗೆರೆ ಜಾನಕಮ್ಮ**

ಆರಂಭದ ಮುಖ್ಯ ಲೇಖಕಿಯರಲ್ಲಿ ಒಬ್ಬರಾದ ಬೆಳಗೆರೆ ಜಾನಕಮ್ಮ ಕನ್ನಡ ಕಾವ್ಯಕ್ಕೆ ನೀಡಿರುವ ಕೊಡುಗೆ ವಿಶಿಷ್ಟವಾದದ್ದು. ಭಾಷೆ, ತಂತ್ರ, ರೂಪ, ಅಭಿವ್ಯಕ್ತಿ ಕ್ರಮ, ವ್ಯವಸ್ಥೆಗೆ ಎದುರಾಗುವ ವಿಧಾನ, ಎಗ್ಗಿಲ್ಲದ ನಿರೂಪಣಾ ಕ್ರಮ ಕಾವ್ಯಕ್ಕೆ ನಾವಿನ್ಯತೆಯನ್ನೂ, ಸಾರ್ವತ್ರಿಕತೆಯನ್ನೂ ತಂದುಕೊಟ್ಟಿದೆ. ಬೆಳಗೆರೆ ಜಾನಕಮ್ಮ ಆ ಕಾಲಘಟ್ಟದ ಇತರೆ ಲೇಖಕಿಯರಿಗಿಂತ ಭಿನ್ನವಾಗುವುದು ಅವರ ಕಾವ್ಯದಲ್ಲಿ ವ್ಯಕ್ತವಾಗುವ ಸ್ವಘನತೆ ಮತ್ತು ಆತ್ಮವಿಶ್ವಾಸದ ನೆಲೆಯಲ್ಲಿ. ಮತ್ತು ಅದಕ್ಕಿಂತ ಮುಖ್ಯವಾಗಿ ಹೆಣ್ಣಿನ ವ್ಯಕ್ತಿತ್ವವನ್ನು ಹಿಡಿದಿಡುವ ವಿಧಾನದಲ್ಲಿ. ೧೯ನೇ ಶತಮಾನದ ಸುಧಾರಣಾವಾದದ ಪ್ರೇರಣೆ ಇದ್ದಾಗ್ಯೂ ಅದನ್ನು ಮೀರಿದ ಆಲೋಚನಾ ವಿಧಾನ ಇವರದ್ದು. ಹೆಣ್ಣಿನ ವ್ಯಕ್ತಿತ್ವವನ್ನು ಕಟ್ಟಿಕೊಡುವಲ್ಲಿ ಇವರು ತೋರುವ ದಿಟ್ಟತನ, ವ್ಯವಸ್ಥೆಗೆ ಮುಖಾಮುಖಿಯಾಗುವ ವಿಧಾನ ಇಂದಿಗೂ ಪ್ರಸ್ತುತ. ವಸ್ತುವಿನ ಆಯ್ಕೆ ಮತ್ತು ತಂತ್ರಗಾರಿಕೆಯಲ್ಲಿ ನಾವಿನ್ಯತೆಯನ್ನು ಮೆರೆಯುವ ಜಾನಕಮ್ಮ ಭಾಷೆ ಬಳಕೆಯ ಸಂದರ್ಭದಲ್ಲಿ ತನ್ನೆಲ್ಲಾ ಮಿತಿಗಳ ನಡುವೆಯೂ ಎಚ್ಚರಿಕೆಯಿಂದ ಭಾಷೆಯನ್ನು ದುಡಿಸಿಕೊಂಡಿದ್ದಾರೆ.

ಜಾನಕಮ್ಮನವರ ಅಭಿವ್ಯಕ್ತಿ ಮಾದರಿಯನ್ನು ಎರಡು ರೀತಿಯಲ್ಲಿ ಗುರುತಿಸಬಹುದು. ಮೊದಲನೆಯದು ಅನುಭವಗಳನ್ನು ನೇರವಾಗಿ, ದಿಟ್ಟವಾಗಿ ಅಭಿವ್ಯಕ್ತಪಡಿಸುವ ವಿಧಾನ. ಇಲ್ಲಿ ಸ್ವಗತದ ಮೂಲಕ ಆತ್ಮಸ್ಥೈರ್ಯವನ್ನು ಪಡೆಯುವ, ವ್ಯವಸ್ಥೆ ಹೆಣ್ಣನ್ನು ನಡೆಸಿಕೊಳ್ಳುತ್ತಿರುವುದರ ಬಗೆಗೆ ಮರುಕ ತೋರುವ, ಹೆಣ್ಣಿನ ಸ್ಥಿತಿಯ ಬಗೆಗೆ ಅನುಕಂಪ ವ್ಯಕ್ತಪಡಿಸುವ ವಿಧಾನ ಕಂಡುಬರುತ್ತದೆ. ಎರಡನೆಯ ಮಾದರಿ ವ್ಯವಸ್ಥೆ ಹೆಣ್ಣನ್ನು ನಿಯಂತ್ರಿಸುತ್ತಿರುವ ಬಗೆಯನ್ನು ನಾಟಕೀಯವಾಗಿ ಕಟ್ಟಿಕೊಡುವ ವಿಧಾನದ್ದು. ಇಲ್ಲಿ ವ್ಯವಸ್ಥೆಯ ಹುನ್ನಾರಗಳನ್ನು ಬಯಲಿಗೆಳೆಯುವ, ಅದರ ಲೋಪದೋಷಗಳನ್ನು ಎತ್ತಿ ತೋರಿಸುವ, ಅದರ ವಿರುದ್ಧ ಸಿಡಿದೇಳುವ ವಿಧಾನ ಕಂಡುಬರುತ್ತದೆ. **ದಟ್ಟಿ, ಮೂರ್ಖರಾಯ, ಎಚ್ಚರಿಕೆ, ಜಂಬದಕೋಳಿ** ಮುಂತಾದ ಕವನಗಳು ಗಂಡಿನ ಭಾಷೆ, ದರ್ಪ, ಸ್ವಯಂ ಪ್ರತಿಷ್ಠೆ ಹೆಣ್ಣನ್ನು ನಿಯಂತ್ರಿಸಲು ಏನೆಲ್ಲಾ ಹುನ್ನಾರಗಳ ಮೂಲಕ ಕಾರ್ಯನಿರ್ವಹಿಸುತ್ತಿವೆ ಎಂಬುದನ್ನು ಯಶಸ್ವಿಯಾಗಿ ಹಿಡಿದಿಡುತ್ತವೆ. **ಗಂಡ, ಚಂಡಶಾಸನ, ಎಚ್ಚರಿಕೆ, ಮೌನ, ಪರಮಸುಖ, ಕಲ್ಯಾಣ, ಜಂಬದ ಕೋಳಿ, ಹೆಣ್ಣಾಟ, ತಾಟಾಪೋಟಿ, ಯಜಮಾನ** ಮುಂತಾದ ಕವನಗಳು ಹೆಣ್ಣು, ಹೆಣ್ತನ, ಹೆಣ್ಣಿನ ಸಮಸ್ಯೆಗಳನ್ನು ಕೇಂದ್ರೀಕರಿಸಿ ರಚನೆಗೊಂಡ

ಕವನಗಳಾಗಿವೆ. ಜಾನಕಮ್ಮನವರ ಎಲ್ಲಾ ಕವನಗಳೂ ವೈಯಕ್ತಿಯತೆಯನ್ನು ಮೀರಿ ಹೆಣ್ಣು ಮತ್ತು ಹೆಣ್ಣಿನ ಸವಾಲುಗಳನ್ನು ಸಾರ್ವತ್ರಿಕ ಹಾಗೂ ಸಾರ್ವಕಾಲಿಕ ನೆಲೆಗಟ್ಟಿನಲ್ಲಿ ಹಿಡಿದಿಡಲು ಪ್ರಯತ್ನಿಸುತ್ತವೆ.

ಪುರುಷ ಪ್ರಧಾನ ವ್ಯವಸ್ಥೆ ಹೆಣ್ಣನ್ನು ನಿಯಂತ್ರಿಸಲು ಹತ್ತು ಹಲವು ತಂತ್ರಗಾರಿಕೆಗಳನ್ನು ಬಳಸುತ್ತಾ ಬಂದಿದೆ. ಅವುಗಳಲ್ಲಿ ಹೆಣ್ಣನ್ನು ಹೆಣ್ಣಾಗಿ ನೋಡದೆ ಎರಡು ವಿರುದ್ಧ ಎನ್ನಬಹುದಾದ ಪಾತ್ರಮಾದರಿಗಳಲ್ಲಿ ಗುರುತಿಸುವ ಕ್ರಮ ಪ್ರಮುಖವಾದದ್ದು. ಒಂದು ಇತ್ಯಾತ್ಮಕ ಮಾದರಿಯದ್ದಾದರೆ ಮತ್ತೊಂದು ನೇತ್ಯಾತ್ಮಕ ಮಾದರಿಯದ್ದು. ಈ ಎರಡೂ ಮಾದರಿಗಳಲ್ಲಿ ಸಹಜ ಹೆಣ್ಣಿನ ಅಸ್ತಿತ್ವವೇ ಅಂಚಿಗೆ ಸರಿಯಲ್ಪಟ್ಟಿದೆ. ನವೋದಯ ಕಾಲದ ಬಹುತೇಕ ಬರಹಗಾರರು ಆದರ್ಶೀಕೃತ ಪಾತ್ರವೈಭವಗಳಿಗೆ ಮರುಳಾಗಿ ಹೆಣ್ಣಿನ ಸ್ವ ವ್ಯಕ್ತಿತ್ವವನ್ನು ಗುರುತಿಸುವಲ್ಲಿ ಅಸಮರ್ಥರಾದರು. ಆದರೆ ಅದೇ ಕಾಲಘಟ್ಟದಲ್ಲಿ ಬರೆದ ಜಾನಕಮ್ಮ ಹೆಣ್ಣಿನ ವ್ಯಕ್ತಿತ್ವವನ್ನು ಅವಳೆಲ್ಲಾ ಶಕ್ತಿ ಮತ್ತು ಮಿತಿಗಳಲ್ಲಿಯೇ ಹಿಡಿದಿಡಲು ಪ್ರಯತ್ನಿಸುತ್ತಾರೆ. ಈ ಮಿತಿಗಳೂ ಕೂಡ ವ್ಯವಸ್ಥೆಯಿಂದ ಹೆಣೆಯಲ್ಪಟ್ಟವು ಎಂಬ ಸ್ಪಷ್ಟವಾದ ಅರಿವು ಲೇಖಕಿಗಿದೆ. ಆದುದರಿಂದಲೇ ತಾನು ತಾನಾಗುವ ಹಾಗೂ ತನ್ನ ಸಹಜತೆಯೊಂದಿಗೆ ಗುರುತಿಸಿಕೊಳ್ಳುವ ಹಂಬಲ ಇವರ ಬದುಕು ಹಾಗೂ ಬರವಣಿಗೆಯ ಕೇಂದ್ರವಾಗಿರುವುದು ಕವನಗಳಿಂದ ಕಂಡುಬರುತ್ತದೆ.

ಜಾನಕಮ್ಮನವರ **ಪೀಠಿಕೆ** ಕವನ ಮಹಿಳಾ ಕಾವ್ಯಮೀಮಾಂಸೆಯನ್ನು ಕಟ್ಟಿಕೊಡುವ ಆಶಯದ ದೃಷ್ಟಿಯಿಂದ ಬಹು ಮುಖ್ಯವಾದದ್ದು. ಈ ಕವನ ವ್ಯವಸ್ಥೆ ಹೆಣ್ಣನ್ನು ಗ್ರಹಿಸುತ್ತಿರುವ ಕ್ರಮವನ್ನು, ಜೊತೆಗೆ ತನ್ನ ಕಾವ್ಯ ಗ್ರಹಿಕೆಯ ಕ್ರಮವನ್ನೂ ಕುರಿತಂತೆ ಇರುವ ನಂಬಿಕೆಗಳನ್ನು ಒಡೆಯಲು ಪ್ರಯತ್ನಿಸುತ್ತಿದೆ.

> ಹೊಗಳುವುದು ಬೇಡೆನಗೆ ತೆಗಳುವುದು ಬೇಡೆನಗೆ
> ನನ್ನೊಳಗೆ ಬಂದುದೇ ಸಾಕು ಸಾಕು!
> ಬಯಸುವುದು ಬೇಡೆನಗೆ ಫಲಿಸುವುದು ಬೇಡೆನಗೆ
> ಒಳೊಳಗಿನೆನ್ನೊಲವೆ ಸಾಕು ಸಾಕು!
> ಏರುವುದು ಬೇಡೆನಗೆ ಹಾರುವುದು ಬೇಡೆನೆಗೆ
> ಊರುಗೋಲಿನ ಪಯಣ ಸಾಕು ಸಾಕು!
> ಅವನೆಲ್ಲ ತುಂಬಿಡಲು ತಾನಿಲ್ಲ ಬಂದಿರಲು
> ಇದಕಿಂತ ಜನಕಜೆಗೆ ಏನು ಬೇಕು? "

ಇಲ್ಲಿ ಹೆಣ್ಣಿನ ವ್ಯಕ್ತಿತ್ವ ಮತ್ತು ಅಭಿವ್ಯಕ್ತಿಯನ್ನು ಕುರಿತಂತೆ ವ್ಯವಸ್ಥೆ ತೋರುವ ಹೊಗಳಿಕೆ ಮತ್ತು ತೆಗಳಿಕೆಗಳ 'ಋಣಭಾರ'ದಿಂದ ಬಿಡುಗಡೆಗೊಳ್ಳುವ ಬಯಕೆ ಇದೆ. ಏಕೆಂದರೆ ಇವುಗಳ 'ಅಸಹಜ' ನಡೆಯ ಅರಿವು ಲೇಖಕಿಗೆ ಇರುವುದರಿಂದಲೇ ತನ್ನ ಶಕ್ತಿ ಸಾಮರ್ಥ್ಯಕ್ಕೆ ತಕ್ಕ ಮನ್ನಣೆಯ ಅಪೇಕ್ಷೆ ವ್ಯಕ್ತವಾಗುತ್ತದೆ. 'ನನ್ನೊಳಗೆ ಬಂದುದೇ ಸಾಕು ಸಾಕು' 'ಒಳ ಒಳಗಿನೆನ್ನೊಲವೆ ಸಾಕು ಸಾಕು' 'ಊರುಗೋಲಿನ ಪಯಣ ಸಾಕು ಸಾಕು' ಎಂಬ ವಾಕ್ಯಗಳು ಹಂತ ಹಂತವಾಗಿ ಸಾಗುತ್ತಿರುವ ಆತ್ಮವಿಶ್ವಾಸದ ನೆಲೆಗಳನ್ನು ತಿಳಿಸುತ್ತದೆ. 'ಸಾಕು ಸಾಕು' ಎನ್ನುವ ಪುನರುಕ್ತಿ ಆದಷ್ಟು ಬೇಗ ವ್ಯವಸ್ಥೆಯ ಹೊರೆಗಳಿಂದ ಬಿಡುಗಡೆ

ಪಡೆಯುವ ಹಂಬಲವಾಗಿ ಮೂಡಿಬಂದಿದೆ. ಆರಂಭದ ಸಾಲು ತನ್ನೊಳಗಿನ ಶಕ್ತಿಯ ಇರುವಿಕೆಯನ್ನು ತಿಳಿಸಿದರೆ ನಂತರದ ಸಾಲು ತನ್ನ ಆಂತರ್ಯದ ಶಕ್ತಿ ಸಾಮರ್ಥ್ಯವಾಗಿ ಹೊರ ಹೊಮ್ಮುವ, ಆ ಮೂಲಕವೇ ತನ್ನ ಸ್ವಂತಿಕೆಯನ್ನು, ಇರುವಿಕೆಯನ್ನು ಕಂಡುಕೊಳ್ಳುವ ಆತ್ಮವಿಶ್ವಾಸವಾಗಿ ಮೂಡಿಬಂದಿದೆ. ಮುಂದುವರಿದು 'ಏರುವುದು ಬೇಡೆನಗೆ, ಹಾರುವುದು ಬೇಡೆನೆಗೆ ಊರುಗೋಲಿನ ಪಯಣ ಸಾಕು ಸಾಕು ಎನ್ನುವಲ್ಲಿ 'ಏರುವುದು' 'ಹಾರುವುದು' ಮತ್ತು 'ಊರುಗೋಲಿನ ಪಯಣ' ಮೂರನ್ನೂ ಸಮಾನಪಾತಳಿಯಲ್ಲಿಟ್ಟು ನೋಡಲಾಗಿದೆ. 'ಏರುವುದು' 'ಹಾರುವುದು' ವ್ಯವಸ್ಥೆಯಿಂದ 'ನೀಡಲ್ಪಡುವವು' ಎಂಬ ಅರಿವೇ ಅದನ್ನು 'ಊರುಗೋಲಿನ ಪಯಣ'ಕ್ಕೆ ಹೋಲಿಸಲು ಕಾರಣವಾಗಿದೆ. ಇಲ್ಲಿ 'ಊರುಗೋಲಿನ ಪಯಣ' ಧ್ವನಿಪೂರ್ಣವಾಗಿ ವ್ಯವಸ್ಥೆಯ ಅಪೇಕ್ಷೆಯ, ಹೆಣ್ಣಿನ ಇದುವರೆಗಿನ ಸ್ಥಿತಿಯ ಪ್ರತಿಬಿಂಬವಾಗಿ ಮೂಡಿಬಂದಿದೆ. 'ಪಯಣ' ಎನ್ನುವುದು ಸಾಗುವಿಕೆಯ ನಿರಂತರತೆಯನ್ನೂ, ಅದರ ಏಕತಾನತೆಯನ್ನು ನಿರಾಕರಿಸುತ್ತಲೇ ಹೊಸ ಹಾದಿಯಲ್ಲಿ ತಾನು ಸಾಧಿಸಿರುವ ಯಶಸ್ಸನ್ನು ತಿಳಿಸುತ್ತದೆ. ಈಗಾಗಲೇ ತನ್ನಲ್ಲಡಕವಾಗಿರುವ ಶಕ್ತಿ ಸಾಮರ್ಥ್ಯವನ್ನು ಒಂದೆಡೆ ಸಂಗ್ರಹಿಸುವುದಷ್ಟೇ ತನ್ನ ಪಾಲಿಗುಳಿದಿರುವುದು ಎನ್ನುವ ಕವಯಿತ್ರಿಯ ಆಶಯ 'ಅವನೆಲ್ಲ ತುಂಬಿಡಲು ತಾನಿಲ್ಲಿ ಬಂದಿರುವುದು' ಎನ್ನುವ ಮೂಲಕ ತನ್ನ, ತನ್ನ ತನದ ಬಗೆಗಿನ ಆತ್ಮವಿಶ್ವಾಸವಾಗಿ ಮೂಡಿಬಂದಿದೆ. 'ಅವನೆಲ್ಲ' ಎನ್ನುವುದು ನಾಮವಾಚಕದಂತೆ ಕೇಳುತ್ತಿದ್ದರೂ ಅದು ಕ್ರಿಯಾವಾಚಕವಾಗಿ ಕಾರ್ಯನಿರ್ವಹಿಸುತ್ತಿರುವುದು ವಿಶೇಷ. 'ಇದಕಿಂತ ಜನಕಜೆಗೆ ಏನು ಬೇಕು'? ಎನ್ನುವುದು ತಾನು ಪಡೆದಿರುವುದರ ಬಗೆಗಿನ ಸಾರ್ಥಕ್ಯ, ಹೆಮ್ಮೆ ಮತ್ತು ಆತ್ಮತೃಪ್ತಿಯ ದ್ಯೋತಕವಾಗಿದೆ. ಈ ಬಗೆಯ ಆತ್ಮವಿಶ್ವಾಸ ಇವರ 'ಮೂಲಾತ್ಮ', 'ಸುಮ್ಮನಿರು ಸಾಕು' ಮುಂತಾದ ಕವನಗಳಲ್ಲಿ ಇನ್ನೂ ಹೆಚ್ಚು ಶಕ್ತಿಯುತವಾಗಿ ಮೂಡಿಬಂದಿವೆ.

**ಮೂಲಾತ್ಮ** ಕವನ ಸೃಷ್ಟಿ ಹಾಗೂ ಸೃಷ್ಟಿಕರ್ತನ ನಿಯಮಗಳನ್ನು ಒಡೆಯುವ, ತನ್ನ ಆಂತರ್ಯದ ಶಕ್ತಿಯನ್ನು ಕಂಡುಕೊಳ್ಳುವ ಪ್ರಯತ್ನದ್ದಾಗಿದೆ. ಹೆಣ್ಣಿನ ಅಸಮಾನತೆಯ ನೆಲೆಗಳ ಹುಡುಕಾಟವೇ ಜಾನಕಮ್ಮನವರ ಕಾವ್ಯದ ಕೇಂದ್ರ ಕಾಳಜಿಯಾಗಿರುವುದರಿಂದ ಸಹಜವಾಗಿಯೇ ಸೃಷ್ಟಿರಹಸ್ಯವನ್ನು ಹೆಣ್ಣಿನ ಬಿಡುಗಡೆಯ ನೆಲೆಯಲ್ಲಿ ಗ್ರಹಿಸಲು ಪ್ರಯತ್ನಿಸಿದ್ದಾರೆ. ಸೃಷ್ಟಿನಿಯಮದ ಹೆಸರಿನಲ್ಲಿ ಹಲವು ರೀತಿಯ ಬಂಧನಗಳನ್ನೆದುರಿಸುತ್ತಿರುವ ಹೆಣ್ಣು ಆ ರಹಸ್ಯಗಳನ್ನು ಅರಿಯುವುದರ ಮೂಲಕ ಅದರಿಂದ ಬಿಡುಗಡೆ ಪಡೆಯಲು ಸಾಧ್ಯ ಎಂಬ ಅರಿವು ಈ ಕವನದ ಆರಂಭದಲ್ಲಿಯೇ ವ್ಯಕ್ತವಾಗುತ್ತದೆ. 'ಬಯಲಾಯ್ತು ಬಯಲಾಯ್ತು ಬಟ್ಟ ಬಯಲಾಯ್ತು। ಸೃಷ್ಟಿ ಕರ್ತನ ಗುಟ್ಟು ತಿಳಿಯಲನುವಾಯ್ತು' ಎನ್ನುವುದು ಹೊಸ ಜ್ಞಾನ, ಅರಿವಿನ ಸಾಕ್ಷಾತ್ಕಾರ ವಾಸ್ತವವನ್ನು ಅರಿಯಲು ಅನುವು ಮಾಡಿಕೊಡುತ್ತಿದೆ. ಇದನ್ನು ಉದಾರವಾದಿ ಧೋರಣೆಯಿಂದ ದತ್ತವಾದ ಶಿಕ್ಷಣದ ಅರಿವು ಎಂದರೂ ತಪ್ಪಾಗಲಾರದು. ಜಾನಕಮ್ಮ ಶಿಕ್ಷಣವನ್ನು ಪಡೆಯದಿದ್ದರೂ ಕೂಡ ಶಿಕ್ಷಣದಿಂದ ದೊರೆಯಬಹುದಾದ ಅರಿವಿನ ಹೊಳಹುಗಳು ಅವರ

ಕಾವ್ಯದಲ್ಲಿ ಮತ್ತೆ ಮತ್ತೆ ಚರ್ಚೆಗೆ ಒಳಪಡುತ್ತವೆ. **ಎಚ್ಚರಿಕೆ** ಕವನದ ನಾಯಕಿ ಕೂಡ ಈ ಬಗೆಯ ಶಿಕ್ಷಣದ ಅಪೇಕ್ಷೆಯನ್ನಿಟ್ಟುಕೊಂಡವಳೇ. ಅದರಿಂದಾಗಿ ವಿಶ್ವವನ್ನು ಹೊಸ ಅರಿವಿನಿಂದ ನೋಡಿದಾಗ 'ಅಣು' ಮತ್ತು 'ಮಹತ್ತು'ಗಳೆರಡನ್ನೂ ತಿಳಿಯಲು ಸಾಧ್ಯ ಎಂಬ ಆತ್ಮವಿಶ್ವಾಸ ಲೇಖಕಿಗೆ ಇದೆ. ಮುಂದುವರಿದು 'ಸಾಗುವೆನು ಸಾಗುವೆನು ತೆಪ್ಪದೊಳು ತೇಲಿ। ದಾಟುವೆನು ಕುಪ್ಪಳಿಸಿ ಬಂಧನದ ಬೇಲಿ' ಇಲ್ಲಿ ತೆಪ್ಪದೊಳು ತೇಲಿ, ಬಂಧನದ ಬೇಲಿ ಎರಡೂ ಕೂಡ ಪ್ರಯಾಸದ ಸಾಗುವಿಕೆಯನ್ನು ತಿಳಿಸುತ್ತಿದ್ದರೂ ಕಾವ್ಯದ ಓಟ ಅವೆಲ್ಲವನ್ನೂ ಮೀರುವ ಉತ್ಸಾಹದ ಹಾದಿಯಲ್ಲಿದೆ. ಬಂಧನದ ಬೇಲಿಗಳಿರುವ ವಾಸ್ತವದ ಅರಿವಿನೊಂದಿಗೆ ಕವನ ಮುಂದುವರೆದು ತಾನು ಸಾಧಿಸಬಹುದಾದ ಗುರಿಯ ಕಡೆಗೆ ಗಮನಸೆಳೆಯುತ್ತದೆ. 'ಮೇರು ಗಿರಿಯುತ್ತುಂಗ ಶಿಖರವನು ಏರಿ। ಬಾಂದಳಕೆ ಮುಟ್ಟಿಸುವೆನೆನ್ನ ಜಯಭೇರಿ' ಎನ್ನುವುದು ತನಗೆ ಎದುರಾಗಬಹುದಾದ ಎಲ್ಲಾ ಬಗೆಯ ಅಡ್ಡಿ ಆತಂಕಗಳನ್ನೂ ಮೀರಬಲ್ಲೆ ಎಂಬ ಆತ್ಮವಿಶ್ವಾಸದೊಂದಿಗೆ ಸಾಗುತ್ತದೆ. ಯಾವ ಯಾವ ರೀತಿಯಲ್ಲಿ ಅಡ್ಡಿ ಆತಂಕಗಳು ಎದುರಾಗಬಹುದು, ಅವುಗಳನ್ನು ಎದುರುಗೊಳ್ಳಬೇಕಾದ ಬಗೆ ಹೇಗೆ ಎಂಬುದರ ಅರಿವೂ ಕೂಡ ಲೇಖಕಿಗೆ ಇದೆ. ಅದನ್ನು ಮಾರ್ಮಿಕವಾಗಿ ಈ ರೀತಿ ಹಿಡಿದಿಡುತ್ತಾರೆ

> ಬಿದಿಯಾಗಿ ನೀನೆನ್ನ ಬೆದರಿಸಲು ಬಂದು।
> ಅದನೊಂದು ಲೆಕ್ಕಿಸದೆ ಸಾಗುವೆನು ಮುಂದು।
> ಹಾರುವೆನು ಹಕ್ಕಿಗಳ ಗುಂಪಿನೊಳು ಸೇರಿ।
> ವಾಯುವಗ್ನಿಯು ಸುಳಿವ ತಾಣದೊಳು ತೂರಿ'. [8]

ಎನ್ನುವ ಪ್ರತಿಮೆಗಳು ಆ ಚಲನೆ ಯಾರ ನಿಯಂತ್ರಣಕ್ಕೂ ಸುಲಭವಾಗಿ ದೊರಕಲಾರದ್ದು ಎಂಬುದನ್ನು ತೆರೆದಿಡುತ್ತವೆ. ವ್ಯವಸ್ಥೆಯನ್ನು ಎದುರಿಸಲು ಬೇಕಾದ ತಂತ್ರಗಾರಿಕೆ, ತಿಳುವಳಿಕೆ ಇವರ ಕಾವ್ಯದಲ್ಲಿ ಸಮರ್ಥವಾಗಿ ಮೂಡಿಬಂದಿದೆ. 'ಹಕ್ಕಿಗಳು' ಕವನದಲ್ಲಿ ಲೇಖಕಿಗೆ ಮೆಚ್ಚುಗೆಯಾಗುವ ಹಕ್ಕಿಗಳ ಜೀವನ ಶೈಲಿ, ನಿರ್ಭಿಡತೆ, ಸ್ವಚ್ಛಂದ ಹಾರಾಟ ಇಲ್ಲಿ ಲೇಖಕಿಗೂ ಸಿದ್ಧಿಸಿದೆ. ಕಾರಣ ಹೆಣ್ಣು ಗಂಡಿನ ಸಂಬಂಧದ ನಿಜದ ತಿಳುವಳಿಕೆ ಅವಳಲ್ಲಿ ಆತ್ಮವಿಶ್ವಾಸವನ್ನೂ, ಜೀವನ ಪ್ರೀತಿಯನ್ನೂ, ಎಲ್ಲವನ್ನೂ ಎದುರಿಸುವ ಧೈರ್ಯ, ಸಾಮರ್ಥ್ಯವನ್ನೂ ಮೂಡಿಸಿದೆ. ಇದು ಕಾವ್ಯದಲ್ಲಿ 'ಹೆಣ್ಣೇನು ಗಂಡೇನು ಬಹುಮುಖಗಳೇನು। ನಿನ್ನ ಸೋಗುಗಳೇನು ಸಮರಿಲ್ಲವೇನು?' ಎಂಬ ಸ್ವಪ್ರಜ್ಞೆಯಾಗಿ ಮೂಡಿಬಂದಿದೆ. 'ಸೋಗು' ಎನ್ನುವ ಪದ ಮುಖವಾಡದ, ಹಿರಿಮೆಯನ್ನು ಸಾಧಿಸಿರುವೆ ಎಂಬ ನಟನೆಯ ಬದುಕಿನ ದ್ಯೋತಕವಾಗಿ ಚಿತ್ರಿತವಾಗಿದೆ. ಈ ಸೋಗಿನ ಮುಖವಾಡವನ್ನು ಕಳಚಿದಾಗ ಹಿರಿದು, ಕಿರಿದು, ಮೇಲು, ಕೀಳು ಎಂಬ ಅಸಮಾನತೆಗಳು ಅಳಿಯಲು ಸಾಧ್ಯ ಎಂಬ ಅರಿವು ಲೇಖಕಿಗೆ ಇರುವುದರಿಂದಲೇ ಇಷ್ಟು ದಿಟ್ಟವಾಗಿ, ಕಟುವಾಗಿ ವ್ಯವಸ್ಥೆಯನ್ನು ಎದುರಿಸಲು ಸಾಧ್ಯವಾಗಿರುವುದು.

ಜಾನಕಮ್ಮನವರ 'ಸುಮ್ಮನಿರು ಸಾಕು' ಕವನ ಮತ್ತೊಂದು ಬಗೆಯಲ್ಲಿ ಹೆಣ್ಣಿನ ಶಕ್ತಿ, ಸಾಮರ್ಥ್ಯದ ಪರಿಚಯ ಮಾಡಿಕೊಡುತ್ತದೆ. ಸ್ವಗತದ ಮಾದರಿಯಲ್ಲಿರುವ ಈ ಕವನ ತನ್ನಂತರಂಗಕ್ಕೆ ಧೈರ್ಯ ತುಂಬುವ, ವ್ಯವಸ್ಥೆಯ ನಿರ್ಬಂಧಗಳನ್ನು ದಿಟ್ಟವಾಗಿ ಎದುರಿಸುವ ಬಗೆಗಳನ್ನು ತರೆದಿಡುತ್ತದೆ. ಈ ಕವನದ ಸ್ವಗತದ ಮಾದರಿ ಕೊಂಚ ಭಿನ್ನವಾಗಿದ್ದು, ವಿಷಯದ ಆಯ್ಕೆ, ತಂತ್ರಗಾರಿಕೆ ಕೂಡ ವಿಶಿಷ್ಟವಾಗಿದೆ. ಮಹಿಳಾ ಕಾವ್ಯದಲ್ಲಿ ಸ್ವಗತವೆನ್ನುವುದು ಹಲವು ಮಾದರಿಗಳಲ್ಲಿ ವ್ಯಕ್ತವಾಗಿದೆ. ಸ್ವಗತವೆನ್ನುವುದು ಹೆಣ್ಣಿನ ಅಭಿವ್ಯಕ್ತಿಯ ಮಟ್ಟಿಗೆ ಕೇವಲ ತನ್ನೊಂದಿಗಿನ ಸಂವಾದದ ನೆಲೆಯಲ್ಲಿ ಮಾತ್ರ ನಿಲ್ಲದೆ ವ್ಯವಸ್ಥೆಯೊಂದಿಗೆ ನಡೆಸಬಹುದಾದ ಹಲವು ರೀತಿಯ ಮುಖಾಮುಖಿಯ ಮಾದರಿಗಳನ್ನು ಒಳಗೊಂಡಿದೆ. ತನಗೆ ತಾನೇ ಹೇಳಿಕೊಳ್ಳುತಿರುವ ಸಂದರ್ಭದಲ್ಲಿಯೂ ಕೂಡ ಅದು ವ್ಯವಸ್ಥೆಯನ್ನು ಕೇಂದ್ರವಾಗಿಟ್ಟುಕೊಂಡೇ ಮುಂದುವರಿಯುತ್ತದೆ.

ಲೇಖಕಿಯರ ಬಹುಪಾಲು ಕವನಗಳು ತನ್ನ ಮನದಾಳದ ಇಂಗಿತವನ್ನು ಇತರೆ ಪಾತ್ರಗಳ ಮೂಲಕ ವ್ಯಕ್ತಪಡಿಸಲು ಸ್ವಗತದ ಮಾದರಿಯನ್ನು ಆಯ್ಕೆ ಮಾಡಿಕೊಂಡರೆ, ಜಾನಕಮ್ಮ ತಾನು ಹಾಗೂ ತನ್ನೊಳಗಿನ ಶಕ್ತಿ ಇವೆರಡರ ನಡುವಿನ ಸಂವಾದಕ್ಕೆ ಸ್ವಗತವನ್ನು ಆಯ್ಕೆ ಮಾಡಿಕೊಂಡಿದ್ದಾರೆ. 'ಹೆದರದಿರು ಕುದಿಯದಿರು ಹೇಡಿ ನೀನಾಗದಿರು। ಬಡಿಯುತಿಹ ಅಲೆಗಾಳಿಗೆ ಕಣ್ಮುಚ್ಚಿ ಸಿರಬಾಗು। ಕಡಲಅನಲೆಗಳು ನಿನ್ನ ನೆಲ್ಲಿಗೊಯ್ದರು ಸರಿಯೆ। ದೃಢವಾದ ಚಿತ್ತವನು ಬಿಡದೆ ಪಾಲಿಸು ನಿರುತ।' ಎಂದು ತನ್ನೆಲ್ಲಾ ದುಃಖ ದುಮ್ಮಾನಗಳನ್ನು ನಿಯಂತ್ರಿಸಲು ಪ್ರಯತ್ನಿಸುತ್ತಾರೆ. ತನ್ನೆಲ್ಲಾ ಕಿಚ್ಚನ್ನು ಒಡಲೊಳಗಿಟ್ಟುಕೊಂಡಿರುವ ಪ್ರಕೃತಿಯ ರೂಪಕವನ್ನು ಕೊಡುವುದರ ಮೂಲಕ ಸಮಾದಾನಪಡಲು ಪ್ರಯತ್ನಿಸುತ್ತಾರೆ. ಅದು ಸಾಧ್ಯವಾಗದಿದ್ದಾಗ ಬೆದರಿಕೆ, ಗದರಿಕೆಯ ಮೂಲಕ ಮನಸ್ಸಿಗೆ ಶಾಂತಿಯನ್ನು ತಂದುಕೊಳ್ಳಲೆತ್ನಿಸಿದ್ದಾರೆ. 'ದಟ್ಟಿ' ಕವನ ಕೂಡ ಇದೇ ವಿಧಾನದ್ದು. ತಂತ್ರಗಾರಿಕೆಯ ದೃಷ್ಟಿಯಿಂದ ವಿಶಿಷ್ಟವಾದ ಈ ಕವನಗಳು ತನ್ನಂತರಂಗವನ್ನು ತಾನೆ ಹೆದರಿಸಿ ಬೆದರಿಸಿಯಾದರೂ ಸರಿ, ಇತರರಿಗೆ ತಲೆಬಾಗದಂತೆ, ಎದೆಗುಂದದಂತೆ ತನ್ನ ಮನಸ್ಸನ್ನು ಸಮಸ್ಥಿತಿಯಲ್ಲಿಟ್ಟುಕೊಳ್ಳುವ ದಾಟಿಯಲ್ಲಿವೆ. ' ಸುಮ್ಮನಿರು ಸಾಕು' ಎನ್ನುವ ಮಾತಿನ ಶೈಲಿಯೇ ತುಂಬಾ ನಿತ್ರಾಣಗೊಂಡ, ಅಂಜುಬುರುಕ ಮನಸ್ಸಿಗೆ ಮಕ್ಕಳನ್ನು ಹೆದರಿಸುವ ರೀತಿಯಲ್ಲಿ ಧೈರ್ಯ ತುಂಬುವಂತದ್ದು. 'ನೀನೆಷ್ಟು ಜನಕಜೇ।ಸುಮ್ಮನಿರು, ಸಾಕು ಸಾಕು!' ಎನ್ನುವ ಕಡೆಯ ಸಾಲು ಲೇಖಕಿಯ ಗೊಂದಲ ತಳಮಳಗಳು ಅವಳಗಷ್ಟೇ ಸೀಮಿತವಲ್ಲ. ಅವಳಿಗಿಂತ ಹೆಚ್ಚು ಸಂಕಷ್ಟದಲ್ಲಿ ಸಿಲುಕಿರುವವರು ಹಲವರಿದ್ದಾರೆ ಅವರುಗಳ ಮಧ್ಯೆ ನಿನ್ನದೇನೂ ಅಲ್ಲ ಎಂದು ಸಮಾಧಾನಪಡಿಸುವ ದಾಟಿಯೂ ಇಲ್ಲದೆ. ಅಕ್ಕ ಹೇಳುವಂತೆ 'ಲೋಕದೊಳಗೆ ಹುಟ್ಟಿರ್ದ ಬಳಿಕ ಸ್ತುತಿನಿಂದೆಗಳು ಬಂದರೆ ಮನದಲ್ಲಿ ಕೋಪವ ತಾಳದೆ ಸಮಾಧಾನಿಯಾಗಿರಬೇಕು' ಎಂಬ ತಾತ್ವಿಕ ನಿಲುವು ಕೂಡ ಸೇರಿದೆ.

ಜಾನಕಮ್ಮನವರಿಗೆ ಹೆಣ್ಣಿನ ಶಕ್ತಿ ಸಾಮರ್ಥ್ಯದ ಬಗೆಗೆ ಸ್ಪಷ್ಟವಾದ ಅರಿವಿದ್ದಾಗ್ಯೂ ವ್ಯವಸ್ಥೆಯ ಬಂಧನಗಳನ್ನು ಮೀರಲಾರದ ಅನಿವಾರ್ಯತೆಯನ್ನು ಕುರಿತಂತೆ ಮರುಕವಿದೆ. ಅದು ಗಂಡು ಹೆಣ್ಣಿನ ಸಂಬಂಧದ ನಿರೂಪಣೆಯ ಸಂದರ್ಭದಲ್ಲಿ ಹಲವು ಮಾದರಿಗಳಲ್ಲಿ ಅಭಿವ್ಯಕ್ತಗೊಂಡಿದೆ. ಇವರ 'ಹೆಣ್ಣಾಟ', **ಎಚ್ಚರಿಕೆ, ಮೌನ, ಗುರುದೇವ, ಗಂಡ,** ಮುಂತಾದ ಕವನಗಳು ಇದನ್ನು ಸಮರ್ಥವಾಗಿ ಹಿಡಿದಿಡುತ್ತವೆ. **ಹೆಣ್ಣಾಟ** ಕವನ ಹೆಣ್ಣಾಗಿ ಹುಟ್ಟಿರುವುದರಿಂದ ಎದುರಿಸಬೇಕಾದ ಸವಾಲುಗಳನ್ನು ಕುರಿತು ಮಾತನಾಡುತ್ತಲೇ ಗಂಡು ಹೆಣ್ಣಿನ ವ್ಯಕ್ತಿತ್ವ ನಿರ್ಮಿತಿಯ ಹಿಂದಿನ ವ್ಯವಸ್ಥೆಯ ಕೈವಾಡಗಳನ್ನು ಹಿಡಿದಿಡಲು ಪ್ರಯತ್ನಿಸುತ್ತದೆ. ಜಾನಕಮ್ಮನವರ ಸಮಕಾಲೀನ ಲೇಖಕಿಯರಲ್ಲಿದ್ದ ಹೆಣ್ಣಿನ ಜೈವಿಕ ಮಿತಿಯ ಅರಿವನ್ನು ಮೀರಿದ, ವ್ಯಕ್ತಿತ್ವ ನಿರ್ಮಿತಿಯ ಕಡೆಗೆ ಲೇಖಕಿಯ ಗಮನವಿರುವುದು ಈ ಕವನದಲ್ಲಿ ಸ್ಪಷ್ಟವಾಗುತ್ತದೆ. ಗಂಡು ಹೆಣ್ಣಿನ ವ್ಯಕ್ತಿತ್ವವನ್ನು ಕುರಿತಂತೆ ಇರುವ ಸಾಮಾಜಿಕ ಪೂರ್ವಾಗ್ರಹವನ್ನು ಒಡೆಯುತ್ತಲೇ ಆರಂಭವಾಗುವ ಕವನ ಜೀವನದ ಅನಿಶ್ಚಿತತೆ ಹಾಗೂ ಅಲ್ಪಾವಧಿಯಲ್ಲಿಯೂ ಕೂಡ ಸಹಬಾಳ್ವೆಗೆ ಅವಕಾಶವಿಲ್ಲದಿರುವುದನ್ನು ಎತ್ತಿಹಿಡಿಯುತ್ತಿದೆ.

> ಹೆಣ್ಣುಗಂಡೆಂಬೆರಡು
> ಗೊಂಬೆಗಳ ಆಟದೊಳು
> ಎನ್ನೊಡಲು ಕುದಿಯುತಿದೆ
> ಹೆಣ್ಣಾಟವ ಕಂಡು [೭]

ಎನ್ನುವುದು ಲೋಕ ನಾಟಕರಂಗದೊಳು ನಾವೆಲ್ಲ ನಟರು ಎಂಬ ಆಧ್ಯಾತ್ಮ ಮೂಲ ತಾತ್ವಿಕತೆಯಿಂದ ಹೊರಟದ್ದಾದರೂ, ಅದು ಅಲ್ಲಿಗೆ ನಿಲ್ಲದೆ ಲೌಕಿಕ ಬದುಕಿನಲ್ಲಿ ಹೆಣ್ಣುಗಂಡಿನ ವ್ಯಕ್ತಿತ್ವಗಳು ಎದುರಿಸುತ್ತಿರುವ ಸವಾಲುಗಳನ್ನು ಧ್ವನಿಸುತ್ತದೆ. 'ಎನ್ನೊಡಲು ಕುದಿಯುತ್ತಿದೆ' ಎನ್ನುವಲ್ಲಿ ವ್ಯವಸ್ಥೆಯ ಅಸಮಾನತೆಯ ನೆಲೆಗಳ ಬಗೆಗಿನ ವಿರೋಧ ಸ್ಪಷ್ಟವಾಗಿ ವ್ಯಕ್ತವಾಗಿದೆ. 'ಕುದಿಯುವಿಕೆ' ಸಿಡಿಯುವುದರ ಮುನ್ಸೂಚನೆಯಾಗಿದೆ. ಅದನ್ನು 'ಮೌನ' ಕವನದಲ್ಲಿ ಗುರುತಿಸಬಹುದು. ಇಲ್ಲಿನ ಆಕ್ರೋಶ ಅಲ್ಲಿ ಸ್ಪಷ್ಟ ಪ್ರತಿಭಟನೆಯಾಗಿ ರೂಪ ಪಡೆದಿದೆ. ಮುಂದುವರೆದು 'ಹೆಣ್ಣಾದ ಕೆಲದಿನಕೆ ।ಹಣ್ಣಾಗಿ ಪರಿಣಮಿಸಿ। ಕಣ್ಣು ತೆರೆಯದೆ ಬಂದು ।ಗೂಡು ಸೇರುವುದು' ಎನ್ನುವಲ್ಲಿ ಹಣ್ಣಾಗಿ ಪರಿಣಮಿಸುವುದು ಮತ್ತು ಗೂಡು ಸೇರುವುದು ವ್ಯವಸ್ಥೆಯ ಅಪೇಕ್ಷಿತ ನಿರ್ಧಾರಗಳಾಗಿವೆ. ಹಣ್ಣಾಗಿ ಪರಿಣಮಿಸಿದುದರ ಫಲವಾಗಿಯೇ ಗೂಡು ಸೇರಬೇಕಾಗಿದೆ. ಹಣ್ಣಾಗುವುದು ಪ್ರಕೃತಿಯ ಸಹಜ ನಿಯಮ, ಅದು ಫಲದ ಫಲವಂತಿಕೆಯ, ಶ್ರೇಷ್ಟತೆಯ ಸಂಕೇತ, ಆದರೆ ಅದರ ಗುಣವನ್ನೇ ನಿಯಂತ್ರಿಸಿ ಗೂಡಿನಲ್ಲಿ ನಿರ್ಬಂಧಿಸಲಾಗಿದೆ. ಅಷ್ಟೇ ಅಲ್ಲದೆ ಹಣ್ಣಿನ ರುಚಿಗೆ ವಿರುದ್ಧವಾದ ತಿರುಳು, ಸಿಹಿ, ಸವಿಗಂಧವಿಲ್ಲದ ಕಾಡ ಹಾಗಲಕಾಯಿ ಜೊತೆಗೆ ಹಣ್ಣಿನ ಸಂಗತ ಎನ್ನುವ ಮಾತುಗಳು ಇಡೀ ಹೆಣ್ಣಿನ ಬದುಕಿನ ಆತಂಕಕಾರಿ ತಿರುವುಗಳನ್ನು ತೆರೆದಿಡುತ್ತದೆ. ಆದರೆ ಇದೆಲ್ಲದರ ನಡುವೆಯೂ ತಾನು ಕಳೆದುಕೊಂಡದ್ದರ ಬಗೆಗೆ ನೋವು ಬೇಸರ ಇರುವಾಗಲೂ ಜೀವನವನ್ನು

ಸುಖಮಯವಾಗಿಸಿಕೊಳ್ಳುವ ಹಂಬಲ ಇದೆ. ಆದುದರಿಂದಾಗಿಯೇ 'ವಾಸನಾಬಲದಿಂದ ಎಳೆಗರುವಿನ ರೀತಿಯಲ್ಲಿ ಕುಣಿಸಿದರೆ ಕುಣಿಯುತ, ನಲಿಸಿದರೆ ನಲಿಯುತ, ದಾಸಿತಾನಾಗಿರುವುದು' ಇಂತಹ ಹೆಣ್ಣಿನ ಬಗೆಗೆ ಕವನದ ನಾಯಕಿಗೆ ಮರುಕವಿದೆ. ಗಮನಿಸಬೇಕಾದ ಸಂಗತಿ ಈ ರೀತಿ ಬದುಕು ಸಾಗಿಸುವ ಸಂದರ್ಭದಲ್ಲಿಯೂ ಕೂಡ ಸ್ವಾತಂತ್ರದ ಅಪೇಕ್ಷೆ, ಅದು ಇಲ್ಲದುದರ ಬಗೆಗಿನ ನೋವು ಸದಾ ಹೆಣ್ಣನ್ನು ಕಾಡುತ್ತಲೇ ಇದೆ. ಹೆಣ್ಣಾಟವನ್ನು ಕಂಡು ಕೊರಗುತ್ತಿರುವ, ಮರುಗುತ್ತಿರುವ ನಾಯಕಿ, ಲೇಖಕಿ, ಮತ್ತು ಇದನೆಲ್ಲ ನೋಡಿ ವಿರೋಧಿಸುತ್ತಿರುವ ಜನಕಜೆ ಇವರೆಲ್ಲಾ ಒಂದೇ ಆಗಿ 'ಹೆಣ್ಣಾಟವನ್ನು ವಿರೋಧಿಸುತ್ತಿದ್ದಾರೆ.' ಈ ಕವನ ಕನ್ನಡ ಸಾಹಿತ್ಯದ ಮುಖ್ಯ ಕವನಗಳಲ್ಲೊಂದು. ಏಕೆಂದರೆ ಇಲ್ಲಿನ ಭಾಷೆ, ಭಾವ, ಬಂಧ ಎಲ್ಲವೂ ಇಡೀ ಹೆಣ್ಣಿನ ಸಮುದಾಯದ ಸಮಸ್ಯೆಯನ್ನು ಹಿಡಿದಿಡುವಲ್ಲಿ ಯಶಸ್ವಿಯಾಗಿದೆ. 'ಹೆಣ್ಣಾಟ' ಎಂಬ ಪದ ಒಂದೆಡೆ ಹೆಣ್ಣಿನ ಬದುಕಿನ ಸ್ಥಿತ್ಯಂತರಗಳನ್ನು ತಿಳಿಸುತ್ತಿದ್ದರೆ ಮತ್ತೊಂದೆಡೆ ಪುರುಷ ಪ್ರಧಾನ ವ್ಯವಸ್ಥೆಗೆ ತಕ್ಕಂತೆ ರೂಪುಗೊಳ್ಳುತ್ತಿರುವ ಹೆಣ್ಣಿನ ವ್ಯಕ್ತಿತ್ವವನ್ನು ಧ್ವನಿಸುತ್ತದೆ. ಅಂತಿಮವಾಗಿ 'ಮನಸ್ಸಿದ್ದು ಮತಿಯಿಲ್ಲ ।ಕಣ್ಣಿದ್ದು ಕುರುಡೆಲ್ಲ। ಹೆಣ್ಣಾಟ ಜನಕಜೆಗೆ ।ಏನು ಚೆನ್ನಿಲ್ಲ'. ಎಂಬ ವಾಕ್ಯ ವ್ಯವಸ್ಥೆಯ ಕಠೋರತೆಯ ಅರಿವು, ಅದರ ಬಗೆಗಿನ ವಿರೋಧ, ಸಿಡಿದೇಳುವ ಮನಸ್ಥಿತಿ ಇದ್ದಾಗ್ಯೂ ಅದು ಈಡೇರಲಾರದ ಪುರುಷ ಪ್ರಭುತ್ವದ ಹಿಡಿತವನ್ನೂ, ಹೆಣ್ಣಿನ ಅಸಹಾಯಕತೆಯನ್ನು ತಿಳಿಸುತ್ತದೆ.

ತಾತ್ವಿಕವಾಗಿಯೂ ಕೂಡ ಶಕ್ತವಾಗಿರುವ ಜಾನಕಮ್ಮನವರ ಕವನಗಳು ಸೃಷ್ಟಿ ನಿಯಮಗಳನ್ನು ಭೇದಿಸುವ, ಗಂಡು, ಹೆಣ್ಣಿನ ಅಂತರ್‌ಸಂಬಂಧಗಳನ್ನು ಅರಿಯುವ ನಿಟ್ಟಿನಲ್ಲಿ ಆ ಕಾಲಘಟ್ಟದ ಇತರೆ ಲೇಖಕಿಯರಿಗಿಂತ ಭಿನ್ನವಾಗಿ ಕಂಡುಬರುತ್ತವೆ. ತಿರುಮಲಾಂಬ ಮುಂತಾದವರು ತಮ್ಮೆಲ್ಲಾ ಸಂಕಷ್ಟಗಳಿಗೆ ಸೃಷ್ಟಿನಿಯಮವನ್ನು ಕಾರಣವಾಗಿಸಿದರೆ ಜಾನಕಮ್ಮ ಈ ಸೃಷ್ಟಿನಿಯಮಗಳನ್ನು ತನಗೆ ಅನುಕೂಲಕರವಾಗಿ ರೂಪಿಸಿಕೊಂಡಿರುವ ಗಂಡಿನ ಸ್ವಾರ್ಥಪರತೆಯನ್ನು ಲೇವಡಿ ಮಾಡುತ್ತಾರೆ. **ಚಂಡಶಾಸನ, ಮೂರ್ಖರಾಯ** ಮುಂತಾದ ಕವನಗಳು ಈ ನಿಟ್ಟಿನಲ್ಲಿ ಪ್ರಮುಖವಾದವುಗಳಾಗಿವೆ. ಈ ಕವನಗಳ ತಂತ್ರಗಾರಿಕೆ ಕೂಡ ಸಮರ್ಥವಾಗಿದೆ. ಇವರ **ಚಂಡಶಾಸನ** ಕವನ ಮೇಲ್ನೋಟಕ್ಕೆ ಸೃಷ್ಟಿಕರ್ತನ ನಿಯಮಗಳನ್ನು ಪ್ರಶ್ನಿಸುತ್ತಿರುವಂತೆ, ಅದನ್ನು ವಿರೋಧಿಸುತ್ತಿರುವಂತೆ ಕಂಡು ಬಂದರೂ ಅದು ಗಂಡಿನ ಶ್ರೇಣೀಕರಣ ಧೋರಣೆಯನ್ನು ಕಟುವಾಗಿ ಟೀಕಿಸುತ್ತಿದೆ. ಹೆಣ್ಣನ್ನು ಕೀಳಾಗಿ ನಡೆಸಿಕೊಳ್ಳುತ್ತಿರುವ ವ್ಯವಸ್ಥೆಯ ಬಗೆಗಿನ ಸಿಟ್ಟು, ಆಕ್ರೋಶ, ಎಲ್ಲವೂ ಕಾವ್ಯದ ರೂಪ ಧರಿಸಿ ಸಮರ್ಥವಾಗಿ ಮೂಡಿಬಂದಿದೆ. ಇಲ್ಲಿ ಲೇಖಕಿ ಯಾವುದೇ ಬಗೆಯ ಅಂಜಿಕೆ, ಮುಜುಗರಗಳಿಲ್ಲದೆ ಹೆಣ್ಣಿಗಾಗುತ್ತಿರುವ ಅನ್ಯಾಯವನ್ನು ವಿರೋಧಿಸುತ್ತಾಳೆ. ಅದೆಲ್ಲದರ ನಡುವೆ ಹೆಣ್ಣಿನ ಶಕ್ತಿ ಸಾಮರ್ಥ್ಯ ಹಾಗೂ ಘನತೆಯ ಅರಿವೂ ಕೂಡ ಸ್ಪಷ್ಟವಾಗಿದೆ. ಇಲ್ಲಿ ಹೆಣ್ಣಿನ ಶೋಷಣೆ ವೈಯಕ್ತಿಕತೆಯನ್ನು ಮೀರಿ ಸಾರ್ವತ್ರಿಕತೆಯನ್ನು ಪಡೆದುಕೊಂಡಿದೆ. 'ಲಂಚಕೋರನು ನೀನು ವಂಚನೆಯ ಮಾಡಿರುವೆ ಮೃದುತನದ ಸ್ತ್ರೀವರ್ಗಕೆ' ಎನ್ನುವಲ್ಲಿ ಹೆಣ್ಣಿನ ಮೃದುತನವನ್ನೇ

ಅಸ್ತ್ರವಾಗಿಸಿಕೊಂಡು ಕಾರ್ಯನಿರ್ವಹಿಸುತ್ತಿರುವ ಇಡೀ ವ್ಯವಸ್ಥೆಯನ್ನು ಕುರಿತ ವಿರೋಧ ಕೂಡ ವ್ಯಕ್ತಿಗತ ನೆಲೆಯನ್ನು ಮೀರಿ ಬೆಳೆದಿದೆ. ಮುಂದುವರೆದ ಹಂತದಲ್ಲಿ ಹೆಣ್ಣಿನ ಶಕ್ತಿ ಸಾಮರ್ಥ್ಯವನ್ನು ಹಿಡಿದಿಡಿವ ಕವನ, ವ್ಯವಸ್ಥೆಯ ಆರೋಗ್ಯಕರ ಮುಂದುವರಿಕೆಗೆ ಗಂಡು ಹೆಣ್ಣಿನ ಸಮಾನ ಶ್ರದ್ಧೆ, ಆಸಕ್ತಿಗಳು ಬೇಕು ಎಂಬುದರ ಕಡೆಗೆ ಗಮನ ಸೆಳೆಯುತ್ತವೆ.

ಕವಣೆ ಕಲ್ಲೋ ನಿನ್ನ
ಮಾನಸವು ಎಲೆ ದೇವ
ಈ ಕ್ರಮವೆ ಸ್ತ್ರೀ ವರ್ಗಕೆ
ಕುಸುಮಕಿಂತಲು ಮೃದುವು
ಹೆಣ್ಣು ಜನ್ಮವು ಎಂಬ
ಅರಿವೆ ನಿನಗಿಲ್ಲವಾಯ್ತೆ?
-----------
ನೆರವಾಗಿ ನಿಂತಿಹೆವು
ಅನುಗಾಲ ನಿನಕೃತಿಗೆ
ಸೋಲಗಿಲ್ಲೆಡೆಯಿಲ್ಲವು!
ಬಹುಕಾಲದೆಜಮಾನ
ಬಹುದೊಡ್ಡ ಕೃಷಿಗಾರ
ತೀರದಾರಂಬಗಾರ
ನಿನ್ನ ಗೆಯ್ಮೆಗೆ ಹೆಣ್ಣು
ನೇಗಿಲಲ್ಲದ ಮೇಲೆ
ಉಂಟೆ ಈ ಸತ್ಯಸಾರ!
--------------
ಹೆಣ್ತನದಿ ತುಂಬಿರುವ
ಮುಕ್ತಿಪಥವೇ ಸಾಕು
ಮತ್ತೊಂದ ಬಯಸಲೇಕೆ?
ಆನಂದ ಒಳಹೊರಗೆ
ತುಂಬಿರಲಿ ಎಂದಿಹಳು
ಜನಕಜೆಯು ಸ್ತ್ರೀ ವರ್ಗಕೆ! [೮]

ಇವರ ಮತ್ತೊಂದು ಪ್ರಮುಖ ಕವನ **ಮೌನ**. ಈ ಕವನದ ಮೂಲಕವೇ ಇದುವರೆಗಿನ ಹೆಣ್ಣಿನ ಮೌನವನ್ನು ಒಡೆಯುವ ಪ್ರಯತ್ನವನ್ನು ಕಾಣಬಹುದು. ಅಲ್ಲದೆ ಇಲ್ಲಿಯವರೆಗಿನ ಮೌನಕ್ಕೆ 'ಸುಳವೇ ಕಾಣದೆ ನಿಂತಿಹೆನು, ತೋರದೆ ಮೌನವ ಧರಿಸಿಹೆನು' ಎನ್ನುವ ವಾಕ್ಯ ಮಹಿಳಾ ಸಂಕಥನದ ಸುಳವುಗಳನ್ನು ತೆರೆದಿಡುತ್ತದೆ. ಒಂದು ಕಡೆ ಆಯ್ಕೆಯ ಬಗೆಗಿನ ಗೊಂದಲ ಕಾರಣವಾದರೆ ಮತ್ತೊಂದೆಡೆ ಏನು ಮಾಡಲು ದಿಕ್ಕು ತೋಚದ ಸ್ಥಿತಿಗೆ ಒಳಪಟ್ಟಿರುವುದು ಕಾರಣವಾಗಿದೆ. ಇದರಿಂದಾಗಿ ಇದುವರೆಗೆ ಮೌನದಿಂದಿರಬೇಕಾಗಿದೆ. ಆದರೆ ಮುಂದೆ ಕೂಡ ಅದೇ ರೀತಿ ಇರಲು ಸಾಧ್ಯವಿಲ್ಲ. ಏಕೆಂದರೆ ಸಹನೆಯ ಗುಣವನ್ನೇ ಮೀರುವ ಆಶಯ ಇಲ್ಲದೆ. ಇದಕ್ಕೂ ಕೂಡ ಕರಣವಿದೆ ಮೊದಲನೆಯದಾಗಿ ನೋವನ್ನು ತಡೆಯುವ ಸಹನೆ ಮೀರಿರುವುದು, ಎರಡನೆಯದಾಗಿ ಪುರುಷ ಪ್ರಭುತ್ವ ಹೆಣ್ಣನ್ನು ಬಂಧನದಲ್ಲಿರಿಸುವಲ್ಲಿ ಹೂಡಿರುವ ತಂತ್ರಗಳ, ಹುನ್ನಾರಗಳ ಸುಳವನ್ನು ಭೇದಿಸಲು ಸಾಧ್ಯವಾಗಿರುವುದು. 'ನೀನೇ ನಾನು ಎನುತಿರುವೆ' ಎಂಬ ಮಾತು ಹಿಂದಿನಿಂದಲೂ ವ್ಯವಸ್ಥೆ ಗಂಡು ಹೆಣ್ಣಿನ ನಡುವಿನ ಅಭೇದ ಕಲ್ಪನೆಯನ್ನು

ಶ್ರೇಷ್ಠ ಎಂದು ಬಿಂಬಿಸುತ್ತಲೇ ಇವರ ನಡುವಿನ ಭಿನ್ನತೆಯನ್ನು ಶ್ರೇಣೀಕರಣ ಪದ್ಧತಿಯನ್ನು ಶಾಶ್ವತವಾಗಿ ಉಳಿಸುವಲ್ಲಿ ಯಶಸಿಯಾಗಿದೆ. ಲೇಖಕಿಗೆ ವ್ಯವಸ್ಥೆಯ ಬಗೆಗೆ ಚಿಂತನೆಯ ಅರಿವು ಮೂಡಿರುವುದರಿಂದ ವ್ಯವಸ್ಥೆಯನ್ನು ಪ್ರಶ್ನಿಸಲು, ವಿರೋಧಿಸಲು ಸಾಧ್ಯವಾಗಿದೆ. ಮೀರುವಿಕೆಯ ಬಗೆಗಿನ ಗೊಂದಲ ಸಂಪೂರ್ಣ ಬಿಡುಗಡೆಯ ಹಂಬಲವಾಗಿಲ್ಲ. ಏಕೆಂದರೆ ಈ ಹಾದಿಯಲ್ಲಿ ಎದುರಾಗಬಹುದಾದ ಸಮಸ್ಯೆಗಳ ಅರಿವು ಈ ಬಗೆಯ ಗೊಂದಲಗಳನ್ನು ಸೃಷ್ಟಿಸುತ್ತದೆ.

ಬೆಳಗೆರೆ ಜಾನಕಮ್ಮನವರ ಬಿಡುಗಡೆಯ ಹಂಬಲ ಅಧೀನತೆಯೂ ಅಲ್ಲದ ಸಂಪೂರ್ಣ ವಿರೋಧವೂ ಅಲ್ಲದ 'ಮಧ್ಯಮ ಸ್ಥಿತಿ' ' ನಿನ್ನನು ಕಲೆಯಲು ಕಾದಿಹೆನು, ಒಳಹೊರಗಿನ್ನೂ ಮರೆ ಏನು' ಎಂಬ ಮಾತುಗಳು ವ್ಯವಸ್ಥೆಯೊಂದಿಗೆ ಆರೋಗ್ಯಕರ ಸಮಾನತೆಯ, ಹೊಂದಾಣಿಕೆಯ ಆಶಯವನ್ನು ಎತ್ತಿಹಿಡಿಯುತ್ತದೆ. ಮುಂದುವರೆದ ಹಂತದಲ್ಲಿ ಪುರುಷ ಪ್ರಧಾನ ಆಲೋಚನಾ ಕ್ರಮವನ್ನು ವಿಮರ್ಶೆಗೆ ಒಳಪಡಿಸುವ ಜಾನಕಮ್ಮನವರ ಕಾವ್ಯ ಗಂಡಿನ ಅಹಂಮ್ಮಿಕೆಯನ್ನು ನಯವಾಗಿ ಪ್ರಶ್ನಿಸುತ್ತದೆ.

'ನೀನು ಎನ್ನುವ ಪದವೇಕೆ?
ಸರ್ವಾವಸ್ಥೆಯ ಸ್ಥಿತಿ ಏಕೆ?
ಸಿಹಿಯೊಳು ಕಹಿಯನು ತರಲೇಕೆ?
ಏತಕೋ ಅರಿಯನು ಈ ಬಯಕೆ!' [6]

ಇವರ 'ಎಚ್ಚರಿಕೆ' ಕವನ ಮತ್ತೊಂದು ರೀತಿಯಲ್ಲಿ ವ್ಯವಸ್ಥೆಯೊಂದಿಗೆ ಮುಖಾಮುಖಿಯಾಗುತ್ತದೆ. ತನ್ನ ಹಾಗೂ ಸಮಕಾಲೀನ ಹೆಣ್ಣಿನ ಸ್ಥಿತಿಗತಿಗತಿಗಳನ್ನು 'ಬಂಧನವರಿಯದೆ ಸುಖವನು ಬಯಸದೆ ಬೆಳೆಯುತ ಬರುತಹಳೀ ಸೀತೆ' ಎನ್ನುವ ಮೂಲಕ ಹಿಡಿದಿಡುವ ಕವನ ಆಧುನಿಕ ಸಂದರ್ಭಕ್ಕೆ ತಕ್ಕಂತೆ ಹೆಣ್ಣು ಬದಲಾಗಬೇಕಾದ, ಬದಲಾಗುತ್ತಿರುವ ಕಡೆಗೆ ಗಮನ ಸೆಳೆಯುತ್ತದೆ. ಹಿಂದಿನಿಂದಲೂ ತನ್ನ ಅಧೀನ ಸ್ಥಿತಿಯನ್ನು ಒಪ್ಪಿ ಬಂದ ಹೆಣ್ಣಿಗೆ ತಾನು ಬಂಧನದಲ್ಲಿರುವೆ ಎಂಬ ಅರಿವು ಮೂಡಿದ್ದೇ ಬಹಳಷ್ಟು ತಡವಾಗಿ. ಇಂತ ಸಂದರ್ಭದಲ್ಲಿ ಹೆಣ್ಣು ತನ್ನ ಸ್ಥಿತಿ ಇದೇ, ತಾನು ಇರಬೇಕಾದದ್ದು ಹೀಗೆಯೇ ಎಂಬ ನಿರಾಶಾಭಾವಕ್ಕೆ ಒಳಗಾದದ್ದು ಸಹಜವೆ, ಆದರೆ ಸದಾ ಅದನ್ನು ಮೀರುವ, ತನ್ನ ಆಸೆ ಬಯಕೆಗಳನ್ನು ಗುರುತಿಸಿಕೊಳ್ಳುವ, ಪೂರೈಸಿಕೊಳ್ಳುವ ಹಂಬಲ ಭಿನ್ನ ಭಿನ್ನ ಮಾದರಿಗಳಲ್ಲಿ ಮಹಿಳಾಕಾವ್ಯದಲ್ಲಿ ಅಭಿವ್ಯಕ್ತಗೊಂಡಿದೆ. ಜಾನಕಮ್ಮ ಶಿಕ್ಷಣದ ಮೂಲಕ ಈ ಬಯಕೆಗಳನ್ನು ಪೂರೈಸಿಕೊಳ್ಳುವ ಹಂಬಲ ಹೊಂದಿದ್ದಾರೆ. ಆದರೆ ಅದಕ್ಕೆ ಎದುರಾಗುವ ಸವಾಲು, ಹಾಗೂ ಅಡೆತಡೆಗಳ ಬಗೆಗೆ ಲೇಖಕಿಗೆ ಸಂಪೂರ್ಣ ಅರಿವಿದೆ. ಈ ಅರಿವು ಅವರ ಎಚ್ಚರಿಕೆ ಕವನದಲ್ಲಿ ಸ್ಪಷ್ಟವಾಗಿ ಕಂಡುಬರುವುದಲ್ಲದೆ ಗಂಡು ಈ ರೀತಿ ಹೆಣ್ಣನ್ನು ನಿಯಂತ್ರಿಸುವ ಕೆಲಸಗಳಿಂದ ಹೊರಬರಬೇಕು ಎಂಬ ಆಶಯವೂ ಇದೆ.

ವಿಶ್ವದ ರಂಗದಿ ನಾನಾ ಬಗೆಗಳ ಯಂತ್ರಗಳಿರುವುದು ಎಚ್ಚರಿಕೆ
ಕಣ್ಣಿಗೆ ಕಾಣದ ಸ್ಥಳದೊಳು ಕೆಲವೆಡೆ ಮಣ್ಣೊಳು ಹುದುಗಿವೆ ವಜ್ರಗಳು
ಹೊನ್ನಿನ ರಾಶಿಯ ಮಧ್ಯದಿ ಕೆಲವೆಡೆ ಸರ್ಪಗಳಿರುವುವು ಎಚ್ಚರಿಕೆ
ಕಲ್ಮಷವಿಲ್ಲದ ನನ್ನೀ ಹೃದಯದಿ ಮುಳ್ಳಿನ ಕಂಪೆಯ ಹರಡದಿರು
ಕಷ್ಟದಿ ನರಳುವ ಜನರಿಗೆ ಮರುಗುತ ಸಾಯವ ಮಾಳ್ಪುದ ಮರೆಯದಿರು [೧೦]

ಇಲ್ಲಿನ ಆಶಯ ಎಲ್ಲರನ್ನೂ ಸಮಾನವಾಗಿ ಕಾಣಬೇಕೆಂಬುದೇ ಆಗಿದೆ. ಇದು ಜಾನಕಮ್ಮನವರ ಎಲ್ಲಾ ಕವನಗಳ ಕೇಂದ್ರ ಕಾಳಜಿ ಕೂಡ ಹೌದು.

## ೮.೨ ವಿಜಯಾದಬ್ಬೆ

ಕನ್ನಡದ ಬಹುಮುಖ್ಯ ಬರಹಗಾರರಲ್ಲಿ ಒಬ್ಬರಾದ ವಿಜಯಾದಬ್ಬೆ ಸಾಹಿತ್ಯ ಕ್ಷೇತ್ರಕ್ಕೆ ನೀಡಿರುವ ಕೊಡುಗೆ ವಿಶಿಷ್ಟವಾದದ್ದು. ಕನ್ನಡ ಕಾವ್ಯ, ವಿಮರ್ಶೆ, ಸಂಶೋಧನೆ, ಚಳುವಳಿಗಳಲ್ಲಿ ಸಕ್ರಿಯವಾಗಿ ತೊಡಗಿಸಿಕೊಂಡಿದ್ದ ಇವರ ಸಾಹಿತ್ಯಿಕ ಸಾಧನೆಯನ್ನು ಎರಡು ರೀತಿಯಲ್ಲಿ ಗುರುತಿಸಲು ಸಾಧ್ಯ. ಮೊದಲನೆಯದು ವಿಜಯಾದಬ್ಬೆಯವರು ಕನ್ನಡ ಸಾಹಿತ್ಯ ಕ್ಷೇತ್ರಕ್ಕೆ ನೀಡಿರುವ ಕೊಡುಗೆ. ಇದನ್ನು ಅವರ ಕಾವ್ಯ, ವಿಮರ್ಶಾ ಕೃತಿಗಳ ಮೂಲಕ ಗುರುತಿಸಬಹುದು. ಎರಡನೆಯದು ಚರಿತ್ರೆಯ ಪುಟಗಳಲ್ಲಿ ಮರೆಯಾಗಿದ್ದ ಲೇಖಕಿಯರ ಬದುಕು ಬರೆಹ ಬೆಳಕು ಕಾಣಲು ಶ್ರಮಿಸಿದ್ದು. ತಿರುಮಲಾಂಬ, ಕಲ್ಯಾಣಮ್ಮ, ಶ್ಯಾಮಲಾದೇವಿ ಮುಂತಾದವರ ಸಾಹಿತ್ಯ ಕೃತಿಗಳನ್ನು ಸಂಗ್ರಹಿಸುವಲ್ಲಿ, ಅದನ್ನು ಜನತೆಗೆ ತಲುಪಿಸುವಲ್ಲಿ ಇವರ ಶ್ರಮ ಅಪಾರ.

ವಿಜಯಾದಬ್ಬೆಯವರ ಸ್ತ್ರೀಪರವಾದ ಕಾಳಜಿ ಕೇವಲ ಸಾಹಿತ್ಯಕ್ಷೇತ್ರಕ್ಕಷ್ಟೇ ಸೀಮಿತವಾಗಿರದೆ ಸಂಘಟನೆ, ಸ್ತ್ರೀ ಸ್ವಾತಂತ್ರದ ಬಗೆಗಿನ ಹೋರಾಟ, ಚಳುವಳಿಗಳವರೆಗೂ ವಿಸ್ತರಿಸಿದೆ. ಮೈಸೂರಿನ ಸಮತಾವೇದಿಕೆ, ಕರ್ನಾಟಕ ಲೇಖಕಿಯರ ಸಂಘದ ಮೂಲಕ ಸಾಹಿತ್ಯ ಮತ್ತು ಸ್ತ್ರೀಪರ ಹೋರಾಟದಲ್ಲಿ ಸಕ್ರಿಯವಾಗಿ ತೊಡಗಿಸಿಕೊಂಡಿದ್ದರು. ಸಮುದಾಯದಲ್ಲಿ ಹೆಣ್ಣಿನ ಸ್ಥಿತಿಯ ಬಗೆಗೆ ಅರಿವು, ಕಾಳಜಿಯನ್ನು ಮೂಡಿಸುವಲ್ಲಿ ಸಾಹಿತ್ಯ ಮತ್ತು ಸಾಮಾಜಿಕ ಚಟುವಟಿಕೆಗಳ ಮೂಲಕ ಶ್ರಮಿಸಿದ್ದಾರೆ.

ಕನ್ನಡದಲ್ಲಿ ಸ್ತ್ರೀವಾದಿ ಚಿಂತನೆ ಎಂಬ ಪರಿಕಲ್ಪನೆಯನ್ನು ಪರಿಚಯಿಸುವಲ್ಲಿ, ಅದಕ್ಕೊಂದು ಸ್ಪಷ್ಟ ರೂಪ ಕೊಡುವಲ್ಲಿ, ಹಾಗೂ ಕನ್ನಡ ಸಾಹಿತ್ಯವನ್ನು ಸ್ತ್ರೀವಾದಿ ಓದಿಗೆ ಒಳಗುಮಾಡಿದವರಲ್ಲಿ ವಿಜಯಾದಬ್ಬೆ ಪ್ರಮುಖರು. ಸ್ತ್ರೀವಾದವನ್ನು 'ಸಮಾನತೆಯ' ಅಡಿಪಾಯದ ಮೇಲೆ ಕಟ್ಟುವ, ಆ ಮೂಲಕ ಸಾಮಾಜಿಕ ಸಮಾನತೆಯನ್ನು ಸ್ಥಾಪಿಸುವ ಕಾಳಜಿ ಇವರದ್ದು. ಕನ್ನಡ ವಿಮರ್ಶಕಿಯರಲ್ಲಿ ಮುಖ್ಯರಾದ ಇವರು 'ಮಹಿಳೆ, ಸಾಹಿತ್ಯ, ಸಮಾಜ' ಮತ್ತು 'ನಾರಿ-ದಾರಿ-ದಿಗಂತ' ಎಂಬ ಕೃತಿಗಳ ಮೂಲಕ ವಿಮರ್ಶಾ ಲೋಕದಲ್ಲಿ ಪರಿಚಿತರಾಗಿದ್ದಾರೆ. ವಿಜಯಾದಬ್ಬೆಯವರ ಕಾವ್ಯ ಕೂಡ ಅವರ ವಿಮರ್ಶಾ ಕೃತಿಗಳಷ್ಟೇ

ಮುಖ್ಯವಾದದ್ದು. ಹೆಣ್ಣಿನ ಬದುಕು, ಬವಣೆ, ಬದಲಾವಣೆಗಳನ್ನು ಗುರುತಿಸುವಲ್ಲಿ, ಹೆಣ್ಣಿನ ಸಂಕಥನದ ಚಹರೆಗಳನ್ನು ಹಿಡಿದಿಡುವಲ್ಲಿ, ಹೆಣ್ಣಿನ ಅನುಭವಗಳನ್ನು ವಾಸ್ತವವಾದಿ ನೆಲೆಯಲ್ಲಿ ಕಟ್ಟಿಕೊಡುವಲ್ಲಿ ಇವರ ಕವನಗಳು ಪ್ರಮುಖ ಪಾತ್ರವಹಿಸುತ್ತದೆ. ಸಮುದಾಯದ ಸಂದರ್ಭದಲ್ಲಿ ಹೆಣ್ಣಿನ ಶೋಷಣೆಯ ಮತ್ತು ಅಧೀನತೆಯ ನೆಲೆಗಳನ್ನು ಸಾಹಿತ್ಯ ಮತ್ತು ಸಾಮಾಜಿಕ ಚಟುವಟಿಕೆಗಳ ಹಿನ್ನೆಲೆಯಲ್ಲಿ ಹಿಡಿದಿಡಲು ವಿಜಯಾದಬ್ಬೆ ಪ್ರಯತ್ನಿಸಿದ್ದಾರೆ.

ವಿಜಯಾದಬ್ಬೆಯವರ ಕಾವ್ಯ ಸಮಕಾಲೀನ ಕಾಲಘಟ್ಟದ ಲೇಖಕಿಯರಿಗಿಂತ ಭಿನ್ನತೆ ಹಾಗೂ ವೈಶಿಷ್ಟ್ಯತೆಯಿಂದ ಕೂಡಿದೆ. ಹೆಣ್ಣಿನ ಪರವಾದ ಆಲೋಚನೆ ಹಾಗೂ ಕಾಳಜಿಯೇ ಇವರ ಕಾವ್ಯದ ಕೇಂದ್ರ ವಸ್ತುವಾಗಿರುವಾಗಲೂ ವಿಭಿನ್ನ ಆಲೋಚನಾ ವಿಧಾನ, ಕಲಾತ್ಮಕತೆ, ಭಾಷಾಶೈಲಿ ಹಾಗೂ ತಂತ್ರಗಾರಿಕೆಯಿಂದ ಇವರ ಕಾವ್ಯ ಪ್ರಾಮುಖ್ಯತೆಯನ್ನು ಪಡೆದಿದೆ. ಈ ಕಾಲಘಟ್ಟದಲ್ಲಿ ಬರೆಯುತ್ತಿದ್ದ ಹೆಚ್ಚಿನ ಸಂಖ್ಯೆಯ ಲೇಖಕಿಯರು ಪುರುಷ ಪ್ರಧಾನ ವ್ಯವಸ್ಥೆಯ ಶ್ರೇಣೀಕರಣದ ಬಗೆಗಿನ ತಮ್ಮ ಪ್ರತಿರೋಧವನ್ನು ತೀವ್ರವಾದ ಟೀಕೆ, ಸಿಟ್ಟು, ಆಕ್ರೋಶ, ಪ್ರತಿಭಟನೆಯ ಮೂಲಕ ವ್ಯಕ್ತಪಡಿಸಿದರೆ ವಿಜಯಾದಬ್ಬೆ ಆ ಎಲ್ಲಾ ಭಾವನೆಗಳನ್ನು ತೆಳು ಹಾಸ್ಯ, ವ್ಯಂಗ್ಯ, ನವುರಾದ ವಿಡಂಬನೆ, ತೀವ್ರ ವಿಷಾಧದ ಮೂಲಕ, ವಾಸ್ತವದ ಅರಿವಿನೊಂದಿಗೆ ಸಮರ್ಥವಾಗಿ ಕಟ್ಟಿಕೊಡುತ್ತಾರೆ. ಮತ್ತು ಆಧುನಿಕತೆ ವೈಜ್ಞಾನಿಕತೆ, ಶಿಕ್ಷಣ, ಉದ್ಯೋಗಾವಕಾಶಗಳು ಹೆಣ್ಣಿಗೆ ದೊರೆತಿರುವ ಸಂದರ್ಭದಲ್ಲಿಯೂ ಕೂಡ ಪುರುಷ ಪರವಾದ ಮೌಲ್ಯ ವ್ಯವಸ್ಥೆ ಹೇಗೆ ಹೆಣ್ಣನ್ನು ಮತ್ತೆ ಮತ್ತೆ ತನ್ನ ಚೌಕಟ್ಟಿನೊಳಗೆ ಹಿಡಿದಿಡಲು ಪ್ರಯತ್ನಿಸುತ್ತಿರುತ್ತದೆ ಎಂಬುದನ್ನು ಇವರ ಕವನಗಳು ಮತ್ತೆ ಮತ್ತೆ ಚರ್ಚೆಗೆ ಒಳಪಡಿಸುತ್ತವೆ. ಮತ್ತು ಹೆಣ್ಣಿನ ಜೀವನದ ಮೇಲೆ ಈ ಅಂಶಗಳು ಬೀರಿರುವ ಪ್ರಭಾವಗಳನ್ನೂ, ಅದು ತಂದೊಡ್ಡಿರುವ ಸವಾಲುಗಳನ್ನು ಸಮರ್ಥವಾಗಿ ಹಿಡಿದಿಡುತ್ತವೆ. ವಿಜಯಾದಬ್ಬೆಯವರ ಕಾವ್ಯದಲ್ಲಿ ಗುರುತಿಸಲೇಬೇಕಾದ ಮತ್ತೊಂದು ಸಂಗತಿ ಎಂದರೆ ಶ್ರೇಣೀಕರಣ ವ್ಯವಸ್ಥೆಯಿಂದಾಗಿ ಮಾನವ ಸಂಬಂಧಗಳಲ್ಲಿ ಉಂಟಾಗಿರುವ ತೊಡಕಿಗೆ ಸಂಬಂಧಿಸಿದ್ದು. ಸಾಹಿತ್ಯದೊಂದಿಗೆ ಸಂಘಟನೆ, ಹೋರಾಟ, ಚಳುವಳಿಗಳಲ್ಲಿ ತಮ್ಮನ್ನು ತೊಡಗಿಸಿಕೊಂದಿಡ್ಡ ವಿಜಯಾ ದಬ್ಬೆಯವರ ಅನುಭವದ ಹೊಳಹುಗಳು, ಜೀವನದ ಏಳು ಬೀಳಿನ ದಾಖಲೆಗಳು ಸಹಜವಾಗಿಯೇ ಇವರ ಕಾವ್ಯದಲ್ಲಿ ಸ್ಥಾನ ಪಡೆದಿವೆ. ಆದುದರಿಂದಾಗಿ ಇವರ ಕಾವ್ಯದ ಅಧ್ಯಯನವು ಸಹಜವಾಗಿಯೇ ಸ್ತ್ರೀ ಸಂಕಥನದ ಚಹರೆಗಳನ್ನೂ, ಪುರುಷ ಪ್ರಧಾನ ವ್ಯವಸ್ಥೆಯ ಕಾರ್ಯತಂತ್ರಗಳನ್ನೂ ಸಮರ್ಥವಾಗಿ ಹಿಡಿದಿಡುತ್ತವೆ.

ಬಿ.ಎನ್.ಸುಮಿತ್ರಾಬಾಯಿಯವರು ವಿಜಯಾದಬ್ಬೆಯವರ ಕಾವ್ಯದ ವಿಶೇಷತೆಯನ್ನು ಈ ರೀತಿಯಲ್ಲಿ ಗುರುತಿಸುತ್ತಾರೆ. “ವಿಜಯಾ ಅವರ **ಇರುತ್ತವೆ** ಸಂಕಲನ, ಹಲವು ದೃಷ್ಟಿಯಿಂದ ಮಹಿಳಾ ಕವಿಗಳ ಕೃತಿಗಳಗಿಂತ ಭಿನ್ನವಾಗಿ ತೋರುತ್ತದೆ. ಮಹಿಳಾ ಪ್ರಜ್ಞೆಯನ್ನು ದಟ್ಟವಾಗಿ ವ್ಯಕ್ತಪಡಿಸುವ

ಸುಮಾರು ಹದಿನೈದು ಕವನಗಳು ಈ ಸಂಕನದಲ್ಲಿವೆ. ಅಷ್ಟೇ ಸಂಖ್ಯೆಯಲ್ಲಿ ಸಾವು–ಏಕಾಕಿತನ, ಮಾನವಸಂಬಂಧ ಕುರಿತ ಚಿಂತನೆ, ಬದುಕಿನ ಸುಂದರ–ಕುರೂಪ ಕುರಿತ ವಿವೇಚನೆಗಳನ್ನು ಒಳಗೊಂಡ ಕವನಗಳೂ ಇಲ್ಲಿವೆ. ಆದರೆ ಕವನವು ಸಮಾಜದತ್ತ ಮುಖಮಾಡಿರಲಿ ಅಥವಾ ಅಂತರ್ಮುಖತೆಯನ್ನೇ ಸೂಚಿಸಲಿ ಅದರಲ್ಲಿ ಅಡಕವಾಗಿರುವ ಚಿಂತನೆಯ ಹರಹು ಬೆರಗುಗೊಳಿಸುವಷ್ಟು ವಿಸ್ತಾರವಾಗಿರುವುದು ಗಮನಾರ್ಹವಾಗಿದೆ."[11] ಎನ್ನುತ್ತಾರೆ. ಇದು ಈ ಮೊದಲೆ ಚರ್ಚಿಸಿರುವಂತೆ ವಿಜಯಾ ದಬ್ಬೆಯವರ ಕಾವ್ಯದ ವಿಸ್ತೃತತೆಯನ್ನೂ, ಅದರ ಸಾರ್ವಕಾಲಿಕತೆಯನ್ನೂ ಎತ್ತಿಹಿಡಿಯುತ್ತದೆ.

ವಿಜಯಾದಬ್ಬೆಯವರ ಕವನ ಸಂಕಲನಗಳ ಶೀರ್ಷಿಕೆಗಳೇ ಒಂದು ರೀತಿಯಲ್ಲಿ ವಿಶೇಷವಾಗಿವೆ. 'ಇರುತ್ತವೆ', 'ನೀರು ಲೋಹದ ಚಿಂತೆ', 'ತಿರುಗಿನಿಂತ ಪ್ರಶ್ನೆ', ಇವು ಒಂದರೊಡನೊಂದು ಹೊಂದಿರುವ ಸಾವಯವ ಸಂಬಂಧವನ್ನೂ, ಅದರ ನಿರಂತರತೆಯನ್ನೂ ಹೆಣ್ಣಿನ ಪ್ರಶ್ನೆಗೆ ಅನ್ವಯಿಸಲು ಸಾಧ್ಯ. ಇವರ ಮೊದಲ ಸಂಕಲನ 'ಇರುತ್ತವೆ' ಹೆಣ್ಣಿನ ಪರ ಮತ್ತು ವಿರುದ್ಧ ಚಟುವಟಿಕೆಗಳ ಸಾಮಾಜಿಕ, ಸಾಂಸ್ಕೃತಿಕ ಚಲನೆಯ ನಿರಂತರತೆಯನ್ನು ಧ್ವನಿಸುತ್ತದೆ. ಇದೇ ಶೀರ್ಷಿಕೆಯ ಕವನ ಕೂಡ ಹೆಣ್ಣಿನ ಸಂಕಥನದ ದೃಷ್ಟಿಯಿಂದ ಮುಖ್ಯವಾದದ್ದೆನಿಸುತ್ತದೆ. ಇಲ್ಲಿ 'ಇರುತ್ತವೆ' ಎನ್ನುವುದು ಏಕಕಾಲಕ್ಕೆ ಅನೇಕ ಅರ್ಥಗಳನ್ನು ಧ್ವನಿಸುತ್ತದೆ.

ಕತ್ತಲೆಯ ಕೋಣೆಯಲಿ
ಕೆಂಡ ನೋಡುತ್ತಾ
ಅತ್ತ ಕಾರಣ ಮರೆತು
ರಾಗ ಎಳೆಯುವಾಗ
ಬೆಕ್ಕೊಂದು ಧುಮುಕಿ
ಅಜ್ಜಿ ಸೆರಗಿನ ರಕ್ಷಣೆ
ಕನಸಿನಲಿ
ಹುಲಿ ಎಗರಿ ಮೇಲೆರಗಿದಾಗ
ಬಿಕ್ಕಿ ಬೆವರಿ
ಅಮ್ಮನಪ್ಪಿಕೆಯ ರಕ್ಷಣೆ [13]

ಇಲ್ಲಿ ಬೆಕ್ಕು, ಹುಲಿಯ ರೂಪಕಗಳು ಪುರುಷ ಪ್ರಧಾನ ವ್ಯವಸ್ಥೆ ಹೆಣ್ಣನ್ನು ಆಕ್ರಮಿಸುತ್ತಿರುವ ಬಗೆಯನ್ನೂ, ಅಮ್ಮ ಅಜ್ಜಿಯ ಕೈಗಳು ಅವುಗಳಿಂದ ರಕ್ಷಿಸುತ್ತಿರುವ ವಿಧಾನವನ್ನೂ, ಅದು ದೇಶ ಕಾಲಾತೀತವಾಗಿ ನಡೆಯುತ್ತಿರುವ ವ್ಯಾಪಕತೆಯನ್ನೂ ಸಮರ್ಥವಾಗಿ ಹಿಡಿದಿಡುತ್ತವೆ. ಮುಂದುವರಿದು 'ಬಯಲಿನಲಿ ಮಲಗಿ ಬೆಕ್ಕು ಹುಲಿಗಳಿಲ್ಲದ ಆಗಸ ದಿಟ್ಟಿಸುವಾಗ ಕಾಯಬಂದ ಕೈಗಳು', ಕಂಡು ಹೇಸಿದರೂ ನೀರವತೆಗೆ ಬೆಚ್ಚಿ ಹಾಡಬೇಕು', ಎನ್ನುವ ವಾಕ್ಯಗಳು 'ರಕ್ಷಣೆ'ಯ ಹೆಸರಿನಲ್ಲಿ ಹೆಣ್ಣನ್ನು ನಿಯಂತ್ರಿಸಲು ಪಿತೃ ಪ್ರಧಾನ ವ್ಯವಸ್ಥೆಯ 'ಮಾದರಿಪಾತ್ರ'ಗಳು ಸದಾ ಸನ್ನದ್ಧವಾಗಿರುವ, ಅವುಗಳಿಂದ ಬಿಡುಗಡೆಗೊಳ್ಳಲು ಸಾಧ್ಯವಾಗದಿರುವ ಬಗೆಗಿನ ಅಸಮಾಧಾನವಾಗಿ ವ್ಯಕ್ತಗೊಂಡಿದೆ. ಆದರೆ 'ಅಜ್ಜಿ ಅಮ್ಮ ಕೈಗಳು ಬೆಳೆಯುತ್ತವೆ ಬದಲಾಗುತ್ತವೆ ಇರುತ್ತವೆ' ಎಂದು ಕೊನೆಗೊಳ್ಳುವ ಕವಿತೆ ಹೆಣ್ಣಿನ ಸಂದರ್ಭದಲ್ಲಿ ಕಾಯುವ

ಕೈಗಳೆ ಬಂಧನದ ಬೇಡಿಗಳಾಗುವ, ಬಂಧನದ ಬೇಡಿಗಳೆ ಬಿಡುಗಡೆಯ ಬಾಗಿಲಾಗುವ ಪರಿಯನ್ನು ತೆರೆದಿಡುತ್ತದೆ. ಇಲ್ಲಿ 'ಬೆಳೆಯುತ್ತವೆ', 'ಬದಲಾಗುತ್ತವೆ', 'ಇರುತ್ತವೆ' ಎನ್ನುವ ಪದಗಳು ಪುರುಷಾಕ್ರಮಣದ ಎದುರು ಹೆಣ್ಣನ್ನು ಕಾಯುವ ಮತ್ತು ಕೊಲ್ಲುವ ಕೈಗಳ ನಿರಂತರವಾದ ಚಲನಶೀಲತೆಯನ್ನೂ, ಅದರ ಮುಂದುವರಿಕೆಯನ್ನು ವಾಸ್ತವದ ನೆಲೆಗಟ್ಟಿನಲ್ಲಿ ಹಿಡಿದಿಡಲು ಪ್ರಯತ್ನಿಸುತ್ತದೆ. ಈ 'ಕೈಗಳು' ಎಲ್ಲಾ ಕಾಲದಲ್ಲೂ ಬೇರೆ ಬೇರೆ ಮಾದರಿಗಳಲ್ಲಿ ಕಾರ್ಯ ನಿರ್ವಹಿಸುತ್ತಿರುತ್ತವೆ, ಅದು ಸಹಜ ಎಂಬ ಧೋರಣೆ ಇದೆಯಾದರೂ ಅದನ್ನೂ ಮೀರಿದ ಆಶಾವಾದವೊಂದು ಇವರ ಕವನಗಳಲ್ಲಿ ಇಣುಕುತ್ತದೆ. ಇವರ ಮುಂದಿನ ಕವನಗಳಲ್ಲಿ ಅದನ್ನು ಸ್ಪಷ್ಟವಾಗಿ ಗುರುತಿಸಬಹುದು.

ಇವರ ಎಲ್ಲಾ ಕವನಗಳ ಕೇಂದ್ರ ವಸ್ತು ಹೆಣ್ಣಿನ ಪರವಾದ, ಸಮಾನತೆಯ, ಸಮಾನ ಬದುಕಿನ ಅವಕಾಶಗಳ ಪರವಾದ ಚಿಂತನೆಯೇ ಮುಖ್ಯವಾದರೂ ಪರಂಪರೆಯ ಅಚ್ಚಿನಲ್ಲಿ ಎರಕಹೋಯ್ದ ಹೆಣ್ಣುಗಳು ಅಪ್ರಜ್ಞಾಪೂರ್ವಕವಾಗಿಯೇ ಪುರುಷ ಪ್ರಧಾನ ವ್ಯವಸ್ಥೆಯ ಭಾಗವಾಗಿಯೇ ಕಾರ್ಯ ನಿರ್ವಹಿಸುತ್ತಿರುವ ಬಗೆಗೆ ಲೇಖಕಿಗೆ ಒಂದೆಡೆ ಅನುಕಂಪ, ಮರುಕವಿದ್ದರೆ, ಮತ್ತೊಂದೆಡೆ ಅದು ಸಿಟ್ಟು ಪ್ರತಿರೋಧವಾಗಿ ಕಂಡುಬರುತ್ತದೆ. ಇವರ 'ನಾರಿ ಮಣಿಗಳಗೊಂದು ಕಿವಿಮಾತು', 'ಮಹೋದರೆ', 'ಅಸ್ಪೃಶ್ಯರನ್ನು ಕುರಿತು', 'ಮರೆತಿಲ್ಲ', 'ಭೂಮಿ ತಿರುಗುತ್ತಿದೆ', ಮುಂತಾದ ಕವನಗಳು ಇದನ್ನು ಸಮರ್ಥವಾಗಿ ತೆರೆದಿಡುತ್ತವೆ. ಇವರ ಮಹೋದರೆ ಕವನ ಈ ನಿಟ್ಟಿನಲ್ಲಿ ಮುಖ್ಯ ಅಂಶಗಳನ್ನು ಚರ್ಚಿಸುತ್ತದೆ. ಪುರುಷಪರ ವ್ಯವಸ್ಥೆ ಯಾವೆಲ್ಲಾ ಅಂಶಗಳನ್ನು ಅವಳ ಶಕ್ತಿ, ಮಹಿಮೆ ಎಂದು ಹಾಡಿ ಹೊಗಳುತ್ತಿದೆಯೋ ಅವುಗಳನ್ನು ಲೇಖಕಿ ಇಲ್ಲಿ ವ್ಯಂಗ್ಯದ ಮೂಲಕ ನಿರಾಕರಿಸುತ್ತಾರೆ. ಅಲ್ಲದೆ ಇಂತಹ 'ಮಾದರಿಗಳ'ನ್ನು ಲೇವಡಿ ಮಾಡುವ ಮೂಲಕ ಅವುಗಳ ಅಪ್ರಸ್ತುತತೆಯನ್ನು ತಿಳಿಸುತ್ತಾರೆ.

ಭಲೇ ಘಟ್ಟಿ ಹೆಣ್ಣು  
ತಪ್ಪಿಯೂ ಮಿಡುಕಲಿಲ್ಲ  
ಎಲ್ಲ ಗಪ್ ಅಂತ ನುಂಗತೀ  
ಎಂಥ ಚಾಲೂಕು!

ನಿನ್ನ ಸದಾ ಕಿಸಿದ ಹಲ್ಲುಗಳ ಕಿತ್ತು  
ಪ್ರಪಂಚದಾಚೆಯ ಮ್ಯೂಸಿಯಂಗೆ  
ರವಾನಿಸಬೇಕೆನ್ನುವಾಗ  
ಹಿಂದ ನಿಂತ ಹೊಸ ಸೆಟ್ಟುಗಳ ಕ್ಯೂ  
ಎಂಥ ಪವಾಡ! [೧೩]

ಈ ಕವನದಲ್ಲಿ ಹೆಣ್ಣಿನ ತಾಳಿಕೊಳ್ಳುವ ಶಕ್ತಿಯೇ ಅವಳ ಮಿತಿಯಾಗಿ, ಅದರಿಂದಾಗಿಯೇ ಹೆಣ್ಣು ಅನೇಕ ಸಂಕಷ್ಟಗಳಿಗೆ ಒಳಗಾಗಬೇಕಾಗಿ ಬಂದಿರುವುದನ್ನು ಆರಂಭದ ಸಾಲುಗಳು ಚರ್ಚಿಸುತ್ತಿದ್ದರೆ, ಮುಂದುವರೆದ ಹಂತದಲ್ಲಿ ಹೆಣ್ಣು ತನ್ನೆಲ್ಲಾ ನೋವು, ಅವಮಾನಗಳ ನಡುವೆಯೂ ನಗುವಿನ ಮುಖವಾಡ ಹೊತ್ತು, ಏನೂ ಆಗಿಲ್ಲವೆಂಬಂತೆ ನಟಿಸುವ ಚಿತ್ರಣವಿದೆ. ಹೆಣ್ಣಿನ ಈ ಬಗೆಯ ವರ್ತನೆಯನ್ನು ಕುರಿತು

ಲೇಖಕಿಗೆ ಅತಿಯಾದ ಸಿಟ್ಟು, ಪ್ರತಿರೋಧಗಳಿದ್ದಾಗ್ಯೂ, ವಾಸ್ತವದಲ್ಲಿ ಇದರ ಮುಂದುವರಿಕೆ, ಹಾಗೂ ನಿರಂತರತೆಯನ್ನು ಈ ಕವನ ಚರ್ಚಿಸುತ್ತದೆ. 'ಹಿಂದೆ ನಿಂತ ಹೊಸ ಸೆಟ್ಟುಗಳ ಕ್ಯೂ' ಎನ್ನುವಲ್ಲಿ ವ್ಯಂಗ್ಯದ ಜೊತೆಗೆ ವಿರೋಧವೂ ಕೂಡಿ ಅದಕ್ಕೆ ಕಾರಣರಾದವರ ಕಡೆಗೆ ಆಲೋಚಿಸುವಂತೆ ಮಾಡುತ್ತದೆ. ಇವರ 'ಪಾಪ, ನೀವು ಹೊಣೆಯಲ್ಲ' ಕವನ ಹೆಣ್ಣಿನ ಬಗೆಯ ವರ್ತನೆ ರೂಪುಗೊಳ್ಳುವಲ್ಲಿ ಪುರುಷ ಪ್ರಧಾನ ವ್ಯವಸ್ಥೆಯ ಪಾತ್ರ ಏನು ಎಂಬುದನ್ನು ಸಮರ್ಥವಾಗಿ ಹಿಡಿದಿಡುತ್ತದೆ.

ತೊತ್ತಿಗೆ ಸಹಧರ್ಮಿತ್ವದ ಹಣೆಬರಹ
ಮುದ್ದಾಗಿದೆ.
ಕಂದರದ ಆಳಕ್ಕೆ ದೂಕುವ
ಸೋಗುಗಳೂ ಸೊಗಸಾಗಿವೆ.
ಸಭ್ಯರೇ ಸ್ವಲ್ಪ ತೆಪ್ಪಗಿರಿ
ನಿರಾಳ ಉಸಿರಾಡೋಣ.
– – – – – – – – –
ಈಗಲೂ
ನನಗೆ ಆ ಕಣ್ಣ ಕೊನೆಯಲ್ಲಿ
ಕಾಣುವುದು ಬರೀ
ಬೇಕಿನ ಸೂಜಿಮೊನೆ.
ಕನಿಷ್ಠ ಉಷ್ಣಕ್ಕೇ
ಕರಗಿ ನೀರಾಗಿ ಹರಿವ
ಕರ್ಪೂರದ ಗೊಂಬೆ
'ಸಾಧಾರಣೀಕರಣ'
ಪಾಪ, ನೀವು ಹೊಣೆಯಲ್ಲ. [೧೪]

ಈ ಕವನದ ಪ್ರತಿಯೊಂದು ಪದವೂ ವ್ಯವಸ್ಥೆಯ ಕಾರ್ಯಮಾದರಿಗಳನ್ನು ಸಮರ್ಥವಾಗಿ ಹಿಡಿದಿಡುತ್ತದೆ. ಹೆಣ್ಣನ್ನು 'ಸ್ಥಾಪಿತ ಮಾದರಿ ಪಾತ್ರಗಳಾಗಿ' ನಿರ್ಮಿಸಿರುವ, ಆ ಬಗೆಯಲ್ಲಿ ಬದುಕು ನಡೆಸುವುದೇ ಶ್ರೇಷ್ಠ ಎಂಬ ವಿಸ್ಮೃತಿಗೆ ಒಳಪಡಿಸಿರುವ ವ್ಯವಸ್ಥೆಯ ಬಗೆಗಿನ ಪ್ರತಿರೋಧ ಇಲ್ಲಿ ವ್ಯಂಗ್ಯ, ವಿಡಂಬನೆಯ ಮೂಲಕ ವ್ಯಕ್ತಗೊಂಡಿದೆ. 'ಸಭ್ಯರೇ, ಸ್ವಲ್ಪ ತೆಪ್ಪಗಿರಿ ನಿರಾಳ ಉಸಿರಾಡೋಣ' ಎನ್ನುವ ಮಾತು ಸಿಟ್ಟು, ಅಸಹನೆ, ವ್ಯಂಗ್ಯ, ಪ್ರತಿಭಟನೆ ಎಲ್ಲವನ್ನೂ ಒಟ್ಟಿಗೆ ಹಿಡಿದಿಡುತ್ತದೆ. 'ನಿರಾಳ ಉಸಿರಾಡೋಣ' ಎನ್ನುವುದು ಇಬ್ಬರೂ ಕೂಡ ಬದುಕಬೇಕಾದ ಅನಿವಾರ್ಯತೆಯನ್ನು ಬೇಡಿಕೆಯೂ ಅಲ್ಲದ, ಆಜ್ಞೆಯೂ ಅಲ್ಲದ ಧ್ವನಿಯ ಮೂಲಕ ಸಹಜವೆಂಬಂತೆ ಹಿಡಿದಿಡಲಾಗಿದೆ. ಮುಂದುವರಿದು 'ಕನಿಷ್ಠ ಉಷ್ಣಕ್ಕೇ ಕರಗಿ ನೀರಾಗಿ ಹರಿವ ಕರ್ಪೂರದ ಗೊಂಬೆ' ಎನ್ನುವುದು ಹೆಣ್ಣಿನ ಮುಗ್ಧತೆಯನ್ನೂ, ವ್ಯವಸ್ಥೆ ಅದನ್ನು ತನ್ನ ಅನುಕೂಲಕ್ಕೆ ತಕ್ಕಂತೆ ಬಳಸಿಕೊಳ್ಳುತ್ತಿರುವುದನ್ನೂ, ಕೆಲ ಸಂದರ್ಭದಲ್ಲಿ ಅದರ ಅರಿವಿದ್ದಾಗ್ಯೂ ವಿರೋಧಿಸಲಾಗದ ಹೆಣ್ಣಿನ ಅಸಹಾಯಕತೆಯನ್ನೂ ಕುರಿತು ಚರ್ಚಿಸುತ್ತಲೇ ಇದಕ್ಕೆಲ್ಲ ಕಾರಣವಾಗಿದ್ದೂ, ಅದನ್ನು ಒಪ್ಪದ ವ್ಯವಸ್ಥೆಯನ್ನು 'ಪಾಪ, ನೀವು ಹೊಣೆಯಲ್ಲ' ಎಂದು ಅಪಹಾಸ್ಯ ಮಾಡುತ್ತದೆ. ಆದರೆ ಇದೆಲ್ಲಕ್ಕೂ ನೀವೇ

ಕಾರಣ ಎಂಬ ದೃಢವಾದ ನಂಬಿಕೆ, ವಿಶ್ವಾಸ ಅಂತರ್ಯದಲ್ಲಿ ಮೂಡಿಬಂದಿದೆ. ಈ ಕವನ ಹೆಣ್ಣನ್ನು ಸದಾಕಾಲ ನಿರ್ಬಂಧಕ್ಕೊಳಪಡಿಸುತ್ತಿರುವ ವ್ಯವಸ್ಥೆಯ ಕಾರ್ಯತಂತ್ರಗಳನ್ನು ಹಂತ ಹಂತವಾಗಿ ಬಿಚ್ಚಿಡುತ್ತದೆ. ಮತ್ತು ಸರಳ, ಸಹಜವಾದ ಪದಗಳ ಬಳಕೆ ಕಾವ್ಯಕ್ಕೊಂದು ಹೊಸ ಆಯಾಮವನ್ನು ನೀಡುತ್ತದೆ. ಇವರ **ನಿರ್ದೇಶಕರ ಉವಾಚ, ಪ್ರಗತಿ,** ಮುಂತಾದ ಕವನಗಳು ಭಿನ್ನ ಸನ್ನಿವೇಶಗಳಲ್ಲಿ ಗಂಡಿನ ತಾರತಮ್ಯ ಧೋರಣೆ ಯಾವ ರೀತಿಯಲ್ಲಿ ಕೆಲಸ ಮಾಡುತ್ತದೆ ಎಂಬುದನ್ನು ಚರ್ಚಿಸುತ್ತವೆ. ನಿರ್ದೇಶಕರ ಉವಾಚ ಗಂಡಿನ ಇಬ್ಬಗೆ ಬದುಕಿನ, ಗಂಡು ಹೆಣ್ಣಿಗೆ ಸಂಬಂಧಿಸಿದಂತೆ ಬೇರೆ ಬೇರೆ ನಿಲುವುಗಳನ್ನು ಹೊಂದಿರುವ ವ್ಯವಸ್ಥೆಯ ಕ್ರಮವನ್ನು ಹಿಡಿದಿಡುತ್ತಲೇ, ಅದು ಹೇಗೆ ಗಂಡಿನ ಪರವಾಗಿ ಕಾರ್ಯ ನಿರ್ವಹಿಸುತ್ತದೆ ಎಂಬುದನ್ನು ಕೇವಲ ಆರು ಸಾಲುಗಳಲ್ಲಿ ಕಟ್ಟಿಕೊಡುತ್ತದೆ.

ಕಚೇರಿಯಲ್ಲೊಬ್ಬಳು ವಿವಾಹಿತೆ
ಪರಪುರುಷನೊಡನೆ ಸಲ್ಲಾಪವಾಡಿದಳಂತೆ
ನಿರ್ದೇಶಕರು ಕೇಳಿದರು : 'ಇದು ಸರಿಯೇನ್ರಿ'?
ಅದೇ ಕಚೇರಿಯಲ್ಲಿ ಸರ್ವಪಲ್ಲಿಯವರ
ಮುಕ್ತಲೈಂಗಿಕತೆಯ ಚರ್ಚೆಯಲ್ಲಿ
ಅದೇ ನಿರ್ದೇಶಕರು ಹೇಳಿದರು : 'ಅದು ಮೋರ್ ಹ್ಯೂಮನ್'[78]

ಇಲ್ಲಿ 'ನಿರ್ದೇಶಕರು' ಎನ್ನುವುದು ಕೇವಲ ಕಛೇರಿಗಷ್ಟೇ ಸೀಮಿತವಾಗಿರದೆ, ಅದನ್ನೂ ಮೀರಿದ ಸಾಮಾಜಿಕ ವ್ಯಾಪ್ತಿಯನ್ನು ಪಡೆದುಕೊಂಡಿದೆ. ಈ ನಿರ್ದೇಶಕರುಗಳು ಎಲ್ಲಾ ಕಾಲದಲ್ಲಿಯೂ ವ್ಯವಸ್ಥೆಯ, ಅಧಿಕಾರ ಶಾಹಿಯ ಪರವಾಗಿ ಕಾರ್ಯ ನಿರ್ವಹಿಸುತ್ತಿರುವುದನ್ನು ಕಾಣಬಹುದು. ಪ್ರಸ್ತುತ ಕವನದಲ್ಲಿ ಲೈಂಗಿಕತೆಯನ್ನು ಕುರಿತ ಈ 'ನಿರ್ದೇಶಕರ' ಉವಾಚ 'ಮೋರ್ ಹ್ಯೂಮನ್' ಎನ್ನುವಷ್ಟು ಪ್ರಗತಿಪರವಾಗಿರುವ ಸಂದರ್ಭದಲ್ಲಿಯೂ ಹೆಣ್ಣಿನ ಬಗೆಗೆ ಮಾತ್ರ ಸಾಂಪ್ರದಾಯಿಕ ಧೋರಣೆಯದ್ದೇ ಆಗಿದೆ. ಆದರೆ ಗಂಡು ಈ ಇಬ್ಬಂದಿ ನಿಲುವಿನ ಬಗೆಗಾಗಲೀ, ತಾರತಮ್ಯ ಧೋರಣೆಯ ಬಗೆಗಾಗಲೀ ಬೇಸರವಿಲ್ಲದೆ ಅದನ್ನು ಸಹಜವೆಂಬಂತೆ, ಮಾನವಪರ ಎಂಬಂತೆ ಬಿಂಬಿಸುತ್ತಿರುವ ಬಗೆಗೆ ಲೇಖಕಿಯ ಬೇಸರ ವಿಡಂಬನೆಯ ರೂಪ ಪಡೆದಿದೆ. ಇವರ ಮತ್ತೊಂದು ಕವನ 'ನಾರಿಮಣಿಗಳಿಗೊಂದು ಕಿವಿಮಾತು' ಗಂಡು ಹೆಣ್ಣಿನ ಪರವಾಗಿ ಕಾರ್ಯನಿರ್ವಹಿಸುವ ಸಂದರ್ಭದಲ್ಲಿಯೂ ಕೂಡ ಅದು ಹೇಗೆ ಗಂಡಿಗೆ ಅನುಕೂಲಕರವಾಗಿರುತ್ತದೆ ಅಥವಾ ಗಂಡು ತನ್ನ ಅನುಕೂಲಕ್ಕೆ ತಕ್ಕಂತೆ ಹೇಗೆ ಅದನ್ನು ಮಾರ್ಪಡಿಸಬಲ್ಲ ಎಂಬುದನ್ನು ರಾವಣ, ದುಶ್ಯಾಸನರಿಗೆ ರಾಮ ಕೃಷ್ಣರ ಪಾತ್ರಗಳನ್ನು ಮುಖಾಮುಖಿಯಾಗಿಸುವುದರ ಮೂಲಕ ಚರ್ಚಿಸುತ್ತದೆ.

ನಿರ್ಭಯವಾಗಿ
ನಿಶ್ಚಿಂತೆಯಿಂದಿರಿ.
ನೀವು ಕತ್ತೆತ್ತದಿರುವವರೆಗೆ
ನಿಮ್ಮ ಕಣ್ಣಾಗಿ ಕಾಯುವ ಗಂಡುಗಳು
ನಿಮ್ಮ ಸುತ್ತ ಇರುತ್ತಾರೆ.
ಒಂದು ವೇಳೆ ರಾವಣ ದುಶ್ಯಾಸನರು ಹುಟ್ಟಿ
ನಿಮ್ಮ ಹೊತ್ತು ಸೀರೆ ಎಳೆದರೂ

ರಾಮ ಕೃಷ್ಣರಿದ್ದಾರೆ
ನಿಮ್ಮ ವಸ್ತ್ರ ಅಕ್ಷಯವಾಗಿಸಿ
ಅಗ್ನಿ ಪರೀಕ್ಷೆ ಮಾಡಿ
ಮೀಸೆ ತಿರುವಿಕೊಳ್ಳುವ ಭೂಪರು ! [೧೭]

ಇಲ್ಲಿ 'ನೀವು ಕತ್ತೆತ್ತದಿರುವವರೆಗೆ' ಎನ್ನುವುದು ಏಕಕಾಲಕ್ಕೆ ಹೆಣ್ಣು ಮತ್ತು ಗಂಡು ಇಬ್ಬರಿಗೂ ಒಂದು ಎಚ್ಚರಿಕೆಯ ಸಂದೇಶವನ್ನು ರವಾನಿಸುತ್ತಿದೆ. ಹೆಣ್ಣು ತನ್ನ ಶಕ್ತಿಯನ್ನು ಅರಿಯಬೇಕಿದ್ದರೆ, ಗಂಡು ಈ ಬಗೆಯ ಕುತಂತ್ರಗಳನ್ನು ನಿಲ್ಲಿಸಬೇಕು ಎಂಬ, ಹೆಣ್ಣು ತನ್ನ ಶಕ್ತಿಯನ್ನು ಅರಿಯಬಲ್ಲಳು ಎಂಬ ಅಭಿಪ್ರಾಯವೂ ಕವನದ ಹಿನ್ನೆಲೆಯಲ್ಲಿ ವ್ಯಕ್ತವಾಗುತ್ತಿದೆ. ರಾಮ, ಕೃಷ್ಣರನ್ನು ಹೆಣ್ಣಿನಪರ ಎನ್ನುವಲ್ಲಿಯೂ ನಡೆದಿರುವ ಸಾಂಸ್ಕೃತಿಕ ರಾಜಕಾರಣವನ್ನು ಈ ಕವನ ತೆರೆದಿಡುತ್ತದೆ. ಮತ್ತು ವ್ಯವಸ್ಥೆ ಹಿಂದಿನಿಂದ ಹೆಣ್ಣಿನ ಪರ ಎಂದು ಬಿಂಬಿಸುತ್ತಲೇ ಎಷ್ಟರ ಮಟ್ಟಿಗೆ ಪುರುಷಪರವಾಗಿ ಕಾರ್ಯನಿರ್ವಹಿಸುತ್ತಿದೆ ಎಂಬುದನ್ನು ನಿಕಷಕ್ಕೆ ಒಡ್ಡುತ್ತದೆ. ಒಟ್ಟಾರೆ ಇಲ್ಲಿ ಗಮನಿಸಬಹುದಾದ ಮುಖ್ಯ ಅಂಶ ಪುರುಷ ಪ್ರಧಾನ ವ್ಯವಸ್ಥೆಯಿಂದ ತರಬೇತಿ ಪಡೆದ ಹೆಣ್ಣಾಗಲೀ, ಗಂಡಾಗಲೀ ನಾಗರೀಕ, ಆಧುನಿಕ ಎನಿಸಿಕೊಳ್ಳುತ್ತಿರುವ ಸಂದರ್ಭಲ್ಲಿಯೂ ಕೂಡ ಆ ಹಿಡಿತಗಳಿಂದ ಸುಲಭವಾಗಿ ಬಿಡಿಸಿಕೊಳ್ಳಲು ಸಾಧ್ಯವಾಗುತ್ತಿಲ್ಲ ಎಂಬುದರ ಕಡೆಗೆ ಗಮನ ಸೆಳೆಯುತ್ತದೆ.

ವಿಜಯಾದಬ್ಬೆ ಆಧುನಿಕತೆ, ಶಿಕ್ಷಣ, ಉದ್ಯೋಗಾವಕಾಶಗಳು ಹೆಣ್ಣಿಗೆ ದತ್ತವಾಗಿರುವ ಸಂದರ್ಭದಲ್ಲಿಯೂ ಕೂಡ ಹೆಣ್ಣಿನ ಶೋಷಣೆಯ ನಿರಂತರತೆಯನ್ನು, ಅದರ ವಿಭಿನ್ನ ಮಾದರಿಗಳನ್ನು ಕವನಗಳ ಮೂಲಕ ಸಮರ್ಥವಾಗಿ ಕಟ್ಟಿಕೊಟ್ಟಿದ್ದಾರೆ. ಅವರ **ಅದೃಷ್ಟ, ಹೇಗಾದರೂ ಕರೆಯಿರಿ, ಮಿರುಗುವ ಗೋರಿಗಳು, ಪರಂಪರೆ, ತಿರುಗಿನಿಂತ ಪ್ರಶ್ನೆ, ಭೂಮಿ ತಿರುಗುತ್ತಿದೆ, ಒಂದು ಸಾಮೂಹಿಕ ಗೀತೆ, ಅದೇ ವೃತ್ತ, ಕೊನೆಯಮಾತು** ಮುಂತಾದ ಕವನಗಳು ಈ ನಿಟ್ಟಿನಲ್ಲಿ ಮುಖ್ಯವಾದವುಗಳು.

ಆಧುನಿಕ ಸಂದರ್ಭದಲ್ಲಿ ಶಿಕ್ಷಣ ಮತ್ತು ಉದ್ಯೋಗಾವಕಾಶಗಳು ಹೆಣ್ಣಿಗೆ ಬಿಡುಗಡೆಯ ಬಾಗಿಲುಗಳು ಎನ್ನುತ್ತಿರುವ ಸಂದರ್ಭದಲ್ಲಿ ವಿಜಯಾದಬ್ಬೆ ಇವು ಹೇಗೆ ಹೆಣ್ಣನ್ನು ಬಿಡುಗಡೆ ಎಂಬ ಭ್ರಮೆಗೆ ಒಳಪಡಿಸಿ ಅವಳನ್ನು ಇನ್ನಷ್ಟು ಮತ್ತಷ್ಟು ಇಕ್ಕಟ್ಟಿಗೆ ಒಳಪಡಿಸಿವೆ ಎಂಬುದನ್ನು ಚರ್ಚಿಸುತ್ತಾರೆ. ಅವರ **'ಅದೃಷ್ಟ'** ಕವನ ಉದ್ಯೋಗಸ್ಥ ಮಹಿಳೆ ಎದುರಿಸುತ್ತಿರುವ ಸವಾಲುಗಳನ್ನು ಹಿಡಿದಿಡಲು ಪ್ರಯತ್ನಿಸುತ್ತದೆ.

ಎಂಥದೋ ತುರ್ತು
ನಿಜಕ್ಕೂ ಉದ್ಯೋಗಿ ಎನ್ನುತ್ತಾರೆ.
ಮತ್ತೆ ಹಾಗೇ ಭ್ರಮಿಸಿ
ಧನ್ಯತೆಯ ತೇಗು ತೇಗಿ
ಕುಳಿತಲ್ಲಿ ತೂಕಡಿಕೆ.
ಅದೃಷ್ಟಕ್ಕೆ ಯಾರೂ ಕುರುಬಬೇಕು. [೧೮]

ಇಲ್ಲಿನ ನವುರಾದ ವ್ಯಂಗ್ಯ ಆಧುನಿಕ ಹೆಣ್ಣಿನ ನೋವು ಸಂಕಷ್ಟಗಳನ್ನು ಸಮರ್ಪಕವಾಗಿ ಹಿಡಿದಿಡುತ್ತದೆ. ಇವರ **ಅನ್ನಪೂರ್ಣೆ, ಸದ್ಗೃಹಿಣಿ** ಕವನಗಳು ಆಧುನಿಕ ಹೆಣ್ಣಿನ ತಲ್ಲಣಗಳನ್ನು ಇನ್ನಷ್ಟು ಸಮರ್ಥವಾಗಿ ಹಿಡಿದಿಡುತ್ತವೆ.

ಕುದಿಯುತ್ತಾಳೆ ಅನ್ನದ ಜೊತೆಗೆ
ಬೇಯುತ್ತಾಳೆ ಬೇಯಿಸುತ್ತಲೇ
ಹೆಚ್ಚಿಕೊಳ್ಳುತ್ತಾಳೆ ಹೆಚ್ಚುತ್ತಲೇ
ಖಾಲಿಯಾಗುತ್ತಾಳೆ ಖಾಲಿಪಾತ್ರೆಯ ಜೊತೆಗೆ
ಮಸಿಯಾಗುತ್ತಾಳೆ ಮಸಿಯ ಜೊತೆಗೆ
ಬೂದಿಯಾಗುತ್ತಾಳೆ ಬೂದಿಯ ಜೊತೆ
ನಮ್ಮ ಅನ್ನಪೂರ್ಣೆ [೧೮]

ಇಲ್ಲಿ ಲೇಖಕಿ, ನಾಯಕಿ, ಮತ್ತು ಅಡುಗೆ ಮಾಡುವ ಕ್ರಿಯೆ ಒಂದರೊಡನೊಂದು ಸೇರಿಕೊಂಡು ಚರ್ಚೆಯಾಗಿವೆ. ಕುದಿಯುವ, ಬೇಯುವ, ಹೆಚ್ಚುವ, ಖಾಲಿಯಾಗುವ ಕ್ರಿಯೆಗಳು ಕೇವಲ ಅಡುಗೆಗಷ್ಟೇ ಸೀಮಿತವಾಗಿರದೆ, ಹೆಣ್ಣಿಗೂ, ಹೆಣ್ಣಿನ ನಿತ್ಯಕರ್ಮಕ್ಕೂ ವಿಸ್ತರಿಸಿಕೊಂಡಿವೆ. ಇಲ್ಲಿ ಹೆಣ್ಣು ಅವುಗಳನ್ನು ಮಾಡುತ್ತಲ್ಲೇ ಅದರಲ್ಲೇ ಸಂಪೂರ್ಣ ತಲ್ಲೀನವಾಗುವ ವಿಧಾನ ಒಂದಾದರೆ, ಅದರಿಂದಾಗಿಯೇ ತನ್ನ ಇಡೀ ಬದುಕು, ವ್ಯಕ್ತಿತ್ವವನ್ನು ಇಲ್ಲವಾಗಿಸಿಕೊಳ್ಳುವ ವಿಧಾನ ಮತ್ತೊಂದು ರೂಪದ್ದು. ಇಲ್ಲಿ 'ಕುದಿಯುತ್ತಾಳೆ',' ಬೇಯುತ್ತಾಳೆ', 'ಹೆಚ್ಚಿಕೊಳ್ಳುತ್ತಾಳೆ', 'ಖಾಲಿಯಾಗುತ್ತಾಳೆ'ಎನ್ನುವ ಕ್ರಿಯಾರೂಪಗಳು ವ್ಯವಸ್ಥೆಯ ಹಿಡಿತಕ್ಕೆ ಸಿಕ್ಕ ಹೆಣ್ಣು ಅಪ್ರಜ್ಞಾಪೂರ್ವಕವಾಗಿಯೋ ತನ್ನ ಮಿತಿಗಳನ್ನು ತಾನೇ ನಿರ್ಮಿಸಿಕೊಳ್ಳುತ್ತಿರುವ ವಿಧಾನಗಳನ್ನು ತಿಳಿಸುತ್ತದೆ. ಇವರ ಸದ್ಗೃಹಿಣಿ ಇದನ್ನು ಮತ್ತಷ್ಟು ಸಮರ್ಥಿಸುತ್ತದೆ.

ಕೆಡದಂತೆ ಉಪ್ಪಿನಕಾಯನ್ನೂ
ಬಾಡದಂತೆ ಸೊಪ್ಪನ್ನು
ಕುಟ್ಟೆ ಹಿಡಿಯದಂತೆ ಕಾಳನ್ನೂ
ಅವಳು ಜೋಪಾನ ಮಾಡುತ್ತಾಳೆ.
ಮಡಿಕೆ ಕುಡಿಕೆ ಪಿಂಗಾಣಿಗಳ
ಒಡೆಯದಂತೆ ಒಪ್ಪ ಮಾಡುತ್ತಾಳೆ.
ಅವಳನ್ನೇನು ಒಪ್ಪಮಾಡಬಹುದು?
ಮನದ ಕನ್ನಡಿಯಲ್ಲಿ ಯಾರೂ ಬಿಂಬಿಸದೆ
ಬದುಕು ಒರಸಿಟ್ಟು ಹೋದಾಗ
ನೆಲವ ಕನ್ನಡಿ ಮಾಡಿ
ತನ್ನ ತಾನೇ ನೋಡಿಕೊಳ್ಳುತ್ತಾಳೆ [೧೯]

ಈ ಕವನಗಳು ಹೆಣ್ಣಿನ ಬಗೆಗೆ ಮರುಕ, ಅನುಕಂಪ, ಬೇಸರವನ್ನು ವ್ಯಕ್ತಪಡಿಸುವುದರ ಜೊತೆಗೆ ಹೆಣ್ಣಿನ ಅಸಹಾಯಕತೆಯನ್ನೂ ಕೂಡ ಹಿಡಿದಿಡುತ್ತದೆ. **ಮಿಸ್.ಎಸ್.ಲಕ್ಷ್ಮೀ** ಕವನ ಕೂಡ ಆಧುನಿಕ ಹೆಣ್ಣಿನ ಸ್ಥಿತಿ ಹಿಂದಿಗಿಂತ ಹೆಚ್ಚೇನು ಬದಲಾಗಿಲ್ಲ ಎಂಬುದನ್ನು ಹಿಡಿದಿಡುತ್ತದೆ.

ಈ ಲಕ್ಷ್ಮಿಗೂ ಸ್ವಾತಂತ್ರ್ಯವಿತ್ತು :
ಅವಳಜ್ಜಿಯಂತೆ ಇವಳೇನೂ
ಕೂದಲಿಗೆ ನಾರು ಬಿಗಿಯಲಿಲ್ಲ

ಲಂಗವಿಲ್ಲದೆ ಸೀರೆಯುಡಲಿಲ್ಲ
ಆದರೂ ಅವಳ ಒಳತು
ಹೆತ್ತವರಿಗಲ್ಲದೆ ಮತ್ತಾರಿಗೆ ತಿಳಿದೀತು ? .........
ಶೇಷಶಾಯಿಯ ಕಾಲಬುಡದ
ಆ ಲಕ್ಷ್ಮಿಯೇ ಅವಳಾಗಿದ್ದಾಳೆ. [೨೦]

ಒಟ್ಟಾರೆ ಹೆಣ್ಣಿನ ಈ ಸ್ಥಿತಿ ನಿರಂತರವಾದದ್ದು ಎಂಬುದನ್ನು ಈ ಕವನಗಳು ಹಿಡಿದಿಡುತ್ತವೆ. 'ಪರಂಪರೆ', 'ಹೇಗಾದರೂ ಕರೆಯಿರಿ', 'ಮಿರುಗುವ ಗೋರಿಗಳು' ಕವನ ಆಧುನಿಕ ಹೆಣ್ಣಿನ ಸಂದಿಗ್ಧ ಸ್ಥಿತಿಯನ್ನು ಸಮರ್ಥ ರೀತಿಯಲ್ಲಿ ಹಿಡಿದಿಡಲು ಪ್ರಯತ್ನಿಸುತ್ತವೆ. 'ಪರಂಪರೆ' ಹೆಣ್ಣಿನ ಶೋಷಣೆಗೆ ಒಂದು ದೀರ್ಘ ಪರಂಪರೆಯಿರುವುದನ್ನು ಧ್ವನಿಸುತ್ತಲೇ ಅದರ ವ್ಯಾಪಕತೆಯನ್ನೂ, ಬಿಡಿಸಿಕೊಳ್ಳಲಾಗದ ಅಸಹಾಯಕತೆಯನ್ನೂ ಹಿಡಿದಿಡುತ್ತದೆ. ಮಿರುಗುವ ಗೋರಿಗಳು ತನ್ನೆಲ್ಲಾ ನೋವು, ಅಸಹನೆಯ ನಡುವೆಯೂ ಎಲ್ಲವನ್ನೂ ಸಹಿಸಿ 'ನಗುವ' ಗೋರಿಗಳು ಅಂದಿಗೂ ಇವೆ. ಇಂದಿಗೂ ಇವೆ. ಏಕೆ ಸಹಿಸಬೇಕು ಎಂಬುದಕ್ಕಾಗಲೀ, ಯಾರಿಗಾಗಿ ಸಹಿಸಬೇಕು ಎಂಬುದಕ್ಕಾಗಲೀ ಸ್ಪಷ್ಟ ಉತ್ತರ ಇಲ್ಲ ಎಂಬುದನ್ನು ಕುರಿತು ಸುಳುಹುಗಳನ್ನು ನೀಡುತ್ತದೆ. 'ಹೇಗಾದರೂ ಕರೆಯಿರಿ' ಕೊಲ್ಲುವ, ಕಾಯುವ, ಸುಡುವ, ಬೇಯುವ, ಬೇಯಿಸಿಕೊಳ್ಳುವ, ಎಲ್ಲವನ್ನೂ ಸಹಿಸಿಕೊಳ್ಳುವ ಕ್ರಿಯೆ ಆಧುನಿಕ ಸಂದರ್ಭದಲ್ಲಿಯೂ ಕೂಡ ಹೇಗೆ ಮುಂದುವರಿದಿದೆ ಎಂಬುದನ್ನು ಹಿಡಿದಿಡುತ್ತದೆ.

ಅಲ್ಲಲ್ಲಿ ಹಾರುತ್ತ
ರಂಗಾದ ಮಹಲಿನೊಳಗೆ
ಹೇಗೋ ನುಗ್ಗಿ
ಹೊರಗಿನ ದಾರಿಕಾಣದೆ
ಜೋಡಿಸಿದ ಗಾಜುಗಳು
ಕಂಡೂ ಕಾಣದಂತಾಗಿ
ಆಕಾಶಕ್ಕೆ ಜಿಗಿಯಹೋಗಿ
ಬಡಿದುಕೊಂಡು ಸತ್ತು ಬಿದ್ದಿವೆ.
ಇತಿಹಾಸ ಇಲಾಖೆಯ ಅಡಿಗಲ್ಲ ಕೆಳಗೆ
ಹೂತು ಹೋಗಿವೆ. ಇವನ್ನು
ಹೇಗಾದರೂ ಕರೆಯಿರಿ
ಸೀತೆಯೆನ್ನಿ ದ್ರೌಪದಿಯೆನ್ನಿ
ಎಲ್ಲ ಒಂದೆ [೨೧]

ಇಲ್ಲಿ ಹೇಗೋ 'ಹೊರನುಗ್ಗಿ', 'ದಾರಿಕಾಣದೆ', 'ಜೋಡಿಸಿದ ಗಾಜುಗಳು', 'ಕಂಡೂ ಕಾಣದಂತಾಗಿ' ಪದಗಳ ಜೋಡಣೆ ವ್ಯವಸ್ಥೆಯ ಹಿಡಿತದ ಗಾಢವಾದ ಅರಿವು, ಮತ್ತು ಅಸಹಾಯಕತೆಯಿಂದ ರೂಪುಗೊಂಡಿದ್ದಾಗಿದೆ. ತಿರುಗಿನಿಂತ ಪ್ರಶ್ನೆ ಕೂಡ ಇದನ್ನು ಮತ್ತೊಂದು ರೀತಿಯಲ್ಲಿ ಹಿಡಿದಿಡುತ್ತದೆ. ಸೀತೆ ಮತ್ತು ಲೇಖಕಿಯ ಸಂಭಾಷಣೆಯ ರೂಪದಲ್ಲಿ ನಾಟಕೀಯವಾಗಿ ಆರಂಭವಾಗುವ ಕವಿತೆ ಸೀತೆಯ ಸಹನೆಯನ್ನು, ಆ ಸಹನೆಯಿಂದಾಗಿ ಎದುರಿಸಿದ ಸಮಸ್ಯೆಗಳನ್ನು ಚರ್ಚಿಸುತ್ತಾ ಲೇಖಕಿ 'ಯಾಕೆ ಸುಮ್ಮನೆ

ಕುಳಿತೆ ಸೀತೆ ನೀನು?' ಎಂದು ಪ್ರಶ್ನಿಸಿದರೆ, ಅದಕ್ಕೆ ಸೀತೆಯದ್ದು ಭೂಮಿ ತೂಕದ ಮೌನ. ಮಾತಿಲ್ಲ, ಮಾರುತ್ತರವಿಲ್ಲ. ಆದರೆ 'ಅವಳ ಕಣ್ಣ ಭಾವಗಳು ಶಬ್ದವಾಗದೆ ನನ್ನ ಕಣ್ಣಿಗಿಳಿದು ತಿರುಗಿನಿಂತವು ಕೇಳಿದ್ದ ಪ್ರಶ್ನೆಗಳು'. ಇಲ್ಲಿ ಲೇಖಕಿ ಕೇಳಿದ ಪ್ರಶ್ನೆಗಳೇ ಸೀತೆಯ ಪ್ರಶ್ನೆಗಳೂ ಆಗಿವೆ. ಇಲ್ಲಿ ಸೀತೆ ಲೇಖಕಿಯಾಗುವ, ಲೇಖಕಿ ಸೀತೆಯಾಗುವ ಕ್ರಿಯೆ ಸಹಜವೆಂಬಂತೆ ನಡೆದಿದೆ. ಆದರೆ ಈ ಪ್ರಶ್ನೆಗಳಿಗೆ ಇಬ್ಬರಲ್ಲೂ ಉತ್ತರವಿಲ್ಲ. ಇದು ಇಂದಿಗೂ ಕೂಡ ನಡೆಯುತ್ತಿರುವ ಸಾಮಾಜಿಕ ವಾಸ್ತವ. ಈ ಅರಿವು ವಿಜಯಾದಬ್ಬೆಯವರ ಹೆಣ್ಣಿನ ಪರವಾದ ಹೋರಾಟಗಳ ಹಾದಿಯನ್ನು ಪುನರ್ ವಿಮರ್ಶಿಸುವಂತೆ, ಮಾಡುತ್ತದೆ. ಈ ಎಲ್ಲಾ ಅಡೆತಡೆಗಳನ್ನು ಸಹಿಸಿಯೂ ಹೆಣ್ಣು ಕಂಡುಕೊಳ್ಳಬೇಕಾದ ಹೊಸ ಹಾದಿಯ ಕಡೆಗೆ ಚಿಂತಿಸುವಂತೆ ಮಾಡುತ್ತದೆ. ಬಿ.ಎನ್.ಸುಮಿತ್ರಾಬಾಯಿ ವಿಜಯಾದಬ್ಬೆಯವರ ಕಾವ್ಯದ ವಸ್ತು, ತಂತ್ರಗಾರಿಕೆಯನ್ನು ಕುರಿತಂತೆ "ವಸ್ತುಸ್ಥಿತಿಯನ್ನು ಅದರ ಸಮಗ್ರ ಸಾಂಸ್ಕೃತಿಕ ಹಿನ್ನೆಲೆಯಲ್ಲಿಟ್ಟು ಪರೀಕ್ಷಿಸುವುದರಿಂದ ಸಮಸ್ಯೆಯ ಆಳವಾದ ಗ್ರಹಿಕೆ ಸಾಧ್ಯವಾಗುತ್ತದೆ. ಅದರಿಂದ ಕವನದ ಅರ್ಥವಂತಿಕೆ ಕೇವಲ ಮೇಲ್ಪದರಕ್ಕೇ ನಿಲ್ಲುವುದಿಲ್ಲ. ಅರ್ಥಪರಂಪರೆಯನ್ನೇ ಹೊತ್ತುತರುವಂತೆ ಭಾಷೆ ಇಲ್ಲಿ ಪಾರದರ್ಶಕವಾಗುತ್ತದೆ. ವಿಷಯದ ಅಗತ್ಯಕ್ಕೆ ತಕ್ಕಂತೆ, ಎಲ್ಲೂ ಏಕತಾನವಾಗದಂತೆ ಕವನದ ಲಯ ದಾಟಗಳು ಬದಲಾಗುತ್ತವೆ." [೨೨] ಎನ್ನುವ ಮಾತುಗಳು ವಿಜಯಾದಬ್ಬೆಯವರ ಕಾವ್ಯದ ಮಹತ್ವವನ್ನು ಎತ್ತಿಹಿಡಿಯುತ್ತವೆ. ಅವರ **ಗೆರೆಗಳು, ಕನ್ನಡಿ, ಕಿಟಕಿಗಳು, ಅದೇ ವೃತ್ತ** ಇನ್ನೂ ಮುಂತಾದ ಕವಿತೆಗಳು ವ್ಯವಸ್ಥೆಯ ಕಾರ್ಯತಂತ್ರಗಳನ್ನೂ, ಹೆಣ್ಣಿನ ಸ್ಥಿತಿಗತಿಗಳನ್ನೂ ಧ್ವನಿಪೂರ್ಣವಾಗಿ ಹಿಡಿದಿಡುವಲ್ಲಿ ಯಶಸ್ವಿಯಾಗಿವೆ.

ವಿಜಯಾದಬ್ಬೆ ಆಧುನಿಕ ಹೆಣ್ಣು ಎದುರಿಸುತ್ತಿರುವ ಸವಾಲುಗಳಿಗೆ ಎರಡು ಬಗೆಯ ಪರಿಹಾರಗಳನ್ನು ಕಂಡು ಕೊಳ್ಳುತ್ತಾರೆ. ಮೊದಲನೆಯದು ವಾಸ್ತವವನ್ನು ಅರಿತು ಮುನ್ನಡೆಯುವುದು, ಎರಡನೆಯದು ಕಾಲ ಸರಿದಂತೆ ಎಲ್ಲವೂ ಸರಿಹೋಗುತ್ತದೆ ಎಂಬ ಆಶಾಭಾವ. ಅವರ 'ಏಕೆ', 'ಆರಿತೋಯುವ ಸತ್ಯಗಳು', 'ಸಾತತ್ಯದ ಭ್ರಮೆ' ಮುಂತಾದ ಕವನಗಳು ವಾಸ್ತವವನ್ನು ಅರಿಯಬೇಕಾದ ಅನಿವಾರ್ಯತೆಯನ್ನು ಎತ್ತಿ ಹಿಡಿಯುತ್ತವೆ. ಏಕೆಂದರೆ ಈ ಬಗೆಯ ಚಿಂತನೆ, ಆಲೋಚನೆ, ವ್ಯವಸ್ಥೆಯನ್ನು ಅರಿಯುವ ದೃಷ್ಟಿಯಿಂದಲೂ, ಹೆಣ್ಣಿನ ಜೀವನದ ಸಮರ್ಪಕತೆಯ ದೃಷ್ಟಿಯಿಂದ ಮುಖ್ಯ. ಅದನ್ನು ಲೇಖಕಿ

> ಅಲ್ಲಲ್ಲಿಗೇ ಮರೆತು ನಗುವುದು ಕ್ಷೇಮ
> ಜನ್ಮ ಜನ್ಮಾಂತರದ ತೊಡಕು ತಲೆಗೆ ಶೂಲೆ
> ಮರೆಯಲಾಗದ ರೋಗವಿದ್ದರೆ ಅದು ಅವರವರ ಅನಿಷ್ಟ.' [೨೩]

ಎನ್ನುತ್ತಾರೆ. ಏಕೆಂದರೆ ವ್ಯವಸ್ಥೆಯನ್ನು ಸಂಪೂರ್ಣ ಬದಲಾಯಿಸುತ್ತೇವೆಂಬ ಭ್ರಮೆ ಹೆಚ್ಚಿನ ಸಂದರ್ಭದಲ್ಲಿ ಹೆಣ್ಣಿಗೇ ಮಾರಕವಾಗಿ ಪರಿಣಮಿಸುವ ವಿಧಾನದ್ದಾಗಿದೆ. ಎಲ್ಲಾ ಆಯಾಮಗಳಿಂದಲೂ ಹೆಣ್ಣನ್ನು ನಿರಂತರವಾಗಿ ತನ್ನ ಅಧೀನಕ್ಕೆ ಒಳಪಡಿಸಿಕೊಳ್ಳಲು ಶ್ರಮಿಸುವ ವ್ಯವಸ್ಥೆಯ ಹುನ್ನಾರಗಳನ್ನು ಅರಿಯುವುದು, ಬಿಡಿಸುವುದು ಸುಲಭವಲ್ಲ ಎಂಬ ಅರಿವು ಇಲ್ಲಿ ಮೂಡಿಬಂದಿದೆ. ಹಾಗೆಂದು

ನಿರಾಶೆಯನ್ನೂ ಪಡಬೇಕಾಗಿಲ್ಲ. ಏಕೆಂದರೆ ಬದುಕಿನ ಚಲನೆಯಲ್ಲಿ ಇವೆಲ್ಲವೂ ಸಹಜ. ಅದನ್ನು ವಿಜಯಾದಬ್ಬೆ 'ಗಾಯವಾಗುವ ಸಹಜತೆಯೂ ಸುಳ್ಳಲ್ಲ ಗಾಯಮಾಯುವ ಸಹಜತೆಯೂ ಸುಳ್ಳಲ್ಲ ಮಾದ ಗಾಯದೊಳಗೆ ಉಳಿವ ನೋವೂ ಸುಳ್ಳಲ್ಲ'. (ಆರಿತೋಯುವ ಸತ್ಯಗಳು : ೮೩ ) ಎನನ್ನುತ್ತಾರೆ. ಇಲ್ಲಿ 'ಗಾಯ ಮಾಯುವ ಸಹಜತೆಯೂ ಸುಳ್ಳಲ್ಲ' ಎನ್ನುವ ಅಭಿಪ್ರಾಯ ಬದುಕಿನ ಪಯಣದಲ್ಲಿ ಹೆಣ್ಣಿಗೆ ಎಷ್ಟು ಗಂಡಿನ ಅವಶ್ಯಕತೆ ಇದೆಯೊ, ಅದೇ ರೀತಿ ಗಂಡಿಗೂ ಕೂಡ ಹೆಣ್ಣಿನೊಡಗೂಡಿ ಬಾಳುವ, ಬದುಕು ಕಟ್ಟುವ ಅವಶ್ಯಕತೆ ಇದೆ. ಇಬ್ಬರೂ ಕೂಡಿ ಆ ಕೆಲಸವನ್ನು ಪೂರೈಸಬೇಕು ಎಂಬ ಇಂಗಿತ ವ್ಯಕ್ತವಾಗುತ್ತದೆ. 'ಪ್ರೇಮನೇಮಿಗೆ', 'ಚಿಕ್ಕಿನಸುಕ್ಕು' ಕವನಗಳು ಗಂಡು ಹೆಣ್ಣು ಇಬ್ಬರೂ ಒಟ್ಟಿಗೆ ಬದುಕುವ, ತನ್ನ ಆಸೆ ಅಭಿಲಾಶೆಗಳನ್ನು ಪರಸ್ಪರರಲ್ಲಿ ಹಂಚಿಕೊಳ್ಳುವ ಇಂಗಿತವನ್ನು ಸಹಜವಾಗಿಯೇ ಹಿಡಿದಿಡುತ್ತವೆ. ಏಕೆಂದರೆ ಕುಟುಂಬ, ಸಂಸಾರ, ದಾಂಪತ್ಯಗಳು ಗಂಡು ಹೆಣ್ಣು ಇಬ್ಬರ ಸಮಾನ ಸಹಭಾಗಿತ್ವವನ್ನೂ, ಸಮಾನ ಕೊಡು ಕೊಳ್ಳುವಿಕೆಯನ್ನೂ ಅಪೇಕ್ಷಿಸುತ್ತವೆ. ಆದರೆ ಪುರುಷ ಪರವಾದ ವ್ಯವಸ್ಥೆಯ ಧೋರಣೆಯಿಂದಾಗಿ ಗಂಡು ಹೆಣ್ಣು ಇಬ್ಬರಿಗೂ ಶಾಂತಿ ನೆಮ್ಮದಿ ಇಲ್ಲದಾಗಿದೆ. ಇದನ್ನು ಅರಿತಾಗ ಬದುಕು ಸುಖಮಯವಾಗಲು ಸಾಧ್ಯ. ಇವರ ಪ್ರೇಮನೇಮಿಗೆ ಕವನ ಇದನ್ನು ಕುರಿತು ಚರ್ಚಿಸುತ್ತದೆ.

> ಈ ಸಂಸಾರವೃಕ್ಷದಡಿ ಕೂತು
> ಹಿಡಿದ ಜಡದ ಧೂಳನ್ನು
> ಜಾಡಿಸುವವರಾರೋ ನಿನ್ನ ಹೊರತು?
> ಈ ಸಂಸಾರನಾವೆಯಲಿ
> ನುಗ್ಗಿರುವೀ ನೋವಿನ ನೀರನ್ನು
> ಹೊರದೂಡುವರಾರೋ ನಿನ್ನ ಬಿಟ್ಟು ?
> ಪರಿತಾಪದುರಿ ನಂದುವುದೆ?
> ಸೂರ್ಯ ಬಂದಾನೆ ದೃಷ್ಟಿ ಇರುವಾಗ ? [೨೪]

ಇಬ್ಬರೂ ಪರಸ್ಪರ ಅರಿತು, ಬೆರೆತು ಜೀವನ ಸಾಗಿಸಬೇಕು ಎಂಬ ಚಿಂತನೆ, ಆಲೋಚನೆ ಬದುಕಿನ ಇಳಿ ವಯಸ್ಸಿನಲ್ಲಿ ಸಹಜವಾದದ್ದು. ಈ ಬಗೆಯ ಮನಸ್ಥಿತಿ ಹೆಣ್ಣಿನಂತೆ ಗಂಡಿನಲ್ಲೂ ಕೂಡ ಇರುವುದನ್ನು ಇವರ ಸೂರ್ಯಾಸ್ತ ಕವನ ಹಿಡಿದಿಡುತ್ತದೆ.

> ಮಧ್ಯಾಹ್ನದುರಿಮುಖದಿ
> ಹುರಿಮಾಡಿದ ಮೀಸೆ
> ಮುಖಕ್ಕೆ ಮುಖಕೊಟ್ಟು
> ಮಾತಾಡಗೊಡದಿದ್ದ
> ಈ ಪತಿರಾಯ ಎಷ್ಟು ಬದಲಾಗಿದ್ದಾನೆ
> ಈ ಮುಸ್ಸಂಜೆಯಲ್ಲಿ :
> ಈ ಕಿಡಿಯಡಿ ಬಗ್ಗಿ ಬದುಕಿದ್ದ ನಾನು
> ಧೈರ್ಯಮಾಡಿ ಈಗ ಈ ಸಂಜೆಯಲ್ಲಿ
> ಕೈಹಿಡಿದವನ ಮುಖದ ಗೆರೆಗಳನ್ನು ಕಾಣಲು ಹೋರುತ್ತಿರುವೆ.
> ಸೋತಕಣ್ಣಿಗೆ ಗೆರೆಗಳು ಕಾಣದಿದ್ದರೂ
> ಕೊನೆಗಾದರೂ ಕಣ್ತೆರೆದ ಕೋಮಲತೆಗೆ ಮನ ಬಿರಿದಿದೆ
> ಉಲ್ಲಾಸ ಪಶ್ಚಾತ್ತಾಪದಿಂದ. [೨೫]

ಇವರ ಒಟ್ಟು ಕವನಗಳಲ್ಲಿ 'ಸೂರ್ಯಾಸ್ತ' ಗಂಡಿನ 'ಭಿನ್ನ ಮುಖ'ವೊಂದನ್ನು ಅನಾವರಣಗೊಳಿಸುತ್ತದೆ. ಮಧ್ಯಾನ್ಹ ಮತ್ತು ಮುಸ್ಸಂಜೆ ಕಾಲದ ಚಲನೆಯ ಜೊತೆಗೆ ಮನುಷ್ಯನ ಬದುಕಿನ ಚಲನೆಯನ್ನೂ ಹಿಡಿದಿಡುತ್ತಿದೆ. ಮಧ್ಯಾಹ್ನದುರಿಮುಖ ಸೂರ್ಯನದೂ ಹೌದು ಗಂಡಿನ ಧರ್ಪ, ಅಹಂಕಾರದ ಸಂಕೇತವೂ ಹೌದು. ಪ್ರಕೃತಿಯ ಚಲನೆಯಷ್ಟೇ ಸಹಜ ಹಾಗೂ ಅನಿವಾರ್ಯವಾದ ಬದಲಾವಣೆ ಇದು ಎಂಬುದನ್ನು 'ಮುಖಕ್ಕೆ ಮುಖಕೊಟ್ಟು ಮಾತಾಡಗೊಡದಿದ್ದ' ಗಂಡ ಈಗ ಎಷ್ಟು ಬದಲಾಗಿದ್ದಾನೆ ಎನ್ನುವ ಸಾಲುಗಳು ಸಮರ್ಥವಾಗಿ ಹಿಡಿದಿಡುತ್ತವೆ. ಜೊತೆಗೆ ಬದಲಾವಣೆಯ ಅನಿವಾರ್ಯತೆಯನ್ನೂ, ಅದರ ಸಹಜ ಗತಿಯನ್ನು 'ಸೂರ್ಯನ' ರೂಪಕ ತೆರೆದಿಡುತ್ತದೆ. ಆದರೆ ಈ ವೇಳೆಗೆ ಹೆಣ್ಣು ಗಂಡಿನ ಬಗೆಗಿನ ತನ್ನ ಒಲವು ಆಸಕ್ತಿಯನ್ನು ಕಳೆದುಕೊಂಡಿರುತ್ತಾಳಾದರೂ 'ಬದಲಾವಣೆಯ'ಬಗೆಗೆ ಉಲ್ಲಾಸ, ಪಶ್ಚಾತ್ತಾಪ ಎರಡೂ ಭಾವಗಳೂ ಒಟ್ಟಿಗೆ ಸೇರಿಕೊಂಡಿರುತ್ತವೆ. ಇದು ಗಂಡಿನದೂ ಕೂಡ ಹೌದು. **ಕಿಟಕಿಗಳು, ಗೆರೆಗಳು, ಇರುತ್ತವೆ, ಅದೇ ವೃತ್ತ**. ಮುಂತಾದ ಕವನಗಳು ವಸ್ತುಸ್ಥಿತಿಯನ್ನು ಧ್ವನಿಪೂರ್ಣವಾಗಿ ಹಿಡಿದಿಡುತ್ತವೆ.

ಒಟ್ಟಾರೆ ಕನ್ನಡದ ಬಹುಮುಖ್ಯ ಕವಯತ್ರಿಯರಲ್ಲಿ ವಿಜಯಾದಬ್ಬೆ ಪ್ರಮುಖರು ಎಂಬುದು ಅವರ ಕಾವ್ಯದ ಮೂಲಕ ಸ್ಪಷ್ಟವಾಗುತ್ತದೆ. ಇವರ ಒಟ್ಟು ಕವನಗಳ ಕೇಂದ್ರ ಹೆಣ್ಣೇ ಆದರೂ ಹೆಣ್ಣಿನ ಸ್ಥಿತಿಗತಿಗಳ ವಿವರ ಹೆಚ್ಚಿನ ಅತಿಶಯೋಕ್ತಿಗಳಿಲ್ಲದೆ ದಟ್ಟ ವಾಸ್ತವದ ಅರಿವಿನೊಂದಿಗೆ ಮೂಡಿಬಂದಿದೆ. ಎಲ್ಲವನ್ನು ಸಮಾನವಾಗಿ ಕಾಣುವ, ಬದುಕಿನ ವೈರುಧ್ಯಗಳ ನಡುವೆಯೂ ಬದುಕನ್ನು ಪರಿಪೂರ್ಣವಾಗಿಸಿಕೊಳ್ಳಲು ಪರಿತಪಿಸುವ, ಶಿಕ್ಷಣ, ಉದ್ಯೋಗಾವಕಾಶಗಳ ನಡುವೆಯೂ ಸ್ಥಾಪಿತ ವ್ಯವಸ್ಥೆಯ ಹಿತಾಸಕ್ತಿಗಳಿಂದ ಹೊರಬರಲಾರದ ವಿವಿಧ ಬಗೆಯ ಹೆಣ್ಣಿನ ಚಿತ್ರಣ ಇವರ ಕವನಗಳಲ್ಲಿದೆ. ಮತ್ತು "ವಾಚ್ಯ, ಗದ್ಯ ಹಾಗೂ ವಾಚಾಳತನಗಳಿಗೆ ದೂರವಾದ, ಧ್ವನಿಪೂರ್ಣವಾದ ಭಾಷೆಯ ಬಳಕೆ, ಭಾವ-ಲಯಗಳನ್ನು ವಸ್ತುವಿನ, ಸನ್ನಿವೇಶ ಅಗತ್ಯಕ್ಕೆ ತಕ್ಕಂತೆ ಬಳಸಿಕೊಳ್ಳುವ ಬಗೆ, ಇವು "ಇರುತ್ತವೆ" ಸಂಕಲನವನ್ನು ವಿಶಿಷ್ಟವಾಗಿಸಿರುವ ಗುಣಗಳು. ಹಾಸ್ಯ, ವಿಡಂಬನೆ, ತರ್ಕ, ವಿಮರ್ಶೆ, ಚಿಂತನೆ, ದುಃಖ, ಕರುಣೆಗಳೆಲ್ಲ ನವುರಾಗಿ ಪ್ರಕಟವಾಗುವ ಈ ಕವನಗಳಲ್ಲಿ ಶಿಲ್ಪ ತಂತ್ರಗಳೂ ವೈವಿಧ್ಯತೆಯಿಂದ ಕೂಡಿವೆ. ಕೆಲವು ಕವನಗಳು ಸಂಬೋಧನೆಯ ಹಾಗೆ, ಕೆಲವು ಸಂಭಾಷನೆಯ ಹಾಗೆ, ಕೆಲವು ಚಿಂತನೆಯಂತೆ, ಕೆಲವು ಕಥನದ ರೀತಿಯಲ್ಲಿ ಹೀಗೆ ಒಂದು ಬಗೆಯ ವಿಶೇಷ ಚಲನೆ, ಚುರುಕಾದ ವಿಚಾರಗತಿ, ಇಲ್ಲಿದೆಯೆನಿಸುತ್ತದೆ. ಹಾಗೆಯೇ ಇಲ್ಲಿನ ಅವರ ಅನುಭವದ ವಿಸ್ತಾರ ಇಡೀ ಮಾನವತೆಯನು ತನ್ನ ತೆಕ್ಕೆಗೆ ತೆಗೆದುಕೊಳ್ಳಲು ಯತ್ನಿಸುವುದು ಗಮನಾರ್ಹವಾದ ಸಾಧನೆಯಾಗಿದೆ."[೨೭] ಎನ್ನುವ ಮಾತುಗಳು ವಿಜಯಾದಬ್ಬೆಯವರ ಒಟ್ಟು ವ್ಯಕ್ತಿತ್ವ ಮತ್ತು ಸಾಧನೆಗೆ ಹಿಡಿದ ಕೈಗನ್ನಡಿಯಾಗಿದೆ.

## ೮.೩ ಪ್ರತಿಭಾ ನಂದಕುಮಾರ್

ಕನ್ನಡ ಕಾವ್ಯಕ್ಕೆ ಹೊಸ ಆಯಾಮಗಳನ್ನು ತಂದುಕೊಟ್ಟ ಪ್ರತಿಭಾ ನಂದಕುಮಾರ್ ತಮ್ಮ ಕಾವ್ಯದ ಶೈಲಿ ಹಾಗೂ ಭಿನ್ನ ದೃಷ್ಟಿಕೋನದ ಕಾರಣಗಳಿಂದ ಮುಖ್ಯರೆನಿಸುತ್ತಾರೆ. ತನಗನಿಸಿದ್ದೆಲ್ಲವನ್ನು ನಿರ್ಭೀಡೆಯಿಂದ ಕಾವ್ಯವಾಗಿಸುವ, ಬದುಕಿನ ಸಹಜ ಲಯಗಳನ್ನೂ ಅದರೆಲ್ಲಾ ಏಳು ಬೀಳುಗಳನ್ನೂ ಕಾವ್ಯದ ಚೌಕಟ್ಟಿಗೆ ಒಳಪಡಿಸುವ, ಅವುಗಳನ್ನು ಮುಕ್ತವಾಗಿ ಅಭಿವ್ಯಕ್ತಪಡಿಸುವ, ಯಾವುದೇ ರೀತಿಯ ಭಯ, ಅಂಜಿಕೆ, ಆತಂಕಗಳಿಲ್ಲದೆ ಹೆಣ್ಣಿನ ಬದುಕಿನ ಒಳಗನ್ನು ತೆರೆದುನೋಡುವ ಜಾಣ್ಮೆ, ದಿಟ್ಟತನ ಇವರ ಕವನಗಳಲ್ಲಿ ಕಂಡುಬರುತ್ತದೆ. ಇವರ ಕವನಗಳು ಆಧುನಿಕ ಮಧ್ಯಮವರ್ಗದ, ನಗರ ಕೇಂದ್ರಿತ ಹೆಣ್ಣಿನ ಸಂವೇದನೆಗಳನ್ನು ಚರ್ಚಿಸುತ್ತಿರುವಂತೆ ಕಂಡುಬಂದರೂ, ಅದನ್ನೂ ಮೀರಿದ ಆಧುನಿಕ ಹೆಣ್ಣಿನ ಸವಾಲುಗಳ ಸಾರ್ವತ್ರಿಕತೆಯನ್ನೂ, ಅದು ದೇಶ ಕಾಲಾತೀತವಾಗಿ ಕಾರ್ಯನಿರ್ವಹಿಸುತ್ತಿರುವ ವಿಧಾನವನ್ನೂ ಕುರಿತು ಮಹತ್ವದ ಹೊಳಹುಗಳನ್ನು ನೀಡುತ್ತವೆ.

ಆಧುನಿಕತೆಯಿಂದ ಲಭ್ಯವಾಗಿರುವ ಅವಕಾಶಗಳು ಹೆಣ್ಣಿಗೆ ಸಂಬಂಧಿಸಿದಂತೆ ಎಷ್ಟರ ಮಟ್ಟಿಗೆ ಪರ ಹಾಗು ವಿರುದ್ಧವಾಗಿವೆ ಎಂಬುದನ್ನು ಪ್ರತಿಭಾರವರ ಕವನಗಳು ಶಕ್ತವಾಗಿ ಹಿಡಿದುಡುತ್ತವೆ. ಯಾವುದೇ ಬಗೆಯ ಪೂರ್ವಾಗ್ರಹ ಅಥವಾ ಪಕ್ಷಪಾತಗಳಿಲ್ಲದೆ ವಾಸ್ತವದ ತಿಳಿವಿನೊಂದಿಗೆ ಎಲ್ಲವನ್ನೂ ಪರಾಮರ್ಶಿಸುವ ವಿಧಾನ ಇಲ್ಲಿದೆ. ವ್ಯವಸ್ಥೆಯನ್ನು ಕುರಿತ ವ್ಯಂಗ್ಯ, ವಿರೋಧ, ಕಟಕಿ, ವಿಡಂಬನೆಗಳು, ಹೆಚ್ಚಿನ ಆಕ್ರೋಶಗಳಿಲ್ಲದೆ ಬದುಕಿನ ಸಹಜ ಗತಿಗಳ ಮೂಲಕವೇ ಕಾವ್ಯವಾಗಿ ಹೊರಹೊಮ್ಮಿವೆ. ಪ್ರತಿಭಾರವರ ಕವನಗಳು ಬದುಕಿನ ವಿವರಗಳನ್ನು ಅದರೆಲ್ಲಾ ಸಾಧ್ಯಾಸಾಧ್ಯತೆಗಳ ಅರಿವಿನೊಂದಿಗೆ ತನ್ನ ಈ ಸ್ಥಿತಿಗೆ ವ್ಯವಸ್ಥೆಯ ಪಾಲೆಷ್ಟು? ತನ್ನ ಪಾಲೆಷ್ಟು ಎಂಬುದನ್ನು ವಿಮರ್ಶಾತ್ಮಕವಾಗಿ ಚರ್ಚಿಸುತ್ತವೆ.

ಪ್ರತಿಭಾ ನಂದಕುಮಾರ್ ಹಲವು ಕಾರಣಗಳಿಂದಾಗಿ ಸಮಕಾಲೀನ ಲೇಖಕಿಯರಿಗಿಂತ ಭಿನ್ನ ಹಾಗೂ ವಿಶಿಷ್ಟರೆನಿಸುತ್ತಾರೆ. ಸುಮಿತ್ರಾಬಾಯಿಯವರು ಗುರುತಿಸುವಂತೆ "ಪ್ರತಿಭಾ ನಂದಕುಮಾರ್ ಅವರದ್ದು ಆತ್ಯಂತಿಕವಾಗಿ ಆಧುನಿಕವಾದಿ, ನಗರಕೇಂದ್ರಿತವಾದ ನಯಸಂಸ್ಕೃತಿಯ ಗಾಢವಾದ ವ್ಯಕ್ತಿಪ್ರಜ್ಞೆಯ ಮೂಲದ್ದು. ಎತ್ತಿ ಹಿಡಿಯುವ, ಸಮರ್ಥಿಸುವ ರೀತಿಗಿಂತ ತಾನೇ ತಾನಾಗುವ, ತನ್ನ ಇರವನ್ನು ಸ್ಥಾಪಿಸಲು ಬೇಕಾದ ಜಾಗ ತಾನೇ ಸೃಷ್ಟಿ ಮಾಡುತ್ತಲೇ ಬಂದು ನೆಲೆಸಿಯೂಬಿಡುವ ಆತ್ಮವಿಶ್ವಾಸದ ಬದುಕಿನ ದೃಷ್ಟಿ ಪ್ರತಿಭಾ ಅವರ ಕವಿತೆಯ ಮುಖ್ಯ ಭಾಷೆಯೂ ಆಗುತ್ತದೆ."[೨೭] ಎನ್ನುವುದು ಅವರ ಕಾವ್ಯದ ಶಕ್ತಿ ಮತ್ತು ಸಾಧ್ಯತೆಗಳನ್ನು ಧ್ವನಿಸುತ್ತದೆ. ಇಲ್ಲಿ ಲೇಖಕಿಯೇ ಕಾವ್ಯದ ನಾಯಕಿಯೂ ಆಗುವ, ತನ್ನೆಲ್ಲಾ ಮಿತಿಗಳ ನಡುವೆಯೂ ಅದನ್ನು ಮೀರುವ, ತನ್ನ ಇರವನ್ನು ಸ್ಥಾಪಿಸಿಕೊಳ್ಳುವ, ಎದುರಾಗುವ ಸವಾಲುಗಳನ್ನು ವಿಮರ್ಶಾತ್ಮಕವಾಗಿ ಆಲೋಚಿಸುವ ಕಲಾತ್ಮಕತೆ ಮತ್ತು ತಂತ್ರಗಾರಿಕೆ

ಇವರ ಕವನಗಳಲ್ಲಿದೆ. ಜೊತೆಗೆ ಹೆಣ್ಣಿನ 'ಶಕ್ತಿ ಮತ್ತು ಮಿತಿ'ಗಳನ್ನು ವ್ಯಕ್ತಿಪ್ರಜ್ಞೆಯ ಆಚೆಗೂ ವಿಸ್ತರಿಸಿ ಅದನ್ನು ವಿಶಾಲ ಸಾಮಾಜಿಕ ಭಿತ್ತಿಯೊಳಗೆ ಗುರುತಿಸುವ ವಿಧಾನ ಇವರ ಕಾವ್ಯದ ಶಕ್ತಿಯನ್ನು ಮತ್ತಷ್ಟು ಹೆಚ್ಚಿಸುತ್ತದೆ.

ಪ್ರತಿಭಾ ಕಾವ್ಯದ ವಿಶೇಷತೆ ಹೆಣ್ಣಿನ ಸಮಸ್ಯೆ, ಸವಾಲು, ಸಂದಿಗ್ಧತೆಗಳನ್ನು 'ಸ್ವ'ಕೇಂದ್ರಿತ ನೆಲೆಯಿಂದಲೇ ಆರಂಭಿಸಿ ಅದನ್ನು ಸಾರ್ವತ್ರಿಕಗೊಳಿಸುವ ವಿಧಾನಕ್ಕೆ ಸಂಬಂಧಿಸಿದ್ದು. ಇವರ ಬಹುತೇಕ ಕವನಗಳು 'ನಾವು' 'ನಾನು' ಎನ್ನುವ ಆತ್ಮ ಪ್ರತ್ಯಯದ ಮೂಲಕ ವ್ಯವಸ್ಥೆಗೆ ಎದುರಾಗುತ್ತವೆ. ಮುಂದುವರಿದ ಹಂತದಲ್ಲಿ ನಾನು ಎಂಬುದು ಸ್ವಪ್ರಜ್ಞೆಯ ಅರಿವಾಗಿ, ವ್ಯವಸ್ಥೆಯ ಭಾಗವಾಗಿ, ತನ್ನನ್ನು ಗುರುತಿಸಿಕೊಳ್ಳುವ, ತನ್ನ ಇರುವಿಕೆಯನ್ನು ಸಾರಿ ಹೇಳುವ ಆಶಯದೊಂದಿಗೆ ಮುಂದುವರಿಯುತ್ತದೆ. ಇವರ ಕವನಗಳಲ್ಲಿ ಮತ್ತೆ ಮತ್ತೆ ಕಂಡುಬರುವ 'ನಾನು', 'ನಾವು', 'ಅವನು', 'ಅವರು' 'ಹುಡುಗ' 'ಹೆಣ್ಣು' ಎಂಬ ಸರ್ವನಾಮಗಳು ಹೆಣ್ಣುಗಂಡಿನ ವೈಯಕ್ತಿಕ ಮಿತಿಯ ಆಚೆಗೆ ಸಾರ್ವಕಾಲಿಕ ಭಿತ್ತಿಯಲ್ಲಿ ಚಿತ್ರಿತಗೊಂಡಿವೆ. ಮತ್ತು ಇಲ್ಲಿ ಅಹಮ್ಮಿಕೆ ಅಥವಾ ಕೀಳರಿಮೆಗೆ ಅವಕಾಶವಿಲ್ಲದೆ ಜೀವನಗತಿಯಲ್ಲಿ ಎಲ್ಲವೂ ಸಹಜ ಎಂಬಂತೆ ಮೂಡಿಬಂದಿವೆ. ಇದರಿಂದಾಗಿ ಇವರ ಕವನಗಳು ಹೆಣ್ಣುಗಂಡಿನ ಸಂಬಂಧದ ವಿವರಗಳನ್ನು ವೈಯಕ್ತಿಕತೆಯನ್ನೂ ಒಳಗೊಂಡಂತೆ ಸಾರ್ವತ್ರಿಕ ಹಾಗೂ ಸಾರ್ವಕಾಲಿಕ ನೆಲೆಯಲ್ಲಿ ಕಟ್ಟಿಕೊಡುತ್ತವೆ.

ಪ್ರತಿಭಾರವರ ಕವನಗಳಲ್ಲಿ ಸ್ವಪ್ರಜ್ಞೆಯ ಅರಿವು ಹಲವು ಸ್ತರಗಳಲ್ಲಿ ವಿಸ್ತರಿಸಿಕೊಂಡಿದೆ. ತನ್ನನ್ನು ಅರಿಯುವ, ತನ್ನ ಎದುರಿರುವವರನ್ನು ಅರಿಯುವ, ಗಂಡನ್ನು, ವ್ಯವಸ್ಥೆಯನ್ನು ಅದರ ಆಗುಹೋಗುಗಳನ್ನು ಕುರಿತು ಚಿಂತಿಸುವ ವಿಧಾನ ಆಯಾ ಕಾಲ ಸನ್ನಿವೇಶಕ್ಕೆ ತಕ್ಕಂತೆ ರೂಪುಗೊಂಡಿದೆ. ಇಲ್ಲಿ ಅರಿವಿನ ಪ್ರಕ್ರಿಯೆ ಯಾವುದೇ ಒಂದು ಕೇಂದ್ರದಿಂದ ಹೊರಟದ್ದಲ್ಲ. ಬದುಕಿನ ಪಯಣದ ದಿನನಿತ್ಯದ ಆಗುಹೋಗುಗಳ ಅನುಭವವೇ ಅಸ್ಮಿತೆಯ ಹುಡುಕಾಟಕ್ಕೆ ನಿರಂತರತೆಯನ್ನೂ, ಚಲನಶೀಲತೆಯನ್ನೂ ತಂದುಕೊಟ್ಟಿದೆ. ಹಾಗಾಗಿ ಪ್ರತಿಭಾರವರ 'ನಾವು ಹುಡುಗಿಯರೇ ಹೀಗೆ' ಕವನ ಸಂಕಲನದಲ್ಲಿ ಆರಂಭವಾಗುವ ಅರಿವಿನ ಪ್ರಕ್ರಿಯೆ 'ಪ್ರೇತಗಳೆಂದು ಕರೆಯಲು ಮನಸ್ಸಾಗದು' ಕವನ ಸಂಕಲನದವರೆಗೂ ಬಹು ವಿಸ್ತಾರವಾಗಿ ವಿಭಿನ್ನ ಸ್ತರಗಳಲ್ಲಿ, ವಿಭಿನ್ನ ಆಯಾಮಗಳಲ್ಲಿ ಜೀವಂತಿಕೆಯಿಂದ ಹರಡಿಕೊಂಡಿದೆ. ೭೦ರ ದಶಕದಲ್ಲಿ ಕನ್ನಡ ಕಾವ್ಯ ಕ್ಷೇತ್ರದಲ್ಲಿ ಸಂಚಲನವನ್ನು ಉಂಟುಮಾಡಿದ 'ನಾವು ಹುಡುಗಿಯರೇ ಹೀಗೆ' ಕವನ ಸಂಕಲನ ಹೆಣ್ಣಿನ ಸ್ವಪ್ರಜ್ಞೆಯ ಅರಿವಿನ ವಿಸ್ತರಣೆಯನ್ನು ಸಮರ್ಥವಾಗಿ ಹಿಡಿದಿಡುತ್ತದೆ. ಇಲ್ಲಿ ಹೆಣ್ಣಿನ ಶಕ್ತಿ ಮತ್ತು ಮಿತಿ ಎರಡರ ಅರಿವೂ ಸ್ಪಷ್ಟವಾಗಿದ್ದು, ಹೆಣ್ಣಿನ ಶಕ್ತಿಯನ್ನು ವ್ಯವಸ್ಥೆ ನಿರ್ವಹಿಸುತ್ತಿರುವ, ನಿಯಂತ್ರಿಸುತ್ತಿರುವ ವಿಧಾನಗಳನ್ನು, ಅದಕ್ಕೆ ಹೆಣ್ಣು ಒಡ್ಡುತ್ತಿರುವ ಪ್ರತಿರೋಧದ ಬಗೆಗಳನ್ನೂ ಒಟ್ಟೊಟ್ಟಿಗೆ ಹಿಡಿದಿಡುತ್ತದೆ. ಹಾಗಾಗಿಯೆ ಇವರ ಕವನಗಳಲ್ಲಿ ಹೆಣ್ಣು ಹಮ್ಮು, ಬಿಮ್ಮು,

ಆತ್ಮವಿಶ್ವಾಸಗಳೊಂದಿಗೆ ವ್ಯವಸ್ಥೆಗೆ ಎದುರಾಗಲು ಸಾಧ್ಯವಾಗಿದೆ. ಮತ್ತು ವ್ಯವಸ್ಥೆ ಯಾವಾಗಲೂ ಇರುವುದೇ ಹೀಗೆ, ಹಾಗೆಂದ ಮಾತ್ರಕ್ಕೆ ನಾವೂ ಕೂಡ ಹಾಗೆ ಇರಬೇಕಿಲ್ಲ ಎಂಬ ಸ್ಪಷ್ಟ ಅರಿವು ಹೊಸ ಹಾದಿಗಳ ಹುಡುಕಾಟಕ್ಕೆ ದಾರಿ ಮಾಡಿಕೊಟ್ಟಿದೆ.

ಪ್ರತಿಭಾ ನಂದಕುಮಾರ್ ಅವರ ನಾವು ಹುಡುಗಿಯರೇ ಹೀಗೆ ಕವನ ಹಲವು ದೃಷ್ಟಿಯಿಂದ ಪ್ರಮುಖವಾದದ್ದಾಗಿದೆ. ಮೊದಲನೆಯದಾಗಿ 'ನಾವು ಹುಡುಗಿಯರು' ಎಂಬ ಆತ್ಮಾತ್ಮಕ ಪ್ರತ್ಯಯದಿಂದ ಕೂಡಿರುವ ಶೀರ್ಷಿಕೆ ಒಂದೆಡೆ ಆತ್ಮವಿಶ್ವಾಸವನ್ನೂ ಮತ್ತೊಂದೆಡೆ ಹೆಣ್ಣು ಗಳಸಬೇಕಾದ, ಕಲಿಯಬೇಕಾದ ಜೀವನ ವಿಧಾನಗಳನ್ನು ಅರ್ಥಪೂರ್ಣವಾಗಿ ಧ್ವನಿಸುತ್ತದೆ. ತನ್ನ ವಾಸ್ತವದ ಸ್ಥಿತಿಗೆ ಕಾರಣವನ್ನು ಹುಡುಕುತ್ತಲೇ ಭೂತ ಮತ್ತು ಭವಿಷ್ಯದೊಂದಿಗೆ ಮಾತನಾಡುವ ಕವನ ವೈಯಕ್ತಿಕತೆಯನ್ನು ಮೀರಿ ಸಾರ್ವತ್ರಿಕವಾದ ಸ್ತ್ರೀಸಮುದಾಯದ ಧ್ವನಿಯಾಗಿ ಮಾರ್ಪಡುತ್ತದೆ.

ಬಿ.ಎನ್ ಸುಮಿತ್ರಾಬಾಯಿ ಪ್ರತಿಭಾ ಅವರ 'ನಾವು ಹುಡುಗಿಯರೇ ಹೀಗೆ'. ಕವನ ಸಂಕಲನವನ್ನು ಕುರಿತು "ಮಧ್ಯಮ ವರ್ಗದ ಹೆಣ್ಣಿನ ಬದುಕನ್ನು ಕವಿದಿರುವ ನಿರ್ಬಂಧಗಳು, ಅವುಗಳನ್ನು ಮೀರುವ ಬಯಕೆಯಿದ್ದರೂ ಮೀರಲಾರದೆ, ಬದಲಾಗಲು ಯತ್ನಿಸದೆ ಯಥಾಸ್ಥಿತಿಯಲ್ಲೇ ಮುಂದುವರೆಯುತ್ತಾ ಆಸೆ, ಕನಸುಗಳನ್ನು ಹತ್ತಿಕ್ಕಿ ಆತ್ಮವಂಚನೆ ಮಾಡಿಕೊಳ್ಳುತ್ತಾ, ಕೊರಗುವ ಪರಿಯನ್ನು ಈ ಕವಿ ನೇರವಾಗಿ ಬಿಚ್ಚುನುಡಿಯಲ್ಲಿ ಲೇವಡಿ ಮಾಡುತ್ತಾರೆ".[೨೮] ಎನ್ನುತ್ತಾರೆ. ಆದರೆ ಆಧುನಿಕ ಹೆಣ್ಣು ಈ ರೀತಿ ಆತ್ಮವಂಚನೆ ಮಾಡಿಕೊಳ್ಳುತ್ತಾ ಬದುಕುವುದು ಅನಿವಾರ್ಯವಲ್ಲ ಎಂಬುದನ್ನು ಪ್ರತಿಭಾರವರ ಕವನಗಳು ಧ್ವನಿಪೂರ್ಣವಾಗಿ ಎತ್ತಿ ಹಿಡಿಯುತ್ತವೆ. "ಹೌದು ಕಣೇ ಉಷಾ ನಾವು ಹುಡುಗಿಯರೇ ಹೀಗೆ" ಎಂದು ಆರಂಭವಾಗುವ ಕವನ ಹೇಳಬೇಕಾದ್ದನ್ನು ಹೇಳಲಾಗದ ಹೆಣ್ಣಿನ ಮಿತಿಗಳ ಜೊತೆಯಲ್ಲಿಯೇ ಹೆಣ್ಣಿನ ಅಭಿವ್ಯಕ್ತಿಯ ಸವಾಲುಗಳ ಕಡೆಗೆ ಗಮನ ಸೆಳೆಯುತ್ತದೆ. ಹಿಂದಿನಿಂದಲೂ ಹೆಣ್ಣಿಗೆ ತನ್ನ ಪ್ರೀತಿ, ಪ್ರೇಮ, ಆಸೆ, ಕನಸುಗಳ ಅಭಿವ್ಯಕ್ತಿಗೆ ಅವಕಾಶವೇ ಇಲ್ಲದಿರುವಾಗ ಆಧುನಿಕ ಹೆಣ್ಣು ಇದನ್ನು ನಿಭಾಯಿಸುವ ಪರಿ ಸವಾಲಿನದ್ದು. ಭಾಷೆ, ಭಾವ, ಬಂಧಗಳ ತೊಡಕಿನ ನಡುವೆಯೂ "ಬೇರೆ ಏನೇನೋ ದಾರಿ ಹುಡುಕಿ ಸಂದೇಶ ಮುಟ್ಟಿಸಲು ಹೆಣಗುವುದು" ತನ್ನನ್ನು ನಿರ್ಬಂಧಿಸುವ ವ್ಯವಸ್ಥೆಗೆ ಒಳದಾರಿಗಳ ಮೂಲಕ ಮುಖಾಮುಖಿಯಾಗುವ ವಿಧಾನದ್ದು. ತನ್ನೆಲ್ಲಾ ನಿರ್ಬಂಧಗಳ ನಡುವೆಯೂ ಹೇಳಬೇಕಾದ್ದನ್ನು ಮುಚ್ಚಿಯಾದರೂ ಹೇಳುವ ಇಚ್ಛೆ, ಹೇಳಿಯೇ ತೀರಬೇಕೆಂಬ ಬಯಕೆ ಇಲ್ಲಿ ವ್ಯಕ್ತವಾಗಿದೆ. ಆದರೆ ಹೆಣ್ಣಿನ 'ಒಳ ಭಾಷೆ'ಯನ್ನು ಅರಿಯಲಾರದ ಗಂಡಿನ ಬಗೆಗೆ ಬೇಸರ, ಅತೃಪ್ತಿ ಕೂಡ ಇದೆ. ಇವುಗಳ ನಡುವೆಯೂ "ಗಂಡನಲ್ಲಿ 'ಅವನನ್ನು' ಹುಡುಕುವುದು, ಗಂಡನಿಗೆ ಅದರ ಸುಳಿವೂ ಸಿಗದಂತೆ ನಟಿಸುವುದು" ಹೆಣ್ಣು ತನ್ನ ಕನಸುಗಳನ್ನು ಸಾಕಾರಗೊಳಿಸಿಕೊಳ್ಳುವ ಕಡೆಗಿನ ನಿರಂತರ ಪ್ರಯತ್ನವನ್ನು

ತಿಳಿಸುತ್ತದೆ. ಆದರೆ ವ್ಯವಸ್ಥೆಯ ಬಿಗಿ ಹಿಡಿತದಲ್ಲಿ ಹೆಣ್ಣಿನ "ಭಾವನೆಗಳೆಲ್ಲಾ ಅರಳದಂತೆ ಹರಳಾಗಿಬಿಟ್ಟಿರುತ್ತವೆ". ಆದರೂ

ಏದುಸಿರು ಬಿಡುತ್ತಾ ತರಕಾರಿ ಕೊಳ್ಳುವಾಗ
'ಅವನು' ಸಿಗುತ್ತಾನೆ.
ನಮ್ಮ ಇಂದಿನ ಅವಸ್ಥೆಗೆ ಇವನೇ ಕಾರಣ
ಅಂತ ರೋಷ ತಾಳುತ್ತೇವೆ.
ಆದರೆ ಮೇಲೆ ನಗುನಗುತ್ತಾ'ಅವನ'
ಹೆಂಡತಿ ಮಕ್ಕಳ ಯೋಗಕ್ಷೇಮ ವಿಚಾರಿಸುತ್ತೇವೆ"[೨೯]

ಎನ್ನುವ ಸ್ಥಿತಿ ಆತ್ಮವಂಚನೆಗಿಂತ ವ್ಯವಸ್ಥೆಗೆ ಮುಖಾಮುಖಿಯಾಗಿರುವ ಹೆಣ್ಣಿನ ಭಿನ್ನ ಮಾರ್ಗವೊಂದನ್ನು ತೆರೆದಿಡುತ್ತದೆ. ಎಲ್ಲವನ್ನೂ ತಾಳಬಲ್ಲ, ಸಮಚಿತ್ತದಿಂದ ಪರಿಸ್ಥಿತಿಯನ್ನು ನಿಭಾಯಿಸಬಲ್ಲ ಜಾಣ್ಮೆ, ಚಾಕಚಕ್ಯತೆ ಆಧುನಿಕ ಹೆಣ್ಣಿನಲ್ಲಿರುವುದನ್ನು ಇವರ ಕವನಗಳು ಗುರುತಿಸುತ್ತವೆ. ಇದನ್ನು ಹೆಣ್ಣು ವ್ಯವಸ್ಥೆಯೊಂದಿಗೆ ಮುಖಾಮುಖಿಯಾಗುವ 'ಒಳವಿನ್ಯಾಸ'ದ ಅರಿವು ಎನ್ನಬಹುದು. ಪ್ರತಿಭಾರವರ ಗುಟ್ಟು ಕವನ ಇದಕ್ಕೊಂದು ಉತ್ತಮ ನಿದರ್ಶನ.

ನನ್ನ ಜೀವನ ಎಂದರೆ
ಗಂಟೆಗಟ್ಟಲೆ ಕೂತು ಸುಂದರವಾಗಿ
ಬಿಡಿಸಿದ್ದ ವರ್ಣಚಿತ್ರದ ಮೇಲೆ
ನನ್ನವರೆನಿಸಿಕೊಂಡವರು
ಥಟ್ಟನೆ ಚೆಲ್ಲಿದ ಕಪ್ಪುಮಸಿ
ಕಪ್ಪೊಡನೆ ಕಪ್ಪಾಗಿ ನುಸುಳಿದರೂ
ಆಗಾಗ ಅಲ್ಲಲ್ಲಿ ಕಾಣುವ
ವರ್ಣದ ತೇಪೆ.
ಕಲಸು ಮೇಲೋಗರ.
. . . . . . . . . . .
ಆದರೂ ನೋಡಿ
ನಾನು ಕೆಲವು ವರ್ಣರಂಜಿತ
ಮಣಿಗಳನ್ನು ಕೂಡಿಸುತ್ತಿದ್ದೇನೆ.
ಅವುಗಳನ್ನು ಒಂದೊಂದಾಗಿ
ನಿಧಾನವಾಗಿ ಪೋಣಿಸುತ್ತಾ
ಒಂದು ಚಿತ್ರ ಮಾಡುತ್ತಿದ್ದೇನೆ.
ಅದು ಯಾರ ಕೈಗೂ ಸಿಗದಂತೆ
ನನ್ನ ಹೃದಯದ ಕಪಾಟಿನಲ್ಲಿ
ಗುಟ್ಟಾಗಿ ಬಚ್ಚಿಟ್ಟಿದ್ದೇನೆ! [೩೦]

ಗಂಡು ಹೆಣ್ಣಿನ ಸಂಬಂಧದ ಸಂಕೀರ್ಣ ನೆಲೆಗಳನ್ನು ಗುರುತಿಸುವ ಮೂಲಕ ಆರಂಭವಾಗುವ ಈ ಕವನ ವ್ಯವಸ್ಥೆಯ ಬಿಗಿ ಹಿಡಿತದಿಂದ ಬಿಡುಗಡೆ ಪಡೆಯುವುದು ಸುಲಭವಲ್ಲ ಎಂಬ ವಾಸ್ತವದ ಅರಿವಿನಿಂದ ಕೂಡಿದೆ. 'ನನ್ನವರೆನಿಸಿಕೊಂಡವರು' ಥಟ್ಟನೆ ಚೆಲ್ಲಿದ', 'ಕಪ್ಪುಮಸಿ', 'ವರ್ಣದ ಲೇಪ' ಈ ಪದಗಳು ಹೆಣ್ಣಿನ

ಜೀವನದ ಸಂಕೀರ್ಣತೆಯನ್ನೂ, ಅನಿರೀಕ್ಷಿತ, ಆಘಾತ, ಅಚ್ಚರಿ ಘಟನೆಗಳು ಕಲಸುಮೇಲೋಗರವಾಗಿ ಘಟಿಸುತ್ತಿರುವುದನ್ನೂ ಧ್ವನಿಸುತ್ತದೆ. 'ಕಪ್ಪುಮಸಿ', 'ವರ್ಣದ ಲೇಪ' ಇವೆರಡೂ ಪರಸ್ಪರ ವಿರುದ್ಧವಾದವುಗಳಾದರೂ ಹೆಣ್ಣು ಈ ಎರಡನ್ನೂ ಎದುರುಗೊಳ್ಳುವುದು ಅನಿವಾರ್ಯ. ಈ ಅರಿವು ಹೆಣ್ಣಿನಲ್ಲಿ ಹೊಸ ಹುರುಪು, ಆತ್ಮವಿಶ್ವಾಸವನ್ನು ಮೂಡಿಸಿದೆ. ಮುಂದುವರಿದ ಹಂತದಲ್ಲಿ ವ್ಯವಸ್ಥೆಯ ನಿಯಂತ್ರಣ ಹಾಗೂ ನಿರ್ಬಂಧಗಳಾಚೆಗೂ ತನ್ನ ಕ್ರಿಯಾಶಕ್ತಿಯನ್ನು ಚಿರಂತನವಾಗಿ ಉಳಿಸಬಲ್ಲ ಹೆಣ್ಣಿನ ಜಾಣ್ಮೆ ಮತ್ತು ತಾಳ್ಮೆ ಸಾಕಾರಗೊಂಡಿದೆ. ಇದು ಹೆಣ್ಣು ಪ್ರಧಾನ ವ್ಯವಸ್ಥೆಯಿಂದ ಕಿತ್ತು ಚಲ್ಲಾಪಿಲ್ಲಿಯಾದ ಮಣಿಗಳಿಂದಲೇ 'ವರ್ಣರಂಜಿತ ಚಿತ್ರಗಳಾಗಿಸುವ' ಅದು ಯಾರ ಕೈಗೂ ಸಿಗದಂತೆ ಹೃದಯ ಕಪಾಟಿನಲ್ಲಿ ಗುಟ್ಟಾಗಿ ಬಚ್ಚಿಡುವ ವಿಧಾನದ್ದು. ಇದು ಹೆಣ್ಣು ತನ್ನ ಬದುಕು, ಬಯಕೆ, ಆಸೆ, ಕನಸುಗಳನ್ನು ಕಟ್ಟಿಕೊಳ್ಳುವ, ಅದನ್ನು ಸಾಕಾರಗೊಳಿಸಿಕೊಳ್ಳುವ ಬಗೆಯನ್ನು ತೆರೆದಿಡುತ್ತದೆ. ಹೆಣ್ಣು ತನ್ನಲ್ಲಿರುವ ಈ ಅಂತರ್ಗತ ಶಕ್ತಿಯನ್ನು ಗುರುತಿಸಿಕೊಳ್ಳುವುದು ಮುಖ್ಯ ಎಂಬುದರ ಕಡೆಗೆ ಇವರ ಮುಂದಿನ ಕವನಗಳು ಗಮನ ಸೆಳೆಯುತ್ತವೆ.

ಕಾಲ ಸರಿದಂತೆ ಹೆಣ್ಣಿನ ಅನುಭವ, ಆಲೋಚನೆ, ಗ್ರಹಿಕ, ಅಭಿವ್ಯಕ್ತಿ ಎಲ್ಲವೂ ಕೂಡ ಭಿನ್ನವಾಗಿರುತ್ತವೆ. ಹೆಣ್ಣಿನ ಮನಸ್ಥಿತಿಯಲ್ಲಾಗುವ ಈ ಬಗೆಯ ಬದಲಾವಣೆಗಳನ್ನೂ, ಮಹತ್ವದ ಪಲ್ಲಟಗಳನ್ನೂ ಪ್ರತಿಭಾರವರ ಕವನಗಳು ಹಿಡಿದಿಡುತ್ತವೆ. ಯೌವ್ವನದ ಹುರುಪು, ಸಿಟ್ಟು, ಸೆಡವು ಕಾಲ ಮಾಗಿದಂತೆ ಮಾಗುವುದನ್ನೂ, ಪಕ್ವಗೊಳ್ಳುವುದನ್ನೂ ಕವರ ಕವನಗಳು ಭಿನ್ನ ವಸ್ತು ಸ್ಥಿತಿಯ ಹಿನ್ನೆಲೆಯಲ್ಲಿ ಕಟ್ಟಿಕೊಡುತ್ತವೆ. 'ನಾನು, ಹುಡುಗ ಮತ್ತು ಕಾಲ' ಕವನ ಹೆಣ್ಣಿನ ವಯೋಗುಣಕ್ಕೆ ತಕ್ಕಂತೆ ಅವಳ ಆಲೋಚನಾ ವಿಧಾನದಲ್ಲಿಯೂ ಕೂಡ ಆಗುವ ಬದಲಾವಣೆಗಳನ್ನು ಕುರಿತು ಚರ್ಚಿಸುತ್ತದೆ.

–೧–

ಹದಿನಾರರ ಹರೆಯದಲ್ಲಿ ನನಗೆ
ಕನಸಿನ ರಾಜಕುಮಾರನಂತೆ ಕಾಣಿಸಿದ ಈ ಹುಡುಗ
ಅಪರಂಜಿ ಗುಣದ ಮೀರಿದ ಬುದ್ಧಿವಂತ
ದೇಶ ಕಾಣದ ಅವನ ಮೀಸೆಯಡಿಯಲ್ಲಿ
ಲೋಕದ ಎಲ್ಲ ಸಮಸ್ಯೆಗಳಿಗೂ ಉತ್ತರ . . . .
ಅವನಿಲ್ಲದ ಜೀವನದಲ್ಲಿ ಬೆಳಕಿಲ್ಲ
ಅವನ ಕರ್ಚೀಫ್ ತುದಿಗೆ ಕಸೂತಿ ಹಾಕುವುದು
ನನ್ನ ಜೀವನದ ಪರಮ ಧ್ಯೇಯ

–೨–

ಹದಿನೆಂಟರ ತುಂಟತನದಲ್ಲಿ
ಈ ಹುಡುಗ
ಇನ್ನೂ ಸ್ವಲ್ಪ ಎತ್ತರವಿರಬೇಕಿತ್ತು . . . .
ಒಂದೆರಡು ಸಲ ಮೋಸ ಸುಳ್ಳು ಅಸಹನೆ
ಈ ಪ್ರಪಂಚದಲ್ಲಿ ಯಾರು ತಾನೆ ಪರ್ಫೆಕ್ಟ್ ಹೇಳಿ?

-೩-

ಇಪ್ಪತ್ತರ ನಂತರ ಕಣ್ಣರಳಿಸಿ ಲೋಕ ನೋಡತೊಡಗಿದಾಗ
ಈ ಹುಡುಗ
ಯಾಕೆ ಇಷ್ಟು ಪೆದ್ದುಪೆದ್ದಾಗಿದ್ದಾನೆ ? [೩೧]

ಈ ಕವನ ಮೇಲ್ನೋಟಕ್ಕೆ ಗಂಡು ಹೆಣ್ಣಿನ ಸಂಬಂಧದ ಸ್ವರೂಪವನ್ನು ತಿಳಿಸುವ ಕವನದಂತೆ ಕಂಡು ಬಂದರೂ ಆಂತರ್ಯದಲ್ಲಿ ಬದಲಾಗುವ ಕಾಲ, ಸನ್ನಿವೇಶ, ಸಂದರ್ಭಗಳ ಹಿನ್ನೆಲೆಯಲ್ಲಿ ಹೆಣ್ಣಿನ ಮನಸ್ಥಿತಿ, ಆಲೋಚನೆಗಳಲ್ಲಿಯೂ ಗಮನಾರ್ಹವಾದ ಬದಲಾವಣೆಗಳು ಸಂಭವಿಸುತ್ತಿರುವುದನ್ನು ದಾಖಲಿಸಲು ಪ್ರಯತ್ನಿಸುತ್ತದೆ. ಹೆಣ್ಣಿನ ವೈಯಕ್ತಿಕ ಹಾಗೂ ಲೋಕಾನುಭವಗಳು ಅವಳ ವ್ಯಕ್ತಿತ್ವವನ್ನು ರೂಪಿಸುತ್ತಿರುವ ವಿಧಾನವನ್ನು ಹಿಡಿದಿಡುತ್ತದೆ. ಕವನದ ಮೊದಲ ಭಾಗದಲ್ಲಿ ಹುಡುಗನನ್ನು ಕುರಿತಾದ ಸಹಜ ಆಕರ್ಷಣೆ, ಕನಸುಗಾರಿಕೆ, ಅವನ ಮೂಲಕವೇ ತನ್ನ ಅಸ್ತಿತ್ವವನ್ನು ಗುರುತಿಸಿಕೊಳ್ಳುವ, ಅವನಿಂದಲೇ ತನ್ನ ಜೀವನವನ್ನು ಸಾರ್ಥಕ ಗೊಳಿಸಿಕೊಳ್ಳುವ, ಅವನಿಗಾಗಿ ತನ್ನನ್ನು ಸಂಪೂರ್ಣ ಸಮರ್ಪಿಸಿಕೊಳ್ಳುವ ಹಂಬಲ ಇದೆ. ಎರಡನೆಯ ಭಾಗ ಹುಡುಗನ ರೂಪ, ಯೌವ್ವನ, ಗುಣ, ಸ್ವಭಾವವನ್ನು ಕುರಿತಾದ ಚರ್ಚೆ, ಗಂಡಿನ ಮಿತಿಗಳ ನಡುವೆಯೂ ಅವನನ್ನು ಒಪ್ಪುವ ಮನಸ್ಥಿತಿಯನ್ನು ಹಿಡಿದಿಡುತ್ತದೆ. ಮೂರನೆಯ ಹಂತ ಹೆಣ್ಣಿನ ವ್ಯಕ್ತಿತ್ವದ, ಪ್ರಭುದ್ಧತೆಯ ಸಂಕೇತವಾಗಿ ಕಂಡುಬರುತ್ತದೆ. ಬೌದ್ಧಿಕವಾಗಿ ಬೆಳದಂತೆ ಗಂಡಿನ ಬಗೆಗಿನ ತಿಳುವಳಿಕೆ ಹಾಗೂ ಲೋಕಗ್ರಹಿಕೆಯ ಕ್ರಮದಲ್ಲಿ ಆಗುತ್ತಿರುವ ಬದಲಾವಣೆಗಳನ್ನು ಗುರುತಿಸುತ್ತದೆ. ತಾನು ಬೆಳದಂತೆ ವಾಸ್ತವದ ದಟ್ಟ ಅರಿವು ಬದುಕನ್ನು ಭಿನ್ನ ಕ್ರಮದಲ್ಲಿ ನೋಡುವ, ಅರ್ಥೈಸುವ ಕ್ರಮವನ್ನು ಕಲಿಸಿಕೊಡುತ್ತದೆ. ಹರೆಯದಲ್ಲಿ ಯಾವುದು ಆಕರ್ಷಣೀಯವೋ, ಅನನ್ಯವೋ, ಅದು ಬೌದ್ಧಿಕವಾಗಿ ಬೆಳೆದಂತೆ, ವಾಸ್ತವದ ಅರಿವಾಗುತ್ತಿದ್ದಂತೆ ಅದರ ಸಾಧಕ ಭಾದಕಗಳನ್ನು ಕುರಿತ ಪರಾಮರ್ಶೆ ಆರಂಭವಾಗುತ್ತದೆ. ಈ ಬೌದ್ಧಿಕ ವಿಕಾಸ ಪ್ರತಿ ಹೆಣ್ಣಿನ ಸಹಜ ಸ್ಥಿತಿ. ಲೋಕ ಗ್ರಹಿಕೆಯ ಆಲೋಚನೆಯಲ್ಲಿ ಅಂಚಿಗೆ ಸರಿಯಲ್ಪಟ್ಟಿರುವ ಈ ಸಂಗತಿ ಪ್ರತಿಭಾರವರ ಕಾವ್ಯದ ಮುಖ್ಯ ಕಾಳಜಿ ಕೂಡ ಹೌದು. ಕಾಲ, ಸಂದರ್ಭ, ಸನ್ನಿವೇಶಕ್ಕೆ ತಕ್ಕಂತೆ ಹೆಣ್ಣಿನ ಜೀವನದಲ್ಲಾಗುತ್ತಿರುವ ಪಲ್ಲಟಗಳನ್ನೂ, ಅದರೊಂದಿಗೆ ಬದಲಾಗುತ್ತಿರುವ ಸಾಮಾಜಿಕ, ಆರ್ಥಿಕ ವ್ಯವಸ್ಥೆಗೆ ತಕ್ಕಂತೆ ಮಾರ್ಪಾಡು ಹೊಂದುತ್ತಿರುವ ಹೆಣ್ಣಿನ ಜೀವನ ಕ್ರಮದ ಸ್ಥಿತ್ಯಂತರಗಳನ್ನೂ ಇವರ ಕವನಗಳು ತೆರೆದಿಡುತ್ತವೆ.

ಸ್ತ್ರೀ ಸಂಕಥನದ ದೃಷ್ಟಿಯಿಂದಲೂ ಈ ಕವನ ಪ್ರಮುಖವಾದದ್ದಾಗಿದೆ. ಮಹಿಳಾ ಸಾಹಿತ್ಯದ, ಹೆಣ್ಣಿನ ಪರವಾದ ಮತ್ತು ಹೆಣ್ಣಿನ ಅಸ್ಮಿತೆಯನ್ನು ಕುರಿತಾದ ಮಹತ್ವದ ದಾಖಲೆಗಳನ್ನು ಈ ಕವನ ತೆರೆದಿಡುತ್ತದೆ. ಆರಂಭಘಟ್ಟದಲ್ಲಿ ಪ್ರಧಾನ ವ್ಯವಸ್ಥೆಯ ನಿರ್ದೇಶನದಂತೆ ಜೀವನ ನಡೆಸುವುದೇ ತನ್ನ ಜೀವನದ ಪರಮಗುರಿ ಎಂದು ನಂಬಿ ಬದುಕುವ ಹೆಣ್ಣು ಪುರುಷ ಅಪೇಕ್ಷೆಗೆ ತಕ್ಕಂತೆ ಬದುಕುವುದನ್ನೇ ತನ್ನ ಜೀವನದ ಪರಮ ಗುರಿಯಾಗಿಸಿಕೊಂಡಿದ್ದನ್ನು ಸಾಹಿತ್ಯದ ದಾಖಲೆಗಳು ಒದಗಿಸುತ್ತವೆ. ಆರಂಭದ ಲೇಖಕಿಯರ

ಬರವಣಿಗೆಯ ಆಶಯ ಕೂಡ ಇದೇ ಮನೋಭಾವದಿಂದ ಕೂಡಿದೆ. ಎರಡನೆಯ ಹಂತದಲ್ಲಿ ಲೋಕವನ್ನು ವಿಮರ್ಶಾದೃಷ್ಟಿಯಿಂದ ನೋಡುವ ಅಥವಾ ಲೋಕನಿಂದೆಯ ಮೂಲಕ ತನ್ನ ಅಸ್ತಿತ್ವವನ್ನು ಗುರುತಿಸಿಕೊಳ್ಳುವ ಪ್ರಯತ್ನವನ್ನು ಕಾಣಬಹುದು. ದ್ವಂದ್ವ ಗೊಂದಲಗಳಿಂದ ಕೂಡಿರುವ ಈ ಹಂತದಲ್ಲಿ ಅವನ ತಪ್ಪುಗಳ ಬಗೆಗೆ ಕೋಪ ಹಾಗೂ ಮರುಕ ಎರಡನ್ನು ಏಕಕಾಲದಲ್ಲಿ ಕಾಣಬಹುದು. ಮೂರನೆಯ ಹಂತ ಆತ್ಮವಿಶ್ವಾಸ ಅಥವಾ ಸ್ವ ಕುರಿತಾದ ಚಿಂತನೆಯ ಹಂತ. ತನ್ನ ವ್ಯಕ್ತಿತ್ವವನ್ನು ಕಟ್ಟಿಕೊಳ್ಳಲು ಅವಶ್ಯಕವಾದ ಸಾಧನ ಸಲಕರಣೆಗಳನ್ನು 'ಸ್ವ'ದಲ್ಲಿಯೇ ಹುಡುಕುವ ಹಾಗೂ ಅದನ್ನು ತಡೆಯಬಹುದಾದ ವ್ಯವಸ್ಥೆಯ ಬಗೆಗೆ ಆಕ್ರೋಶ ಅಸಹನೆಗಿಂತ ಹೆಚ್ಚಾಗಿ ಇವರೇಕೆ ಹೀಗೆ ಎಂಬ ಅಚ್ಚರಿ ಹಾಗು ಅವರ ಬಗೆಗಿನ ಮರುಕ ಪ್ರಧಾನವಾಗಿ ಕಂಡುಬರುತ್ತದೆ.

ಪ್ರತಿಭಾ ಪುರುಷಪರವಾದ ಸ್ಥಾಪಿತ ವ್ಯವಸ್ಥೆಗೆ ಮುಖಾಮುಖಿಯಾಗುವ ವಿಧಾನ ಅವರ ಕಾವ್ಯದಲ್ಲಿ ಹಲವು ವಿನ್ಯಾಸಗಳಲ್ಲಿ ರೂಪುಗೊಂಡಿದೆ. ಜೈವಿಕ ಕಾರಣಗಳಿಂದಾಗಿ ಹೆಣ್ಣನ್ನು ಸದಾ ನಿಯಂತ್ರಣದಲ್ಲಿಡಲು ಬಯಸುವ ವ್ಯವಸ್ಥೆಗೆ ಹೆಣ್ಣಿನ 'ದೇಹಸರ್ವಸ್ವ'ದ ಮೂಲಕ ಎದುರಾಗುತ್ತಾರೆ. ಹೆಣ್ಣಿನ ದೇಹದ ಮೂಲಕ, ಜೈವಿಕತೆಯನ್ನು ಆಧರಿಸಿ, ಅವಳ ಅನನ್ಯತೆಯನ್ನು ಗುರುತಿಸುವಿಕೆ ಇವರ ಕಾವ್ಯದಲ್ಲಿ ಮುಖ್ಯವಾಗಿ ಕಂಡು ಬರುತ್ತದೆ. ಗಂಡು ಹೆಣ್ಣಿನ ದೇಹ, ಲೈಂಗಿಕತೆಯನ್ನು ಕುರಿತಾದ ಪುರುಷ ಕಲ್ಪಿತ ಮಿಥ್‌ಗಳನ್ನು ಒಡೆಯುವ ಪ್ರಯತ್ನ ಒಂದು ಬಗೆಯದ್ದಾದರೆ, ಹೆಣ್ಣಿನ ದೇಹದ ಶಕ್ತಿ ಮತ್ತು ಮಿತಿಗಳನ್ನು ಆಧರಿಸಿ ಅದನ್ನು ಪುನರ್‌ರಚಿಸುವ ವಿಧಾನ ಮತ್ತೊಂದು ಬಗೆಯದ್ದು.

ಗಂಡು ಹೆಣ್ಣಿನ ದೇಹ ರಚನೆ, ವಿನ್ಯಾಸವನ್ನು ಕುರಿತಂತೆ ಹಿಂದಿನಿಂದಲೂ ಸ್ಥಾಪಿತವಾಗಿರುವ ನಂಬಿಕೆಗಳನ್ನು, ಮಿಥ್‌ಗಳನ್ನು ಪ್ರತಿಭಾ ತಮ್ಮ ಕಾವ್ಯದ ಮೂಲಕ ಒಡೆಯುತ್ತಾರೆ. ತಾರಿಣಿ ಶುಭದಾಯಿನಿ "ಭೋಗ ಅಥವಾ ತಾಯ್ತನದ ಸಂಕೇತಗಳಾಗಿ ಬರುವ ಹೆಣ್ಣಿನ ಅಂಗಾಂಗಗಳ ಸೌಂದರ್ಯದ ನಿಗೂಢತೆಯನ್ನು ಒಡೆದು, ಅಲ್ಲಿರುವ ಸೌಂದರ್ಯದ ಕಲ್ಪನೆಯನ್ನೇ ಪ್ರಶ್ನಿಸುತ್ತಾರೆ. ಹೆಣ್ಣಿನ ಸೌಂದರ್ಯದ 'ಒಪ್ಪಿತ' ಮಾನದಂಡಗಳ ಕಲ್ಪನೆ ಒಡೆದು, 'ಜೋತಮೊಲೆ', 'ಸೋತತುಟಿ', 'ಬಿರುಕುಪಾದ', 'ನೆರೆತಕೂದಲು', 'ಹೊಟ್ಟೆ ಸುತ್ತಿನ ಬಂದ ಬೊಜ್ಜಿನ ಪದರಗಳ' ವಿವರಗಳನ್ನು ಅವರ ಕಾವ್ಯ ಒಳಗೊಳ್ಳುತ್ತದೆ".[೩೨] ಎನ್ನುವ ಅಂಶಗಳು ಹೆಣ್ಣಿನ ದೇಹವನ್ನು ಸೌಂದರ್ಯಾತ್ಮಕ ನೆಲೆಯಲ್ಲಿ, ಭೋಗದ ವಸ್ತುವಾಗಿ ಮಾತ್ರ ನೋಡುವ ವ್ಯವಸ್ಥೆಯ ಎದುರು ಪ್ರತಿಭಾ ಹೆಣ್ಣಿನ ಅಂಗಾಂಗಗಳನ್ನು ನೈಜತೆಯಿಂದ ಕಟ್ಟಲು ಪ್ರಯತ್ನಿಸುತ್ತಾರೆ ಎನ್ನುವುದನ್ನು ಧ್ವನಿಸುತ್ತದೆ. ಜೊತೆಗೆ ಲೈಂಗಿಕ ಬಯಕೆಗಳನ್ನು ಗಂಡಿಗಷ್ಟೇ ಸೀಮಿತಗೊಳಿಸಿರುವ ವ್ಯವಸ್ಥೆಯ ಎದುರು ಹೆಣ್ಣಿನ ದೇಹಕಾಮನೆಯ ತೀವ್ರತೆಯನ್ನು, ಸ್ಥಾಪಿತ ಮಾದರಿಗಳ ಆಚೆಗೆ ಜಿಗಿಯುವ ಮನಸ್ಥಿತಿಯನ್ನು ಎತ್ತಿಹಿಡಿಯುತ್ತಾರೆ. ಇವರ 'ಪತಿವ್ರತೆ ಅಲ್ಲ' ಕವನ ಇದಕ್ಕೊಂದು ಉತ್ತಮ ನಿದರ್ಶನ.

ಹೆದರಿಸುತ್ತಾರೆ ಅವರು ಕತೆಗಳನ್ನು ಹೇಳಿ
ಬೆದರಿಸುತ್ತಾರೆ ನೂರೆಂಟು ಶಾಪ ಅಪಾಯ ತೋರಿ
ಕಲ್ಲಾಗುವ ಕಷ್ಟಗಳ ಬೆಟ್ಟದಡಿ ಹುಲ್ಲಾಗುವ
ಮಗನ ಖಡ್ಗಕ್ಕೆ ಬಲಿಯಾಗುವ ಉರಿಯುರಿಯುವ
ಬೆಂಕಿ ಕೊಂಡ ಹಾಯುವ ಹುಳ ಹಿಡಿದು ಸಾಯುವ
ಎಷ್ಟೊಂದು ವಿಧದ ನರಕ ಪಾತಕಿಗೆ
ಪರಪುರುಷನ ಬಯಸಿದ್ದಕ್ಕೆ. . . . [೩೩]

ಎನ್ನುವ ಸಾಲುಗಳು ಪತಿವ್ರತೆಯ ಹೆಸರಿನಲ್ಲಿ ಹೆಣ್ಣಿನ ಬಯಕೆಗಳನ್ನು ನಿಯಂತ್ರಿಸುತ್ತಿರುವ ವ್ಯವಸ್ಥೆಯ ತಂತ್ರಗಾರಿಕೆಯನ್ನು ಬಯಲಿಗೆಳೆಯುತ್ತವೆ. ಮುಂದುವರೆದು 'ಹೆಣ್ಣಿನ ದೇಹಶುದ್ಧಿಯ' ಪೊಳ್ಳುತನವನ್ನೂ, ಅದರ ಅಪ್ರಸ್ಥುತತೆಯನ್ನು ಎತ್ತಿ ಹಿಡಿಯುತ್ತಲೇ ಅತ್ಯಂತ ತೀವ್ರವಾದ ಪ್ರತಿರೋಧವನ್ನು ವ್ಯಕ್ತಪಡಿಸುತ್ತಾರೆ. ಈ ಪ್ರತಿರೋಧ ವ್ಯವಸ್ಥೆ ಊಹಿಸಲೂ ಸಾಧ್ಯವಾಗದ ಪರ್ಯಾಯದ ಕಡೆಗೆ ಮುಖಮಾಡಿರುವುದು ವಿಶೇಷ,

ಪಂಚಭೂತಗಳ ಸನ್ನಿಧಿಯಲ್ಲಿ
ಪಂಚೇಂದ್ರಿಯಗಳಿಗೆ ಸೊಪ್ಪು ಹಚ್ಚುತ್ತ
ಕರೆದೆ ಕಾಮುಕರನ್ನು
ಬನ್ನಿರೋ ಬನ್ನಿರಿ ಬೆನ್ನುಜ್ಜಿ
ತೀರಿಸಿಕೊಳ್ಳಿ ತೀಟೆ
ಅಂಕುಡೊಂಕುಗಳಲ್ಲಿ ಕಂಡುಕೊಳ್ಳಿ ಬೇಟೆ
ಶಪಿಸಿ ಸುಸ್ತಾದರು ದೇವರುಗಳು
ಕಲ್ಲಾಗಲಿಲ್ಲ ಕರಗಲಿಲ್ಲ
ಪುಳಕದಲ್ಲಿ ತನು ಮನ ಅರಳಿ
ಇನ್ನಷ್ಟು ಹೊಮ್ಮಿದೆ
ಇನ್ನು ಸಾವಿನ ಮಾತು
ಈಗೇಕೆ ಬರಲಿ ಬಂದಾಗ ನೋಡೋಣ[೩೪]

ಇಲ್ಲಿ ಹೆಣ್ಣಿಗೆ ಸಂಬಂಧಿಸಿದ ಎಲ್ಲಾ ಬಗೆಯ ಸ್ಥಾಪಿತ ಹಿತಾಸಕ್ತಿಗಳನ್ನು ಒಂದೇ ಬಾರಿಗೆ ಒಡೆಯಲಾಗುತ್ತಿದೆ. ಹೆಣ್ಣಿನ ಲೈಂಗಿಕ ನಿಯಂತ್ರಣಗಳನ್ನು ತೀವ್ರವಾಗಿ ವಿರೋಧಿಸುವಿಕೆ ತಾನೇ ಮುನ್ನುಗಿ ಕಾಮುಕರನ್ನು ಆಹ್ವಾನಿಸುವ, ಆ ಮೂಲಕ ತನ್ನ ಬಯಕೆಗಳನ್ನೂ ತೀರಿಸಿಕೊಳ್ಳುವ, ಇದರಿಂದಾಗಿ ತನ್ನ ಜೀವನ ಕ್ರಮದಲ್ಲಿ ಯಾವುದೇ ರೀತಿಯ ಬದಲಾವಣೆಗಳಾಗದ ಚಿತ್ರಣದ ಮೂಲಕ ಮೂಡಿಬಂದಿದೆ. ಮೊದಲ ಸಾಲುಗಳು ಲೈಂಗಿಕ ನಿಯಂತ್ರಣಗಳನ್ನು ಮೀರುವ ವಿಧಾನಕ್ಕೆ ಸಂಬಂಧಿಸಿದ್ದರೆ 'ಶಪಿಸಿ ಸುಸ್ತಾದರು ದೇವರುಗಳು ಕಲ್ಲಾಗಲಿಲ್ಲ ಕರಗಲಿಲ್ಲ' ಎಂಬ ಮಾತು ಪುರಾಣದ ಅಹಲ್ಯೆಯ ಪಾತ್ರವನ್ನು ನೆನಪಿಸುತ್ತದೆ. ಇಂದ್ರನಿಂದ ಮೋಹಿಸಲ್ಪಟ್ಟ ಕಾರಣದಿಂದಾಗಿ ಅಹಲ್ಯೆ ಕಲ್ಲಾದ ಕಥೆಯ ಹಿಂದಿನ ಲೈಂಗಿಕ ರಾಜಕಾರಣದ ಹಿಂದಿನ ಹುನ್ನಾರಗಳನ್ನು ಬಯಲಿಗೆಳೆಯುತ್ತದೆ. ಪ್ರತಿಭಾ ಈ ಬಗೆಯ ಕವನಗಳ ಮೂಲಕ ಹೆಣ್ಣಿನ 'ದೇಹ ಸರ್ವಸ್ವ'ದ ಅಂಶಗಳನ್ನು ಮುನ್ನೆಲೆಗೆ ತಂದಿದ್ದಾರೆ. ಇವರ 'ಕೊನೆಗೆ', ಅರ್ಧನಾರೀಶ್ವರ' ಮುಂತಾದ ಕವನಗಳು ಗಂಡು ದೇಹದ ಹಿರಿಮೆಯನ್ನು ನಿರಾಕರಣೆಗೆ ಒಳಪಡಿಸುತ್ತವೆ.

ಗರ್ವದಲ್ಲಿ ಆಕಾಶಕ್ಕೆ ಚಾಚಿ ನಿಂತ ನಿನ್ನ ತಲೆ
ಮತ್ತೆ ಮರಳಲೇ ಬೇಕು ನನ್ನ ಎದೆಯ ಮೆತ್ತೆಗೆ
ಕೊರಳ ತಂಪಿಗೆ ತೊಡೆಯ ಪಲ್ಲಂಗಕ್ಕೆ
ಸೋತು ನಿನ್ನ ಧ್ವಜವಿಳಿದು ನೆಲಕ್ಕೊರಗಿದಾದ
ಒರಟು ಬೆರಳುಗಳು ಮತ್ತೆ ನನ್ನ ಸೆರಗು ಹಿಡಿಯಲೇಬೇಕು [೩೧]

ಗಂಡೆಂದರೆ ಒಂದು ವೀರ್ಯ ತಾನೆ?
ಉಳಿದಂತೆ ಕೈಕಾಲು ಎದೆ ಹೊಟ್ಟೆ ಬರಿ
ಬವಣೆ, ಗಂಡೆಂಬ ಗತ್ತು ಗರ್ವ ಗೌಡಿಕೆ
ಗಳು ಮಲಗಿಬಿಡುತ್ತವೆ ಕೆಲಸವಾದ ಮೇಲೆ. [೩೨]

ಈ ಎರಡೂ ಕವನಗಳು ಗಂಡು ದೇಹದ 'ಅಹಂ'ಅನ್ನು ಒಡೆದು ಹಾಕತ್ತಿರುವುದನ್ನು ಕಾಣಬಹುದು. ಮೊದಲ ಕವನ ಗಂಡು ಹೆಣ್ಣಿನ ದೈಹಿಕ ಬಯಕೆಗಳು ಸಹಜ ಮತ್ತು ಅವು ಒಂದಕ್ಕೊಂದು ಅನಿವಾರ್ಯ, ಅಗತ್ಯ ಎಂಬುದನ್ನು ಎತ್ತಿ ಹಿಡಿಯುತ್ತಿದೆ. 'ನಿನ್ನ ಧ್ವಜವಿಳಿದು ನೆಲಕ್ಕೊರಗಿದಾಗ' ಎಂಬ ಮಾತು ಗಂಡಿನ ಎಲ್ಲಾ ಬಗೆಯ ಅಹಂಮ್ಮಿಕೆಯನ್ನೂ ಒಂದೇ ಬಾರಿಗೆ ನಿರಾಕರಿಸುತ್ತಿದೆ. ಇವರ 'ಆಹಾ! ಪುರುಷಾಕಾರಂ' ಕವನ ಕೂಡ ಗಂಡು ದೇಹದ ಅಹಂಮ್ಮಿಕೆಯನ್ನು ವ್ಯಂಗ್ಯ, ವಿಡಂಬನೆಯ ಮೂಲಕ ನಿರಾಕರಿಸುತ್ತಿದೆ. ಇಲ್ಲಿ ಪುರುಷಾಕಾರದ ಅಹಂ ಇರಬಹುದು, ಲೈಂಗಿಕ ಸರ್ವಸ್ವದ ಅಹಂ ಇರಬಹುದು, ಯಜಮಾನಿಕೆಯ ಅಹಂ ಇರಬಹುದು ಎಲ್ಲವೂ ಕೂಡ ಒಂದಲ್ಲಾ ಒಂದು ದಿನ ನೆಲಕ್ಕೊರಗುವುದು ನಿಶ್ಚಿತ ಎಂಬ ಅರಿವೂ ಕೂಡ ಇಲ್ಲಿ ಧ್ವನಿಸುತ್ತದೆ. ಈ ಕವನ ' ಗಂಡು'ತನದ ಅಹಂಕಾರವನ್ನು ಪ್ರಶ್ನಿಸುತ್ತಿದ್ದರೆ ಎರಡನೆಯ ಕವನ ಗಂಡಿನ ಲೈಂಗಿಕ ಯಜಮಾನಿಕ ಗರ್ವವನ್ನು ನಿರಾಕರಿಸುತ್ತಿದೆ. ಯಾವುದನ್ನು ಗಂಡಿನ 'ಶ್ರೇಷ್ಟತೆಯ' ಸಂಕೇತವೆಂದು ಗುರುತಿಸಲಾಗುತ್ತಿತ್ತೊ ಅದನ್ನು ಪ್ರತಿಭಾ ಮಾನವ ಶರೀರದ ಸಹಜ ಕ್ರಿಯೆಯೆಂದು ಗುರುತಿಸುತ್ತಾರೆ. ಜೊತೆಗೆ ಇದೇ ಕಾರಣದಿಂದಾಗಿ ಪಡೆದಿರುವ 'ಪ್ರಾಧಾನ್ಯತೆ'ಯನ್ನು , ಗಂಡೆಂಬ ಗತ್ತು ಗರ್ವ ಗೌಡಿಕೆ ಗಳು ಮಲಗಿಬಿಡುತ್ತವೆ ಕೆಲಸವಾದ ಮೇಲೆ' ಎಂದು ಅಪಹಾಸ್ಯ ಮಾಡುತ್ತಾರೆ. ಒಟ್ಟಾರೆ ಪ್ರತಿಭಾ ಲೈಂಗಿಕ ಕಾರಣಗಳಿಂದಾಗಿಯೇ ಸ್ಥಾಪಿತವಾಗಿರುವ ಗಂಡು ಹೆಣ್ಣಿನ ಶ್ರೇಣೀಕರಣವನ್ನು ತಮ್ಮ 'ಕತ್ತಲು', 'ಹೊಲಿಗೆ',ಮುಂತಾದ ಕವನಗಳ ಮೂಲಕ ತೀವ್ರವಾಗಿ ಅಲ್ಲಗಳೆಯುತ್ತಾರೆ.

ಪ್ರತಿಭಾ ಅವರ **ಅರ್ಧನಾರೀಶ್ವರ, ದುರ್ಗೆ, ಕಾಳಿದಾಸನ ಕಾವ್ಯ, ವೈತರಣಿ, ಶಂಕೆ-ನಿಶ್ಶಂಕೆ, ಕ್ಷೇತ್ರಪಾಲ ಸಮರ್ಚಿತ, ಯಕ್ಷಪ್ರಶ್ನೆ, ದೇವಿಯೊಡನೆ ಮುಖಾಮುಖಿ** ಮುಂತಾದ ಕವನಗಳು ಹೆಣ್ಣನ್ನು ಕುರಿತಾದ ಮಿಥ್‌ಗಳನ್ನು ಪುನರ್ ಪರಿಶೀಲನೆಗೆ ಒಳಪಡಿಸುತ್ತವೆ. ಈ ಕವನಗಳು ಇತಿಹಾಸ ಮತ್ತು ಪುರಾಣಗಳಲ್ಲಿ ಹೆಣ್ಣಿಗೆ ಕೊಡಲಾಗಿದೆ ಎನ್ನಲಾಗುವ 'ಸಮಾನತೆ' ಎಷ್ಟು ಭ್ರಮಾತ್ಮಕವಾದದ್ದು ಎಂಬುದನ್ನು ತಿಳಿಸುತ್ತದೆ. ಇವರ 'ಅರ್ಧನಾರೀಶ್ವರ' ಕವನ ಹೆಣ್ಣಿನ ಅರ್ಧ ದೇಹವನ್ನು ಧರಿಸಿರುವ ಶಿವನನ್ನು ಅಪಹಾಸ್ಯ ಮಾಡುವ ಮೂಲಕ ಹೆಣ್ಣಿನ ದೇಹದ ಅನನ್ಯತೆಯನ್ನು ಸಾರುತ್ತಾರೆ.

ನಾಚಿಕೆಯಾಗಬೇಕು ಜೀವಕ್ಕೆ
ಅರ್ಧ ಕ್ರೆಡಿಟ್ ತೆಗೆದುಕೊಳ್ಳುವುದಕ್ಕೆ
ಹೆಣ್ತನದ ಸೂಚನೆಯೆಂದು ಒಂದು
ಸ್ತನ ಧರಿಸಿಬಿಟ್ಟರೆ ಆಯಿತೇ ಅಂಗಕ್ಕೆ?
ಅರೆ ಬಸಿರು ತಡೆಯಬಹುದೇ ಪೂರ್ಣ ಗರ್ಭದ ಹೊರೆ?
ಇಡೀ ದೇಹವೇ ತಡೆಯಲಾಗದು
ಪಾರ್ಶ್ವಕ್ಕೆ ಸಾಕೇ ಪ್ರಣಯ ಬೇಗೆ? [೩೭]

ಎಂದು ಹೆಣ್ಣಿನ ದೇಹದ ಪರಿಪೂರ್ಣತೆಯನ್ನು, ಅದರ ನೈಜ ಅನುಭವಗಳನ್ನು ಗಂಡು ಎಂದಿಗೂ ಪಡೆಯಲು ಸಾಧ್ಯವಿಲ್ಲ ಎನ್ನುತ್ತಾರೆ. ಇವರ ದುರ್ಗೆ, ಮುಂತಾದ ಕವನಗಳು ಹೆಣ್ಣಿಗೆ ನೀಡಲಾಗಿರುವ ಅವಕಾಶಗಳ ಹಿಂದಿನ ಲಿಂಗರಾಜಕಾರಣವನ್ನು ಬಯಲಿಗೆಳೆಯಲು ಪ್ರಯತ್ನಿಸುತ್ತಾರೆ. ಹೆಣ್ಣನ್ನು ಶಕ್ತಿ ಸ್ವರೂಪಿಣಿಯಾಗಿ, ಸಾಮ್ರಾಜ್ಞಿಯಾಗಿ ಬಿಂಬಿಸುತ್ತಲೇ ಹೆಣ್ಣಿನ ಶಕ್ತಿ ಸಾಮರ್ಥ್ಯವನ್ನು ಪುರುಷಾಧೀನಗೊಳಿಸಿ ವ್ಯವಸ್ಥೆ ಹೇಗೆ ತನ್ನಿಚ್ಚೆಗೆ ತಕ್ಕಂತೆ ಬಳಸಿಕೊಳ್ಳುತ್ತಿದೆ ಎಂಬುದನ್ನು ತಿಳಿಸಿದ್ದಾರೆ. ಮುದುಕಿಯರಿಗಿದು ಕಾಲವಲ್ಲ ಕವನ ಸಂಕಲನದ 'ಜ್ವಾಲಾಮುಖಿ ಅಮ್ಮನವರು' ಭಾಗದ ಕವನಗಳು ಇದನ್ನು ಮತ್ತಷ್ಟು ಸಮರ್ಥವಾಗಿ ಹಿಡಿದಿಡುತ್ತವೆ.

ನಿರಂತರವಾದ ಚಲನಶೀಲತೆ ಪ್ರತಿಭಾರವರ ಕಾವ್ಯದ ಧ್ವನಿ. ಈ ಚಲನಶೀಲತೆ ಬದುಕಿನ ಪಯಣದಲ್ಲಿ ಹೊಸತನ್ನು ಸ್ವೀಕರಿಸುವ. ಬದುಕನ್ನು ನಿರಂತರ ಚೈತನ್ಯದಾಯಕವಾಗಿಸಿಕೊಳ್ಳುವ, ಸಂಬಂಧಗಳ ಸ್ವರೂಪವನ್ನು ಅದರೆಲ್ಲಾ ಏಳುಬೀಳುಗಳ ಅರಿವಿನೊಂದಿಗೆ ಅರಿಯುವ ವಿಧಾನವಾಗಿ ಕಂಡುಬರುತ್ತದೆ. ಇವರ ಕವನಗಳಲ್ಲಿ ಮಾನವ ಸಂಬಂಧಗಳು ವಾಸ್ತವದ ಅರಿವಿನೊಂದಿಗೆ ರೂಪುಗೊಂಡಿವೆ. ಮತ್ತು ಸಂಬಂಧಗಳ ಸಂಕೀರ್ಣತೆಯ ಹಿನ್ನೆಲೆಯಲ್ಲಿಯೇ ಗಂಡು ಹೆಣ್ಣಿನ ಪ್ರೀತಿ ಮತ್ತು ಕ್ರೌರ್ಯವನ್ನು ಹಿಡಿದಿಡುತ್ತಾರೆ.

ಅಮ್ಮ, ತಾನು, ಮತ್ತು ಮಗಳು ಈ ರೂಪಗಳು ಮಹಿಳಾ ಕಾವ್ಯದಲ್ಲಿ ಮತ್ತೆ ಮತ್ತೆ ಚಿತ್ರಿಣಗೊಂಡಿವೆ. ಹೆಚ್ಚಿನ ಕವಯಿತ್ರಿಯರು ಅಮ್ಮ ಮತ್ತು ತಾನು ವ್ಯವಸ್ಥೆಯ ಹಿಡಿತದಲ್ಲಿ ಸಿಕ್ಕಿಕೊಂಡಿರುವ, ಮಗಳು ಅದರಿಂದ ದೂರಾಗುವ, ತನ್ನೆಲ್ಲಾ ಸಂಕಷ್ಟಗಳಿಗೆ ಪರಿಹಾರವನ್ನು ಕಂಡುಕೊಳ್ಳುವ ಆಶಯದಿಂದ ಕೂಡಿದ್ದಾರೆ. ಆದರೆ "ಪ್ರತಿಭಾ ಅಮ್ಮ ಮತ್ತು ಅಜ್ಜಿಯರನ್ನು ರಕ್ತಮಾಂಸದ ಸಹಜ ಸ್ವರೂಪದಲ್ಲಿ ನೋಡುತ್ತಾರೆ. ಪರಂಪರೆಯನ್ನು ಎದುರಿಸುವ ನಿಟ್ಟಿನಲ್ಲಿ, ಅಮ್ಮ ಅಜ್ಜಿಯರಲ್ಲಿ ಬಂಡಾಯದ ಕಾವೊಂದು ಇರುವುದನ್ನು ಗುರುತಿಸಿ, ಆ ಪರಂಪರೆಯಲ್ಲಿ ಗುರುತಿಸಿಕೊಳ್ಳಲು ಬಯಸುತ್ತಾರೆ".[೩೮] ಎನ್ನುವ ಮಾತು ಪ್ರತಿಭಾ ವ್ಯವಸ್ಥೆಯನ್ನು ಸಮರ್ಥವಾಗಿ ಗ್ರಹಿಸುತ್ತಿರುವ, ನಮ್ಮ ಸಂಸ್ಕೃತಿಯ ಬೇರುಗಳಿಂದಲೇ ಹೆಣ್ಣಿನ ಶಕ್ತಿ ಸಾಮರ್ಥ್ಯವನ್ನು ಗುರುತಿಸುವ ಕ್ರಮವನ್ನು ಸೂಚಿಸುತ್ತದೆ. ಅಮ್ಮ ಅಜ್ಜಿಯ ರೂಪಗಳು ವ್ಯವಸ್ಥೆಯೊಂದಿಗೆ ಅನುಸಂಧಾನಗೊಂಡಿರುವ ಬಗೆಯನ್ನು ಸಹಜ ಕ್ರಿಯೆ ಎಂಬಂತೆ ಭಾವಿಸುತ್ತಾರೆ. ಅಜ್ಜಿ ಅಮ್ಮಂದಿರು

ವ್ಯವಸ್ಥೆಗೆ ಎದುರಾಗುವ ಸನ್ನಿವೇಶವನ್ನು ಅವರ 'ಅಜ್ಜಿ', 'ಇಷ್ಟ', 'ಮಗಳಿಗೆ', 'ಇನ್ನುಮುಂದೆ', 'ಅಮ್ಮನಿಗೆ ೧,೨,೩' ಮುಂತಾದ ಕವನಗಳಲ್ಲಿ ಚರ್ಚಿಸಿದ್ದಾರೆ. ಅಮ್ಮನಿಗೆ ಕವನಗಳು ಹೆಣ್ಣಿನ ಶಕ್ತಿ, ಸಾಮರ್ಥ್ಯ, ಎಲ್ಲವನ್ನೂ ನಿಭಾಯಿಸಬಲ್ಲ ಜಾಣ್ಮೆ, ಮಗಳಲ್ಲಿ ಆ ರೂಪಗಳ ಮುಂದುವರಿಕೆಯನ್ನು ಧ್ವನಿಸಿದರೆ 'ಇಷ್ಟ' ಕವನ ಸಮಾಜದಲ್ಲಿ ಹೆಣ್ಣಿನ ಪ್ರತಿರೋಧವನ್ನು ಗುರುತಿಸುವ, ಅದನ್ನು ಪ್ರಶಂಸಿಸುವ, ಈ ಶಕ್ತಿ ತನ್ನ ಮಗಳಲ್ಲಿ ಇರುವುದನ್ನು ಮೆಚ್ಚುವ, ಮಾನ್ಯಮಾಡುವ ವಿಧಾನ ಕಂಡುಬರುತ್ತದೆ. 'ಅಜ್ಜಿ' ಮತ್ತು 'ಇನ್ನುಮುಂದೆ' ಕವನಗಳು ಕನ್ನಡ ಕಾವ್ಯದಲ್ಲಿ ಚಿತ್ರಣಗೊಂಡಿರುವ ಸಂಪ್ರದಾಯಬದ್ಧ ಅಜ್ಜಿಗೆ ವಿರುದ್ಧವಾಗಿ ಹೆಣ್ಣಿನ ಶಕ್ತಿ ಕೇಂದ್ರಗಳಾಗಿ, ಹೆಣ್ಣಿನ ಶೋಷಣೆಯನ್ನು ವಿರೋಧಿಸುವ ಮಾದರಿಗಳಾಗಿ ಚಿತ್ರಣಗೊಂಡಿವೆ. ಸಂಪ್ರದಾಯಬದ್ಧಳಾಗಿರುವ ಅಜ್ಜಿ

ಮಾತು ಮಾತಿಗೆ ಹಂಗಿಸಿ
ಮಾತು ಸಾಲದಾದಾಗ
ಛಟೀರನೆ ಕೆನ್ನೆಗೆ ತಟ್ಟುವ
ಗಂಡನ ಷರಟು ಇಸ್ತ್ರಿ ಮಾಡುವ ನನಗೆ ಹೇಳಿದಳು
ನಿನ್ನ ಜೀನ್ಸು ಪ್ಯಾಂಟು
ಒಯ್ದು ಒಲೆಯೊಳಗಿಕ್ಕು [೩೯]

ಎನ್ನುವಷ್ಟು ಜಾಗೃತಳಾಗಿದ್ದಾಳೆ. ವಿದ್ಯೆ, ಉದ್ಯೋಗ, ದುಡಿಮೆ, ಸ್ವಾತಂತ್ರ್ಯ ಏನೂ ಇಲ್ಲದ ಅಜ್ಜಿ ತನ್ನ ಮುಂದೆ ನಡೆಯುತ್ತಿರುವ ಹೆಣ್ಣಿನ ಶೋಷಣೆ ಮತ್ತು ಅವಮಾನಗಳ ವಿರುದ್ಧ ತಿರುಗಿಬಿದ್ದಿರುವುದನ್ನು ಈ ಕವನ ಧ್ವನಿಸುತ್ತದೆ. 'ಜೀನ್ಸು ಪ್ಯಾಂಟು' ಆಧುನಿಕತೆಯ ಸಂಕೇತವಾಗಿದ್ದರೂ ಹೆಣ್ಣಿಗೆ ಬೇಕಾದ ಶಕ್ತಿಯನ್ನು ತಂದುಕೊಟ್ಟಿಲ್ಲ ಎನ್ನುವುದನ್ನು ಹೇಳುತ್ತಲೇ, ಆ ಶಕ್ತಿ ಹೆಣ್ಣಿನಲ್ಲಿಯೆ ಅಡಕವಾಗಿದೆ, ಅದನ್ನು ಗುರುತಿಸಿಕೊಳ್ಳಬೇಕಿದೆ ಎಂಬುದನ್ನು ಸೂಚ್ಯವಾಗಿ ತಿಳಿಸುತ್ತದೆ. ಏಕೆಂದರೆ ಹೆಣ್ಣಿಗೆ ಸಂಬಂಧಿಸಿದಂತೆ ಆಧುನಿಕತೆಯನ್ನು ವರ ಮತ್ತು ಶಾಪ ಎಂದು ಎರಡು ಭಿನ್ನ ಆಯಾಮಗಳಲ್ಲಿ ಚರ್ಚಿಸುತ್ತಿರುವ ಸಂದರ್ಭದಲ್ಲಿ ಪ್ರತಿಭಾ ಆಧುನಿಕ ಸವಾಲುಗಳಿಗೆ ಎದುರುಗೊಳ್ಳುತ್ತಲೇ ಅದನ್ನು ಮುಕ್ತವಾಗಿ ಸ್ವೀಕರಿಸುತ್ತಾರೆ. ಅದರ ಒಳಿತು ಕೆಡುಕುಗಳೇನೇ ಇದ್ದರೂ ಅದನ್ನು ಎದುರುಗೊಳ್ಳುವ, ಮೀರುವ ಬಗೆ ಹೇಗೆ ಎಂಬುದರ ಕಡೆಗೆ ಪ್ರತಿಭಾರವರ ಗಮನವಿದೆ. 'ಮಗಳಿಗೆ' ಕವನ ತಾಯಿ ಮತ್ತು ಮಗಳ ಸಂಬಂಧವನ್ನು ಮತ್ತೊಂದು ಆಯಾಮದಲ್ಲಿ ಹಿಡಿದಿಡಲು ಪ್ರಯತ್ನಿಸುತ್ತದೆ.

ದಳ್ಳುರಿಯ ಧಗೆ ಸೋಕದೆ ಮುಳ್ಳು ತಾಕದೆ
ಯಾರ ಕಾಲ್ತುಳಿತಕ್ಕು ಸಿಗದಂತೆ
ಗಂಡಾಗದೆ, ಹೆಣ್ತನದ ಸೊನೆ ಸೋರದಂತೆ
ಹಣ್ಣಾಗಿ ಹತ್ತು ಜನರ ಕಣ್ಣು ತಂಪಾಗುವಂತೆ.. . .
ಕುಪ್ಪಳಿಸಿ ಕಾಲ್ಗೆಜ್ಜೆ ಝುಣಕರಿಸಿ
ನೀ ಗೆದ್ದು ನನ್ನನಿಲ್ಲವಾಗಿಸು.
ಎಲ್ಲಕ್ಕು ಮೊದಲು ಮೆಲ್ಲನಿಳಿ ಇಲ್ಲಿಗೆ
ನೀನು ಈಜಬೇಕಾದ ನಿಜ ಸಮುದ್ರಕ್ಕೆ. [೪೦]

ಇಲ್ಲಿ ತಾಯಿ ಮಗಳ ಸಂಬಂಧ ಪ್ರೀತಿ ವಿಶ್ವಾಸದ ಜೊತೆಗೆ ವ್ಯವಸ್ಥೆಯೊಂದಿಗೆ ಹೇಗೆ ವರ್ತಿಸಬೇಕೆಂಬ ಕಾಳಜಿಯಿಂದ ಕೂಡಿದೆ. 'ಗಂಡಾಗದೆ, ಹೆಣ್ತನದ ಸೊನೆ ಸೋರದಂತೆ' 'ಎಲ್ಲಕ್ಕು ಮೊದಲು ಮೆಲ್ಲನಿಳ ಇಲ್ಲಿಗೆ' ಎನ್ನುವ ಮಾತು ಹೆಣ್ಣಾಗಿ ಹೆಣ್ತನದ ಮೂಲಕವೇ ತನ್ನ ಅನನ್ಯತೆಯನ್ನು ಕಂಡು ಕೊಳ್ಳಬಹುದೆಂಬ ಆಶಾವಾದದಿಂದ ಕೂಡಿದ್ದಾಗಿದೆ. ಇಲ್ಲಿ ವ್ಯವಸ್ಥೆಯ ಕಠೋರತೆಯ ಅರಿವು ತಾಯಿಯ ಆತಂಕಕ್ಕೆ ಕಾರಣವಾಗಿದೆ. ಆದರೂ ತನ್ನ ಮಗಳು ತನ್ನಂತಾಗದೆ ಎಲ್ಲವನ್ನೂ ಗೆಲ್ಲಬೇಕೆಂಬ ಆಕಾಂಕ್ಷೆ, ಗೆಲ್ಲುತ್ತಾಳೆಂಬ ಆತ್ಮವಿಶ್ವಾಸ ಮೂಡಿಬಂದಿದೆ. ಇನ್ನು ಗಂಡು ಹೆಣ್ಣಿನ ಸಂಬಂಧವನ್ನು ಪ್ರತಿಭಾ ಸಂಘರ್ಷದ ವಿಭಿನ್ನ ನೆಲೆಗಳ ಮೂಲಕ ಹಿಡಿದಿಡುತ್ತಾರೆ.

ಈ ತೋರಿಕೆಯ ದಾಂಪತ್ಯ ಏಕೆ ಕೊನೆಗೊಳ್ಳುವುದಿಲ್ಲ
ಕತೆಗೇಕೆ ಮುಕ್ತಾಯವಿಲ್ಲ
ದಿನ ದಿನದ ಘರ್ಷಣೆಯ ಗರಗಸ
ಕೊರೆಕೊರೆದು ಸವೆಸುತ್ತಿದೆ
ಒಂದೇ ಪೆಟ್ಟಿಗೆ ಏಕೆ ತುಂಡಾಗುವುದಿಲ್ಲ
ಏಕೆಂದರೆ ಬಚ್ಚಲು ಮನೆಯಲ್ಲಿ
ಇನ್ನೂ ಅವನ ಬೆವರಿನ ವಾಸನೆಯಿದೆ
ಅಕಸ್ಮಾತ್ ಅವನ ಷರಟಿನ ಜೇಬಿನಲ್ಲಿ
ನನ್ನ ಹೇರ್‌ಪಿನ್ ಸಿಗುತ್ತದೆ
ಅದಕ್ಕೇ. [೪೧]

ಇಲ್ಲಿ ಎಷ್ಟೆಲ್ಲಾ ಹೋರಾಟ, ಹೊಡೆದಾಟಗಳ ನಡುವೆಯೂ ಬದುಕಿನ ಬಗೆಗಿನ ಪ್ರೀತಿ, ಹೇಳಲಸಾಧ್ಯವಾದ ಸೆಳೆತ ಗಂಡು ಹೆಣ್ಣಿನಲ್ಲಿ ಇರುವುದರಿಂದಾಗಿಯೇ ಈ ಸಂಬಂಧಗಳು ಕೊನೆಗೊಳ್ಳುವುದಿಲ್ಲ ಎಂಬ ಅಭಿಪ್ರಾಯದ ಜೊತೆಗೆ ಈ ಸಂಬಂಧ ಕೊನೆಗೊಳ್ಳಬೇಕಾದ ಅವಶ್ಯಕತೆ ಇಲ್ಲ ಎಂಬುದರ ಕಡೆಗೆ ಗಮನವಿದೆ. ಅವರ **ನೈನಾಸಾಕ್ಷಿ** ಮತ್ತು **ನಾನು ಪುಟ್ಟ ಮಳೆ ನೋಡಿದ್ದು** ತಂದೆ ಮಗಳ ಸಂಬಂಧವನ್ನು ಎರಡು ವಿರುದ್ಧ ಧ್ರುವಗಳಲ್ಲಿ ಹಿಡಿದಿಡುತ್ತದೆ. ನೈನಾಸಾಕ್ಷಿಯಲ್ಲಿ ತಂದೆ ಪುರುಷ ಪ್ರಧಾನ ವ್ಯವಸ್ಥೆಯ ಭಾಗವಾಗಿ ಶೋಷಕನ ಸ್ಥಾನದಲ್ಲಿದ್ದರೆ 'ನಾನು ಪುಟ್ಟ ಮಳೆ ನೋಡಿದ್ದು' ಕವನ 'ಆವರಿಸಿದೆ ದೂರ ನಿಂತು ನಗುವ ತಂದೆಯ ನೆರಳು' ಎನ್ನುವ ಮೂಲಕ ಮಗಳ ಆತ್ಮವಿಶ್ವಾಸವನ್ನೂ ಅದಕ್ಕೆ ಕಾರಣವಾಗಿರುವ ತಂದೆಯ ಸಹಕಾರವನ್ನೂ ಕಟ್ಟಿಕೊಡುತ್ತದೆ. ಬದಲಾದ ಸ್ಥಿತಿಯಲ್ಲಿ ಗಂಡಿನ ವರ್ತನೆಯಲ್ಲಿ, ಮನಸ್ಥಿತಿಯಲ್ಲಿ ಆಗಿರುವ ಬದಲಾವಣೆಗಳನ್ನು ಪ್ರತಿಭಾ ಗುರುತಿಸುತ್ತಾರೆ. ಒಟ್ಟಾರೆ ಪ್ರತಿಭಾರವರ ಕವನಗಳು ಮಾನವ ಸಂಬಂಧಗಳನ್ನು ಯಾವುದೋ ಒಂದು ಕೇಂದ್ರದಿಂದ ಹಿಡಿದಿಡದೆ ಅದನ್ನು ದಿನನಿತ್ಯದ ಆಗುಹೋಗುಗಳ ನಡುವಿನ ಪ್ರೀತಿ ಮತ್ತು ಸಂಘರ್ಷದ ಹಿನ್ನೆಲೆಯಲ್ಲಿ ಚಿತ್ರಿಸಿದ್ದಾರೆ. ಇವರ ನನ್ನ ನಿನ್ನ ನಡುವೆ ಕವನ ಪ್ರೀತಿ, ಸಂತೃಪ್ತಿಗಳ ಬದುಕಿನಲ್ಲಿ ರಾಗ, ದ್ವೇಷಗಳು ಸಂಬಂಧಗಳ ಮಧುರತೆಯನ್ನು ಹಾಳುಮಾಡುತ್ತಿರುವುದನ್ನು ಧ್ವನಿಸುತ್ತವೆ. ಇವುಗಳ ನಡುವೆಯೂ ಸಂಬಂಧಗಳನ್ನು ಅರ್ಥಪೂರ್ಣವಾಗಿಸಿಕೊಳ್ಳುವುದರ ಕಡೆಗೆ ಪ್ರತಿಭಾ ಕಾವ್ಯದ ನಿರಂತರವಾದ ಪಯಣವಿದೆ.

ಸರಕುಸಂಸ್ಕೃತಿ ಹೆಣ್ಣಿಗೆ ತಂದೊಡ್ಡಿರುವ ಆತಂಕಗಳು ಬಹುಮುಖಿಯಾದದ್ದು. ಆದರೆ ಪ್ರತಿಭಾ ಇದಕ್ಕೆ ಮುಖಾಮುಖಿಯಾಗುವ ಬಗೆ ಅಚ್ಚರಿ ಹುಟ್ಟಿಸುವಂತದ್ದು. ಉದ್ಯೋಗ, ಶಿಕ್ಷಣದ ಅವಕಾಶಗಳು ಬಿಡುಗಡೆಯ ಕೊಂಡಿಗಳಾದರೂ ಹೆಣ್ಣಿನ ಮೇಲೆ ಇನ್ನಷ್ಟು ಒತ್ತಡವನ್ನು ಹೇರುತ್ತಿವೆ ಎನ್ನುವ ಸಂದರ್ಭದಲ್ಲಿ ಆಧುನಿಕ ಹೆಣ್ಣು ಇವೆಲ್ಲವನ್ನು ನಿಭಾಯಿಸುತ್ತಿರುವ ಬಗೆಯನ್ನು ಪ್ರತಿಭಾ ಹಿಡಿದಿಡುತ್ತಾರೆ. 'ಕೇರ್ ಫ್ರೀ ಮಹಿಳೆಯರು', 'ಸೀರೆ ಉಡುವುದೆಂದರೆ', 'ಅಡುಗೆ ಮಾಡುತ್ತಿದ್ದೇನೆ'. 'ಗೃಹಿಣಿಗೀತೆ', ಮುಂತಾದ ಕವನಗಳು ಆಧುನಿಕ ಅವಕಾಶಗಳನ್ನು ಬಳಸಿಕೊಂಡು ಹೆಣ್ಣು ಹೇಗೆ ತನ್ನ ಅಸ್ಮಿತೆಯನ್ನು ಕಂಡುಕೊಳ್ಳುತ್ತಿದ್ದಾಳೆ ಎಂಬುದನ್ನು ಮತ್ತೆ ಮತ್ತೆ ತಮ್ಮ ಕವನಗಳಲ್ಲಿ ಚರ್ಚಿಸಿದ್ದಾರೆ. ಆಧುನಿಕತೆ ತಂದೊಡ್ಡಿರುವ ಆತಂಕಗಳಲ್ಲಿ ಉದ್ಯೋಗ ಮತ್ತು ಕುಟುಂಬ ಎರಡನ್ನೂ ನಿಭಾಯಿಸುವ, ಅವುಗಳಲ್ಲಿ ತಮ್ಮ ಅಸ್ಮಿತೆಯನ್ನು ಕಂಡುಕೊಳ್ಳುವ ವಿಧಾನ ಬದುಕಿನ ಜಂಜಾಟಗಳ ಭಾಗವಾಗಿಯೇ ರೂಪುಗೊಂಡಿರುವುದನ್ನು ಪ್ರತಿಭಾ ಗುರುತಿಸುತ್ತಾರೆ.

ಸೆಮಿನಾರುಗಳಲ್ಲಿ ತೂಕಡಿಸುತ್ತ
ನಾಳೆಯ ಅಡಿಗೆಯ ಯೋಚನೆ,
ಯಾರದೋ ಸಲಹೆಯ ಮೇರೆಗೆ
ಬೆಳಗಿನ ವಾಕಿಂಗ್ ಪ್ರಾರಂಭಿಸಿ ಇನ್ನಷ್ಟು ರಗಳೆ.
ಕಪ್ಪಾದ ಮುಖ ಬ್ಲೀಚ್ ಮಾಡಿಸಿಕೊಂಡ ದಿನ
ಎಲ್ಲದರ ಬಗ್ಗೆ ವಿಶೇಷ ಆಸಕ್ತಿ.
ಹುಬ್ಬು ಬೆಳೆದು ಪೊದೆಯಾಗಿ ತಿದ್ದಿಸಿಕೊಳ್ಳಲೂ
ಸಮಯವಿಲ್ಲದಾಗ ಮಾತು ಮಾತಿಗೆ ಜಗಳ
ನೋವು ಸಂಪೂರ್ಣ ಸ್ವಾಧೀನಕ್ಕೆ ತೆಗೆದುಕೊಳ್ಳುತ್ತದೆ.
ದುರಂತ ನಾಯಕಿಯರು ಅಸ್ತವ್ಯಸ್ತರಾಗುತ್ತಾರಂತೆ. [೬೨]

ಈ ಕವನ 'ಆಧುನಿಕತೆ'ಗೆ ತಕ್ಕಂತೆ ತನ್ನ ಬದುಕಿನ ಕ್ರಮದಲ್ಲಿಯೂ ಕೂಡ ಮಾರ್ಪಾಡು ಹೊಂದಬೇಕಾದ ಅನಿವಾರ್ಯತೆಯನ್ನು ಎತ್ತಿಹಿಡಿಯುತ್ತಲೇ ಅದರೊಂದಿಗೆ ತನ್ನ ಇರುವಿಕೆಯನ್ನು ಕಂಡು ಕೊಳ್ಳುವ ಪ್ರಯತ್ನದಲ್ಲಿ ತೊಡಗಿರುವುದನ್ನು ಕಾಣಬಹುದು. ಆದರೆ ಈ ಬಗೆಯ ತೊಡಗುವಿಕೆಯೇ ತೊಂದರೆಯಾಗದಂತೆ ಬದುಕನ್ನು ರೂಪಿಸಿಕೊಳ್ಳಬೇಕಾಗಿರುವುದು ಕೂಡ ಅಷ್ಟೇ ಮುಖ್ಯ ಎಂಬುದನ್ನು ಈ ಕವಿತೆ ಧ್ವನಿಸುತ್ತದೆ. 'ದುರಂತ ನಾಯಕಿಯರು ಅಸ್ತವ್ಯಸ್ತರಾಗುತ್ತಾರಂತೆ' ಎನ್ನುವ ಸಾಲುಗಳು 'ದುರಂತ ನಾಯಕಿ'ಯರಾಗದಿರುವ ಕಡೆಗಿನ ಚಲನೆಯನ್ನು ಎತ್ತಿಹಿಡಿಯುತ್ತದೆ. ಇವರ ಅಮ್ಮನಿಗೆ ಕವನ ಆಧುನಿಕತೆಯನ್ನು ಮತ್ತೊಂದು ಆಯಾಮದಿಂದ ಹಿಡಿದಿಡುತ್ತದೆ. ಹಿಂದಿನ ಎಷ್ಟೋ ಬಂಧನಗಳಿಂದ ಆಧುನಿಕ ಸಾಧನ ಸಲಕರಣೆಗಳು ಹೆಣ್ಣನ್ನು ಬಿಡುಗಡೆಗೊಳಿಸಿವೆ. ಬಸಿರು, ಬಾಣಂತನ, ಮುಟ್ಟು ಇಂದು ಹೆಣ್ಣಿಗೆ ಹೊರೆಯಾಗಿಲ್ಲ. ಅವುಗಳನ್ನು ಸುಲಭವಾಗಿ ನಿಭಾಯಿಸುವ ಹತ್ತು ಹಲವು ಉಪಾಯಗಳನ್ನು ಆಧುನಿಕತೆ ತಂದೊಡ್ಡಿದೆ.

ಈಗೆಲ್ಲಾ ಮೂರು ಗಂಟೆಗೆ ಬದಲು
ಕೊಂಡಿ ಬೆಸುಗೆ ಹಾಕಿ ಇಳಬಿಡುತ್ತಾರೆ
ತೆಗೆದು ಹಾಕಲು ಸುಲಭ.
ಸಿಸೇರಿಯನ್, ಬೇಬಿ ಸಿಟಿಂಗ್, ವೆಟ್‌ಗ್ರೈಂಡಿಗ್
ಬಾವಿ ಕಟ್ಟೆಯ ನೆನಪು ಮಾಸಿ
ನೀವೇ ವಾಸಿ ಎಂದು
ಪಿಸುಗುಡುವ ವಿಸ್ಪರು
ಮೂವತ್ತು ದಿನಗಳು ಒಳಹೊರಗೆ
ಬಸಿರಿಯ ಸ್ಕೂಟರು ಸವಾರಿ
ಬಾಣಂತಿಗೆ ಐಸ್ ಕ್ರೀಂ [೮೩]

ಇಷ್ಟೆಲ್ಲಾ ಅವಕಾಶಗಳ ನಡುವೆ ಹೆಣ್ಣು ಹಿಂದಿನ 'ಹ್ಯಾಂಗ್‌ಹೋವರ್'ನಲ್ಲಿ ಸಿಲುಕಿ ನಲುಗಬೇಕಾಗಿಲ್ಲ ಎಂಬುದನ್ನು ಇವರ ಭಾಗ್ಯದ ಬಳೆಗಾರ  ಕವನ ಎತ್ತಿ ಹಿಡಿಯುತ್ತದೆ. ಅನುಕಂಪ, ಆಕ್ರಂದನ, ಸ್ವಮರುಕಗಳಿಗೆ ಅವಕಾಶವಿಲ್ಲದ ಹಾದಿಯ ಕಡೆಗಿನ ಪಯಣವನ್ನು ಇಲ್ಲಿ ಕಾಣಬಹುದು. ಸಾಂಪ್ರದಾಯಿಕ ನಂಬಿಕೆಗಳಿಂದ ಬಿಡುಗಡೆ ಪಡೆಯುವುದು, ಅದನ್ನು ತನ್ನ ಅಗತ್ಯಕ್ಕೆ, ಅನಿವಾರ್ಯತೆಗೆ ತಕ್ಕಂತೆ ಮಾರ್ಪಡಿಸುವುದು, ಎಷ್ಟು ಬೇಕೋ ಅಷ್ಟು ಸ್ವೀಕರಿಸುವುದು ಒಳಿತು ಎಂಬುದನ್ನು 'ಅಡುಗೆ ಮಾಡುತ್ತಿದ್ದೇನೆ' ಕವನ ಸಮರ್ಥವಾಗಿ ಹಿಡಿದಿಡುತ್ತದೆ. 'ಅಡುಗೆ ಮಾಡುತ್ತಿದ್ದೇನೆ ೧' ಅಡುಗೆ ಮನೆಯನ್ನು ಆವರಿಸಿರುವ ಆಧುನಿಕ ಸಾಧನ ಸಲಕರಣೆಗಳು, ಎಷ್ಟೆಲ್ಲಾ ಪರ್ಯಾಯಗಳು, ಅವುಗಳ ನಡುವೆಯೂ ಅಡುಗೆ ಮಾಡುವ ಒತ್ತಡವನ್ನು ಹೇಳುತ್ತಿದ್ದರೆ 'ಅಡುಗೆ ಮಾಡುತ್ತಿದ್ದೇನೆ ೨' ಅದನ್ನು ತನ್ನ ಅಭಿವ್ಯಕ್ತಿಯ ಭಾಗವಾಗಿಸಿಕೊಳ್ಳುವ ಜಾಣ್ಮೆಯನ್ನು ತೋರುತ್ತಾರೆ.

ಅಡುಗೆ ಮಾಡುವುದೆಂದರೆ ಬಹಳ ಇಷ್ಟ ನನಗೆ
ಹೊರ ದಾರಿ ಅದು ನನ್ನೆಲ್ಲ ಆಕ್ರೋಶಗಳಿಗೆ
ತೊಳೆದು ಸಿಪ್ಪೆ ಸುಲಿದು ಕತ್ತರಿಸಿ ಜಜ್ಜಿ ಕುಟ್ಟಿ
ಹುರಿದು ಅರೆದು ರುಬ್ಬಿ ನುರಿದು ಬಾಡಿಸಿ ಬೇಯಿಸಿ
ಹಿಚಿಕಿ ಮಸೆದು ಕೊಟ್ಟಿ ಕಲೆಸಿ
ಗಸಗಸನೆ ಕಡೆದು ಎತ್ತಿ ಹಾಕಿದರೆ ತಟ್ಟೆಗೆ
ರುಚಿರುಚಿ ಅಂತ ತನ್ನುತ್ತಾರೆ! [೮೪]

ಅಡುಗೆ ಮಾಡುವ ಕ್ರಿಯೆಯನ್ನು ತನ್ನೆಲ್ಲಾ ಸಿಟ್ಟು, ಆಕ್ರೋಶಗಳನ್ನು ವ್ಯಕ್ತಪಡಿಸುವ ಹೊರದಾರಿ ಎನ್ನುತ್ತಾರೆ.

ಮುದುಕಿಯರಿಗಿದು ಕಾಲವಲ್ಲ ಹೆಣ್ಣಿನ ಅನನ್ಯತೆಯ ಹಾದಿಯನ್ನು, ಅಸ್ಮಿತೆಯ ಹುಡುಕಾಟವನ್ನು ಮತ್ತೊಂದು ಬಗೆಯಲ್ಲಿ ಹಿಡಿದಿಡುತ್ತದೆ. 'ಮುದುಕಿಯರಿಗಿದು ಕಾಲವಲ್ಲ' ಎಂಬ ಶೀರ್ಷಿಕೆಯೇ ಯಾವ ಕಾಲವೂ ಕೂಡ ಹೆಣ್ಣಿಗೆ ಅನುಕೂಲಕರವಾಗಿಲ್ಲ ಎಂಬುದನ್ನು ಧ್ವನಿಸುತ್ತಲೇ  ಎಲ್ಲಾ ವಯೋಮಾನದ ಹೆಣ್ಣೂ ಕೂಡ ಕಾಲಕ್ಕೆ ತಕ್ಕಂತೆ ತನ್ನ ಜೀವನ ಕ್ರಮ, ಬದುಕಿನ ಅವಶ್ಯಕತೆಗಳಿಗೆ ತಕ್ಕಂತೆ ಬದಲಾಗಬೇಕಾದ ಅನಿವಾರ್ಯತೆಯನ್ನು ಈ ಕವನ ಎತ್ತಿಹಿಡಿಯುತ್ತದೆ.  ಆಧುನಿಕ ಅವಶ್ಯಕತೆಗಳಿಗೆ

ತಕ್ಕಂತೆ ಹೆಣ್ಣು ನಿರಂತರ ಪರಿವರ್ತನಾಶೀಲವಾಗಬೇಕಾಗಿರುವ ಅನಿವಾರ್ಯತೆಯನ್ನು, ಹಾಗಿದ್ದಲ್ಲಿ ಮಾತ್ರ ಬದುಕಿನೊಂದಿಗೆ ಮುನ್ನಡೆಯಬಹುದಾದ ಅವಕಾಶಗಳನ್ನು ಏಕಕಾಲಕ್ಕೆ ಈ ಕವನ ಧ್ವನಿಸುತ್ತದೆ. ಆಧುನಿಕ ಹೆಣ್ಣಿನ ಸವಾಲುಗಳನ್ನು ಅದರೆಲ್ಲಾ ಸಾಧನೆ ಮತ್ತು ಮಿತಿಗಳಾಚೆಗೆ ಹಿಡಿದಿಡುವ ಪ್ರಯತ್ನ ಇಲ್ಲದೆ. ಆಧುನಿಕತೆ ತಂದೊಡ್ಡಿದ ಸವಾಲುಗಳನ್ನು ಮಿತಿ ಎಂದು ಗುರುತಿಸದೆ ಅವೆಲ್ಲವನ್ನೂ ನಿಭಾಯಿಸುವ ಶಕ್ತಿ ಹೆಣ್ಣಿನಲ್ಲಿದೆ ಎಂಬುದರ ಕಡೆಗೆ ಇವರ ಗಮನವಿದೆ. ಆದರೆ ಪುರುಷ ಪ್ರಧಾನ ವ್ಯವಸ್ಥೆಯ ಕೀಲು ಹುನ್ನಾರಗಳು ಹೆಣ್ಣನ್ನು ಮತ್ತೊಂದು ರೀತಿಯಲ್ಲಿ ಶೋಷಿಸುತ್ತಿವೆ ಎಂಬುದನ್ನೂ ಕೂಡ ಇವರ ಕವನಗಳು ಹಿಡಿದಿಡುತ್ತವೆ. 'ರಾತ್ರಿ ನಾನು ಚಾಮುಂಡಿ ಕಳ್ಳು ಕುಡಿಯುತ್ತಾ' ಕವನ ಇದನ್ನು ಸ್ಪಷ್ಟವಾಗಿ ಹಿಡಿದಿಡುತ್ತದೆ. ಹಿಂದೆ ಹೆಣ್ಣನ್ನು ನಿಯಂತ್ರಿಸುವ, ಅವಳನ್ನು ಅಧೀನವಾಗಿಸಿಕೊಳ್ಳುವ, ಶೋಷಿಸುವ ವಿಧಾನಗಳು ನೇರವಾಗಿ, ಕಾಣುವಂತೆ ಇದ್ದರೆ ಇಂದು ಅವೆಲ್ಲವೂ ಆಧುನಿಕತೆಯ ಮುಸುಕಿನೊಳಗೆ ತೂರಿಕೊಂಡಿವೆ. ಇದನ್ನು ಗುರುತಿಸುವುದೇ ಹೆಣ್ಣಿನ ಮುಂದಿರುವ ಬಹುದೊಡ್ಡ ಸವಾಲು ಎಂಬುದನ್ನೂ ಇವರ ಕವನಗಳು ಹಿಡಿದಿಡುತ್ತವೆ. ಆದರೆ ಇವೆಲ್ಲವನ್ನೂ, ಎಲ್ಲಾ ಕಾಲಕ್ಕೂ ಮೀರುವ ಶಕ್ತಿ ಹೆಣ್ಣಿನಲ್ಲಿದೆ ಎಂಬುದರ ಕಡೆಗೆ ಗಮನ ಹಾಗೂ ಚಲನೆ ಇವರ ಕಾವ್ಯದ ಕೇಂದ್ರ ಕಾಳಜಿ.

ಪ್ರತಿಭಾ ಅಭಿವ್ಯಕ್ತಿಯ ವಿಶೇಷತೆ, ಹಾಗು ಹಿರಿಮೆ ತನಗನಿಸಿದ್ದೆಲ್ಲವನ್ನೂ ನಿರ್ಬಿಡೆ, ನಿಸ್ಸಂಕೋಚವಾಗಿ ಹೇಳಬಿಡುವ ದಿಟ್ಟತನದಿಂದ ಕೂಡಿರುವುದು. ಇಲ್ಲಿ ಹೆಣ್ಣು – ಗಂಡು, ಶ್ರೇಷ್ಟ – ಕನಿಷ್ಟ, ಶ್ಲೀಲ – ಅಶ್ಲೀಲ, ವೈಯಕ್ತಿಕ – ಸಾಮಾಜಿಕ, ಹೇಳಬೇಕಾದ್ದು – ಹೇಳಬಾರದ್ದು ಎಂಬ ಯಾವುದೇ ಭೇದ ಭಾವಗಳಿಲ್ಲದೆ ತನ್ನ ಬದುಕಿನ ದಿನನಿತ್ಯದ ಆಗುಹೋಗುಗಳೆಲ್ಲವೂ ಕಾವ್ಯದ ವಸ್ತುವಾಗಿ ಮೂಡಿಬಂದಿವೆ. ಇಲ್ಲಿ ಹೆಣ್ಣು, ಹೆಣ್ಣಿನ ದೇಹ, ಗಂಡಿನ ನೋಟಕ್ರಮ, ಲೈಂಗಿಕ ಬಯಕೆಗಳು, ದಿನ ನಿತ್ಯದ ಜಂಜಾಟ, ಹೋರಾಟ, ವ್ಯವಸ್ಥೆಯ ದ್ವಂದ್ವ ನೀತಿ, ಎಲ್ಲವೂ ಕೂಡ ಸಹಜವಾಗಿಯೇ ಕಾವ್ಯವಾಗಿವೆ. ಹಿಂದಿನಿಂದ ಯಾವುದನ್ನು ಪುರುಷ ವಲಯಗಳು ಎಂದು ನಿಗದಿಪಡಿಸಲಾಗಿತ್ತೊ, ಅವರಿಗಾಗಿಯೇ ಸೀಮಿತಗೊಳಸಲಾಗಿತ್ತೊ, ಆ ವಲಯಗಳನ್ನು ಪ್ರತಿಭಾ ಸುಲಭವಾಗಿ ಆಕ್ರಮಿಸಿ ಬಿಡುತ್ತಾರೆ. ಯಾವುದೆ ಬಗೆಯ ಅಂಜಿಕೆ, ಮುಜುಗರಗಳಿಲ್ಲದೆ ಮಾನವ ಸಹಜ ಕುತೂಹಲ, ಬಯಕೆ ಹಾಗೂ ಆಸಕ್ತಿಗಳೊಂದಿಗೆ ನೆಲೆಯೂರಿಬಿಡುತ್ತಾರೆ. ಹೆಣ್ಣಿನ ಅಭಿವ್ಯಕ್ತಿಗೆ ಸಂಬಂಧಿಸಿದಂತೆ ಕೂಡ ಪ್ರತಿಭಾ ಈ ನಿಟ್ಟಿನಲ್ಲಿ ಮುನ್ನಡೆದಿದ್ದಾರೆ. ಹೆಣ್ಣಿನ ಅಭಿವ್ಯಕ್ತಿಗೆ ಅವಕಾಶಗಳು ದೊರೆತಿರುವ ಸಂದರ್ಭದಲ್ಲಿಯೂ ಕೂಡ ಏನನ್ನು ಕುರಿತು ಬರೆಯಬೇಕು ಎಂಬ ವ್ಯವಸ್ಥೆಯ ನಿರ್ಬಂಧ, ಸಮಕಾಲೀನ ಲೇಖಕಿಯರ ಅಜಿಂಕೆ ಮುಜುಗರಗಳ ಆಚೆ ಪ್ರತಿಭಾ ಕಾವ್ಯ ನಿಲ್ಲುತ್ತದೆ ಹಾಗೂ ಇದರ ಅಧಿಕೃತತೆಯನ್ನು ಗಟ್ಟಿ ಧ್ವನಿಯಲ್ಲಿ ಸಾರಿ ಹೇಳುತ್ತದೆ.

ನಾವು ಕಚ ಕುಚಗಳ ಬಗ್ಗೆ ಬರೆಯಬಾರದು
ನೀವು ಅದನ್ನು ವಿರೂಪಗೊಳಸಬಹುದು!
ನಾವು ತೊಡೆ ಜಘನ ನಾಭಿ ಸ್ಥಳಗಳನ್ನು ಕಾಣಿಸಬಾರದು

ನೀವದನ್ನು ಅತಿಕ್ರಮಿಸಿ ಸ್ಥಾಪಿತರಾಗಬಹುದು! [೮೫]

ಎಂದು ಲೇವಡಿ ಮಾಡುತ್ತಲೇ ಪುರುಷ ಅಭಿವ್ಯಕ್ತಿಗೆ, ಅವರ ಅಹಂಮ್ಮಿಕೆಗೆ ಸವಾಲೆಸೆಯುತ್ತಾರೆ. ಮುಂದುವರಿದು ಹೆಣ್ಣಿನ ದೇಹವನ್ನೆ ಕಾರಣವಾಗಿಸಿಕೊಂಡು ನಿರಂತರವಾಗಿ ಅವಳನ್ನು

ನಿರ್ಬಂಧಿಸಬಹುದೆಂಬ ಗಂಡಿನ ಭ್ರಮೆ ಮತ್ತು ಅಹಂಮ್ಮಿಕೆ
ಎಂದು ಭ್ರಮಿಸಿ ನಿಮ್ಮ ಪುರುಷತ್ವದ ಅಹಮ್ಮಿನಲ್ಲಿ
ಹೀಗೆ ತೇಲಿದರೆ ಗಾಳಿ ತುಂಬಿದ ಬಲೂನಿನಲ್ಲಿ
ಬಹಳ ಬೇಗ ನೆಲಕ್ಕಿಳಿಯುವಿರಿ ಚುಚ್ಚಿ ನಿಜದ ಸೂಜಿ
ಸ್ರಾವ ನಿಂತರೂ ಹೆಣ್ಣು ಹೆಣ್ಣೇ [೬]

ಎಂದು ಪೆಟ್ಟು ನೀಡುತ್ತಾರೆ. ಮತ್ತು ಸದಾ ತನ್ನ ಅಸ್ತಿತ್ವವನ್ನು ಕಾಯ್ದುಕೊಳ್ಳುವ ಹೆಣ್ಣಿನ, ಹೆಣ್ತನದ ಹಿರಿಮೆಯನ್ನು ಎತ್ತಿಹಿಡಿಯುತ್ತಾರೆ.

ಪ್ರತಿಭಾ ಕವನಗಳ ವಿಶೇಷತೆ ಹೆಣ್ಣಿನ ಭಾಷೆ, ಭಾವ, ಬಂಧ, ಸ್ಪಂದನ, ಪ್ರತಿಸ್ಪಂಧನ ಎಲ್ಲವೂ ಭಿನ್ನವಾಗಿರುವುದನ್ನೂ, ಅದನ್ನು ಗ್ರಹಿಸುವ ವ್ಯವಸ್ಥೆಯ ಕ್ರಮ ಕೂಡ ಭಿನ್ನತೆಯಿಂದ ಕೂಡಿರುವುದನ್ನು ಹಿಡಿದಿಡುತ್ತವೆ. ಮತ್ತು ಪ್ರತಿಭಾ ಕಾವ್ಯದ ಭಾಷೆ ಕೂಡ ಅದನ್ನು ಸಮರ್ಥವಾಗಿ ಹಿಡಿದಿಡುತ್ತದೆ. ಇವರ ಕವನಗಳ ಮತ್ತೊಂದು ವಿಶೇಷತೆ ಚಿತ್ರಕ ಶಕ್ತಿಗೆ ಸಂಬಂದಿಸಿದ್ದು. ಅದನ್ನು ಹೀಗೆ ಎಂದು ವಿವರಿಸಲಸಾಧ್ಯವಾದ ಭಾವವೊಂದು ಪ್ರತಿಭಾರವರ ಕವನಗಳ ಓದಿನಿಂದ ಲಭ್ಯವಾಗುತ್ತದೆ. ಅವರ 'ಹೆಣ್ಣು ಹುಲಿ', 'ಪತಿವ್ರತೆ ಅಲ್ಲ' ಮುಂತಾದ ಕವನಗಳು ಓದಿನ ಜೊತೆಯಲ್ಲಿಯೇ ವ್ಯವಸ್ಥೆಗೆ ತೀವ್ರವಾಗಿ ಪ್ರತಿರೋಧವನ್ನು ಒಡ್ಡುವ ಹೆಣ್ಣಿನ ಚಿತ್ರಣ ಒಂದನ್ನು ಕಣ್ಮುಂದೆ ತಂದು ನಿಲ್ಲಿಸಿ ಬಿಡುತ್ತದೆ.

ಬದುಕಿನ ಬಗೆಗೆ ಅಪಾರವಾದ ಪ್ರೀತಿ, ಎಲ್ಲಾ ಸಂಕಷ್ಟಗಳ ನಡುವೆಯೂ ಬದುಕನ್ನು ಕಟ್ಟಿಕೊಳ್ಳುವ, ಅದನ್ನು ಸುಂದರವಾಗಿಸಿಕೊಳ್ಳುವ ಹಂಬಲ ಪ್ರತಿಭಾರವರ ಎಲ್ಲಾ ಕವನಗಳ ಮೂಲ ಆಶಯ. ಬದುಕಿನ ಬಗೆಗಿನ ತುಡಿತ ಮತ್ತು ಪ್ರೀತಿ ಇವರ ಕವನಗಳಲ್ಲಿ ಮತ್ತೆ ಮತ್ತೆ ಚರ್ಚೆಗೆ ಒಳಪಡುತ್ತವೆ. ಬದುಕಿನ ಪಯಣದಲ್ಲಿ ನೋವು, ನಲಿವು , ಸೋಲು ಗೆಲುವು, ಪ್ರೀತಿ ದ್ವೇಷಗಳ ನಡುವೆಯೂ ಹೆಣ್ಣು ಗಂಡು ಒಟ್ಟಿಗೆ ಬದುಕುವ ಬಯಕೆ ಹಾಗೂ ಅನಿವಾರ್ಯತೆಯನ್ನು ಇವರ ಕವನಗಳು ಹಿಡಿದಿಡುತ್ತವೆ. ಲೈಂಗಿಕತೆ, ಕಾಮ, ದೇಹದ ಸಹಜ ಬಯಕೆಗಳು ಹೆಣ್ಣು ಗಂಡನ್ನು ಮತ್ತೆ ಮತ್ತೆ ಒಬ್ಬರಿಗೊಬ್ಬರು ಆಕರ್ಷಿಸುವಂತೆ ಮಾಡುತ್ತವೆ. ಇದು ಪ್ರಕೃತಿ ಸಹಜ ನಿಯಮ. ಯಾವ ತಡೆಗೋಡೆಗಳೂ ಇದನ್ನು ನಿಯಂತ್ರಿಸಲಾರವು, ನಿರ್ಬಂಧಿಸಲಾರವು ಎನ್ನುವುದನ್ನು ಇವರ ಕವನಗಳು ಮತ್ತೆ ಮತ್ತೆ ಕಟ್ಟಿಕೊಡುತ್ತವೆ.

ಮಧ್ಯಮ ವರ್ಗದ ನಗರ ಕೇಂದ್ರಿತ ಹೆಣ್ಣಿನ ಭಿನ್ನ ಮುಖಗಳ ಅನಾವರಣ ಪ್ರತಿಭಾರವರ ಕವನಗಳಲ್ಲಿದೆ. ಹೆಣ್ಣಿನ ಬದುಕಿನ ಪಲ್ಲಟಗಳನ್ನೂ, ಕಾಲದ ಚಲನೆಯನ್ನೂ ಈ ಕವನಗಳು ಒಟ್ಟಿಗೆ ಹಿಡಿದಿಡುತ್ತವೆ. ಇವರ ಕವನಗಳು ಕಾಲದ ಬದಲಾವಣೆಯೊಂದಿಗೆ ಗಂಡು ಹೆಣ್ಣಿನ ಸಂಬಂಧಗಳು ಬದಲಾಗುತ್ತಿರುವ ಬಗೆಗಳನ್ನೂ, ಕಾಲ ಬದಲಾದಂತೆ ಹೆಣ್ಣಿನ ಗ್ರಹಿಕೆ ಹಾಗೂ ಅಭಿವ್ಯಕ್ತಿಯಲ್ಲಿ ಉಂಟಾದ

ಪಲ್ಲಟಗಳನ್ನು, ಅದರ ಭಿನ್ನ ಧ್ವನಿಗಳನ್ನು ಹಿಡಿದಿಡುತ್ತವೆ. ವ್ಯವಸ್ಥೆಯ ಬಗೆಗಿನ ಸ್ಪಷ್ಟವಾದ ಅರಿವು, ಆ ಹುನ್ನಾರಗಳನ್ನು ಬೇಧಿಸಬಲ್ಲ ಚಾಕಚಕ್ಯತೆ, ಜಾಣ್ಮೆ ಹೆಣ್ಣಿನಲ್ಲಿ ಅಡಕವಾಗಿರುವುದನ್ನು ಇವರ ಕವನಗಳಲ್ಲಿ ಗುರುತಿಸಬಹುದು.

## ೮.೪ ವೈದೇಹಿ

ವೈದೇಹಿ ಕನ್ನಡ ಕಾವ್ಯ ಕ್ಷೇತ್ರಕ್ಕೆ ನೀಡಿರುವ ಕೊಡುಗೆ ವಿಶಿಷ್ಟವಾದದ್ದು. ಸ್ತ್ರೀ ಸಂವೇದನೆಯ ವಿಭಿನ್ನ ಚಹರೆಗಳನ್ನು ಸಂಸ್ಕೃತಿಯ ಒಳ ವಿವರಗಳ ಮೂಲಕವೇ ಗುರುತಿಸಿ ಅದಕ್ಕೊಂದು ವ್ಯಾಪಕ ಚಿತ್ತಿಯನ್ನು ನೀಡುವ ವಿಧಾನ ಇವರ ಬರವಣಿಗೆಯ ಕೇಂದ್ರ ಕಾಳಜಿ. ಆಧುನಿಕ ಸಂದರ್ಭದಲ್ಲಿ ಸ್ತ್ರೀವಾದಿ ಚಿಂತನೆ ಎಂಬುದು ಕಾಲ, ದೇಶ, ಸಂದರ್ಭಾನುಸಾರವಾಗಿ ಅರ್ಥೈಸಲ್ಪಡುತ್ತಿರುವಾಗ ವೈದೇಹಿ ತಮ್ಮ ಸಾಹಿತ್ಯದ ಮೂಲಕ ಜಾಗತಿಕ ಸ್ತ್ರೀವಾದಿ ಚಿಂತನೆಗಳಿಗೆ ಮುಖಾಮುಖಿಯಾಗುವ ಬಗೆ ವಿಶಿಷ್ಟವಾದದ್ದು. ಇದುವರೆಗೂ ಯಾವುದನ್ನು ಹೆಣ್ಣಿನ ಬಂಧನದ ಕ್ಷೇತ್ರಗಳೆಂದು, ಅವಳ ಮಿತಿಗಳೆಂದು ಗುರುತಿಸಲಾಗುತ್ತಿತ್ತೋ ಆ ಅಂಶಗಳ ಮೂಲಕವೇ ಹೆಣ್ಣಿನ ಅಸ್ತಿತ್ವಕ್ಕೊಂದು ಅಧಿಕೃತ ಮಾನ್ಯತೆ ತಂದುಕೊಡುವ ಪ್ರಯತ್ನದಲ್ಲಿ ವೈದೇಹಿಯವರ ಬರವಣಿಗೆ ಸಾಗಿದೆ. ಇವರ ಕಾವ್ಯ ಹೆಣ್ಣಿನ ಬದುಕಿನ ವಿವರಗಳನ್ನು, ಹೋರಾಟದ ಕ್ರಮವನ್ನೂ, ಅವಳ ಅನನ್ಯತೆಯ ವಿನ್ಯಾಸಗಳನ್ನು ಅತ್ಯಂತ ಸಹಜ, ನಿತ್ಯ ಕರ್ಮದ ಭಾಗ ಎಂಬಂತೆ ತೆರೆದಿಡುತ್ತವೆ.

ಪಿತೃ ಪ್ರಧಾನ ವ್ಯವಸ್ಥೆ ಹಿಂದಿನಿಂದಲೂ ಹೆಣ್ಣನ್ನು ಅಡುಗೆಮನೆ, ತಾಯ್ತನ, ಸತೀತ್ವ, ಪಾತಿವ್ರತ್ಯ ಮುಂತಾದ ಮೌಲ್ಯಗಳೊಂದಿಗೆ ಗುರುತಿಸುತ್ತಿದೆ. ಹಾಗೂ ಆ ಮೂಲಕ ಹೆಣ್ಣಿನ ಬದುಕು, ಬಯಕೆ, ಅಭಿವ್ಯಕ್ತಿ ಎಲ್ಲವೂ ಕೂಡ ಪುರುಷನಿಷ್ಟ ಹಾಗೂ ಪುರುಷಾಪೇಕ್ಷಿತ, ಮೌಲ್ಯವ್ಯವಸ್ಥೆಗೆ ಪೂರಕವಾಗಿರಬೇಕಾದ ಅನಿವಾರ್ಯತೆಯನ್ನು ನಿರ್ಮಿಸಿವೆ. ಈ ಮೂಲಕ ಹೆಣ್ಣಿನ ಬದುಕಿಗೊಂದು ನಿರ್ದಿಷ್ಠ ಚೌಕಟ್ಟನ್ನು ವಿಧಿಸಿ, ಹೆಣ್ಣು ಅದರಿಂದ ಹೊರಬರದಂತೆ ಹಲವು ನಿರ್ಬಂಧಗಳನ್ನು ಹೇರಿದೆ. ಆದರೆ ಮೇಲ್ನೋಟಕ್ಕೆ ಹೆಣ್ಣು ಪುರುಷಾಪೇಕ್ಷಿತ ಕಾರ್ಯಮಾದರಿಗೆ ಒಳಪಟ್ಟಂತೆ ಕಂಡುಬಂದರೂ, ಅಂತರ್ಯದ ಒಳ ತುಡಿತಗಳು ತನ್ನ ಅಸ್ತಿತ್ವಕ್ಕೊಂದು ಮಾನ್ಯತೆಯನ್ನು ಪಡೆದುಕೊಳ್ಳುವ ಪ್ರಯತ್ನದಲ್ಲಿ ನಿರತವಾಗಿರುತ್ತವೆ. ಈ ಬಗೆಯ ಒಳ ತುಡಿತ ಹಾಗೂ ತನ್ನೊಳಗಿನ ಶಕ್ತಿಯ ಅವಿಷ್ಕಾರವೇ ವೈದೇಹಿ ಕಾವ್ಯದ ಮುಖ್ಯ ಕಾಳಜಿಯಾಗಿದೆ.

ವೈದೇಹಿ ತಮ್ಮ ಕಾವ್ಯದಲ್ಲಿ ಹೆಣ್ಣಿನ ಜೀವನ ವಿಧಾನವನ್ನು ಸಾಂಪ್ರದಾಯಿಕ ಮೌಲ್ಯವ್ಯವಸ್ಥೆಗೆ ಮುಖಾಮುಖಿಯಾಗಿಸುವುದರೊಂದಿಗೆ ಹೆಣ್ಣಿನ ಅನನ್ಯತೆಯ ಹತ್ತುಹಲವು ಮಾದರಿಗಳನ್ನು ಪರಿಚಯಿಸುತ್ತಾರೆ. ಇವರ ಕಾವ್ಯದಲ್ಲಿ ವ್ಯವಸ್ಥೆಯ ಬಗೆಗಿನ ಪ್ರೀತಿ, ಸಂದೇಹ, ತಕರಾರು ಹಾಗೂ

ಆತ್ಮವಿಶ್ವಾಸ ಎಲ್ಲವೂ ಕೂಡ ಹೆಣ್ಣಿನ ಸ್ವಘನತೆಯನ್ನು ಕಾಯ್ದುಕೊಳ್ಳುವಲ್ಲಿ ಸಹಕಾರಿಯಾಗುತ್ತವೆ. ಇವು ಆಕ್ರೋಶ, ಆರ್ಭಟ, ಅಟ್ಟಹಾಸಗಳಲ್ಲದೆ ಮಂಜಿನಂತೆ ಶೀತಲವೂ, ಹೆಚ್ಚು ಕಾಲ ಸಹಿಸಲಸಾಧ್ಯವಾದ ಪ್ರತಿರೋಧ ಕಟಕಿ, ವ್ಯಂಗ್ಯ, ವಿನೋದದ ಮೂಲಕ ವ್ಯವಸ್ಥೆಯೊಂದಿಗೆ ಮುಖಾಮುಖಿಯಾಗುತ್ತವೆ.

ಪುರುಷ ಪ್ರಧಾನ ವ್ಯವಸ್ಥೆ ಹೆಣ್ಣನ್ನು ಬಂಧನದಲ್ಲಿಡುವ, ತನ್ನ ಅಧೀನತೆಗೆ ಒಳಪಡಿಸಿಕೊಳ್ಳುವ ಹುನ್ನಾರಗಳನ್ನು ನಿರಂತರವಾಗಿ ಹೆಣೆಯುತ್ತಿದ್ದರೂ ಕೂಡ ಅವಳನ್ನು ಸಂಪೂರ್ಣ ಅಧೀನವಾಗಿಸಿಕೊಳ್ಳಲು ಸಾಧ್ಯವಾಗಿಲ್ಲದಿರುವುದು ಹೆಣ್ಣಿನಲ್ಲಿರುವ ಶಕ್ತಿಯ ಸಂಕೇತವಾಗಿವೆ. ವೈದೇಹಿಯವರ ಕವನಗಳ ಸ್ತ್ರೀ ಪಾತ್ರಗಳು ತನ್ನೊಳಗಿನ ಈ ಶಕ್ತಿಯನ್ನು ಗುರುತಿಸಿಕೊಂಡವರಾಗಿದ್ದು, ಪುರುಷ ಪ್ರಭುತ್ವದ ಚೌಕಟ್ಟಿಗೆ ಅಷ್ಟು ಸುಲಭವಾಗಿ ಒಳಪಡುವವರಲ್ಲ. ತನ್ನ ಮಿತಿಯೊಳಗೆ ಕನಸನ್ನು ಕಾಣುವ, ಎಲ್ಲಾ ಬಗೆಯ ಸಂಕಟ, ಸಂಕಷ್ಟಗಳನ್ನು ಮೆಟ್ಟಿ ನಿಲ್ಲುವ ಧೈರ್ಯ ಇವರಲ್ಲಿ ಅಂತರ್ಗತವಾಗಿವೆ. ವೈದೇಹಿಯವರ ಕವನಗಳು ಹೆಣ್ಣಿನ ಅಂತರ್ಗತ ಶಕ್ತಿ, ಸಾಮರ್ಥ್ಯವನ್ನು ಮತ್ತೆ ಮತ್ತೆ ಚರ್ಚೆಗೆ ಒಳಪಡಿಸುತ್ತವೆ.

ಹೆಣ್ಣಿನ ಅಭಿವ್ಯಕ್ತಿಯನ್ನು ಎರಡನೆಯ ದರ್ಜೆಯದೆಂದು ಪರಿಗಣಿಸುವ ಪುರುಷ ಪ್ರಭುತ್ವ ಹಿಂದಿನಿಂದಲೂ ಹೆಣ್ಣಿನ ಅಭಿವ್ಯಕ್ತಿಯನ್ನು ನಿರ್ಲಕ್ಷ್ಯಕ್ಕೊಳಪಡಿಸಿದೆ. ಮೊದಲ ಘಟ್ಟದ ಬರಹಗಾರ್ತಿಯರು ಅಭಿವ್ಯಕ್ತಿ ಮಾಧ್ಯಮ, ಭಾಷೆ, ವಿಷಯ, ವಿಧಾನಕ್ಕೆ ಸಂಬಂಧಿಸಿದಂತೆ ಹಲವು ಗೊಂದಲಗಳನ್ನು ಎದುರಿಸಬೇಕಾಯಿತು. ಈ ಬಗೆಯ ಗೊಂದಲಗಳನ್ನು ಪುರುಷ ಪ್ರಧಾನ ವ್ಯವಸ್ಥೆ ಮಹಿಳಾ ಅಭಿವ್ಯಕ್ತಿಯ ಮಿತಿಗಳೆಂದೇ ಅರ್ಥೈಸಿತು. ಇದರಿಂದಾಗಿ ಆರಂಭದ ಲೇಖಕಿಯರ ಅಭಿವ್ಯಕ್ತಿ ಕಟುಟೀಕೆಗೆ ಗುರಿಯಾಗಬೇಕಾಯಿತು. ಅನಂತರದ ಬರಹಗಾರ್ತಿಯರು ತಮ್ಮ ಅನುಭವಗಳ ವಿಶೇಷತೆಯನ್ನು ಎತ್ತಿಹಿಡಿಯುವ ಮೂಲಕ ಅವೂ ಕೂಡ ಮುಖ್ಯ ಎಂಬ ಅಂಶವನ್ನು ಪ್ರಧಾನವಾಹಿನಿಯ ಗಮನಕ್ಕೆ ತರಲು ಪ್ರಯತ್ನಿಸಿದರು. ವೈದೇಹಿಯವರ ಬರೆವಣಿಗೆ ವಿಶೇಷವಾಗಿ ಹೆಣ್ಣಿನ ಅನುಭವಗಳೆಲ್ಲವೂ ಮುಖ್ಯ ಎನ್ನುವುದರೊಂದಿಗೆ, ಈ ಬಗೆಯ ಅನುಭವಗಳು ಹೆಣ್ಣು ಮಾತ್ರ ಪಡೆಯಬಹುದಾದದ್ದು ಎಂಬುದರ ಕಡೆಗೆ ಗಮನಹರಿಸುತ್ತವೆ. ಅಲ್ಲದೆ ಇಂತಹ ಅನುಭವಗಳನ್ನು ಪಡೆಯುವ ಹಾಗೂ ಅದನ್ನು ಎದುರಿಸುವ ಸಾಮರ್ಥ್ಯ ಕೇವಲ ಹೆಣ್ಣಿನಲ್ಲಿ ಮಾತ್ರ ಇದೆ ಎಂಬುದನ್ನೆ ಒತ್ತಿ ಹೇಳುತ್ತವೆ.

ಹೆಣ್ಣಿನ ಅನುಭವಗಳು ಅಡುಗೆಮನೆ ಲೋಕಕಕ್ಕಷ್ಟೇ ಸೀಮಿತಗೊಂಡಿದ್ದರೂ ಆ ಅಡುಗೆಮನೆಯ ಮೂಲಕವೇ ತನ್ನ ಅಸ್ಮಿತೆಯನ್ನು ಕಂಡುಕೊಳ್ಳುವ **ಅಡುಗೆ ಮನೆ ಹುಡುಗಿ**, ಎಂತಹ ಸಂಕಷ್ಟದಲ್ಲಿಯೂ ತನ್ನ ತನವನ್ನು ಬಿಟ್ಟುಕೊಡದ **ಆರ್ದ್ರ ಗರ್ವದ ಗೌರಿ**, ಲೋಕದ ಜಂಜಡಗಳನ್ನು ವಿಸ್ಮಯ ಕಣ್ಣುಗಳಿಂದ ನೋಡುವ **ಮುಗುದೆ** ವೈದೇಹಿ ಕಾವ್ಯದ ನಾಯಕಿಯರು.

ವೈದೇಹಿಯವರ 'ತಿಳಿದವರೇ ಹೇಳಿ' ಕವನ ಹಲವು ದೃಷ್ಟಿಯಿಂದ ಮಹತ್ವವಾದದ್ದಾಗಿದೆ. ಈ ಕವನ ಸ್ತ್ರೀ ಸಂವೇದನೆಯ ವೈಶಿಷ್ಟತೆಯನ್ನೂ, ಜೊತೆಗೆ ಆ ಮೂಲಕವಾಗಿಯೇ ಅವಳು ಪಡೆಯಬಹುದಾದ ಅನನ್ಯತೆಯನ್ನೂ ಎತ್ತಿ ಹಿಡಿಯುತ್ತದೆ. 'ತಿಳಿದವರೇ ಹೇಳಿ' ಕವನದಲ್ಲಿ ವ್ಯಕ್ತವಾಗುವ ತಿಳಿಸಾರಿನ ವಿವರಗಳು ಏಕಕಾಲಕ್ಕೆ ಮಹಿಳಾ ಅನುಭವ, ಅಭಿವ್ಯಕ್ತಿಯನ್ನು ಪುರುಷಾನುಭವ ಹಾಗೂ ಅಭಿವ್ಯಕ್ತಿಗೆ ಮುಖಾ ಮುಖಿಯಾಗಿಸುವುದರೊಂದಿಗೆ, ಹೆಣ್ಣಿನ ಅನುಭವದ ಅಧಿಕೃತತೆಯನ್ನೂ, ಅನನ್ಯತೆಯನ್ನೂ ಸಾಬೀತು ಪಡಿಸುತ್ತದೆ.

ತಿಳಿಸಾರು ಎಂದರೆ ಏನೆಂದು ಕೊಂಡಿರಿ
ಅದಕ್ಕೂ ಬೇಕು ಒಳಗೊಂದು
ಜಲತತ್ವ – ಗಂಧತತ್ವ –
ಕುದಿದು ಹದಗೊಂಡ ಸಾರತತ್ವ [೬೭]

ಇಲ್ಲಿ ತಿಳಿಸಾರಿನ ತಾಳಿಕೆ ಬಾಳಿಕೆಯನ್ನೂ, ಅದನ್ನು ತಯಾರಿಸಲು ಬೇಕಾದ ನೈಪುಣ್ಯತೆಯನ್ನು ಸಾಬೀತು ಪಡಿಸುತ್ತಲೇ,

ನಂಗದೆಯೂ ನಂಗದಂತಿದ್ದ ಕೆಂಡದೊಲೆಯ ಮೇಲೆ
ಕುದಿಕುದಿದು ಬತ್ತಿ
ರಾತ್ರಿಯಾದರೂ ಹಳಸದೆ! [೬೮]

ಇರುವ ತಿಳಿಸಾರಿನ ವಿಶೇಷತೆಯನ್ನೂ ಕೂಡ ಎತ್ತಿ ಹಿಡಿಯುತ್ತದೆ. ತಿಳಿಸಾರಿನ ವಿಶೇಷಣ ಕೆಂಡದೊಲೆಯ ಮೇಲೆ ಬದುಕುತ್ತಿರುವ ಹೆಣ್ಣಿನ ಜೀವನದ, ಅನನ್ಯ ತಾಳಿಕೆಯ, ಅನೇಕ ಸಂಕಷ್ಟಗಳ ನಡುವೆಯೂ 'ಹಳಸದೇ' ಜೀವಂತವಾಗಿಸಿರಿಕೊಳ್ಳುವ ಹೆಣ್ಣಿನ ಬದುಕಿನ ಶಕ್ತಿಯ ವಿಶೇಷಣ ಕೂಡ ಆಗಿದೆ. ಮುಂದುವರೆದು

ಕಾವ್ಯದ ಬಗ್ಗೆ ದೊಡ್ಡಕೆ ತಿಳಿದವರೇ
ಹೇಳಿ. ಗೊತ್ತೇ ತಿಳಿಸಾರು ನಿಮಗೆ?
ಕ್ಷಮಿಸಿ, ಗೊತ್ತಿಲ್ಲ ಕಾವ್ಯ ನನಗೆ. [೬೯]

ಎನ್ನುವಲ್ಲಿ ವ್ಯಕ್ತವಾಗಿರುವ ದೃಢತೆ, ಆತ್ಮವಿಶ್ವಾಸ ಪುರುಷ ಅಪೇಕ್ಷಿತ 'ಕಾವ್ಯ ಕ್ರಮ'ವನ್ನು ತಿಳಿಯಬೇಕಾದ ಅವಶ್ಯಕತೆಯನ್ನು ಸ್ಪಷ್ಟವಾಗಿ ನಿರಾಕರಿಸುತ್ತಲೇ, ತನ್ನ ತಿಳಿವಿನ ಬಗೆಗೆ ಹಿರಿಮೆಯನ್ನೂ ಕೂಡ ಹೊಂದಿದೆ. ಅದನ್ನೂ ಮೀರಿ ವೈದೇಹಿ ಕಾವ್ಯಕಟ್ಟುವ ಕಲೆಯನ್ನು ಹೆಣ್ಣಿನ ಸಹಜ ಅಭಿವ್ಯಕ್ತಿ ಎಂದು ಗುರುತಿಸುತ್ತಾರೆ. ಯಾವುದನ್ನು ಪುರುಷ ವ್ಯವಸ್ಥೆ ಕಲೆಯ ಹೆಸರಿನಲ್ಲಿ, ಅಭಿವ್ಯಕ್ತಿಯ ಹೆಸರಿನಲ್ಲಿ ತನ್ನ ಹಿರಿಮೆಯನ್ನು ಸಂಸ್ಥಾಪಿಸಲು ಹೆಣಗುತ್ತಿದೆಯೋ ಅದು ಹೆಣ್ಣಿನ ಬದುಕಿನ ಕ್ರಮದಲ್ಲಿಯೇ ಅಂತರ್ಗತವಾಗಿದೆ ಎನ್ನುತ್ತಾರೆ. ತಿಳಿಸಾರಿನ ತಯಾರಿ ಕೂಡ ಕಾವ್ಯ ರಚನೆಯಷ್ಟೇ ತಯಾರಿ ಮತ್ತು ಶ್ರಮವನ್ನು ಅಪೇಕ್ಷಿಸುವಂತಹದ್ದು ಎಂಬುದನ್ನು ತಿಳಿಸಲು ಪ್ರಯತ್ನಿಸುತ್ತದೆ. ಒಂದು ಕಡೆ ಕಾವ್ಯ ಮತ್ತು ತಿಳಿಸಾರಿನ ಸೃಜನ ಕ್ರಿಯೆಯ ಹೋಲಿಕೆ ಇದ್ದರೆ ಇನ್ನೊಂದು ಹಂತದಲ್ಲಿ ತಿಳಿಸಾರು ಮತ್ತು ಮಾಂಸದಡುಗೆಯ ತಾಳಿಕೆ ಬಾಳಿಕೆಯ ಪ್ರಶ್ನೆ

ಮುಂದಾಗುತ್ತದೆ. ಗಟ್ಟಿಯಾದ, ವಿಶೇಷವಾದ, ಮಾಂಸದುಡುಗೆಯ ಮುಂದೆ ತಿಳಿಸಾರು 'ತಿಳಿ' ಎನಿಸಬಹುದಾದರೂ ಅದರ ವಿಶಿಷ್ಟತೆ ಇದಕ್ಕೆ ಬರುಲು ಸಾಧ್ಯವಿಲ್ಲ ಎಂಬ ಎಚ್ಚರಿಕೆಯನ್ನು ಕೂಡ ನೀಡುತ್ತದೆ. ಹಾಗೂ ಬಾಳಿಕೆಯ ದೃಷ್ಟಿಯಿಂದ ಮಾಂಸದಡುಗೆಗಿಂತ ತಿಳಿಸಾರೇ ಉತ್ತಮ ಎನ್ನುವ ಮೂಲಕ ಪುರುಷ ಪ್ರಧಾನ ಸಾಹಿತ್ಯದ ಮುಂದೆ 'ತೆಳು' ಎನ್ನಬಹುದಾದ ಮಹಿಳಾ ಅಭಿವ್ಯಕ್ತಿ ಕೂಡ ಅಷ್ಟೆ ಮುಖ್ಯವಾದದ್ದು ಎಂಬುದನ್ನು ತಿಳಿಸುತ್ತದೆ. 'ಕಾವ್ಯದ ಬಗ್ಗೆ ದೊಡ್ಡಕೆ ತಿಳಿದವರೆ ಹೇಳಿ' ಎಂಬುದು ಸಾಂಪ್ರದಾಯಿಕ ಸಾಮಾಜಿಕ ವ್ಯವಸ್ಥೆಯಲ್ಲಿ ಕಾವ್ಯವನ್ನು ಸೃಜನಶೀಲತೆಯ 'ಶ್ರೇಷ್ಟ' ಅಭಿವ್ಯಕ್ತಿಯಂತಲೂ ಅಡುಗೆ ಮಾಡುವುದನ್ನು ಸಹಜ ಅಥವಾ ನಗಣ್ಯ ಎಂದು ಪರಿಗಣಿಸುವ ಕ್ರಮದ ಹಿಂದಿರುವ ಲಿಂಗರಾಜಕಾರಣದ ಧೋರಣೆಗೆ ಮುಖಾಮುಖಿಯಾಗುವ ಬಗೆಯನ್ನು ಕಾಣಬಹುದು. ' ಗೊತ್ತೇ ನಿಮಗೆ ತಿಳಿಸಾರು?' ಎಂಬುದು ತೆಳು ಹಾಸ್ಯದ, ಲೇವಡಿಯ ವಿಧಾನದ್ದಾದರೂ ಪುರುಷಪ್ರಧಾನ ವ್ಯವಸ್ಥೆಯೊಂದಿಗೆ ನಡೆಸಬಹುದಾದ ಆರೋಗ್ಯಕರವಾದ ಸಂವಾದದ ಮಾದರಿಯೊಂದನ್ನು ತೆರೆದಿಡುತ್ತದೆ. ಕಾವ್ಯದ ಬಗೆಗಿನ ಅರಿವಿನ ಕೊರತೆಯಷ್ಟೇ ತಿಳಿಸಾರಿನ ಬಗೆಗಿನ ತಿಳಿವು ಕೂಡ ಮುಖ್ಯವಾದದ್ದು.

ಮುಂದುವರಿದ ಹಂತದಲ್ಲಿ ಈ ಕವನ ಪುರುಷ ಪ್ರಧಾನ ವ್ಯವಸ್ಥೆಯೊಂದಿಗಿನ ಮುಖಾಮುಖಿ ಹಾಗೂ ಮಹಿಳಾ ಸಂವೇದನೆಯ ಅನನ್ಯತೆಯನ್ನು ಒಟ್ಟಿಗೆ ಸಾಬೀತು ಪಡಿಸಲು ಪ್ರಯತ್ನಿಸುತ್ತದೆ. 'ಕ್ಷಮಿಸಿ ಕಾವ್ಯ ಗೊತ್ತಿಲ್ಲ ನನಗೆ' ಎಂಬುದು ನಿಮಗೆ ತಿಳಿಸಾರಿನ ಬಗ್ಗೆ ತಿಳಿಯುವ ಆಸಕ್ತಿ ಅಥವಾ ಸ್ತ್ರೀ ಸಂವೇದನೆ ಅಮುಖ್ಯ ಎನಿಸುವುದಾದರೆ ನನಗೆ ಕಾವ್ಯದ ಬಗೆಗಿನ ತಿಳುವಳಿಕೆಯೂ ಕೂಡ ಅನಾವಶ್ಯಕ ಎನ್ನುವ ಮೂಲಕ ಸ್ತ್ರೀ ಸಂವೇದನೆಗೆ ಅಧಿಕೃತತೆಯನ್ನು ಒದಗಿಸುವ, ಅದಕ್ಕೊಂದು ಮಾನ್ಯತೆಯನ್ನು ನೀಡುವ ಪ್ರಯತ್ನವನ್ನು ಕಾಣಬಹುದು. ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ ನೀವು ಪ್ರಯತ್ನ ಪೂರ್ವಕವಾಗಿ ಸಿದ್ಧಿಸಿಕೊಂಡಿರುವ ಕಾವ್ಯ ಕಲೆ ಹೆಣ್ಣಿನಲ್ಲಿ ಅಂತರ್ಗತವಾಗಿ, ಬದುಕಿನ ಭಾಗವಾಗಿ ರೂಪುಗೊಂಡಿದೆ ಎನ್ನುತ್ತಾರೆ. ಅವರ ಹಾಡುವುದೆಂದರೆ, ಮಾಡು ----- , ಮುಂತಾದ ಕವನಗಳು ಹೆಣ್ಣಿನ ಕಾವ್ಯದ ವಸ್ತು, ಅಭಿವ್ಯಕ್ತಿ ವಿಧಾನಗಳ ಹಿಂದಿನ ಸಹಜ ಕ್ರಿಯೆಯನ್ನು ಕುರಿತು ಮಾತನಾಡುತ್ತವೆ.

ಹಾಡಿಗೆಲ್ಲಿದೆ ಕೊರತೆ ನಮಗೆ ನಾರಿಯರಿಗೆ
ಬೀಸಿ ತೂಗಲು ಪುಟ್ಟ ಕೂಸುಮರಿಯ ತೊದಲು
ನುಡಿಯೊಂದೆ ಸಾಲದೆ, ಕಡೆವಾಯಿ ನಗೆಯೊಂದೆ ಸಾಲದೆ
ಹಾಡು ಹೊಮ್ಮುವ ಸಣ್ಣ ಉದಾರಣೆಗೆ ೧
'ಕಟ್ಟ'ಲಾಗದು ಹಾಡನೆಂದಿಗೂ
ಹಾಡೆಂದರೇನು ಕಾಗದದ ಕುಸುಮವೆ?
ಕತ್ತರಿಸಿ ಅಂಟಿನ ನಂಟು ಸವರಿ
ಸರಿಗೆ ಸುರಿದು ಎಸಳು ಬಿಗಿದು ಬಲವಂತ
ಹೂದಾನಿಯಲಿ ತುರುಕಿ ಮೂಲೆಗಿಡಲು? [೫೦]

"ಹಾಡಿಗೆಲ್ಲಿದೆ ಕೊರತೆ ನಮಗೆ ನಾರಿಯರಿಗೆ" ಎನ್ನುವ ಆತ್ಮವಿಶ್ವಾಸದ ಮಾತು ಹೆಣ್ಣಿನಲ್ಲಿ ಅಂತರ್ಗತವಾಗಿರುವ ಕಾವ್ಯದ ಸಹಜ ಲಯವನ್ನೂ, ಅದರ ಅನನ್ಯತೆಯನ್ನು ಅಧಿಕೃತಗೊಳಸುತ್ತದೆ. ಕಾವ್ಯ ಗಂಡಿನ ಅಭಿವ್ಯಕ್ತಿಯ ಶ್ರೇಷ್ಟತೆಯ ಸಂಕೇತವಾದರೆ ಹೆಣ್ಣಿನ ಮಟ್ಟಿಗೆ ಬದುಕಿನ ಸಹಜ ಲಯಗಳೊಂದಿಗೆ ಬೆಸೆದು ಕೊಂಡಿದೆ. ಹೀಗೆನ್ನುವಲ್ಲಿ ಹೆಣ್ಣಿನ ಸೃಜನಕ್ರಿಯೆಯ ಅನನ್ಯತೆ ಹಾಗೂ ಅಧಿಕೃತತೆಯನ್ನು ವೈದೇಹಿ ಕಾವ್ಯದ ಮೂಲಕವೇ ಎತ್ತಿಹಿಡಿಯುತ್ತಾರೆ.

ಹೆಣ್ಣಿನ ಪಾಲಿಗೆ ಅಡುಗೆ ಮನೆ ಅವಳ ಬಂಧನ ಹಾಗೂ ಅಸ್ಮಿತೆಯನ್ನು ಕಂಡುಕೊಳ್ಳಲು ಅವಕಾಶವಿರುವ ಎರಡು ವೈರುಧ್ಯಗಳ ಸಂಗಮ ಕ್ಷೇತ್ರವಾಗಿದೆ. ತನ್ನೆಲ್ಲಾ ಬಂಧನ, ನೋವು, ಸಂಕಷ್ಟಗಳ ನಡುವೆಯೂ ಕನಸು ಕಾಣುವ, ಕನಸುಗಳನ್ನು ಸಾಕಾರಗೊಳಸಿಕೊಳ್ಳುವ ಅಲ್ಪ ಪ್ರಮಾಣದ ಅವಕಾಶವಿರುವ ಕ್ಷೇತ್ರ ಅಡುಗೆಮನೆ ಮಾತ್ರ. ವೈದೇಹಿಯವರ ಅಡುಗೆಮನೆ ಹುಡುಗಿ ಕವನ ಈ ನಿಟ್ಟಿನಲ್ಲಿ ಮುಖ್ಯವಾದದ್ದಾಗಿದೆ. ಕವನದ ಆರಂಭದಲ್ಲಿ ಅಡುಗೆ ಮನೆ ಹುಡುಗಿಯ ಬಂಧನವಾಗಿ ರೂಪುಗೊಂಡಿದ್ದರೂ ಮುಂದುವರೆದ ಹಂತದಲ್ಲಿ ಈ ಅಡುಗೆ ಮನೆಯೇ 'ಹುಡುಗಿ' ಕನಸುಗಳನ್ನು ಕಟ್ಟುವ, ಅದರಿಂದ ಉಲ್ಲಾಸಗೊಳ್ಳುವ, ಅವಕಾಶಗಳನ್ನೂ ಒದಗಿಸುತ್ತದೆ. ಅಡುಗೆ ಮನೆ ಈ ಅವಕಾಶ ಒದಗಿಸುವ ಏಕೈಕ ಕ್ಷೇತ್ರ ಎಂದು ತಿಳಸುತ್ತಲೇ ಅದು ಬಂಧನವಾಗಿ ಮಾರ್ಪಟ್ಟಿರುವ ವಿಧಾನವನ್ನು ಚರ್ಚಿಸುತ್ತಾರೆ. ಅಡುಗೆ ಮನೆ ಹೆಣ್ಣಿನ ಕನಸುಗಾರಿಕೆಯನ್ನು ವ್ಯಕ್ತಿತ್ವವನ್ನು ನಾಶ ಪಡಿಸುವ ಸಾಧನವಾಗಿರುವಂತೆಯೇ ಅದು ಅವಳು ಕನಸು ಕಾಣಲು ಅವಕಾಶವನ್ನು ಒದಗಿಸುತ್ತದೆ. ಸಮಾಜೊಂದಿಗೆ ಯಾವುದೆ ರೀತಿಯ ಸಂಪರ್ಕ ಏರ್ಪಡದಂತೆ ಹೆಣ್ಣನ್ನು ಬಂಧನವಾಗಿಸುವ ಅಡುಗೆ ಮನೆಯಲ್ಲಿ ಕುಳತೇ ಅದರಿಂದ ಹೊರ ಹೋಗುವ ಹಾಗೂ ಬಿಡುಗಡೆ ಪಡೆಯುವ ಹಂಬಲ ಹೊಂದುತ್ತಾಳೆ. ಆದರೆ ವ್ಯವಸ್ಥೆಯಿಂದ ನಿರೂಪಿತವಾದ 'ಅಡುಗೆ ಮನೆ' ಎಷ್ಟು ಬಲಶಾಲಿಯಾದದ್ದು ಎಂದರೆ ಅವಳಗೆ ಸ್ವಲ್ಪ ಅವಕಾಶವೂ ದೊರೆಯದಂತೆ ಬಾಗಿಲು, ಕಿಟಕಿ, ಹೊಗೆನಳಕೆ, ಕೊನೆಗೆ ಕಿರುಕಿಂಡಿಯೂ ಇಲ್ಲದಂತೆ ಅವಳನ್ನು ಬಂಧನದಲ್ಲಿರಿಸಲಾಗಿದೆ. ಈ ಬಂಧನವೇ ಅವಳ ಸಹಜ ಸ್ಥಿತಿಯಂತೆ, ಅವಳ ಒಪ್ಪಿತ ಮಾದರಿಯಂತೆ ಮೇಲ್ನೋಟಕ್ಕೆ ಕಂಡರೂ ಕೂಡ ಹೆಣ್ಣಿನ ಮನಸ್ಸು ಅದರಿಂದ ಬಿಡುಗಡೆ ಪಡೆಯಲು ನಿರಂತರವಾಗಿ ಪ್ರಯತ್ನಿಸುತ್ತಲೇ ಇರುತ್ತದೆ. ಬಲವಾದ ಕಾರಣ ಮಿತಿ ಮೀರಿದ ತಾಳ್ಮೆ, ಸಹನೆ ಹಾಗೂ ಕಾಲದ ಅನುಭವದ ಗತಿಯಲಿ ಸಿದ್ಧಿಸಿದ ಅವಕಾಶಗಳು ಅವಳಗೆ ಹೊಸ ಕನಸನ್ನು ಕಾಣಲು, ಅದನ್ನು ನನಸಾಗಿಸಿ ಕೊಳ್ಳಲು ಸಣ್ಣ ಕಿಂಡಿಗಳನ್ನಾದರೂ ತೆರೆಯುತ್ತವೆ. ಈ ಅಡುಗೆ ಮನೆಯಲ್ಲಿಯೆ ತನ್ನ ಕನಸನ್ನು ನನಸಾಗಿಸುವ ಹಗಲು ವೇಷದ ಯಜಮಾನನಿಗೆ ಕಾತರಿಸುವುದು ಮಾತ್ರ ಹೆಣ್ಣಿಗೆ ಒಡಗಿರುವ ದುಸ್ಥಿತಿಯ ಸೂಚನವಾಗಿದೆ. ತನ್ನ ಸಹಜ ಶಕ್ತಿ ಸಾಮರ್ಥ್ಯದಿಂದ ಅದರಿಂದ ಹೊರಗೆ ಬರಬಹುದಾದರೂ ಆ ಬಗೆಯ ಮನಸ್ಸು ಮಾಡದಿರುವುದೇ ಹೆಣ್ಣಿನ ಸ್ಥಿತಿಗೆ ಕಾರನ ಎಂಬುದನ್ನು ವೈದೇಹಿ ತಮ್ಮ ಅಡುಗೆ ಮನೆ ಹುಡುಗಿ

ಕವಿತೆಯ ಮೂಲಕ ತಿಳಿಸುತ್ತಾರೆ. ಆದರೆ ಇವಳಿಗೆ ತನ್ನ ಕನಸನ್ನು ಸಾಕಾರಗೊಳಿಸಿಕೊಳ್ಳಲು ಸಾಧ್ಯವಾಗದಿದ್ದರೂ ಹೊಸ ರಾಜಕುಮಾರನ ಮೂಲಕ ಸಾಂಪ್ರದಾಯಿಕತೆಯನ್ನು ವಿರೋಧಿಸಿವ, ತನ್ನ ಅಪೇಕ್ಷೆಯ ಬದುಕಿನ ಕನಸನ್ನು ನೇಯುವ ಮೂಲಕ ಅವಳ ಬಿಡುಗಡೆಯ ಅಪೇಕ್ಷೆಯನ್ನು ಗಮನಿಸಬಹುದು.

ಈ ಕವನದ ಹುಡುಗಿಗೆ 'ಅಡುಗೆ ಮನೆ' ತನ್ನ ಬಂಧನದ ಕ್ಷೇತ್ರ ಅದರಿಂದ ಬಿಡುಗಡೆ ಸಾಧ್ಯವಿಲ್ಲ ಎಂಬ ಅರಿವಿರುವುದರೊಂದಿಗೆ ಅದರಿಂದ ಬಿಡುಗಡೆ ಪಡೆಯುವ ತೀವ್ರವಾದ ಹಂಬಲ ಕೂಡ ಇದೆ. ಪಿತೃ ಪ್ರಭುತ್ವ ಕಿಟಕಿ, ಬಾಗಿಲು, ಕಡೆಗೆ ಹೊಗೆ ನಳಿಕೆಗಳೂ ಕೂಡ ಇಲ್ಲದಂತೆ ನಿರ್ಭಂಧಿಸಿದೆಯಾದರೂ ಆ ಎಲ್ಲಾ ಮಿತಿಗಳ ನಡುವೆಯೇ ಅದರಿಂದ ಹೊರಬಂದು ವಿಮಾನದಲ್ಲಿ ತನ್ನನ್ನು ಕರೆದೊಯ್ಯುವ ನಾಯಕನ ಬರುವಿಕೆಗಾಗಿ ಕಾಯುವ ಹಂಬಲ ಇಲ್ಲಿದೆ. ಈ ಬಗೆಯ ಹಂಬಲವೇ ತನ್ನೆಲ್ಲಾ ಮಿತಿಗಳನ್ನು ಮೀರುವ ಹೆಣ್ಣಿನ ಶಕ್ತಿಯಾಗಿ ಹೊರಹೊಮ್ಮುತ್ತದೆ.

ಇರಬಹುದು ಈ ವಿಮಾನದೊಳಗೂ ಒಬ್ಬ
ಹಗಲು ವೇಷದ ಯಜಮಾನ
ಇರುವಂತೆ ಪ್ರತಿ ಪ್ರಾಣಿಗೂ ಕದಿಯುವ ಮತ್ತು
ಆಳುವ ಜಾಯಮಾನ.
ಮತ್ತೆ ಬರಬಹುದು ಪುಷ್ಪಕದ ರೆಕ್ಕೆ ಬಡಿಯುತ್ತಾ
ಮಾಡನ್ನು ಸೀಳಿ
ಏಣಿ ಕೆಳಗಿಳಿಸಿ
ಸಾಂಬ್ರಾಣಿ ಸಿಪ್ಪೆ ಬಿಡಿಸುತ್ತಿರುವ ತನ್ನ
ಎತ್ತಿ ಒಯ್ದು ಸಾಮ್ರಾಜ್ಞಿ ಮಾಡಿ, . . .
ಹಾಡ ನೇಯುವಳು ಹುಡುಗಿ
ಮುರಿಯುತ್ತ ಮೆಣಸಿನ ಚೊಟ್ಟು
ಆಕಾಶದ ಸದ್ದಿಗೆ ಕಿವಿಯ ತೆರೆದಿಟ್ಟು
ಕಳೆಯುವಳು ಆಯುಷ್ಯ ಬೊಟ್ಟು ಬೊಟ್ಟು. [೫೧]

ಇಲ್ಲಿ ಪುರುಷ ಪ್ರಭುತ್ವದ ಎಲ್ಲಾ ಬಗೆಯ ಹುನ್ನಾರಗಳನ್ನೂ ಹತ್ತಿಕ್ಕಿ ತನ್ನ ಬದುಕಿನ ಆಯ್ಕೆಯನ್ನು ಗುರುತಿಸಿಕೊಳ್ಳುವ ಸಾಮರ್ಥ್ಯ ಹೆಣ್ಣಿನಲ್ಲಿರುವುದು ಕಂಡುಬರುತ್ತದೆ. ಆದರೆ ಅದು ಸಾಕಾರ ಗೊಳ್ಳುವ, ಕಾರ್ಯರೂಪಕ್ಕೆ ಬರುವ ವಿಧಾನ ಮಾತ್ರ ಭಿನ್ನ. ವೈದೇಹಿಯವರ ಶಿವನ ಮೀಸುವ ಹಾಡು, ನೋಡಬಾರದು ಚೀಲದೊಳಗನು, ಸ್ವಯಂವರ ಗೀತೆ ಮುಂತಾದ ಕವನಗಳು ಹೆಣ್ಣಿನ ಶಕ್ತಿ, ಆತ್ಮವಿಶ್ವಾಸ, ಹಾಗೂ ಅವಳ ಕನಸುಗಳನ್ನು ಪುರುಷ ಪ್ರಭುತ್ವ ಎಂದೂ ತನ್ನ ಹಿಡಿತಕ್ಕೆ ತೆಗೆದುಕೊಳ್ಳಲಾರದು ಎಂಬುದನ್ನು ತಿಳಿಸಲು ಪ್ರಯತ್ನಿಸುತ್ತದೆ. ನೋಡಬಾರದ ಚೀಲದೊಳಗಿರುವ ಪೆನ್ನು, ಪೌಡರ್, ಕ್ಲಿಪ್ಪು, ಒಣಗಿ ರೂಹಾದ ಎಲೆ, ಯಾರದೋ ಮನೆ ದಾರಿ ನಕ್ಷೆ, ಅರೆ ಬರೆದ ಕವನ, ವಿಳಾಸ ಹೊತ್ತಿರುವ ಕಾಲಿ ಲಕೋಟೆ, ಹೆಸರಿಲ್ಲದ ಫೋಟೋ ಇವುಗಳೆಲ್ಲ ಹೆಣ್ಣು ತನ್ನ ಕನಸುಗಳನ್ನು ಕಾಪಿಟ್ಟು ಕೊಂಡಿರುವ ಸ್ವರೂಪವನ್ನು ಎತ್ತಿ

ಹಿಡಿಯುತ್ತದೆ. ಜೊತೆಗೆ ಹೆಣ್ಣು ತನ್ನ ಅವಕಾಶಗಳ ಪರಿಮಿತಿಯಲ್ಲಿಯೇ ತನ್ನ ವ್ಯಕ್ತಿತ್ವಕ್ಕೊಂದು ಅಧಿಕೃತತೆಯನ್ನೂ, ಮಾನ್ಯತೆಯನ್ನೂ ಪಡೆಯುವ ಪ್ರಯತ್ನದಲ್ಲಿ ತೊಡಗಿರುವುದನ್ನು ಗುರುತಿಸುತ್ತಾರೆ.

ಹೆಣ್ಣಿನಲ್ಲಿಯೇ ಅಡಗಿರಬಹುದಾದ ಅವಳ ಅಸ್ತಿತ್ವದ ಚಹರೆಗಳನ್ನು ಮಾನ್ಯ ಮಾಡುವ ಇವರ ಕಾವ್ಯ ಎಂತಹ ಸನ್ನಿವೇಶಗಳನ್ನೂ ಸಮರ್ಥವಾಗಿ ನಿಭಾಯಿಸಬಲ್ಲ ಶಕ್ತಿ ಹೆಣ್ಣಿನಲ್ಲಿದೆ ಎಂಬುದನ್ನು ತಿಳಿಸುತ್ತವೆ. ಇದು ಇವರ ಜೋಗೀತ, ಸ್ವಯಂವರಗೀತೆ, ಹಾಗೂ ಶಿವನ ಮೀಸುವ ಹಾಡು ಕವನಗಳಲ್ಲಿ ವ್ಯಕ್ತವಾಗುತ್ತದೆ. ಆಕ್ರೋಶವಿಲ್ಲದ ಮೊನಚು ಪ್ರತಿಭಟನೆ ಇವರ ಕಾವ್ಯಗುಣ. ಶಿವನ ಮೀಸುವ ಹಾಡಿನ ಗೌರಿಗೆ ಶಿವನ ಎಲ್ಲಾ ಗುಣಗಳ ಪರಿಚಯವಿದ್ದಾಗ್ಯೂ ಅವೆಲ್ಲವನ್ನೂ ಮೀರಿ ತನ್ನ ಆಯ್ಕೆ ಏನೆಂದು ಗುರುತಿಸಿಕೊಳ್ಳುವ ಸಾಮರ್ಥ್ಯವಿದೆ. ಪುರುಷ ಪ್ರಧಾನ ವ್ಯವಸ್ಥೆ ಇದನ್ನು ಗಂಡಿನ ಸಾಮರ್ಥ್ಯ, ಹೆಣ್ಣಿನ ಮಿತಿ ಎಂದು ಬಿಂಬಿಸಿದರೆ ಲೇಖಕಿ ಅದನ್ನು ಹೆಣ್ಣಿನ ಶಕ್ತಿ ಎಂದು ಗುರುತಿಸುತ್ತಾರೆ. ಪುರುಷ ಪ್ರಧಾನ ವ್ಯವಸ್ಥೆ ತಂದೊಡ್ಡುವ ಈ ಬಗೆಯ ಸವಾಲುಗಳನ್ನು ಮೀರಿ ತನ್ನ ವ್ಯಕ್ತಿತ್ವವನ್ನು ಗುರುತಿಸಿಕೊಳ್ಳುವ ಜಾಣ್ಮೆ ಹೆಣ್ಣಿನಲ್ಲಿರುವುದನ್ನು ಗೌರಿಯ ಮೂಲಕ ಹಿಡಿದಿಡುತ್ತಾರೆ.

ನಗುವ ನಟರಾಜನನು ಕರೆವಳೋ ಸ್ನಾನಕ್ಕೆ
ದುಃಖ ಹತ್ತಿಕ್ಕಿ
ಮುಗಿಯಿತೇ ಬೇಟೆ? ಪ್ರಶ್ನೆ ಚುಚ್ಚಿ
ಈಮಾತಿಗೆ ಶಿವನೇ ನಾನೆಷ್ಟನೆಯ ನಾರಿ?
ಎನ್ನುತ್ತ ಮೃದು ಚಿವುಟಿ ಮೀಸುವಳು ನಮ್ಮ ಗೌರಿ.[೫೨]

ಇಲ್ಲಿ ಎಲ್ಲ ತಲ್ಲಣಗಳನ್ನು ತಡೆಯಬಲ್ಲ ಧೀಶಕ್ತಿ, ತುಮುಲಗಳನ್ನು ನಿಯಂತ್ರಿಸಬಲ್ಲ ಆತ್ಮವಿಶ್ವಾಸ ಗೌರಿಯಲ್ಲಿದೆ. ಪ್ರೀತಿ, ವಿಶ್ವಾಸ, ವ್ಯಂಗ್ಯದ ಮೂಲಕವೇ ಶಿವನನ್ನು ನಿಯಂತ್ರಿಸುವ, ಅವನ ಚಟುವಟಿಕೆಗಳನ್ನು ವಿರೋಧಿಸುವ ಗುಣ ಗೌರಿಯದ್ದು. ತನ್ನ ಸಮಸ್ಯೆಯನ್ನು ಹೇಗೆ ನಿಭಾಯಿಸಿಕೊಳ್ಳಬೇಕು ಎನ್ನುವ ಚಾಕಚಕ್ಯತೆ ಗೌರಿಯಲ್ಲಿರುವುದನ್ನು ಸಮರ್ಥವಾಗಿ ಹಿಡಿದಿಡುವ ವೈದೇಹಿ " ಮಿಸುಕಾಡದೇ ಕುಳಿತು ತಲ್ಲಣವ ತಡೆಯುವ ಆರ್ದ್ರ ಗರ್ವದ ಹುಡುಗಿ ನಮ್ಮ ಗೌರಿ" ಎನ್ನುವ ಮೂಲಕ ಗೌರಿಯ ಗರ್ವದ ಹಿಂದಿನ ಸ್ವಘನತೆಯನ್ನು ಎತ್ತಿಹಿಡಿಯುತ್ತಾರೆ. ಇವರ ನೋಡಬಾರದು ಚೀಲದೊಳಗನು ಕವಿತೆ ಇದರ ಮುಂದುವರಿಕೆಯಂತೆ ಹೆಣ್ಣು ತನ್ನ ಸ್ವಂತಿಕೆಯನ್ನು ಕಾಯ್ದುಕೊಳ್ಳುವ ಬಗೆಗಳನ್ನು ಬಿಚ್ಚಿಡುತ್ತದೆ.

ಮನಸಿನೊಳಗಡೆ ಎಂದೂ
ಇಣುಕಲಾರಿರಿ ನೀವು, ಹುಡುಕಿ
ತೆಗೆಯಲಾರಿರಿ ಏನನೂ
ಇಣುಕಲಾದರೂ ಹಾಗೆ ಮಾಡಲಾಗದು ನೀವು
ಚೀಲದೊಳಗಿನ ತಿರುಳನು
ಹುಡುಕಿ ತೆಗೆಯಲಾದರೂ ಹಾಗೆ
ಮಾಡಲಾಗದು ನೀವು

ನೋಡಬಾರದು ಚೀಲದೊಳಗನು.[೫೩] ಎನ್ನುವ ಮೂಲಕ ಇದುವರೆವಿಗೂ ಹೆಣ್ಣನ್ನು ನಿಯಂತ್ರಿಸುತ್ತಿದ್ದೇನೆ ಎಂಬ ಭ್ರಮೆಯಲ್ಲಿರುವ ಪುರುಷ ಪ್ರಧಾನ ವ್ಯವಸ್ಥೆಗೆ ಹಾಗೆಂದೂ ನೀವು ಮಾಡಲು ಸಾಧ್ಯವೇ ಇಲ್ಲ ಎಂದು ಹೆಣ್ಣಿನ ಗುಟ್ಟು ಕಾಪಾಡುವ ಬಗೆಯನ್ನು ತಿಳಿಸುತ್ತಾರೆ. ಹೆಣ್ಣು ಸಂಪೂರ್ಣ ಪುರುಷಾಧೀನ ಎಂಬ ಪರಿಕಲ್ಪನೆಯೇ ಮಿತ್ಯೆ ಎನ್ನುತ್ತಾರೆ ವೈದೇಹಿ.

ಹೆಣ್ಣನ್ನು ಎರಡನೆಯ ದರ್ಜೆಯ ಪ್ರಜೆಯಾಗಿ ನಡೆಸಿಕೊಳ್ಳುವ ವ್ಯವಸ್ಥೆಯ ಬಗೆಗಿನ ಪ್ರತಿಭಟನೆ ಇವರ ಕಾವ್ಯದಲ್ಲಿ ವ್ಯವಸ್ಥೆಯ ಬಗೆಗಿನ ನಿರ್ಲಕ್ಷ್ಯದ ಮಾದರಿಯಲ್ಲಿ ವ್ಯಕ್ತವಾಗಿದೆ. ತನ್ನ ಬಗೆಗೆ ಆತ್ಮ ಪ್ರತಿಷ್ಟೆಯನ್ನು ಹೊಂದಿರುವ ಪ್ರಧಾನ ವ್ಯವಸ್ಥೆಯ ಕಾರ್ಯ ಚಟುವಟಿಕೆಗಳಿಗೆ ತಾನು ಜವಾಬ್ದಾರಳಾಗಬೇಕಿಲ್ಲ ಎಂಬ ಅಂಶ ಇವರ ಕವನಗಳಲ್ಲಿ ವ್ಯಕ್ತವಾಗುತ್ತದೆ. ತನ್ನ ಚೌಕಟ್ಟಿನ ಮಿತಿಯಲ್ಲಿಯೇ ತನ್ನ ಬದುಕನ್ನು ಪರಿಪೂರ್ಣವಾಗಿಸಿಕೊಳ್ಳುವ ಚಾತುರ್ಯತೆ, ಶಕ್ತಿ, ಆತ್ಮವಿಶ್ವಾಸ ಹೆಣ್ಣಿನಲ್ಲಿದೆ ಎಂಬುದೇ ಇವರ ಪದ್ಯಗಳ ಪ್ರಧಾನ ಕಾಳಜಿ. ಇದೂ ಕೂಡ ಹೆಣ್ಣಿನ 'ಶಕ್ತಿ'ಯೇ ಆಗಿದೆ ಎಂಬುದು ವೈದೇಹಿಯವರ ನಿಲುವು.

'ಮಿಸುಕಾಡದೆ ಕುಳಿತು ತಲ್ಲಣವ ತಡೆಯುವ
ಆರ್ದ್ರಗರ್ವದ ಹುಡುಗಿ ನಮ್ಮ ಗೌರಿ' [೫೪]
ಮಸಾಲೆ ಕಡೆಯುತ್ತಾ ಕಡೆಗಣಿಸುತ್ತಾಳೆ.
ಅಭಾವವಿದ್ದರೆ ವೈರಾಗ್ಯತಾನೆ? [೫೫]
'ಆರಿಸಿಕೋ ವರನನ್ನು ಇಲ್ಲಿ
ಕರಗಿ ಕೊಳೆ ಹಿಂಸ್ರಮೃಗ ಜಠರದಲ್ಲಿ"
ಹಿಂದೆ ಕಾಣದ ಅರಸು ಕೊಟ್ಟ ಶಾಪ
ಕನಿಕರಿಸಿದಳು ಹುಡುಗಿ – "ತಂದೆ ಪಾಪ" [೫೬]

ಈ ಎಲ್ಲಾ ಕವನಗಳೂ ಹೆಣ್ಣು ತನ್ನ ಜೀವನವನ್ನು ತನ್ನ ಆಯ್ಕೆಗೆ ತಕ್ಕಂತೆ ರೂಪಿಸಿಕೊಳ್ಳುವ, ತನ್ನ ಬದುಕನ್ನು ತಾನೇ ಕಟ್ಟಿಕೊಳ್ಳುವ, ಸಮಾಜದ ವಿರೋಧ, ವ್ಯಂಗ್ಯ, ಅಸಹನೆ ಎಲ್ಲವನ್ನೂ ತಡೆದುಕೊಂಡು ಮುನ್ನುಗ್ಗುವ ಶಕ್ತಿಯನ್ನು ಸಹಜವಾಗಿಯೇ ತನ್ನಲ್ಲಿ ಅಂತರ್ಗತವಾಗಿಸಿಕೊಂಡಿದ್ದಾಳೆ ಎಂಬುದನ್ನು ಧ್ವನಿಸುತ್ತವೆ. ವೈದೇಹಿಯವರ ಕವನಗಳ 'ಹೆಣ್ಣು' ಸ್ವತಂತ್ರ ಹಾಗೂ ಪರಿಪೂರ್ಣ ವ್ಯಕ್ತಿತ್ವವನ್ನು ಹೊಂದಿರುವುದನ್ನು ಸ್ಪಷ್ಟಪಡಿಸುತ್ತದೆ. ಇದು ವೈದೇಹಿಯವರ ಕಾವ್ಯದ ಅನನ್ಯತೆಯ ಜೊತೆಗೆ ಮಹಿಳಾ ಅಭಿವ್ಯಕ್ತಿಯ ಅನನ್ಯತೆಯ ಹಾದಿಗಳನ್ನೂ ತೆರೆದಿಡುತ್ತದೆ.

ವೈದೇಹಿಯವರ **ಗೆಳತಿಯ ಗುಟ್ಟು** ಕವನ ಬದಲಾದ ಕಾಲಘಟ್ಟದಲ್ಲಿ ಸ್ತ್ರೀವಾದಿ ಆಲೋಚನಾ ಕ್ರಮದಲ್ಲಿಯೂ ಕೂಡ ಆಗಿರಬಹುದಾದ ಮಾರ್ಪಾಡುಗಳನ್ನು ದಾಖಲಿಸಲು ಪ್ರಯತ್ನಿಸುತ್ತದೆ. ಇವರ ಕಾವ್ಯದ ವಿಶಿಷ್ಟತೆ ಎದ್ದು ಕಾಣುವುದೇ ಗಂಡು ಹೆಣ್ಣಿನ ನಡುವಿನ ಪ್ರಕೃತಿ ಸಹಜವಾದ ದೈಹಿಕ ಅಪೇಕ್ಷೆಯ ಬಂಧವನ್ನು ಗುರುತಿಸುವುದಲ್ಲಿ. ಗೆಳತಿಯ ಗುಟ್ಟು ಕವನದ ಆರಂಭದ ಸಾಲು ಕೇವಲ

ಗೆಳತಿಯ ಬಯಕೆಯಷ್ಟೇ ಅಲ್ಲ ಅದು ಲೇಖಕಿಯ ಬಯಕೆ ಕೂಡ ಹೌದು. ಸಾಂಪ್ರದಾಯಿಕ ಮೌಲ್ಯ ವ್ಯವಸ್ಥೆಯನ್ನು ಒಪ್ಪಿ ಬದುಕುವ ಅಜ್ಜಿಯ ಮುಂದೆ ತನ್ನ ಬಯಕೆಯನ್ನು ನೇರವಾಗಿ ಹೇಳಲಾರದ ಸ್ಥಿತಿಯಲ್ಲಿ ಅದಕ್ಕೆ ಗೆಳತಿಯ ಬಯಕೆಯ ಹುನ್ನಾರವನ್ನು ಬಳಸುವ ಜೊತೆಗೆ ತನಗೂ ಕೂಡ ಅದರಬಗೆಗೆ ವಿರೋಧವಿದೆ ಎಂಬ ತೋರಿಕೆಯ ಹಿನ್ನೆಲೆಯಲ್ಲಿ ಪುರುಷ ಪ್ರಧಾನ ವ್ಯವಸ್ಥೆ ಹೆಣ್ಣನ್ನು ಸಿದ್ಧಗೊಳಿಸಿರುವ ಬಗೆಗೆ ವ್ಯಂಗ್ಯ ಕೂಡ ಕಂಡುಬರುತ್ತದೆ. ಹೆಣ್ಣನ್ನು ನಿಯಂತ್ರಿಸುವವಳು ಇನ್ನೊಂದು ಹೆಣ್ಣೆ ಎಂದು ಬಿಂಬಿಸುವುದ ಮೂಲಕ ಮಹಿಳೆ ತನ್ನವರೊಂದಿಗೆ ಹೋರಾಡಬೇಕಾದಂತಹ ಪರಿಸ್ಥಿತಿಯನ್ನು ನಿರ್ಮಿಸಲಾಗಿದೆ. ಇದಕ್ಕೆ ಕಾರಣಗಳನ್ನು ಹುಡುಕುವ ಮಹಿಳಾ ಕಾವ್ಯ ಹೆಣ್ಣಿನ ಬಗೆಗಿನ ಕಾಳಜಿ ಅಥವಾ ಪ್ರೀತಿಯೇ ಬಂಧನವಾಗಿ ಮಾರ್ಪಟ್ಟಿರುವುದನ್ನು ತಿಳಿಸಲು ಪ್ರಯತ್ನಿಸುತ್ತದೆ.ಹೆಣ್ಣಿನ ಲೈಂಗಿಕತೆಯನ್ನು ಗಂಡು ದುರುಪಯೋಗ ಪಡಿಸಿಕೊಳ್ಳುತ್ತಿರುವ ಬಗೆಗೆ ಆತಂಕ ವಿಷಾದಗಳಿದ್ದರೂ ಕೂಡ ಅದನ್ನು ಮೆಟ್ಟಿನಿಲ್ಲುವ ಎದೆಗಾರಿಕೆಯನ್ನು ಹೆಣ್ಣು ಪಡೆಯಬೇಕು ಎಂಬ ಆಶಯ ಈ ಕವನದಲ್ಲಿ ವ್ಯಕ್ತವಾಗುತ್ತದೆ. "ಯಾಕೆ ಬಂದಯೋ ಎಂದು ಛೇಡಿಸುವಳೀಗ ಬರಲಿಲ್ಲ ಯಾಕೆಂದು ಕರಗುವುದು ಸಮವೆ?" ಬದಲಾದ ಮನೋವಿನ್ಯಾಸವನ್ನು ತಿಳಿಸುತ್ತದೆ. ಗಂಡಿನ ವ್ಯ ಕ್ತಿತ್ವವೇ ಅದಾಗಿರುವಾಗ ಅದಕ್ಕಾಗಿ ಹೆಣ್ಣು ಕೊರಗುವುದು ಸರಿಯಲ್ಲ ಎಂಬ ಅಭಿಪ್ರಾಯ ವ್ಯಕ್ತಗೊಂಡಿದೆ. ಗೆಳತಿಯ ಅನುಭವವೇ ಲೇಖಕಿಯ ಅನುಭವವಾಗುವ ಮೂಲಕ ಇಡೀ ಸ್ತ್ರೀ ಸಮುದಾಯದ ಮುಂದಿರುವ ಸವಾಲುಗಳ ಅನಾವರಣ ಹಾಗೂ ಅದಕ್ಕೆ ಸುಲಭ ನಿವಾರಣೋಪಾಯಗಳನ್ನು ಕಂಡು ಕೊಳ್ಳುಲು ಪ್ರಯತ್ನಿಸಲಾಗಿದೆ. ಪ್ರಕೃತಿ ದತ್ತವಾದ ಹೆಣ್ಣಿನ ದೇಹ ವಿನ್ಯಾಸ ಕ್ರಮ ತಂದೊಡ್ಡಿರುವ ಆತಂಕಗಳನ್ನು ಎದುರಿಸುವ ದಿಟ್ಟ ತನವನ್ನು ಹೆಣ್ಣು ಬೆಳಸಿಕೊಳ್ಳಬೇಕಾಗಿದೆ ಎಂಬ ಅಂಶವನ್ನು ಕಾಣಬಹುದು. ಹೆಣ್ಣು ಒಡವೆ ವಸ್ತುಗಳಿಗಾಗಿ ಹಂಬಲಿಸುವವಳು ಎಂಬ ವ್ಯಂಗ್ಯ ವಿನೋಧ ಸಾಮಾನ್ಯವಾಗಿ ಕಂಡು ಬರುವ ಸಂಗತಿ. ಆದರೆ ಅವುಗಳ ಅಗತ್ಯತೆ ಹಾಗೂ ಅನಿವಾರ್ಯತೆಗಳನ್ನು ಪರುಷ ಪ್ರಧಾನ ವ್ಯವಸ್ಥೆ ನಿರ್ಲಕ್ಷ್ಯದಿಂದ ನೋಡುತ್ತದೆ. ಆದರೆ ಹೆಣ್ಣಿನ ಸಂದರ್ಭದಲ್ಲಿ ಅವುಗಳ ಪ್ರಾಮುಖ್ಯತೆ ಹಾಗು ಅನಿವಾರ್ಯತೆ ಏನು ಎಂಬುದು ಮುಖ್ಯ ಅಂಶಗಳಲ್ಲೊಂದು. ಖಾಸಗಿ ಆಸ್ತಿ ಹಾಗೂ ಸಂಪಾದನೆಯ ಸಂಪೂರ್ಣ ಒಡೆತನ ಗಂಡಿನದೇ ಆಗಿರುವ ಸಂದರ್ಭದಲ್ಲಿ ಹೆಣ್ಣು ತನ್ನದು ಎಂದು ಬಯಸಬಹುದಾದ ಹಾಗೂ ತನ್ನ ಬಳಿಯೇ ಇಟ್ಟುಕೊಳ್ಳಬಹುದಾದ ಏಕೈಕ ಆಸ್ತಿ ಇವುಗಳೇ. ಆದರೆ ಇವುಗಳ ಒಡೆತನ ಕೂಡ ಗಂಡಿನದೇ ಎಂಬುದನ್ನು ಬೇರೆಯಾಗಿ ಹೇಳಬೇಕಾಗಿಲ್ಲ. ಆದರೆ ಹೆಣ್ಣು ತನ್ನ ಸಂಕಷ್ಟಕ್ಕೆ, ತನ್ನವರ ಸಹಕಾರಕ್ಕೆ ಇವುಗಳನ್ನು ಇಟ್ಟುಕೊಳ್ಳುವ ವಿಧಾನವನ್ನು ವೈದೇಹಿಯವರ ಅವಳ ಉಯಿಲು ಕವನ ದಾಖಲಿಸುತ್ತದೆ.

ವೈದೇಹಿಯವರ ಕವನಗಳು ಮುಖ್ಯವೆನಿಸುವುದು ಅವರ ಸ್ತ್ರೀ ಪಾತ್ರಗಳ ಶಕ್ತಿ ಹಾಗೂ ಅನನ್ಯತೆಯ ದೃಷ್ಟಿಯಿಂದ. ಶಿವನ ಮೀಸುವ ಹಾಗೂ ಪುರಾಣದ ಶಿವ ಗೌರಿಯರ ಸಂಭಾಷನೆಯ

ವಸ್ತುವಿನದಾದರೂ ಅದು ದಾಖಲಿಸುವ ವಿವರಗಳು ಮಾತ್ರ ಹೆಣ್ಣು ಪ್ರಧಾನ ವ್ಯವಸ್ಥೆಗೆ ತೋರುವ ಪ್ರತಿಭಟನೆಯ ಒಂದು ಮಾದರಿಯೇ ಆಗಿದೆ. ಈ ಕವನದಲ್ಲಿ ಗೌರಿಯ ಪ್ರಶ್ನೆ, ವರ್ತನೆ ಎಲ್ಲವೂ ಅಪೇಕ್ಷಿತ, ಸಹಜ ಹಾಗೂ ಒಪ್ಪಿತ ನೆಲೆಯಿಂದ ಕೂಡಿದ್ದು ಎಂಬಂತೆ ಕಂಡುಬಂದರೂ ಅದು ಅವಳ ಶಕ್ತಿಯ ಅತ್ಯುತ್ತಮ ಮಾದರಿಯೂ ಆಗಿದೆ. ಪುರುಷ ಪ್ರಧಾನ ವ್ಯವಸ್ಥೆಯೊಂದಿಗಿನ ಹೆಣ್ಣಿನ ಅನುಸಂಧಾನದ ಮಾದರಿಯಲ್ಲಿ ಈ ವಿಧಾನ ಪ್ರಮುಖವಾದದ್ದು. ಎಂತಹ ಸಂದಿಗ್ಧತೆಯನ್ನೂ ಕೂಡ ಎದುರಿಸಬಲ್ಲ, ವಿಷಮ ಸನ್ನಿವೇಶಗಳನ್ನು ನಿಭಾಯಿಸಬಲ್ಲ ಚಾಣಕ್ಷತೆಯ್ನು ಗೌರಿಯಲ್ಲಿ ಗುರುತಿಸುತ್ತಾರೆ. ಅವಳ ತಣ್ಣನೆಯ ಪ್ರತಿರೋಧ ಎದುರಾಳಿಯನ್ನು ತೀವ್ರವಾಗಿ ಇಕ್ಕಟಿಗೆ ಸಿಲುಕಿಸುವುದಲ್ಲದೆ ಗೌರಿಯ ವಿರುದ್ಧ ಮರು ಮಾತನಾಡಲೂ ಸಾಧ್ಯವಾಗದಂತಹ ಸ್ಥಿತಿಯನ್ನು ತಂದೊಡ್ಡುತ್ತದೆ. ವೈದೇಹಿ ಗೌರಿಯಲ್ಲಿ ಅಡಕವಾಗಿರುವ ಈ ವಿಶೇಷತೆಗೆ,ಅವಳ ದೃಢತೆಗೆ ಜೀವ ತುಂಬಲು ಪ್ರಯತ್ನಿಸುತ್ತಾರೆ. 'ಮುಗಿಯಿತೇ ಬೇಟೆ'? ಎಂಬ ಪ್ರಶ್ನೆ ಮೇಲ್ನೋಟಕ್ಕೆ ಸಹಜವೆಂಬಂತೆ ಕಂಡು ಬಂದರೂ ಕೂಡ ಅದು ಹೆಣ್ಣಿನ ಪ್ರತಿರೋಧದ ಒಂದು ಮಾದರಿಯೇ ಆಗಿದೆ. ಹೆಣ್ಣಿನ ಕುಹಕ, ವ್ಯಂಗ್ಯ, ನಗೆ, ಪಿಸುಮಾತು, ಬಿಸಿಮಾತುಗಳು ವ್ಯವಸ್ಥೆಗೆ ತೀವ್ರವಾಗಿ ಎದುರುಗೊಳ್ಳುವ ಬಗೆಯೇ ಆಗಿದೆ. 'ಎಲ್ಲ ನದಿಗಳ ನೆನೆದು ಮಲಗು ದೇವ ದೇವ' ಎನ್ನುವಲ್ಲಿನ ವ್ಯಂಗ್ಯ ವ್ಯವಸ್ಥೆಯೊಂದಿಗಿನ ಮುಖಾ ಮುಖಿಯ ಭಾಗವೇ ಆಗಿದೆ. 'ನುಡಿ ರೇಶಿಮೆಯಡಿ ನಂಜು' ಎಂಬ ರೂಪಕ ಮಾತಿನ ಮೂಲಕ ವ್ಯಕ್ತವಾಗುವ ವಿರೋಧದ ತೀವ್ರತೆಯನ್ನು ಸಂಕೇತಿಸುತ್ತದೆ. "ಮಿಸುಕಾಡದೇ ಕುಳಿತು ತಲ್ಲಣವ ತಡೆಯುವ ಆರ್ದ್ರಗರ್ವದ ಹುಡುಗಿ ನಮ್ಮ ಗೌರಿ" ಎನ್ನುವಲ್ಲಿ ಗೌರಿಯ ಬಗೆಗಿನ ಲೇಖಕಿಯ ಹೆಮ್ಮೆಯನ್ನೂ, ಆರ್ದ್ರಗರ್ವವೇ ಗೌರಿಯ ಶಕ್ತಿ, ಸಾಮರ್ಥ್ಯ, ಹಾಗೂ ಬದುಕನ್ನು ಮುನ್ನೆಡೆಸುವ ಸಾಧನವಾಗಿರುವುದನ್ನೂ ಧ್ವನಿಸುತ್ತದೆ. ಇವೆಲ್ಲವುಗಳ ನಡುವೆ ಪುರುಷ ಪ್ರಧಾನ ವ್ಯವಸ್ಥೆಗೆ ಈ ಬಗೆಯ ಪ್ರತಿಭಟನೆಗೆ ಮುಖಾಮುಖಿಯಾಗುವ ಬಗೆಯಾಗಲೀ, ಅದನ್ನು ನಿಯಂತ್ರಿಸುವ ವಿಧಾನವಾಗಲೀ ತಿಳಿಯದಾಗಿದೆ ಎಂಬುದೇ ವಿಶೇಷ. ಇವರ ನೋಡಬಾರದು ಚೀಲದೊಳಗನು ಕವಿತೆ ಹೆಣ್ಣಿನ ಶಕ್ತಿಯನ್ನು ಮತ್ತೊಂದು ಬಗೆಯಲ್ಲಿ ಹಿಡಿದಿಡುತ್ತಲೇ, ಗಂಡು ಅದನ್ನು ಗುರುತಿಸಲೂ ಸಾಧ್ಯವಾಗದ ವಿಧಾನವನ್ನು, ಅದು ಸಾಧ್ಯವಾಗದಿರುವ ಬಗೆಗೆ ಎಚ್ಚರಿಕೆಯನ್ನೂ ನೀಡುತ್ತದೆ.

ವ್ಯಾನಿಟಿ ಬ್ಯಾಗಿನಲಿ ಕೈ ಹಾಕಿ ನೋಡುವುದು
ಎಂದಿಗೂ ಉಚಿತವಲ್ಲ ಪುರುಷರೇ
ವ್ಯಾನಿಟಿ ಹೆಸರಲ್ಲಿ ಏನೆಲ್ಲ ಇರಬಹುದು
ಬಯಲು ಮಾಡುವರೇ?

ಒಂದು ಕನ್ನಡಿ ಹಣಿಗೆ ಕಾಡಿಗೆ ಕರಡಿಗೆ
ಪೆನ್ನು ಪೌಡರು ಕ್ಲಿಪ್ಪು ಸೆಂಟು
ಬಿಳಿ ಹಾಳೆ ಮತ್ತು ನೂಲುಂಡೆ ಇರಬಹುದು
ಗುಂಡಿ, ಸೂಜಿ ಮತ್ತು ಅಡಿಕೆ ಹೋಳೂ,
ಇರಬಹುದು ಹುಣಿಸೆ ಬೀಜಗಳೂ !

ವ್ಯಾನಿಟಿ ಬ್ಯಾಗಿನಲಿ ಬಟಾಣಿಯೇ ಇರಬೇಕೆಂದು
ಉಂಟೇ ಯಾರ ರೂಲು?
ಇದ್ದೀತು ಶುಂಠಿ ಪೆಪ್ಪರಮಿಂಟೂ, ಕಂಫಿಟ್ಟೂ . . . .
ಒಣಗಿ ರೂಹುಗಳಾದ ಎಲೆ – ಹೂಗಳರಬಹುದು
ಇರಬಹುದು ಯಾರದೋ ಮನೆ ದಾರಿ ನಕ್ಷೆ
. . . . . . . . . . . . . .
ಅರೆ ಬರೆದಿಟ್ಟ ಕವನ ತೆವಳುತ್ತಲಿರವಬಹುದು
ವಿಳಾಸ ಹೊತ್ತಿರುವ ಖಾಲಿ ಲಕೋಟೆಯಲಿ
ಕೆಂಪು ಸೂರ್ಯನ ಚಿತ್ರ ಮಾತ್ರವಿರಬಹುದು
ಬಂದ ಪತ್ರದ ಉಸಿರು ಒಗಟಾಗಿ ಇರಬಹುದು
ಚಂದದಕ್ಷರ ಬಂಧದಲ್ಲಿ . . . . . . .
ಹೆಸರಿಲ್ಲದ ಪೋಟೋ ಕೂಡ ಇರಬಹುದು!
ಬಾಲ್ಯಯೌವನ ವೃದ್ಧಾಪ್ಯ ನೆರಳುಗಳು
ಸೇರಿಕೊಂಡಿರಬಹದು ಆ ಕೋಶದಲ್ಲಿ
ಹಾಗೆಯೇ ಈ ಚೀಳದೊಳಗಿನ ಲೋಕಗಳು !
ಚೀಲದೊಳಗಿನ ಲೋಕ ಮತ್ತು ಮನಸಿನ ಲೋಕ
ಒಂದೇ ಎಂದೀಗ ತೂಗಿ ನೋಡುವಿರೇನು ?
ಬೆಪ್ಪು ಕಾಪುರುಷರೇ
ವ್ಯರ್ಥ ಕೈ ನೋವೇಕೆ?
ತೂಗಲಾರಿರಿ ತಪ್ಪು ಸಮೀಕರಣವನು.
ಮನಸಿನೊಳಗಡೆ ಎಂದೂ
ಇಣುಕಲಾರಿರಿ ನೀವು. ಹುಡುಕಿ
ತೆಗೆಯಲಾರಿರಿ ಏನನೂ
ಇಣುಕಲಾದರೂ ಹಾಗೆ ಮಾಡಲಾಗದು ನೀವು
ಚೀಲದೊಳಗಿನ ತಿರುಳನು
ಹುಡುಕಿ ತೆಗೆಯಲಾದರೂ ಹಾಗೆ
ಮಾಡಲಾಗದು ನೀವು
ನೋಡಬಾರದು ಚೀಲದೊಳಗನು. [೫೭]

ವ್ಯಾನಿಟಿ ಬ್ಯಾಗಿನ ವೈಯಕ್ತಿಕ ವಿವರಗಳ ಖಾಸಗಿ ತನದ ಸಮರ್ಥನೆಯೊಂದಿಗೆ ಆರಂಭವಾಗುವ ಕವಿತೆ ಹೆಣ್ಣಿನ ಬದುಕಿನ ವೈಯಕ್ತಿಕತೆಯ ಅನಿವಾರ್ಯತೆಯನ್ನು ಎತ್ತಿ ಹಿಡಿಯುತ್ತದೆ. ಗಂಡಿನ ಹುನ್ನಾರಗಳಿಗೆ ಹೆಣ್ಣು ತನ್ನದೇ ಆದ ರೀತಿಯ ಪ್ರತಿ ಹುನ್ನಾರಗಳನ್ನು ಹೆಣೆಯುವ ವಿಧಾನಗಳನ್ನು ಈ ಕವನ ತಿಳಿಸುತ್ತದೆ. ಸ್ತ್ರೀ ಸಂವೇದನೆಗೊಂದು ಸ್ಪಷ್ಟ ರೂಪಕೊಡಲು ಪ್ರಯತ್ನಿಸುವ ಕವನ ಹೆಣ್ಣಿನ ಲೋಕವೊಂದರ ವೈವಿಧ್ಯತೆ ಹಾಗೂ ಸ್ವಂತಿಕೆಯನ್ನು ಎತ್ತಿಹಿಡಿಯುತ್ತದೆ. ಗಂಡನೊಂದಿಗೆ ಹೇಳಲಾರದ, ಹೇಳಲಾಗದ ಎಷ್ಟೋ ಗುಟ್ಟುಗಳು, ನೆನಪುಗಳು ವ್ಯಾನಿಟಿ ಬ್ಯಾಗಿನಲ್ಲಿ ಅಡಗಿರುವಂತೆಯೇ ಅವಳ ಅಂತರ್ಯವೂ ಕೂಡ. ವ್ಯಾನಿಟಿ ಬ್ಯಾಗಿನೊಳಗಿರುವ ವಸ್ತುಗಳು ಮೇಲ್ನೋಟಕ್ಕೆ ನಿಷ್ಪ್ರಯೋಜಕ ಕನಿಷ್ಟವೆನಿಸಿದರೂ ಕೂಡ ಹೆಣ್ಣಿಗೆ ಅವೇ ಮಹತ್ವದ ಸಾಧನಗಳಾಗಿವೆ. ಕನ್ನಡಿ, ಹಣಿಗೆ, ಪೌಡರ್,ಸೆಂಟು, ನೂಲುಂಡೆ, ಅವಳ ಸೌಂದರ್ಯ ಸಾಧನದ ಪರಿಕರಗಳೆನಿಸಿದರೂ ಕೂಡ ಹೆಣ್ಣು ಅವುಗಳ ಮೂಲಕವೇ ತನ್ನ

ಅಸ್ತಿತ್ವವನ್ನು ಕಂಡು ಕೊಳ್ಳುವ ಹಾಗೂ ಪೆನ್ನು ಬಿಳಹಾಳೆಗಳಗುರುವಷ್ಟೇ ಮಹತ್ವ ಇವಕ್ಕೂ ಇವೆ ಎಂಬುದನ್ನು ಸಾಬೀತು ಪಡಿಸಲು ಪ್ರಯತ್ನಿಸುತ್ತದೆ.ಈ ಮೂಲಕ ಹೆಣ್ಣಿನ ಸಂವೇದನೆ ಹಗು ಅಭಿವ್ಯಕ್ತಿಯ ಭಿನ್ನತೆಗೆ ಮಾನ್ಯತೆ ಹಾಗೂ ಸಮರ್ಥನೆಯನ್ನು ಒದಗಿಸುವ ಪ್ರಯತ್ನವನ್ನು ಕಾಣಬಹುದು. ಪುರುಷ ನಿರ್ಮಿತ ಸಮಾಜ, ಭಾಷೆ, ಸಂವೇದನೆ ಅಭಿವ್ಯಕ್ತಿಗಳೇ ಶ್ರೇಷ್ಟ, ಹೆಣ್ಣು ಅದೇನು ಹೇಳಲು ಸಾಧ್ಯ ಎಂಬ ಲಘು ಟೀಕೆಗೆ ಉತ್ತರ ಎಂಬಂತೆ ನಿಮಗೆ ಮುಖ್ಯವಲ್ಲದ ವಸ್ತುಗಳು ನಮಗೂ ಅಮುಖ್ಯವಾಗಬೇಕಿಲ್ಲ. ತನ್ನ ಆಯ್ಕೆ , ಪ್ರೀತಿ, ಸ್ವಂತಿಕೆತನ್ನದು ಎಂಬ ಆತ್ಮವಿಶ್ವಾಸ ಇಲ್ಲದೆ. ಈ ಕವನದ ಮೂಲಕ ನೋಡಬಾರದ ಚೀಲವನ್ನು ಹೆಣ್ಣು, ಹೆಣ್ಣಿನ ಮನಸ್ಸಿಗೂ ವಿಸ್ತರಿಸುತ್ತಾ ಹೆಣ್ಣಿನ ಮನಸ್ಸಿನ ಆಳ, ಆಲೋಚನೆ, ವೈಯಕ್ತಿಕತೆಯನ್ನು 'ನೋಡಬಾರದು' ಎಂಬ ನಿಷೇಧಾತ್ಮಕವಾದ ಅಭಿಪ್ರಾಯವೇ ವ್ಯಕ್ತವಾಗುತ್ತದೆ. ಹೆಣ್ಣಿನ ದೇಹ ಮನಸ್ಸು ಆಲೋಚನೆಗಳನ್ನು ಹಿಡಿದಿಡಲು, ನಿಯಂತ್ರಣದಲ್ಲಿಡಲು ಪುರುಷ ಪ್ರಧಾನ ಮೌಲ್ಯ ವ್ಯವಸ್ಥೆ ಎಷ್ಟೇ ಪ್ರಯತ್ನಿಸಿದರೂ ಕೂಡ ಅದು ಸಾಧ್ಯವಾಗದ ಹಾಗೂ ಸಾಧ್ಯವಾಗಲಾರದ ಬಗೆಯನ್ನು ಎತ್ತಿಹಿಡಿಯುತ್ತದೆ. ಈ ಮೂಲಕ ಹೆಣ್ಣಿನ ಖಾಸಗೀ ಬದುಕು ಹಾಗೂ ವೈಯಕ್ತಿಕತೆಗೆ ಒಂದು ಸ್ವರೂಪವನ್ನು ಅಧಿಕೃತತೆಯನ್ನು ನೀಡಲು ಪ್ರಯತ್ನಿಸಲಾಗೆದೆ. ಹೆಣ್ಣಿನ ವೈಯಕ್ತಿಕ ಆಸೆ, ಕನಸು, ಆಲೋಚನೆಗಳು ಕೆಲ ಸಂದರ್ಭದಲ್ಲಿ ಹೊರ ಬಂದರೆ ಹಲವು ವೇಳೆ ಒಣಗಿದ ಎಲೆಯಂತೆ, ಬೇಡವಾದ ಮರಳು ಮಣ್ಣಿನಂತೆ ಅಲ್ಲೇ ನಾಶವಾಗಬಹುದು. ಆದರೆ ಮುಖ್ಯ ಸವಾಲು ಏನೆಂದರೆ ಹೆಣ್ಣಿನ ಆಂತ್ರಯದ ಒಳಗನ್ನು ನೋಡಬರದಿ ಎಂಬ ನಿಷೇಧದೊಂದಿಗೆ ನಿಮ್ಮಿಂದ ನೋಡಲಾಗದು ಎಂಬ ವ್ಯಂಗ್ಯದ ಧ್ವನಿಯೂ ಅಡಗಿದೆ. ಇದು ಹೆಣ್ಣು ತನ್ನನ್ನು ತನ್ನ ಒಳಗನ್ನು ಕಾಯ್ದುಕೊಳ್ಳುವ ವಿನ್ಯಾಸಗಳಲ್ಲೊಂದು ಎಂಬುದನ್ನು ಗಮನಿಸಬಹುದು.

ಸವಿತಾ ನಗಭೂಷಣ್‌ರವರ ಕವಿತೆಗಳಲ್ಲಿ ಚಂದ್ರ ಅವರೆಲ್ಲಾ ಭಾವನೆಗಳ ಸಾಕಾರ ರೂಪವಾಗಿ, ಆಶಾವಾದದ ಪ್ರತೀಕವಾಗಿ ಕಂಡುಬಂದರೆ ವೈದೇಹಿಯವರ ಸೂರ್ಯ ಅಪ್ಪಟ ಪುರುಷ ಪ್ರಧಾನ ವ್ಯವಸ್ಥೆಯ ಪುರುಷ ರೂಪಕವಾಗಿ ಕಂಡು ಬರುತ್ತಾನೆ. ತನ್ನ ಕಾಂತಿ, ಪ್ರಭೆ, ಬಣ್ಣ ಬದಲಾಯಿಸುವ ಗುಣದಿಂದಾಗಿ ಹೆಣ್ಣನ್ನು ಸೆಳೆಯುವ, ತನ್ನವಳನ್ನಾಗಿಸಿಕೊಳ್ಳುವ ಹುನ್ನಾರಗಳನ್ನು ಹೆಣೆಯುವುದನ್ನು ಕಾಣಬಹುದು ಗಂಡು ಹೆಣ್ಣಿನ ಸಂಬಂಧದ ಸಂಕೀರ್ಣತೆಯನ್ನು ಸಮರ್ಥವಾಗಿ ಕಟ್ಟಿಕೊಡುವ ವೈದೇಹಿಯವರ ಕವನಗಳು ಹೋರಾಟ, ಜಗಳಗಳಿಂದ ಲಿಂಗತಾರತಮ್ಯದ, ಸ್ತ್ರೀ ಶೋಷಣೆಯ ಸ್ಥಿತಿಯನ್ನು ಬದಲಾಯಿಸಲು ಸಾಧ್ಯವಿಲ್ಲ. ಬದಲಾಗಿ ಪರಸ್ಪರರಲ್ಲಿನ ಹೊಂದಾಣಿಕೆ, ಪ್ರೀತಿ, ವಿಶ್ವಾಸ, ನಂಬಿಕೆಗಳಿಂದ ಮಾತ್ರ ಗಂಡು ಹೆಣ್ಣಿನ ನಡುವೆ ಸಮಾನತೆ ಮೂಡಲು ಸಾಧ್ಯ ಎಂಬ ಧೋರಣೆ ವೈದೇಹಿಯವರದ್ದು. ಹಾಗೆಂದ ಮಾತ್ರಕ್ಕೆ ಹೆಣ್ಣು ತನ್ನ ಸ್ವಂತಿಕೆ ಅಸ್ತಿತ್ವವನ್ನು ಬಿಟ್ಟು ಗಂಡಿಗೆ ವಿಧೇಯಳಾಗಿ, ಅವನ ದಾಸಿಯಾಗಿ ಬಾಳಬೇಕೆಂಬ ಅರ್ಥವಲ್ಲ. ಅದಕ್ಕೆ ಬದಲಾಗಿ ತನ್ನ ವ್ಯಕ್ತಿತ್ವವನ್ನು ಸಮರ್ಥವಾಗಿ

ರೂಪಿಸಿಕೊಳ್ಳುವ ಹಾಗೂ ಆ ಮೂಲಕ ಸಮಾನ ಮನೋಧರ್ಮದ ಅಪೇಕ್ಷೆಯೊಂದಿಗೆ ಬದುಕನ್ನು ನಡೆಸುವ ಆಶಯವನ್ನು ವ್ಯಕ್ತಪಡಿಸುತ್ತಾರೆ. ಹಾಗೆಯೇ ಹೆಣ್ಣು ಗಂಡಿನ ಅಧೀನತೆಗೆ ಒಳಪಟ್ಟಿದ್ದಾಗಲೀ ಅಥವಾ ಗಂಡು ಹೆಣ್ಣು ಸಮಾನವಾಗಿ ಬದುಕು ನಡೆಸುವ ವಿಧಾನವಾಗಲೀ ಏಕ ಕಾಲದಲ್ಲಿ ಸಂಭವಿಸಬಹುದಾದ ಘಟನೆಯಲ್ಲ. ಇದು ನಿರಂತರವಾದ 'ಪ್ರಕ್ರಿಯೆ' ಯಾವುದೇ ಹೊರ ಪ್ರಯತ್ನಗಳಿಲ್ಲದೆಯೂ ಕೂಡ ಕಾಲ, ಸಮಯ, ಸಂದರ್ಭಕ್ಕನುಗುಣವಾಗಿ ಅವರೆ ಹೊಂದಿಕೊಳ್ಳುವ, ಪರಸ್ಪರರನ್ನು ಅರಿಯುವ, ಒಂದಾಗಿ ಸಮಾನತೆಯ ಆಶಯದೊಂದಿಗೆ ಜೀವನ ನಡೆಸುವ ಕಾಲ ಬಂದೇ ಬರುವುದು ಎಂಬ ಆಶಾವಾದವನ್ನು ಕಾಣಬಹುದು.

ಒಟ್ಟಾರೆ ಮಹಿಳಾ ಕಾವ್ಯ ಮಹಿಳಾ ಅನ್ಯತೆಯ ಸಂಕೇತವಾಗಿದೆ. ಪ್ರತಿ ಲೇಖಕಿ ಕೂಡ ತನ್ನದೇ ಆದ ಮಟ್ಟದಲ್ಲಿ ಬದುಕಿನ ಅನನ್ಯತೆಯೊಂದಿಗೆ ಕಾವ್ಯದ ಅನನ್ಯತೆಯನ್ನು ಬೆಸೆಯಲು ಪ್ರಯತ್ನಿಸಿದ್ದಾರೆ. ಈ ಅಧ್ಯಯನ ಲೇಖಕಿಯರ ಕಾವ್ಯದ ವಿಭಿನ್ನ ಮಾದರಿಗಳ ಒಂದು ಎಳೆ ಅಷ್ಟೇ. ಅದನ್ನು ಇನ್ನಷ್ಟು ಮತ್ತಷ್ಟು ಅಧ್ಯಯನ ಮಾಡಲು, ವಿಸ್ತರಿಸಲು, ಹೊಳಹುಗಳನ್ನು ಹಿಡಿದಿಡಲು ಸಾಧ್ಯವಿದೆ. ಎನ್.ವಿ.ಭಾಗ್ಯಲಕ್ಷ್ಮಿ, ಲಲಿತಾ ಸಿದ್ಧಬಸವಯ್ಯ, ಇತ್ತೀಚೆಗೆ ಬರವಣಿಗೆಯಲ್ಲಿ ತೊಡಗಿರುವು ಯುವ ಲೇಖಕಿಯರ ಬರಹದಲ್ಲಿ ಇದು ಮತ್ತಷ್ಟು ನಿಚ್ಚಳವಾಗಿ ಮೂಡಿಬಂದಿದೆ. ಸಮಯ ಹಾಗೂ ಅಧ್ಯಯನದ ಮಿತಿಯಿಂದಾಗಿ ಕಾವ್ಯವನ್ನು ಇನ್ನೂ ಹೆಚ್ಚು ಅಧ್ಯಯನಕ್ಕೆ ಒಳಪಡಿಸಲು ಸಾಧ್ಯವಾಗಿಲ್ಲವೆಂಬ ಕೂರಗು ಇದ್ದೇ ಇದೆ. ಆದರೆ ಮಹಿಳಾ ಕಾವ್ಯವನ್ನು ಒಳಹೊಕ್ಕು ನೋಡಲು ಈ ಅಧ್ಯಯನ ಸಹಕಾರಿಯಾಗಬಲ್ಲದು. ಆ ಮಟ್ಟಿಗಿನ ಪ್ರಯತ್ನವನ್ನಂತೂ ಮಾಡಲಾಗಿದೆ.

**ಕೊನೆ ಟಿಪ್ಪಣಿ**

೧. ಸಾರ್ವತ್ರಿಕದೆಡೆಗೆ, ಬಿ.ಎನ್.ಸುಮಿತ್ರಾಬಾಯಿ. ಪು.ಸಂ. ೦೨.
೨. ಅದೇ, ಪು.ಸಂ. ೦೨.
೩. ಅದೇ, ಪು.ಸಂ. ೦೩
೪. ಅದೇ, ಪು.ಸಂ. ೦೩
೫. ಬೆಳಗೆರೆ ಜಾನಕಮ್ಮ ಬದುಕು – ಬರಹ, ಸಂ. ನೇಮಿಚಂದ್ರ, ಪು.ಸಂ.೨೩
೬. ಅದೇ, ಪು.ಸಂ.೬೯
೭. ಅದೇ, ಪು.ಸಂ. ೧೨೦
೮. ಅದೇ, ಪು.ಸಂ. ೮೦
೯. ಅದೇ, ಪು.ಸಂ.೪೪
೧೦. ಅದೇ, ಪು.ಸಂ. ೫೯
೧೧. ಸಾರ್ವತ್ರಿಕದೆಡೆಗೆ, ಬಿ.ಎನ್.ಸುಮಿತ್ರಾಬಾಯಿ, ಪು.ಸಂ. ೪೪
೧೨. ಇತಿಗೀತಿಕೆ, ವಿಜಯಾದಬ್ಬೆ, ಪು.ಸಂ.
೧೩. ಅದೇ, ಪು.ಸಂ.೧೫೯
೧೪. ಅದೇ, ಪು.ಸಂ. ೧೪೧
೧೫. ಅದೇ, ಪು.ಸಂ. ೨೮
೧೬. ಅದೇ, ಪು.ಸಂ. ೧೬೧
೧೭. ಅದೇ, ಪು.ಸಂ. ೧೩೧
೧೮. ಅದೇ, ಪು.ಸಂ. ೬೬
೧೯. ಅದೇ, ಪು.ಸಂ ೫೨
೨೦. ಅದೇ, ಪು.ಸಂ ೩೮
೨೧. ಅದೇ, ಪು.ಸಂ ೧೦೮
೨೨. ಸಾರ್ವತ್ರಿಕದೆಡೆಗೆ, ಬಿ.ಎನ್.ಸುಮಿತ್ರಾಬಾಯಿ, ಪು.ಸಂ. ೪೬
೨೩. ಇತಿಗೀತಿಕೆ, ವಿಜಯಾದಬ್ಬೆ, ಪು.ಸಂ ೩೩
೨೪. ಅದೇ, ಪು.ಸಂ ೪೮
೨೫. ಅದೇ, ಪು.ಸಂ ೩೬
೨೬. ಸಾರ್ವತ್ರಿಕದೆಡೆಗೆ, ಬಿ.ಎನ್.ಸುಮಿತ್ರಾಬಾಯಿ, ಪು.ಸಂ. ೪೮
೨೭. ಬೊಗಸೆಯಲ್ಲಿ ಹೊಳೆನೀರು, ಬಿ.ಎನ್.ಸುಮಿತ್ರಾಬಾಯಿ, ಪು.ಸಂ.೩೩
೨೮. ಸಾರ್ವತ್ರಿಕದೆಡೆಗೆ, ಬಿ.ಎನ್.ಸುಮಿತ್ರಾಬಾಯಿ, ಪು.ಸಂ. ೧೨
೨೯. ಮುನ್ನುಡಿ ಬೆನ್ನುಡಿಗಳ ನಡುವೆ, ಪ್ರತಿಭಾ ನಂದಕುಮಾರ್, ಪು.ಸಂ.೪
೩೦. ಅದೇ, ಪು.ಸಂ.೬
೩೧. ಅದೇ, ಪು.ಸಂ ೭
೩೨. ಹೆಡೆಯಂತಾಡುವ ಸೊಡರು, ತಾರಿಣಿ ಶುಭದಾಯಿನಿ, ಪು.ಸಂ ೨೦
೩೩. ಅದೇ, ಪು.ಸಂ , ೪೨೯
೩೪. ಅದೇ, ಪು.ಸಂ, ೪೨೯
೩೫. ಅದೇ, ಪು.ಸಂ ೪೮
೩೬. ಅದೇ, ಪು.ಸಂ ಪು.ಸಂ. ೪೭೫
೩೭. ಅದೇ, ಪು.ಸಂ ಪು.ಸಂ. ೪೭೫
೩೮. ಹೆಡೆಯಂತಾಡುವ ಸೊಡರು, ಆರ್.ತಾರಿಣಿ ಶುಭದಾಯಿನಿ, ಪು.ಸಂ.೨೧
೩೯. ಮುನ್ನುಡಿ ಬೆನ್ನುಡಿಗಳ ನಡುವೆ, ಪ್ರತಿಭಾ ನಂದಕುಮಾರ್, ಪು.ಸಂ.೪೧೪
೪೦. ಅದೇ ಪು.ಸಂ. ೭೩

೪೧. ಅದೇ ಪು.ಸಂ ೩೮೩
೪೨. ಅದೇ ಪು.ಸಂ ೩೩೪
೪೩. ಅದೇ ಪು.ಸಂ ೩೪೩
೪೪. ಅದೇ ಪು.ಸಂ, ೪೫೦
೪೫. ಪ್ರೇತಗಳೆಂದು ಕರೆಯಲು ಮನಸ್ಸಾಗದು. ಪ್ರತಿಭಾ ನಂದಕುಮಾರ್, ಪು.ಸಂ. ೧೮
೪೬. ಅದೇ, ಪು.ಸಂ.೧೮
೪೭. ಬಿಂದು ಬಿಂದಿಗೆ, ವೈದೇಹಿ, ಪು.ಸಂ. ೧೮
೪೮. ಅದೇ, ಪು.ಸಂ. ೧೮
೪೯. ಅದೇ, ಪು.ಸಂ. ೧೮
೫೦. ಪಾರಿಜಾತ, ವೈದೇಹಿ, ಪು.ಸಂ. ೪೨
೫೧. ಬಿಂದು ಬಿಂದಿಗೆ, ವೈದೇಹಿ, ಪು.ಸಂ. ೩೩
೫೨. ಅದೇ, ಪು.ಸಂ.೩೫
೫೩. ಅದೇ, ಪು.ಸಂ.೩೯
೫೪. ಅದೇ, ಪು.ಸಂ. ೩೫
೫೫. ಅದೇ, ಪು.ಸಂ. ೩೩
೫೬. ಪಾರಿಜಾತ, ವೈದೇಹಿ, ಪು.ಸಂ.೨೦
೫೭. ಬಿಂದು ಬಿಂದಿಗೆ, ವೈದೇಹಿ, ಪು.ಸಂ. ೪೦

# ಅಧ್ಯಾಯ ೬

# ಸಮಾರೋಪ

ಮಹಿಳಾ ಕಾವ್ಯ ಸ್ಥಾಪಿತ ನೆಲೆಗಳ ಅನುಸಂಧಾನ ಮತ್ತು ಪುನರ್‌ರಚನೆಯ ಪ್ರಕ್ರಿಯೆ ಎಂಬ ಸಂಶೋಧನಾ ಪ್ರಬಂಧದ ಅಧ್ಯಯನದಲ್ಲಿ ಬಹುಮುಖ್ಯವಾಗಿ ೨೦ನೇ ಶತಮಾನದ ಲೇಖಕಿಯರ ಬರವಣಿಗೆಯ ಕಡೆಗೆ ಗಮನ ಹರಿಸಲಾಗಿದೆ. ಸರಿಸುಮಾರು ಒಂದು ಶತಮಾನದ ಅವಧಿಯಲ್ಲಿ ಲೇಖಕಿಯರ ಬರವಣ್ಣಿಗೆಯನ್ನು ಪ್ರಾತಿನಿಧಿಕವಾಗಿ ಅಧ್ಯಯನಕ್ಕೆ ಒಳಪಡಿಸಲಾಗಿದೆ. ಈ ಅಧ್ಯಯನವು ಪ್ರಾತಿನಿಧಿಕ ಲೇಖಕಿಯರ ಕಾವ್ಯದ ಮಿತಿಗೆ ಒಳಪಟ್ಟಿದ್ದರೂ ಮಹಿಳಾ ಸಂಕಥನದ ಚಹರೆಗಳನ್ನು ಗುರುತಿಸಲು ಪೂರಕವಾಗಬಲ್ಲ ಲೇಖಕಿಯರ ಒಟ್ಟಾರೆ ಬರವಣಿಗೆಯನ್ನು ಗಮನಿಸುವುದರ ಮೂಲಕ ಅಧ್ಯಯನಕ್ಕೆ ಸಮಗ್ರತೆಯನ್ನು ತಂದುಕೊಡಲು ಪ್ರಯತ್ನಿಸಲಾಗಿದೆ. ಹಾಗಾಗಿ ಈ ಅದ್ಯಯನದಲ್ಲಿ ಹೆಣ್ಣಿನ ಬದುಕಿನ, ಬದಲಾವಣೆಯ, ಪುನರ್ ನಿರ್ಮಾಣದ ಚಹರೆಗಳು ದಾಖಲೆಗೊಂಡಿವೆ.

ಸ್ಥಾಪಿತ ನೆಲೆಗಳು ಎನ್ನುವ ಸಂದರ್ಭದಲ್ಲಿ ಹೆಣ್ಣಿನ ಜೀವನಕ್ಕೆ ಸಂಬಂಧಿಸಿದ ಮೌಲ್ಯ ವ್ಯವಸ್ಥೆಯ ಮಿತಿಗೆ ಸೀಮಿತಗೊಳಸಲಾಗಿದ್ದರೂ ಮೌಲ್ಯಗಳನ್ನು ಜೈವಿಕ, ಸಾಮಾಜಿಕ, ಸ್ಥಿರ ಮಾದರಿ ಹಾಗೂ ವರ್ತನೆಯಾದಾರಿತ ಎಂದು ಗುರುತಿಸುವುದರ ಮೂಲಕ ವ್ಯಾಪಕತೆಯನ್ನು ಕಾಯ್ದುಕೊಳ್ಳಲಾಗಿದೆ. ಕಾಲನಂತರದಲ್ಲೂ ಕೂಡ ಬದಲಾದ ಮೌಲ್ಯವ್ಯವಸ್ಥೆಯ ಹಿಡಿತ ಮತ್ತು ನಿರ್ಬಂಧಗಳ ಚಹರೆಗಳನ್ನು ಕಾವ್ಯ ಮುಖೇನ ಅದರ ಸಾಆಜಿಕ, ರಾಜಕೀಯ, ಆರ್ಥಿಕ ಪರಿಸ್ಥಿತಿಯ ಹಿನ್ನೆಲೆಯಲ್ಲಿ ಗುರುತಿಸಲಾಗಿದೆ. ಇವುಗಳ ವಿಶ್ಲೇಷಣೆಗೆ ಪೂರಕವಗುವಂತೆ ಮಹಿಳೆಯರ ಕಥನ ಸಾಹಿತ್ಯ ಮತ್ತು ಆತ್ಮಕಥನಗಳನ್ನು ಬಳಸಿಕೊಳ್ಳಲಾಗಿದೆ. ಸ್ಥಾಪಿತ ಮೌಲ್ಯಗಳು ಎಂದು ಗುರುತಿಸಲ್ಪಡುವ ಅಂಶಗಳು ‘ ಸಮಾನ ಜೀವನ ಕ್ರಮವನ್ನು ಕುರಿತದ್ದು ಎಂದರೂ ಕೂಡ ಅದು ಗಂಡು ಹೆಣ್ಣಿಗೆ ಸಂಬಂಧಿಸಿದಂತೆ ಹೇಗೆ ಭಿನ್ನ ಹಾಗೂ ಹೆಣ್ಣಿನ ಮಟ್ಟಿಗೆ ಅವು ಹೇಗೆ’ ಕರಾರು ಅಥವಾ ಒಪ್ಪಂದಗಳಾಗಿ ಮಾರ್ಪಟ್ಟಿವೆ ಎಂಬುದನ್ನು ಆಯಾ ಅಧ್ಯಯಕ್ಕೆ ಸಂಬಂಧಿಸಿದಂತೆ ಸ್ಥೂಲವಾಗಿ ಚರ್ಚಿಸಲಾಗಿದೆ.

ಮಹಿಳಾ ಕಾವ್ಯ ಕಾವ್ಯ ಮೀಮಾಂಸೆ ವಿವರಿಸುವ ಸೌಂಧರ್ಯಾನುಭೂತಿಗೆ ಮಾತ್ರ ಸಂಬಂಧಿಸಿರದೆ ಇದು ಹೆಣ್ಣಿನ ಬದುಕಿನ, ಬದಲಾವಣೆಗಳ ಮಹತ್ವದ ದಾಖಲೆಗಳನ್ನು

ಒಳಗೊಂಡಿವೆ. ಕೆಲವೊಮ್ಮೆ ಮಹಿಳಾ ಕಾವ್ಯದ ಸೌಂದರ್ಯ ಮೀಮಾಂಸೆಗೆ ಸಂಬಂಧಿಸಿದ ತೊಡಕುಗಳಿದ್ದರೂ ಕೂಡ ಅದರ ಸಾಮಾಜಿಕ ಮತ್ತು ರಾಜಕೀಯ ಉದ್ದೇಶಗಳನ್ನು ಪ್ರಶ್ನೆ ಮಾಡಲು ಸಾಧ್ಯವಿಲ್ಲ. ಮಹಿಳಾ ಕಾವ್ಯದ ಸೌಂದರ್ಯ ಮೀಮಾಂಸೆಗೆ ಸಂಬಂಧಿಸಿದ ತೊಡಕುಗಳು ಹೆಣ್ಣು ಹಿಂದಿನಿಂದಲೂ ಅದುಮಿಟ್ಟ ಭಾವಗಳಿಗೆ ರೂಪುಕೊಡುವಲ್ಲಿ ಎದುರಿಸಬೇಕಾದ ತೊಡಕುಗಳೇ ಆಗಿವೆ. ಅದು ಭಾಷೆ, ಭಾವ, ಸಂವಹನಕ್ಕೆ ಸಂಬಂದಿಸಿದಂತೆ ಪುರುಷ ಪ್ರಧಾನ ವ್ಯವಸ್ಥೆಯನ್ನು ಮೀರುವಲ್ಲಿ ಎದರಿಸಬೇಕಾದ ತೊಡಕುಗಳೂ ಕೂಡ ಆಗಿವೆ. ಇದೆಲ್ಲದರ ನಡುವೆಯೂ ಮಹಿಳಾ ಕಾವ್ಯದ ಅಭಿವ್ಯಕ್ತಿ ಗತದಿಂದಲೂ ಹೆಣ್ಣಿನ ಮುಚ್ಚಿಟ್ಟ ಬದುಕಿನ ಅಪರಿಮಿತ, ಅಪರಿಚಿತ ಅನುಭವಗಳ ಅಭಿವ್ಯಕ್ತಿಯೇ ಆಗಿದೆ.

ಮಹಿಳಾ ಅಭಿವ್ಯಕ್ತಿ ಹೆಣ್ಣಿನ ಸೃಜನ ಶಕ್ತಿಯ ಜೊತೆಗೆ ವ್ಯವಸ್ಥೆಯೊಂದಿಗೆ ಹೆಣ್ಣು ನಡೆಸುವ ಸಂವಾದದ ಸ್ವರೂಪವನ್ನೂ ಬಯಲಿಗೆಳೆಯುತ್ತದೆ. ಹಿಂದಿನಿಂದಲೂ ಅಧೀನತೆಗೆ ಒಳಪಟ್ಟ ಹೆಣ್ಣಿಗೆ ಮಾನ್ಯತೆಯನ್ನೂ, ಅಧಿಕೃತತೆಯನ್ನೂ, ಅವಳ ವ್ಯಕ್ತಿತ್ವಕ್ಕೊಂದು ಘನತೆಯನ್ನೂ ಕಟ್ಟಿಕೊಡುವ, ಸಾಮಾಜಿಕ ನ್ಯಾಯಕ್ಕಾಗಿ, ಸಮಾನತೆಗಾಗಿ ಹೋರಾಡುವು ಮಹಿಳಾ ಅಭಿವ್ಯಕ್ತಿಯನ್ನು ಕೇಂದ್ರೀಕರಿಸಲಾಗಿದೆ. ಗಂಡು ಹೆಣ್ಣಿನ ಸಂಬಂಧ ಎಷ್ಟೇ ಜಟಿಲವಾಗಿದ್ದರೂ ಒಬ್ಬರಿಗೊಬ್ಬರು ಸಮಾನವಾಗಿ, ಸಹಬಾಳ್ವೆಯ ಕಡೆಗೆ ಮಹಿಳಾ ಕಾವ್ಯದ ಗಮನವಿದೆ. ಹೆಣ್ಣು ಕುಟುಂಬದಿಂದ ಹೊರಬಂದು ತನ್ನ ಅಸ್ಮಿತೆಯನ್ನು ಗುರುತಿಸಿಕೊಳ್ಳುವುದಕ್ಕಿಂತ ಕುಟುಂಬ, ದಾಂಪತ್ಯದ ಪರಿಧಿಯಲ್ಲಿಯೇ ತನ್ನ ಅಸ್ಮಿತೆಯನ್ನು ಕಂಡುಕೊಳ್ಳಬಹುದಾದ ಹಾದಿಗಳ ಕಡೆಗೆ ಈ ಅಧ್ಯಯನ ಗಮನ ಹರಿಸಿದೆ.

**೬.೧ ಅಧ್ಯಯನದ ಫಲಿತಗಳು :**

೧. ಹೆಣ್ಣು ಗಂಡಿನ ಸ್ಥಿತಿಗತಿಗಳು ಕಾಲ ಕಾಲಕ್ಕೆ, ಸಮಾಜದಿಂದ ಸಮಾಜಕ್ಕೆ ಬದಲಾದರೂ ಕೂಡ ಲಿಂಗಾಧಾರಿತ ವರ್ಗೀಕರಣ ಮಾತ್ರ ಪ್ರಪಂಚದೆಲ್ಲೆಡೆ ಅಧಿಕಾರದ ಸಂಬಂಧದ ಶ್ರೇಣೀಕರಣ ಧೋರಣೆಯಿಂದಲೇ ಕೂಡಿದೆ. ಆಧುನಿಕ ಅವಕಾಶಗಳಿಂದಾಗಿ ಸಮಾಜದಲ್ಲಿ ಮಹತ್ವದ ಪಲ್ಲಟಗಳು ಘಟಿಸುವಾಗಲೂ ಅಧಿಕಾರ ಕೇಂದ್ರ ಸಕ್ರಿಯವಾಗಿ ಕಾರ್ಯ ನಿರ್ವಹಿಸುತ್ತಿದೆ. ಗಂಡಿನ ಅಧಿಕಾರ ಕೇಂದ್ರ ಅಸಮಾನತೆಯಿಂದ ಕೂಡಿದ್ದು ಎಂಬ ಅರಿವು ಸ್ಪಷ್ಟವಿದ್ದಾಗ್ಯೂ ವಾಸ್ತವದ ಸ್ತಿತಿ ಇನ್ನು ಅಧಿಕಾರ ಮೂಲದಲ್ಲಿದೆ. ಹಾಗಾಗಿ ಲಿಂಗ ಶ್ರೇಣೀಕರಣದ ಬಗೆಗಿನ ಅರಿವು, ಆಶಯ, ಮತ್ತು ವಾಸ್ತವ ಮೂರನ್ನು ಈ ಅಧ್ಯಯನದಲ್ಲಿ ಗುರುತಿಸಬಹುದು.

೨. ಗಂಡಿನ ಅಧಿಕಾರ ಕೇಂದ್ರವೇ ಎಲ್ಲಾ ಸಂದರ್ಭಗಳಲ್ಲಿಯೂ ಹೆಣ್ಣು ಅಧೀನ ದರ್ಜೆಯ ಸ್ಥಾನವನ್ನು ಪಡೆಯಲು ಕಾರಣವಾಗಿದೆ. ಗಂಡಿನ ಅಧಿಕಾರ ಕೇಂದ್ರ ಹೆಣ್ಣಿನ ಜೈವಿಕತೆಯನ್ನು ಮುಂದೊಡ್ಡಿ

ಅವಳಿಗೆ 'ದ್ವಿತೀಯ ಲಿಂಗ'(ಜ್ಞುಊಜ ಜ್ಞು)ದ ಸ್ಥಾನವನ್ನು ಶಾಶ್ವತಗೊಳಿಸುವ ನಿಟ್ಟಿನಲ್ಲಿ ಸಕ್ರಿಯವಾಗಿರುವ ಸಂದರ್ಭದಲ್ಲಿಯೂ ಈ ಅಧಿಕಾರ ಸಂಬಂಧವನ್ನು ಪುನರ್‌ರಚಿಸುವ ಹೆಣ್ಣಿನ ಕಾಳಜಿ ನಿರಂತರವಾದ್ದು. ಎಂದರೆ ಹೆಣ್ಣನ್ನು ನಿಯಂತ್ರಿಸುವ ವ್ಯವಸ್ಥೆಯ ಹುನ್ನಾರವೂ ನಿರಂತರವಾದ್ದು, ಅದನ್ನು ಮೀರುವ ಹೆಣ್ಣಿನ ಪ್ರಯತ್ನವೂ ನಿರಂತರವಾದದ್ದು. ಇದು ಸಂಶೋಧನಾ ಅಧ್ಯಯನದಿಂದ ಸ್ಪಷ್ಟವಾಗುತ್ತದೆ.

೩. ಕಾಲ, ಸಂದರ್ಭ, ಸನ್ನಿವೇಶಗಳು ಬದಲಾದರೂ ಹೆಣ್ಣಿಗೆ ಸಂಬಂಧಿಸಿದ ಮೌಲ್ಯವ್ಯವಸ್ಥೆಯ ಚೌಕಟ್ಟುಗಳಾಗಲೀ ಅವುಗಳ ಕಾರ್ಯಮಾದರಿಗಳಾಗಲಿ ಹೆಚ್ಚಿನ ಬದಲಾವಣೆಗಳಿಲ್ಲದೆ ಮುಂದುವರಿಯುತ್ತಿವೆ. ವಸಾಹತೀಕರಣ, ಜಾಗತೀಕರಣ ಮತ್ತು ವಸಾಹತೋತ್ತರ ಚಿಂತನೆಗಳ ಪ್ರಭಾವದಿಂದಾಗಿ ಹೆಣ್ಣಿನ ಜೀವನ ವಿಧಾನದಲ್ಲಿ ಮಹತ್ವದ ಪಲ್ಲಟಗಳು ಘಟಿಸುತ್ತಿರುವಾಗಲೂ ಅಧಿಕಾರ ಕೇಂದ್ರ ಹೆಣ್ಣನ್ನು ನಿಯಂತ್ರಿಸುವಲ್ಲಿ ಸಕ್ರಿಯವಾಗಿ ಕಾರ್ಯ ನಿರ್ವಹಿಸುತ್ತಿದೆ. ಅಲ್ಲದೆ ಪಲ್ಲಟಗೊಳ್ಳುತ್ತಿರುವ ಈ ಸೂಕ್ಷ್ಮ ನೆಲೆಗಳೂ ಕೂಡ ಹೆಣ್ಣನ್ನು ಬಂಧಿಸುವಲ್ಲಿ, ಅಧೀನವಾಗಿಸುವಲ್ಲಿ ನಿರತವಾಗಿವೆ.

೪. ಇತರೆ ದಮನಿತ ವರ್ಗಗಳ ಹೋರಾಟಕ್ಕಿಂತ ಹೆಣ್ಣಿನ ಹೋರಾಟ ಹೆಚ್ಚು ಸಂಕೀರ್ಣವಾದದ್ದೂ, ಅಮೂರ್ತವಾದದ್ದೂ ಆಗಿದೆ. ಏಕೆಂದರೆ ದಮನಿತ ವರ್ಗಗಳಲ್ಲಿ ಗುರುತಿಸುವಷ್ಟು ಸ್ಪಷ್ಟವಾಗಿ ಶೊಷಕ ಹಾಗೂ ಶೋಷಿತರನ್ನು ಲಿಂಗ ಶ್ರೇಣೀಕರಣದಲ್ಲಿ ಬೇರ್ಪಡಿಸಲು ಸಾಧ್ಯವಿಲ್ಲ. ಜೊತೆಗೆ ಹೆಣ್ಣಿನ ಶೋಷಣೆಯ ಸ್ವರೂಪವನ್ನಾಗಲೀ, ಶೋಷಿತರನ್ನಾಗಲೀ ಸ್ಪಷ್ಟವಾಗಿ ಗುರುತಿಸುವುದು ಕಷ್ಟ. ಏಕೆಂದರೆ ಇಡೀ ವ್ಯವಸ್ಥೆ ಗಂಡಿನ ಪರವಾಗಿರುವುದರಿಂದ ಹೆಚ್ಚಿನ ಸಂದರ್ಭದಲ್ಲಿ ಹೆಣ್ಣಿನ ಹೋರಟದ ಸ್ವರೂಪ, ಹಾಗೂ ಕಾರ್ಯತಂತ್ರಗಳು ಅಮೂರ್ತ ಹಾಗೂ ಅಸ್ಪಷ್ಟತೆಯಿಂದ ಕೂಡಿರುತ್ತವೆ. ಇವುಗಳನ್ನು ಗುರುತಿಸುವ ಪ್ರಯತ್ನವನ್ನು ಈ ಅಧ್ಯಯನದಲ್ಲಿ ನಡೆಸಲಾಗಿದೆ.

೫. ಸ್ಥಾಪಿತ ಮೌಲ್ಯಗಳು ಎಂದು ಕರೆಸಿಕೊಳ್ಳುವ ಅಂಶಗಳು ಹೆಣ್ಣಿನ ಮೂಲ ಮತ್ತು ಹೇರಲ್ಪಟ್ಟ ವ್ಯಕ್ತಿತ್ವದ ಚಹರೆಗಳನ್ನು ಗುರುತಿಸಲು ಸಾಧ್ಯವಾಗದಂತೆ ಹೆಣೆಯಲ್ಪಟ್ಟಿವೆ. ಮತ್ತು ಈ ಮೌಲ್ಯಗಳು ಗಂಡು ಹೆಣ್ಣಿಗೆ ಸಂಬಂಧಿಸಿದಂತೆ ಶ್ರೇಣೀಕರಣದ ನೆಲೆಯಲ್ಲಿ ನಿರೂಪಿಸಲ್ಪಟ್ಟಿವೆ. ಇವು ಹೆಣ್ಣಿನ ಮಟ್ಟಿಗೆ ಬಂಧನದ ಕರಾರುಗಳಾಗಿಯೂ, ಅನಿವಾರ್ಯವಾಗಿ ಮಾಡಲೇಬೇಕಾದ ಒಪ್ಪಂದಗಳಾಗಿಯೂ ಮಾರ್ಪಟ್ಟಿವೆ. ಅಲ್ಲದೆ ಇವು ಹೆಣ್ಣಿನ ಮನೋವಿನ್ಯಾಸವಾಗಿ ಕಾರ್ಯನಿರ್ವಹಿಸುತ್ತಿವೆ ಎಂಬುದು ಈ ಅಧ್ಯಯನದಿಂದ ತಿಳಿದುಬರುತ್ತದೆ.

೬. ಅನುಭವದ ಅಭಿವ್ಯಕ್ತಿ ಮತ್ತು ಸಂವೇದನೆ ಎನ್ನುವುದು ಯಾವುದೇ ಭೇದವಿಲ್ಲದೇ ರೂಪುಗೊಳ್ಳುವ ಆಲೋಚನಾ ಕ್ರಮ. ಮಹಿಳಾ ಕಾವ್ಯಕ್ಕೆ ಅದರದ್ದೇ ಆದ ಭಾಷೆ, ಅಭಿವ್ಯಕ್ತಿ ವಿಧಾನ, ತಂತ್ರಗಾರಿಕೆ, ರಚನೆ, ನಿರಚನಾ ಕ್ರಮಗಳಿವೆ. ಅವುಗಳನ್ನು ಪುರುಷ ಪ್ರಧಾನ ವ್ಯವಸ್ಥೆ ಗ್ರಹಿಸುವಲ್ಲಿ ಮತ್ತು ಸ್ಥಾನ

ನಿರ್ದೇಶನಕ್ಕೆ ಒಳಪಡಿಸುವಲ್ಲಿ ತಾರತಮ್ಯವನ್ನು ಮಾಡಿದೆ ಎಂಬುದನ್ನು ಅಧ್ಯಯನದಿಂದ ಗುರುತಿಸಲಾಗಿದೆ.

೭. ಹೆಣ್ಣಿನ ಅಭಿವ್ಯಕ್ತಿಯ ವಿನ್ಯಾಸವೇ ಭಿನ್ನವಾಗಿದೆ. ಅದನ್ನು ಗುರತಿಸಲು ಸಾಧ್ಯವಾಗದಿರುವುದರಿಂದ ಮಹಿಳಾ ಕಾವ್ಯಕ್ಕೆ ಅನ್ಯಾಯವಾಗಿದೆ. ಇದರಿಂದಾಗಿ ಮಹಿಳಾ ಕಾವ್ಯದ ಸ್ಪಷ್ಟವಾದ ಚರ್ಚೆ ಹಾಗೂ ಸ್ಥಾನ ನಿರ್ದೇಶನದಲ್ಲಿ ತೊಡಕುಂಟಾಗಿದೆ. ಮಹಿಳಾ ಕಾವ್ಯ ಈ ಅಧಿಕೃತತೆಗಾಗಿ ನಿರಂತರ ಹೋರಾಟದಲ್ಲಿ ತೊಡಗಿಕೊಂಡಿರುವುದು ಅಧ್ಯಯನದಿಂದ ಸ್ಪಷ್ಟವಾಗುತ್ತದೆ.

೮. ಬಿಡುಗಡೆ ಎನ್ನುವುದು ಹೆಣ್ಣಿನ ಮಟ್ಟಿಗೆ ಬಹುಮುಖಿಯಾದದ್ದು. ಸ್ವಬಿಡುಗಡೆಯೂ ಸೇರಿದಂತೆ ವ್ಯವಸ್ಥೆಯ ಸ್ಥಾಪಿತ ದೃಷ್ಟಿಕೋನಗಳಂದ ಬಿಡುಗಡೆ ಪಡೆಯುವುದು ಅವಳೆದುರಿಗಿರುವ ಮೂಲ ಸವಾಲು. ಬಿಡುಗಡೆಯನ್ನು ಕುರಿತ ಲೇಖಕಿಯರ ಆಲೋಚನಾ ವಿಧಾನಗಳು, ಅದರ ಪ್ರಯತ್ನಗಳು. ಪ್ರತಿರೋಧದ ಮಾದರಿಗಳು, ಅಭಿವ್ಯಕ್ತಿಯಲ್ಲಿ ಹಲವು ರೂಪಗಳನ್ನು ಪಡೆದಿದೆ. ಈ ತನಕದ ಮಹಿಳಾ ಕಾವ್ಯದ ಅಧ್ಯಯನದಲ್ಲಿ ಇದನ್ನು ಕಡೆಗಣಿಸಲಾಗಿದೆ.

೯. ಹೆಣ್ಣಿನ ವ್ಯಕ್ತಿತ್ವ ವಿನ್ಯಾಸದ ಮೇಲೆ ಪ್ರಭಾವ ಬೀರುವ ಎಲ್ಲಾ ಬಗೆಯ ಮೂರ್ತ, ಅಮೂರ್ತ ನೆಲೆಗಳು ಕಾವ್ಯದಲ್ಲಿ ಅಭಿವ್ಯಕ್ತಗೊಂಡಿದೆ. ಇವುಗಳನ್ನು ಸೂಕ್ತ ರೀತಿಯಲ್ಲಿ ಗುರುತಿಸುವ ಪ್ರಯತ್ನವನ್ನು ಈ ಅಧ್ಯಯನದಲ್ಲಿ ಮಾಡಲಾಗಿದೆ.

### ೯.೨ ಅಧ್ಯಯನದ ಸವಾಲುಗಳು ಮತ್ತು ಸಾಧ್ಯತೆಗಳು :

1. ತಾತ್ವಿಕತೆಯನ್ನು ಕಟ್ಟುವಲ್ಲಿ ಒಟ್ಟು ಮಹಿಳಾ ಕಾವ್ಯವನ್ನು ಅಧ್ಯಯನಕ್ಕೆ ಒಳಪಡಿಸಿದ್ದರೂ ಸಾಂದರ್ಭಿಕ ಚರ್ಚೆಯಲ್ಲಿ ಎಲ್ಲರ ಕಾವ್ಯವನ್ನೂ ಸಂಪೂರ್ಣ ಚರ್ಚೆಗೆ ಒಳಪಡಿಸುವುದು ಕಷ್ಟದ ಕೆಲಸ. ಈ ನಡುವೆಯೂ ಸಾಧ್ಯವಾದ ಮಟ್ಟಿಗೆ ಮಹಿಳಾ ಕಾವ್ಯದ ಸಮರ್ಪಕವಾದ ಚರ್ಚೆಗೆ ಗಮನ ಕೊಡಲಾಗಿದೆಯಾದರೂ ಇದನ್ನು ಇನ್ನಷ್ಟು ಮುಂದುವರಿಸಲು ಸಾಧ್ಯವಿದೆ.

2. ಸ್ತ್ರೀವಾದಿ ಚಿಂತನೆ ಎನ್ನುವ ಪರಿಕಲ್ಪನೆಗೆ ಬಹುಮುಖಿ ನೆಲೆಗಳನ್ನು ಗುರುತಿಸಲು ಸಾಧ್ಯ. ಕಾಲದಿಂದ ಕಾಲಕ್ಕೆ, ಲೇಖಕಿಯಿಂದ ಲೇಖಕಿಗೆ, ಹೆಚ್ಚಿನ ಸಂದರ್ಭದಲ್ಲಿ ಬೇರೆ ಬೇರೆ ಸನ್ನಿವೇಶಕ್ಕೆ ತಕ್ಕಂತೆ ಅದು ಭಿನ್ನ ಸ್ವರೂಪದಲ್ಲಿ ಪ್ರಕಟಗೊಂಡಿದೆ. ಈ ಬಹುಮುಖೀ ನೆಲೆಗಳನ್ನು ಒಂದು ಚೌಕಟ್ಟಿಗೆ ಒಳಪಡಿಸುವ ಪ್ರಾಮಾಣಿಕ ಪ್ರಯತ್ನ ಈ ಅಧ್ಯಯನದ್ದು. ಇದನ್ನು ಕಾಲಘಟ್ಟ, ಲೇಖಕಿಯರಿಗೆ ಸಂಬಂಧಿಸಿದಂತೆ ಪ್ರತ್ಯೇಕವಾದ ಅಧ್ಯಯನ ನಡೆಸಲು ಅವಕಾಶವಿದೆ.

3. ವಿಸ್ತಾರವಾದ ಮತ್ತು ಭಿನ್ನ ನೆಲೆಗಳ ಮೌಲ್ಯವ್ಯವಸ್ಥೆಯ ಕೆಲ ವಲಯಗಳನ್ನು ಮಾತ್ರ ಪ್ರಸ್ತುತ ಅಧ್ಯಯನದಲ್ಲಿ ಚರ್ಚೆಗೆ ಒಳಪಡಿಸಲಾಗಿದೆ. ಸ್ಥಾಪಿತ ನೆಲೆಗಳನ್ನು ಜೈವಿಕ, ಸಾಮಾಜಿಕ, ಆರ್ಥಿಕ ವಲಯಗಳಲ್ಲಿ ಹೆಣ್ಣಿಗೆ ಸಂಬಂಧಿಸಿದ ಮೌಲ್ಯವ್ಯವಸ್ಥೆಗೆ ಸೀಮಿತಗೊಳಿಸಲಾಗಿದೆ. ಇದರಿಂದಾಗಿ

ಅಧ್ಯಯನಕ್ಕೆ ಸಮಗ್ರತೆ ಬಂದಿಲ್ಲ ಎಂಬ ಆತಂಕ ಕಾಡಿದೆ. ಹಾಗಾಗಿ ಮೌಲ್ಯ ವ್ಯವಸ್ಥೆಯ ಪ್ರತಿಘಟಕಗಳನ್ನೂ, ಅದರೊಟ್ಟಿಗೆ ಕಾಲದ ಚಲನೆಯನ್ನು ಸಮಗ್ರವಾಗಿ ಅಧ್ಯಯನಕ್ಕೆ ಒಳಪಡಿಸುವ ಸಾಧ್ಯತೆಗಳಿವೆ.

4. ಧರ್ಮ, ರಾಜಕೀಯ, ಶಿಕ್ಷಣ, ಕಾನೂನು ಮುಂತಾದ ಸಾಂಸ್ಥಿಕ ರಚನೆಗಳು ಹೆಣ್ಣನ್ನು ಅಧೀನವಾಗಿಸುವಲ್ಲಿ ನಿರತವಾಗಿರುವ ವಿಧಾನಗಳನ್ನು ಕುರಿತ ಅಧ್ಯಯನವನ್ನು ಇನ್ನಷ್ಟು ಆಳವಾಗಿ ಮುಂದುವರಿಸಲು ಸಾಧ್ಯವಿದೆ.
5. ಪ್ರಸ್ತುತ ಅಧ್ಯಯನದ ಸಂದರ್ಭದಲ್ಲಿ ಮಹಿಳಾ ಕಾವ್ಯವನ್ನು ಮೌಲ್ಯವ್ಯವಸ್ಥೆಯೊಂದಿಗಿನ ಮುಖಾಮುಖಿಯ ಹಿನ್ನೆಲೆಯಲ್ಲಿ ಹೆಚ್ಚು ಚರ್ಚಿಸಲಾಗಿದೆ. ಭಾಷೆ ಬಂಧಗಳನ್ನು ಕುರಿತಂತೆ ಇನ್ನಷ್ಟು ವಿಸ್ತರಿಸಲು ಸಾಧ್ಯವಿದೆ. ಮುಂದಿನ ಅಧ್ಯಯನಗಳು ಮಹಿಳಾ ಕಾವ್ಯದಲ್ಲಿನ ಭಾಷೆ, ಬಂಧ, ರಚನೆ, ನಿರಚನೆಗಳನ್ನು ಕುರಿತಂತೆ ಅಧ್ಯಯನಗಳನ್ನು ಮುನ್ನೆಡಸಬಹುದು.
6. ಮಹಿಳಾ ಕಾವ್ಯವನ್ನು ಪ್ರಸ್ತುತ ಅಧ್ಯಯನದಲ್ಲಿ ಯಾವುದೇ ರೀತಿಯ ತೌಲನಿಕ ಅಧ್ಯಯನಕ್ಕೆ ಒಳಪಡಿಸಲು ಸಾಧ್ಯವಾಗಿಲ್ಲ. ಮುಂದೆ ಮಹಿಳಾ ಕಾವ್ಯವನ್ನು ಸಮಕಾಲೀನ ಹಾಗೂ ಭಿನ್ನ ಕಾಲಘಟ್ಟದ ಲೇಖಕ, ಲೇಖಕಿಯರ ಕಾವ್ಯದೊಂದಿಗೆ ತೌಲನಿಕ ಅಧ್ಯಯನವನ್ನು ನಡೆಸಲು ಹೆಚ್ಚಿನ ಸಾಧ್ಯತೆಗಳಿವೆ.
7. ಆಧುನಿಕತೆ ಮತ್ತು ಜಾಗತೀಕರಣದ ಪ್ರಭಾವವನ್ನು ಮೌಲ್ಯ ವ್ಯವಸ್ಥೆಯ ಕಾರ್ಯಮಾದರಿಗೆ ಸಂಬಂಧಿಸಿದಂತೆ ಸಾಂದರ್ಭಿಕವಾಗಿ ಚರ್ಚಿಸಲಾಗಿದೆಯೇ ವಿನಃ ಒಟ್ಟು ಹೆಣ್ಣಿನ ಬದುಕು ಮತ್ತು ಬರವಣಿಗೆಯ ಮೇಲೆ ಇವುಗಳ ಪ್ರಭಾವನ್ನು ಸಮಗ್ರವಾಗಿ ಅಧ್ಯಯನ ನಡೆಸಲು ಸಾಧ್ಯವಾಗಿಲ್ಲ. ಕಾರಣ ಜಾಗತೀಕರಣ ಹಾಗೂ ಅಭಿವೃದ್ಧಿಯ ಪರಿಕಲ್ಪನೆಗಳು ಹೆಣ್ಣಿಗೆ ಕೊಡಮಾಡಿರುವ ಅವಕಾಶಗಳನ್ನು ಆಧರಿಸಿ ಇನ್ನೂ ಹೆಚ್ಚಿನ ಅಧ್ಯಯನವನ್ನು ನಡೆಸಲು ಮುಂದಿನ ಅಧ್ಯಯನಕಾರರಿಗೆ ಅವಕಾಶಗಳಿವೆ.

## ಆಕರ ಗ್ರಂಥಗಳು :


೧. ಅಕ್ಷತಾ ಕೆ., ೨೦೦೮, ರೆಕ್ಕೆಬಿಚ್ಚಿ ಆಕಾಶನೆಚ್ಚಿ, ಅಹರ್ನಿಶಿ ಪ್ರಕಾಶನ, ಶಿವಮೊಗ್ಗ.

೨. ಉಷಾ ಪಿ ರೈ., ೨೦೦೪, ಹಕ್ಕಿ ಮತ್ತು ಗಿಡುಗ, ಸಾತ್ವಿಕ ಪ್ರಕಾಶನ, ಬೆಂಗಳೂರು.

೩. ಉಷಾ ಸ., ೧೯೮೧, ತೊಗಲುಗೊಂಬೆಯ ಆತ್ಮಕಥೆ, ಪುಸ್ತಕ ಚಿಲುಮೆ, ಮೈಸೂರು.

೪. ಉಷಾ ಸ., ೧೯೯೦, ಈ ನೆಲದ ಹಾಡು, ಸಂವಾದ ಪ್ರಕಾಶನ, ಚಿತ್ರದುರ್ಗ.

೫. ಉಷಾ ಸ. ೨೦೦೫, ಹವಳ ಹಾರಿದ ಹೊತ್ತು, ಅಭಿನವ ಪ್ರಕಾಶನ, ಬೆಂಗಳೂರು.

೬. ಉತ್ತನೂರು ರಾಜಮ್ಮ ವಿ. ಶೆಟ್ಟಿ, ೧೯೮೮, ಮೂಡಲ ಸೀಮೆ ಬ್ಯಾಸಿಗೆ, ಶೂದ್ರ ಪ್ರಕಾಶನ, ಬೆಂಗಳೂರು.

೭. ಉತ್ತನೂರು ರಾಜಮ್ಮ ವಿ. ಶೆಟ್ಟಿ, ೧೯೯೫, ಕಳ್ಳು ಬಳ್ಳಿಯ ಕಂಕಣ, ಶೂದ್ರ ಪ್ರಕಾಶನ, ಬೆಂಗಳೂರು.

೮. ಕನಕ ಹಾ. ಮ, ೧೯೯೭, ಪಾಪನಾಶಿನಿ, ಕನ್ನಡ ಪ್ರಪಂಚ ಪ್ರಕಾಶನ , ದಕ್ಷಿಣ ಕನ್ನಡ.

೯. ಕಮಲ ಎಂ ಆರ್, ೧೯೯೨, ಜಾಣೆ, ಕಲ್ಯಾಣಿ ಪ್ರಕಾಶನ ಬೆಂಗಳೂರು.

೧೦. ಕಮಲಾ ಹಮ್ಮಿಗೆ, ೧೯೮೩, ವಿಷಕನ್ಯೆ, ನೆಲಮನೆ ಪ್ರಕಾಶನ, ಮೈಸೂರು.

೧೧. ಕಮಲಾ ಹಮ್ಮಿಗೆ, ೨೦೦೪, ಕರುಳ ಸಂವಾದ, ಸಿವಿಜಿ ಪಬ್ಲಿಕೇಷನ್ಸ, ಬೆಂಗಳೂರು.

೧೨. ಕವಿತಾ ರೈ, ೧೯೯೯, ಹಕ್ಕಿ ಹರಿವ ನೀರು, ಕನ್ನಡ ಸಂಘ, ಕ್ರೈಸ್ಟ್ ಕಾಲೇಜು, ಬೆಂಗಳೂರು.

೧೩. ಕವಿತಾ ರೈ, ೨೦೦೫, ನೀರ ತೇರು, ಅಭಿನವ ಪ್ರಕಾಶನ, ಬೆಂಗಳೂರು.

೧೪. ಕವಿತಾ ರೈ, ೨೦೧೦, ನೀರತೇಜಿಯನೇರಿ, ಸೃಷ್ಟಿ ಪಬ್ಲಿಕೇಶನ್, ಬೆಂಗಳೂರು.

೧೫. ಗೀತಾ ದೇಸಾಯಿ, (ಸಂ)೧೯೮೮೪, ಕರ್ನಾಟಕ ಲೇಖಕಿಯರ ಸಂಘ, ಬೆಂಗಳೂರು.

೧೬. ಚಂದ್ರಿಕಾ ಪಿ., ನಿಮ್ಮ ಚರಿತ್ರೆಯಲ್ಲಿ ನಮಗೆ ಜಾಗವಿಲ್ಲ, ಕನ್ನಡ ಸಂಘ, ಕ್ರೈಸ್ಟ್ ಕಾಲೇಜು, ಬೆಂಗಳೂರು.

೧೭. ಜ್ಯೋತಿ ಗುರುಪ್ರಸಾದ್, ೨೦೧೧, ವರನಂದಿ ಪ್ರತಿಮೆ, ಲೋಹಿಯಾ ಪ್ರಕಾಶ ನ , ಬಳ್ಳಾರಿ.

೧೮. ತಾರಿಣಿ ಶುಭದಾಯಿನಿ, ೨೦೦೫, ತೋಡಿರಾಗ, ಸದಾಸಿರಿ ಪ್ರಕಾಶನ, ಚಿತ್ರದುರ್ಗ.

೧೯. ತಾರಿಣಿ ಶುಭದಾಯಿನಿ, ೨೦೧೦, ಒಂದು ತುಂಡು ಬೆಲ್ಲ, ಧಾತ್ರಿ ಪುಸ್ತಕ , ಬೆಂಗಳೂರು.

೨೦. ತಿರುಮಲೆ ರಾಜಮ್ಮ, ೧೯೪೭, ರಾಷ್ಟ್ರ ಶಕ್ತಿ, ಚೇತನ ಪ್ರಕಾಶನ, ಮೈಸೂರು.

೨೧. ದೇವಮ್ಮ ಸಿ. ೧೯೮೬, ಅರೆಕಲ್ಲು, ಕುವೆಂಪು ಅಧ್ಯಯನ ಕೇಂದ್ರ , ಬೆಂಗಳೂರು.

೨೨. ನಂಜನಗೂಡು ತಿರುಮಲಾಂಬ ಮತ್ತು ಇತರ ಮಹಿಳಾ ಹರಿದಾಸರ ಕೀರ್ತನೆಗಳು, ೨೦೦೩, ಸಮಗ್ರ ದಾಸ ಸಾಹಿತ್ಯ, ಕನ್ನಡ ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು.

೨೩. ನರಹಳ್ಳಿ ಬಾಲಸುಬ್ರಹ್ಮಣ್ಯಂ, ವೀಣಾ ಶಾಂತೇಶ್ವರ, ೧೯೯೦, ಹೊಸಹೆಜ್ಜೆ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೨೪. ನೇಮಿಚಂದ್ರ (ಸಂ), ೧೯೮೮, ಬೆಳೆಗೆರೆ ಜಾನಕಮ್ಮ, ಕರ್ನಾಟಕ ಲೇಖಕಿಯರ ಸಂಘ.

೨೫. ಪುಷ್ಪ ಎಚ್.ಎಲ್. ೧೯೯೨, ಅಮೃತಮತಿ ಸ್ವಗತ, ವಿಶೃತ ಮುದ್ರಣಾಲಯ, ಬೆಂಗಳೂರು.

೨೬. ಪುಷ್ಪ ಎಚ್.ಎಲ್. ೧೯೯೯, ಗಾಜುಗೋಳ, ಶಕ್ತಿ ಮುದ್ರಣಾಲಯ, ಬೆಂಗಳೂರು.

೨೭. ಪುಷ್ಪ ಎಚ್.ಎಲ್. ೨೦೦೯, ಲೋಹದ ಕಣ್ಣು, ಲೋಹಿಯಾ ಪ್ರಕಾಶ ನ , ಬಳ್ಳಾರಿ.

೨೮. ಪ್ರತಿಭಾ ನಂದಕುಮಾರ್, ೨೦೦೬, ಮುನ್ನುಡಿ ಬೆನ್ನುಡಿಗಳ ನಡುವೆ, ಮಹಿಳಾ ಸಾಹಿತ್ಯಿಕ, ಹುಬ್ಬಳ.

೨೯. ಪ್ರತಿಭಾ ನಂದಕುಮಾರ್, ೨೦೧೨, ಕಾಫಿ ಹೌಸ್, ಅಂಕಿತ ಪುಸ್ತಕ,ಬೆಂಗಳೂರು.

೩೦. ಪ್ರತಿಭಾ ನಂದಕುಮಾರ್, ೨೦೧೨, ಮುದುಕಿಯರಿಗಿದು ಕಾಲವಲ್ಲ, ಅಂಕಿತ ಪುಸ್ತಕ,ಬೆಂಗಳೂರು.

೩೧. ಪ್ರತಿಭಾ ನಂದಕುಮಾರ್, ೨೦೧೬, ಪ್ರೇತಗಳೆಂದು ಕರೆಯಲು ಮನಸ್ಸಾಗದು, ಅನೇಕ ಗೆಳೆಯರು, ಬೆಂ.

೩೨. ಪ್ರಭಾವತಿ ಎಸ್. ವಿ. ೨೦೧೦, ನದಿ ಹರಿಯುತಿರಲಿ, ಸ್ನೇಹ ಸೇತು ಪ್ರಕಾಶನ, ಬೆಂಗಳೂರು.

೩೩. ಭಾಗ್ಯ, ೧೯೮೧, ಸುಳ್ಳನಾಚೆಯ ಸತ್ಯ, ನೆಲಮನೆ ಪ್ರಕಾಶನ, ಮೈಸೂರು.

೩೪. ಭಾಗ್ಯ ಜಯಸುದರ್ಶನ, ೨೦೦೫, ಅಂತರಂಗದ ಮಾತು, ಶುಭದ ಪ್ರಕಾಶನ ಬೆಂಗಳೂರು.

೩೫. ಭಾಗ್ಯಲಕ್ಷ್ಮಿ ಎನ್.ವಿ, ೧೯೭೬, ಬೆರಳ ಸಂದಿಯ ಬದುಕು, ಕನ್ನಡ ಸಂಘ, ಕ್ರೈಸ್ಟ ಕಾಲೇಜು, ಬೆಂಗಳೂರು.

೩೬. ಮಮತಾ ಜಿ ಸಾಗರ್, ೧೯೯೨, ಕಾಡನವಿಲಿನ ಹೆಜ್ಜೆ ನದಿಯ ನೀರಿನ ತೇವ, ಅಕ್ಷರ ಪ್ರಕಾಶನ, ಹೆಗ್ಗೋಡು.

೩೭. ಮಮತಾ ಜಿ ಸಾಗರ್, ೨೦೦೭, ಹೀಗೆ ಹಾಳೆಯ ಮೇಲೆ ಹಾಡು, ಅಭಿನವ ಪ್ರಕಾಶನ, ಬೆಂಗಳೂರು.

೩೮. ಮಾಲತಿ ಪಟ್ಟಣಶೆಟ್ಟಿ, ೧೯೭೬, ಬಾ ಪರೀಕ್ಷೆಗೆ, ನಿರ್ಮಾಣ ಪ್ರಕಾಶನ, ಧಾರವಾಡ.

೩೯. ಮಾಲತಿ ಪಟ್ಟಣಶೆಟ್ಟಿ, ೧೯೮೩, ಗರಿಗೆದರಿ, ಕೃತಿ ಪ್ರಕಾಶನ, ಧಾರವಾಡ.

೪೦. ಮಾಲತಿ ಪಟ್ಟಣಶೆಟ್ಟಿ, ೧೯೮೮, ತಂದೆ ಬದುಕು ಗುಲಾಬಿ, ಕೃತಿ ಪ್ರಕಾಶನ, ಧಾರವಾಡ.

೪೧. ಮಾಲತಿ ಪಟ್ಟಣಶೆಟ್ಟಿ, ೧೯೯೪, ದಾಹತೀರ, ಮಹಿಳಾ ಸಾಹಿತ್ಯಿಕ, ಹುಬ್ಬಳ್ಳಿ.

೪೨. ಮಾಲತಿ ಪಟ್ಟಣಶೆಟ್ಟಿ, ೧೯೯೯ ಮೌನಕರಗುವ ಹೊತ್ತು, ನೆಲೆ ಪ್ರಕಾಶನ, ಸಿಂದಗಿ.

೪೩. ಮಾಲತಿ ಪಟ್ಟಣಶೆಟ್ಟಿ, ೨೦೦೯, ಎಷ್ಟೊಂದು ನಾವೆಗಳು, ಸಾಹಿತ್ಯ ಪ್ರಕಾಶನ , ಹುಬ್ಬಳ್ಳಿ.

೪೪. ಮುಕ್ತಾಯಕ್ಕ ಹೆಚ್.ಎಸ್. ೧೯೯೬, ನೀವು ಕಾಣಿರೆ, ನೀವು ಕಾಣಿರೆ, ಕನ್ನಡ ಸಂಘ, ಕ್ರೈಸ್ಟ ಕಾಲೇಜು, ಬೆಂಗಳೂರು.

೪೫. ರಜಿಯಾ ಡಿ.ಬಿ, ೨೦೧೦, ರಜಿಯಾ ಅವರ ಕವಿತೆಗಳು, ಲೋಹಿಯಾ ಪ್ರಕಾಶನ ಬಳ್ಳಾರಿ.

೪೬. ರೂಪಾ ಹಾಸನ, ೨೦೦೫, ಬಾಗಿಲಾಚೆಯ ಮೌನ, ಲೋಹಿಯಾ ಪ್ರಕಾಶನ  ಬಳ್ಳಾರಿ.

೪೭. ಲಲಿತಾ ನಾಯಕ್ ಬಿ.ಟಿ., ೧೯೯೭, ಬಿದಿರುಮಳೆ ಕಂಟಿಯಲಿ, ಅಂಕಿತ ಪುಸ್ತಕ, ಬೆಂಗಳೂರು.

೪೮. ಲಲಿತಾ ನಾಯಕ್ ಬಿ.ಟಿ. ೨೦೦೫, ಸವಾ–ಸೇರು, ಶ್ರೀ ಹೆಚ್.ಎನ್.ಪ್ರಕಾಶನ,ಬೆಂಗಳೂರು.

೪೯. ಲಲಿತಾ ಸಿದ್ಧಬಸವಯ್ಯ, ೨೦೦೧,  ಮೊದಲ ಸಿರಿ, ಚಿನ್ಮಯಿ ಪ್ರಕಾಶನ, ತುಮಕೂರು.

೫೦. ಲಲಿತಾ ಸಿದ್ಧಬಸವಯ್ಯ, ೨೦೦೨, ಬಿಡಿ ಹರಳು, ಚಿನ್ಮಯಿ ಪ್ರಕಾಶನ, ತುಮಕೂರು.

೫೧. ಲಲಿತಾ ಸಿದ್ಧಬಸವಯ್ಯ, ೨೦೦೪, ಕಬ್ಬೆ ನೆಲ, ಚಿನ್ಮಯಿ ಪ್ರಕಾಶನ, ತುಮಕೂರು.

೫೨. ಲಲಿತಾ ಸಿದ್ಧಬಸವಯ್ಯ, ೨೦೦೯, ದಾರಿನೆಂಟ, ಚಿನ್ಮಯಿ ಪ್ರಕಾಶನ, ತುಮಕೂರು.

೫೩. ವಿನಯ, ೨೦೦೬, ನೂರು ಗೋರಿಯ ದೀಪ, ಲೋಹಿಯಾ ಪ್ರಕಾಶನ, ಬಳ್ಳಾರಿ.

೫೪. ವಿಜಯಾ ದಬ್ಬೆ, ೧೯೯೬, ಇತಿಗೀತಿಕೆ, ರಚನಾ ಪ್ರಕಾಶನ, ಮೈಸೂರು.

೫೫. ವಿಜಯ ಶ್ರೀ ಸಬರದ, ೧೯೭೯, ಜ್ವಲಂತ, ಹೋರಾಟ ಪ್ರಕಾಶನ ಬೀದರ.

೫೬. ವಿಜಯ ಶ್ರೀ ಸಬರದ, ೧೯೯೧, ಲಕ್ಷ್ಮಣ ರೇಖೆ ದಾಟಿದವರು, ಪಲ್ಲವಿ ಪ್ರಕಾಶನ ಬೀದರ.

೫೭. ವೈದೇಹಿ, ೧೯೯೦, ಬಿಂದು ಬಿಂದಿಗೆ, ಅಕ್ಷರ ಪ್ರಕಾಶನ, ಹೆಗ್ಗೋಡು.

೫೮. ವೈದೇಹಿ, ೧೯೯೯, ಪಾರಿಜಾತ, ಕನ್ನಡ ಸಂಘ, ಕ್ರೈಸ್ಟ್ ಕಾಲೇಜು, ಬೆಂಗಳೂರು.

೫೯. ವೈದೇಹಿ, ೨೦೧೧,  ಹೂವಕಟ್ಟುವ ಕಾಯಕ, ಕನ್ನಡ ಸಂಘ, ಬೆಂಗಳೂರು.

೬೦. ಶಶಿಕಲಾ ವಸ್ತ್ರದ, ೧೯೭೯, ಗುಬ್ಬಿಮನಿ, ನೆಲಮನೆ ಪ್ರಕಾಶನ ,ಮೈಸೂರು.

೬೧. ಶಶಿಕಲಾ ವಸ್ತ್ರದ, ೧೯೮೪, ಜೀವ ಸಾವುಗಳ ನಡುವೆ, ಚೈತನ್ಯ ಪ್ರಕಾಶನ ಬಿಜಾಪುರ.

೬೨. ಶಶಿಕಲಾ ವೀರಯ್ಯಸ್ವಾಮಿ, ೧೯೮೪, ಹೆಂಗ ಹೇಳಲೇ ಗೆಳತಿ, ನೆಲಮನೆ ಪ್ರಕಾಶನ ,ಮೈಸೂರು.

೬೩. ಶಶಿಕಲಾ ವೀರಯ್ಯಸ್ವಾಮಿ, ೨೦೦೪, ಮಧ್ಯಂತರದ ಒಂದು ಗದ್ಯಗೀತೆ, ನೆಲೆ ಪ್ರಕಾಶನ ಸಿಂದಗಿ.

೬೪. ಶರೀಫಾ ಕೆ. ೧೯೯೫, ಬಿಡುಗಡೆಯ ಕವನಗಳು, ನಿಶಾತ್ ಪ್ರಕಾಶನ ಹರಿಹರ.

೬೫. ಶರೀಫಾ ಕೆ. ೧೯೯೭, ನೂರೇನಳ ಅಂತರಂಗ, ನಿಶಾತ್ ಪ್ರಕಾಶನ ಹರಿಹರ.

೬೬. ಶರೀಫಾ ಕೆ.. ೨೦೦೧, ಪಾಂಚಾಲಿ,  ಆಶಾ ಗ್ರಾಫಿಕ್ಸ್.

೬೭. ಶೈಲಜಾ ಉಡಚಣ, ೧೯೯೮, ಶೈಲಜಾ ಸಮಗ್ರ ಕಾವ್ಯ, ಮಹಿಳಾ ಸಾಹಿತ್ಯಿಕ, ಹುಬ್ಬಳ್ಳಿ.

೬೮. ಸರ್ವಮಂಗಳಾ.ಚ  ೧೯೮೮, ಅಮ್ಮನ ಗುಡ್ಡ, ಋಜುವಾತು ಪ್ರಕಾಶನ, ಮೈಸೂರು.

೬೯. ಸರಸ್ವತಿ ಗೌಡ, ದ್ರೌಪದಿಯಸ್ವಾಗತ.

೭೦. ಸರಸ್ವತಿ ದು., ೨೦೦೬, ಜೀವಸಂಪಿಗೆ, ಅಭಿನವ ಪ್ರಕಾಶನ, ಬೆಂಗಳೂರು.
೭೧. ಸವಿತಾ ನಾಗಭೂಷಣ್, ೨೦೦೦, ಆಕಾಶ ಮಲ್ಲಿಗೆ, ನೆಲಮನೆ ಪ್ರಕಾಶನ , ಮಂಡ್ಯ.
೭೨. ಸವಿತಾ ನಾಗಭೂಷಣ್, ೨೦೦೨, ಜಾತ್ರೆಯಲ್ಲಿ ಶಿವ, ಅಕ್ಷರ ಪ್ರಕಾಶನ , ಹೆಗ್ಗೋಡು.
೭೩. ಸವಿತಾ ನಾಗಭೂಷಣ್, ೨೦೦೬, ಕಾಡು ಅಲ್ಲಿ ಹೂವುಗಳು, ರೂಪ ಪ್ರಕಾಶನ ಮೈಸೂರು.
೭೪. ಸವಿತಾ ನಾಗಭೂಷಣ್, ೨೦೦೯, ದರುಶನ, ಲೋಹಿಯಾ ಪ್ರಕಾಶನ, ಬಳ್ಳಾರಿ.
೭೫. ಸುಕನ್ಯಾಮಾರುತಿ, ೨೦೦೭, ನಾನೆಂಬ ಮಾಯೆ, ಸ್ವಪ್ನ ಬುಕ್ ಹೌಸ್, ಬೆಂಗಳೂರು.
೭೬. ಸುಮಿತ್ರಾ ಎಲ್.ಸಿ, ೨೦೦೪, ಬಕುಲದ ದಾರಿ, ಅಕ್ಷರ ಪ್ರಕಾಶನ, ಹೆಗ್ಗೋಡು.
೭೭. ಸುಮಿತ್ರ ಎಲ್.ಜಿ., ೧೯೯೨, ಸ್ಪರ್ಶರೇಖೆಗಳು, ಇಂಚರ ಸಮುಚ್ಚಯ, ಬೆಂಗಳೂರು.
೭೮. ಸಂಧ್ಯಾ ದೇವಿ, ೨೦೦೮, ಅಗ್ನಿ ದಿವ್ಯ, ಅಭಿನವ ಪ್ರಕಾಶನ, ಬೆಂಗಳೂರು.
೭೯. ಸಂಧ್ಯಾ ದೇವಿ, ೨೦೦೫, ಮಾತು-ಚಿಟ್ಟೆ ಬೆಂಕಿ-ಬೆರಳು ಮುರಿದಮುಳ್ಳನಂತೆ ಜ್ಞಾನ, ಅಧ್ಯಯನ ಮಂಡಲ, ಬೆಂಗಳೂರು.
೮೦. ಹೇಮಾ ಪಟ್ಟಣಶೆಟ್ಟಿ, ೨೦೧೧, ಬಾಳೆ ಗರ್ಭದಲಿ, ಅನನ್ಯ ಪ್ರಕಾಶನ, ಧಾರವಾಡ.

